ORIENTAL RESEARCH INSTITUTE KANNADA SERIES N

GENERAL EDITOR:

SRI H. DEVEERAPPA, M.A.,

*Director*

# JĀTAKA TILAKAM

OF

ŚRĪDHARĀCĀRYA

EDITED WITH COMMENTARY BY

VIDWAN SRI S. N. KRISHNA JOIS

*Research Assistant*




ORIENTAL RESEARCH INSTITUTE

UNIVERSITY OF MYSORE

MYSORE

1959

# ವಿಷಯಾನುಕ್ರಮಣಿಕೆ


| | | | ಪುಟಗಳು |
|---|---|---|---|
| ೧ | ಪ್ರಸ್ತಾವನೆ | .... | vii–ix |
| ೨ | ಉಪೋದ್ಘಾತ | .... | xi–xxxvii |
| ೩ | ಒಪ್ಪೋಲೆ | .... | xxxix–xl |
| ೪ | ಸಂಜ್ಞಾ ಪ್ರಕರಣ | .... | ೧– ೧೫ |
| ೫ | ಬಲಾಬಲ ಪ್ರಕರಣ | .... | ೧೬– ೨೩ |
| ೬ | ಗರ್ಭಾಧಾನ ಪ್ರಕರಣ | .... | ೨೪– ೩೩ |
| ೭ | ಜನ್ಮ ಪ್ರಕರಣ | .... | ೩೪– ೫೨ |
| ೮ | ವಿಯೋನಿ ಜನ್ಮಪ್ರಕರಣ | .... | ೫೩– ೫೮ |
| ೯ | ಅರಿಷ್ಟಯೋಗ ಪ್ರಕರಣ | .... | ೫೯– ೮೦ |
| ೧೦ | ಅರಿಷ್ಟಭಂಗ ಪ್ರಕರಣ | .... | ೮೧–೮೮ |
| ೧೧ | ಆಯುರ್ದಾಯ ಪ್ರಕರಣ | .... | ೮೯–೧೦೨ |
| ೧೨ | ದಶಾಂತರ್ದಶಾ ಪ್ರಕರಣ | .... | ೧೦೩–೧೧೬ |
| ೧೩ | ಅಷ್ಟಕವರ್ಗ ಪ್ರಕರಣ | .... | ೧೧೭–೧೨೭ |
| ೧೪ | ಕರ್ಮಾಜೀವನ ಪ್ರಕರಣ | .... | ೧೨೮–೧೩೧ |
| ೧೫ | ರಾಜಯೋಗ ಪ್ರಕರಣ | .... | ೧೩೨–೧೪೭ |
| ೧೬ | ನಾಭಸಯೋಗ ಪ್ರಕರಣ | .... | ೧೪೮–೧೫೭ |
| ೧೭ | ಚಾಂದ್ರಯೋಗ ಪ್ರಕರಣ | .... | ೧೫೮–೧೬೩ |
| ೧೮ | ದ್ವಿತ್ರಿಗ್ರಹಯೋಗ ಪ್ರಕರಣ | .... | ೧೬೪–೧೬೮ |
| ೧೯ | ಪ್ರವ್ರಜ್ಯಾಯೋಗ ಪ್ರಕರಣ | .... | ೧೬೯–೧೭೨ |
| ೨೦ | ರಾಶಿಶೀಲ ಪ್ರಕರಣ | .... | ೧೭೩–೧೯೦ |
| ೨೧ | ಲಗ್ನಾದಿಭಾವ ಪ್ರಕರಣ | .... | ೧೯೧–೨೦೦ |
| ೨೨ | ದ್ರೇಕ್ಕಾಣ ಪ್ರಕರಣ | .... | ೨೦೧–೨೧೪ |
| | ದ್ರೇಕ್ಕಾಣ ದೇವತೆಗಳ ಚಿತ್ರಗಳು | .... | ೨೧೪ I–೨೧೪ IV |
| ೨೩ | ದೃಷ್ಟಿ ಪ್ರಕರಣ | .... | ೨೧೫–೨೨೬ |
| ೨೪ | ಅನಿಷ್ಟಯೋಗ ಪ್ರಕರಣ | .... | ೨೨೭–೨೪೫ |
| ೨೫ | ಸ್ತ್ರೀ ಜಾತಕಫಲ ಪ್ರಕರಣ | .... | ೨೪೬–೨೬೦ |
| ೨೬ | ನಿರ್ಯಾಣ ಪ್ರಕರಣ | .... | ೨೬೧–೨೭೯ |
| ೨೭ | ನಷ್ಟಜಾತಕ ಪ್ರಕರಣ | .... | ೨೮೦–೩೦೪ |
| ೨೮ | ಪರಿಶಿಷ್ಟ ೧ (ಓಲೆಗಳ ಪಡಿಯಚ್ಚು) | .... | ೩೦೫–೩೦೮ |
| ೨೯ | ಪರಿಶಿಷ್ಟ ೨ (ಸಂಸ್ಕೃತ ಶ್ಲೋಕಗಳು) | .... | ೩೦೯–೩೫೮ |
| ೩೦ | ಪರಿಶಿಷ್ಟ ೩ (ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಕೆಲವು ಪದಗಳ ಅರ್ಥ ಮತ್ತು ವಿವರ) | | ೩೫೯–೪೦೩ |

# ಪ್ರಸ್ತಾವನೆ

ಸಂಸ್ಕೃತ ಮತ್ತು ಕನ್ನಡ ಪ್ರಾಚೀನ ಗ್ರಂಥಗಳನ್ನು ಶಾಸ್ತ್ರಾನುಸಾರವಾಗಿ ಸಂಪ್ರತಿಸಿ ಸಮುಚಿತವಾದ ಪೀಠಿಕೆ ಟಿಪ್ಪಣಿ ಟೀಕೆಗಳೊಂದಿಗೆ ಪ್ರಕಟಪಡಿಸುವುದು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕಾರ್ಯಗಳಲ್ಲೊಂದಾಗಿದೆ.

ಈ ಸಂಸ್ಥೆಯು ಸಾಹಿತ್ಯಭಾಗವನ್ನು ಮಾತ್ರವಲ್ಲದೆ ನಮ್ಮ ಪ್ರಾಚೀನರು ರಚಿಸಿರುವ ವೇದಾಗಮ ಶಾಸ್ತ್ರ ಪುರಾಣ ಸ್ತೋತ್ರಾದಿ ಇತರ ವರ್ಗದ ಗ್ರಂಥಗಳನ್ನೂ ಅತ್ಯಾಧುನಿಕ ರೀತಿಯಲ್ಲಿ ಸಂಶೋಧಿಸಿ ಪರಿಷ್ಕರಿಸಿ ಎಂದಿನಿಂದಲೂ ಪ್ರಕಟಮಾಡುತ್ತಲೇ ಬಂದಿರುತ್ತದೆ.

ಸಂಸ್ಕೃತ ಭಾಷೆಯಲ್ಲಿರುವ ಶಾಸ್ತ್ರ ಗ್ರಂಥಗಳನ್ನು ಮಾತ್ರವಲ್ಲದೆ ಕನ್ನಡ ಭಾಷೆಯಲ್ಲಿರುವ ಶಾಸ್ತ್ರ ಗ್ರಂಥಗಳನ್ನೂ ಪ್ರಕಟಪಡಿಸುವುದು ಸಂಸ್ಥೆಯ ಉದ್ದೇಶ. ವೀರರಾಜೇಂದ್ರನ 'ಸಕಲವೈದ್ಯಸಂಹಿತಾಸಾರಾರ್ಣವ' ಎಂಬ ಕನ್ನಡ ವೈದ್ಯ ಗ್ರಂಥವು ಪರಿಷ್ಕರಿಸಲ್ಪಟ್ಟು ಹೊಸದಾಗಿ ಬರೆದು ಸೇರಿಸಿದ ಟೀಕೆಯೊಂದಿಗೆ ಎರಡನೆಯ ಸಲ ಅಚ್ಚಾಗುತ್ತಿವೆ. ಅದೇ ಗ್ರಂಥದ ದ್ವಿತೀಯ ಭಾಗವೂ ಕಲ್ಲಹಳ್ಳಿಯ ಮಂಗರಸರು ರಚಿಸಿರುವ 'ಸೂಪಶಾಸ್ತ್ರ' ಎಂಬ ಪಾಕಶಾಸ್ತ್ರ ಗ್ರಂಥವೂ ಅಚ್ಚಿಗೆ ಸಿದ್ಧವಾಗುತ್ತಿವೆ. ಇವಲ್ಲದೆ ಸಿಂಹಭೂಪಾಲನ 'ಲಾಸ್ಯರಂಜನ' ಎಂಬ ಕನ್ನಡ ನಾಟ್ಯಶಾಸ್ತ್ರ ಗ್ರಂಥವೂ ಚಿತ್ರಗಳೊಡನೆ ಮುದ್ರಣವಾಗುತ್ತಿದೆ.

ಕನ್ನಡದಲ್ಲಿ ಶುದ್ಧ ಶಾಸ್ತ್ರ ಗ್ರಂಥಗಳನ್ನು ಬರೆಯಬೇಕೆಂಬುದೂ ಕನ್ನಡವೊಂದನ್ನೇ ಓದಲೂ ಬರೆಯಲೂ ಬಲ್ಲವರು ಕಾವ್ಯಾರಾಮವೊಂದರಲ್ಲಿಯೇ ವಿಹರಿಸುತ್ತಿದ್ದರೆ ಸಾಲದು, ಶಾಸ್ತ್ರ ಶ್ರೀರೋಹಣಾದ್ರಿಯನ್ನೂ ಏರಿ ದೈಹಿಕಬಲವನ್ನೂ ಬುದ್ಧಿಬಲವನ್ನೂ ಗಳಿಸಿಕೊಂಡು ಜೀವನಾನುಕೂಲಗಳನ್ನು ಕಲ್ಪಿಸಿಕೊಂಡು ಇಹಪರಗಳೆರಡರಲ್ಲಿಯೂ ಸೊಗಸು ಸೊಬಗು ಸೌಂದರ್ಯಗಳನ್ನು ಸಾಧಿಸಿಕೊಳ್ಳಬೇಕೆಂಬುದೂ ಪ್ರಾಚೀನ ಕರ್ಣಾಟಕದ ಧೀಮಂತರ ಶ್ರೀಮಂತರ ನಲ್ಬಯಕೆಯಾಗಿದ್ದಿತು. ಕನ್ನಡ ಜನದ ಜೀವನವು ವೈವಿಧ್ಯ ಪರಿಪೂರ್ಣವೂ ವರ್ಣರಂಜಿತವೂ ವಿವಿಧ ಧಾತು ಸಮನ್ವಿತವೂ ಸುಸಂಸ್ಕೃತವೂ ಆಗಿ ಸರ್ವಾಂಗ ಸುಂದರವಾಗಿ ಬೆಳೆದು ಪರಿಪೂರ್ಣತೆಯನ್ನು ಸಾಧಿಸಲೆಂದು ಅವರು, ಕಲಾಸಾಹಿತ್ಯಗಳಿಗೆ ಮಾತ್ರವಲ್ಲದೆ ಶುದ್ಧ ಶಾಸ್ತ್ರಾಭ್ಯಾಸಕ್ಕೂ ಸೂಕ್ತ ರೀತಿಯಲ್ಲಿ ಪ್ರೋತ್ಸಾಹ ನೀಡುತ್ತಿದ್ದರೆಂಬುದಕ್ಕೆ ಹನ್ನೊಂದು ಹನ್ನೆರಡನೆಯ ಶತಮಾನಗಳಲ್ಲಿಯೇ ಹುಟ್ಟಿದ ಗೋವೈದ್ಯ (ಕೀರ್ತಿವರ್ಮ) ಕಲ್ಯಾಣಕಾರಕ (ಜಗದ್ದಳ ಸೋಮನಾಥ) ಲೋಕೋಪಕಾರ (ಚಾವುಂಡರಾಯ) ಮದನತಿಲಕ (ಚಂದ್ರರಾಜ) ಜಾತಕತಿಲಕ (ಶ್ರೀಧರಾಚಾರ್ಯ) ಈ ಮೊದಲಾದ ಗ್ರಂಥಗಳು ನಿದರ್ಶನ. ಕನ್ನಡದಲ್ಲಿ

ಶಾಸ್ತ್ರ ಗ್ರಂಥಗಳನ್ನು ಛಂದೋಬದ್ಧವಾಗಿ ರಚಿಸುವವರಲ್ಲಿ ಜೈನ ಕವಿಗಳೇ ಅಧಿಕ. ಇವರ ಸೇವೆಯ ಫಲವಾಗಿ ಕನ್ನಡಿಗರು ಶಾಸ್ತ್ರಜ್ಞಾನಕ್ಕಾಗಿ ಯಾರ ಹಮ್ಮನ್ನೂ ಕಾಯುವಂತಿರಲಿಲ್ಲ.

ಭಾರತವರ್ಷದಲ್ಲಿ ವ್ಯಾಪಿಸಿರುವ ಭಾರತೀಯ ಸಂಸ್ಕೃತಿಯ ಜೀವನಾಡಿಯಾಗಿರುವ ಸಂಸ್ಕೃತ ಭಾಷೆಯಲ್ಲಿರುವ ಶಾಸ್ತ್ರ ಗ್ರಂಥಗಳು ಸಂಸ್ಕೃತವನ್ನು ತಿಳಿದವರಿಗೆ ಮಾತ್ರವಲ್ಲದೆ ಜನಸಾಮಾನ್ಯರಿಗೂ ಅರ್ಥವಾಗಲೆಂದು ದೇಶೀಯ ಭಾಷೆಯಲ್ಲಿಯೂ ಶಾಸ್ತ್ರ ಗ್ರಂಥಗಳ ರಚನೆ ನಡೆದಿರಬೇಕೆಂದು ತೋರುತ್ತದೆ. ಇದರಿಂದ ದೇಶೀಯ ಭಾಷೆಯ ಶಾಸ್ತ್ರಗ್ರಂಥಗಳಿಗೆ, ಕಾವ್ಯಗಳಿಗೆ ಹೇಗೋ ಹಾಗೆಯೆ ಸಂಸ್ಕೃತ ಗ್ರಂಥಗಳೇ ಆಕರವಾಗಿದ್ದುವೆಂದು ಸ್ಥೂಲವಾಗಿ ಹೇಳಬಹುದಾಗಿದೆ.

ಶಾಸ್ತ್ರ ಗ್ರಂಥಗಳನ್ನು ಪ್ರಕಟಪಡಿಸುವುದರಿಂದ ಮುಖ್ಯವಾಗಿ ಎರಡು ಉದ್ದೇಶಗಳು ಸಾಧ್ಯವಾಗಬಹುದು. ನಮ್ಮವರ ಅಜ್ಞಾನದ ಫಲವಾಗಿಯೋ ಔದಾಸೀನ್ಯದ ಪರಿಣಾಮವಾಗಿಯೋ ನೀರಿನ ಪಾಲೋ ಬೆಂಕಿಯ ಪಾಲೋ ಕ್ರಿಮಿಗಳ ಪಾಲೋ ಆಗಿ ನಶಿಸಿಹೋಗುತ್ತಿರುವ ಅತ್ಯಮೂಲ್ಯವಾದ ಪ್ರಾಚೀನ ಜ್ಞಾನಸಂಪತ್ತನ್ನು ನಾವು ಮತ್ತೆ ಗಳಿಸಿ ಉಳಿಸಿ ಬೆಳೆಸಿಕೊಳ್ಳುವಂತೆ ಮಾಡುವುದು ಮೊಟ್ಟಮೊದಲನೆಯ ಮಣಿಹ. ಎರಡನೆಯ ಉದ್ದೇಶ, ನಮ್ಮ ಹಿರಿಯರು ಸಾವಿರಾರು ವರುಷಗಳ ಅಮೂಲ್ಯ ಅನುಭವದಿಂದಲೂ ಪ್ರಯೋಗ ಪರೀಕ್ಷೆಗಳ ಆಧಾರದಿಂದಲೂ ಎಲ್ಲಕ್ಕೂ ಮಿಗಿಲಾಗಿ ಯೋಗಸಿದ್ಧಿಯಿಂದಲೂ ಲೋಕೋಪಕಾರವನ್ನೆ ಏಕೈಕ ಗುರಿಯನ್ನಾಗಿಟ್ಟುಕೊಂಡು ಅಧಿಕಾರವಾಣಿಯಿಂದ ಹೇಳಿರುವ ಶುದ್ಧ ಶಾಸ್ತ್ರಗಳ ಸತ್ಯಾಸತ್ಯತೆಗಳನ್ನು ಆಧುನಿಕ ಶಾಸ್ತ್ರೀಯ ದೃಷ್ಟಿಯಿಂದ, ತೆರೆದ ಮನಸ್ಸಿನಿಂದ ಅತ್ಯಂತ ಪರಿಶೀಲಿಸಿ ಇಂದಿಗೂ ಉಪಯುಕ್ತವಾದುದೆಂದು ಕಂಡುಬಂದುದನ್ನು ಗ್ರಹಿಸುವುದು; ಇಂದು ಅನುಪಯುಕ್ತವೆಂದು ತೋರಿದುದನ್ನು ಅಥವಾ ಸರಿಯಲ್ಲದುದನ್ನು ಅಥವಾ ನವ್ಯಕ್ಕೆ ಸಮ್ಮತವಲ್ಲದುದನ್ನು ಸಂಶಯಗ್ರಸ್ತವೆಂದು ಸಕಾರಣವಾಗಿ ಸಾರುವುದು. ಈ ಉದ್ದೇಶಗಳನ್ನು ನಮ್ಮ ಸಂಸ್ಥೆ ಶಕ್ತ್ಯಾನುಸಾರ ನೆರವೇರಿಸಿಕೊಡುತ್ತಿದೆ. ಈ ಮಹತ್ಕಾರ್ಯವನ್ನು ದೇಶಾಭಿಮಾನಿಗಳೂ ವಿದ್ಯಾಭಿಮಾನಿಗಳೂ ಸನಾತನ ಸಾರಸ್ವತ ಸಂಪತ್ತಿನ ವಿಷಯದಲ್ಲಿ ನಂಬಿಕೆ ವಿಶ್ವಾಸವಿರುವವರೂ ಆಗಿರುವ ಭಾರತೀಯ ವಿಜ್ಞಾನಯೋಗಿಗಳು ಇನ್ನೂ ಅಧಿಕವಾಗಿ ಕೈಗೊಳ್ಳುವರೆಂದು ಆಶಿಸಬಹುದು.

ಕೇಂದ್ರ ಸರ್ಕಾರದ ವಿದ್ಯಾಖಾತೆಯು ವೈಜ್ಞಾನಿಕ ಅಥವಾ ಪಾರಿಭಾಷಿಕ ವಿಷಯಗಳಿಗೆ ಸಂಬಂಧಪಟ್ಟ ಪಾರಿಭಾಷಿಕ ಪದಗಳ ಕೋಶವೊಂದನ್ನು ತಯಾರಿಸಿದೆ. ಅಂತಹ ವಿಶಿಷ್ಟ ಕೋಶಕ್ಕೆ ಪೂರಕವೂ ಪೋಷಕವೂ ಆಗುವಂಥ ಶಬ್ದ ಸಂಪತ್ತಿಯು ಪ್ರಾಚೀನ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳಲ್ಲಿಯೂ ಲಭಿಸುತ್ತಿರುವುದು ಅಭಿಮಾನದ ಸಂಗತಿಯೇ ಸರಿ. ಇದೇ 'ಜಾತಕತಿಲಕ'ದ ಮೂರನೆಯ ಪರಿಶಿಷ್ಟವು ಈ ಮಾತನ್ನು ಇನ್ನಷ್ಟು ಪುಷ್ಟೀಕರಿಸಬಲ್ಲುದು. ಭಾಷಾಚರಿತ್ರೆಯನ್ನು ಅಭ್ಯಾಸಮಾಡುವವರಿಗೂ ಈ ಶಬ್ದಕೋಶದಿಂದ ಪ್ರಯೋಜನವಾಗಬಹುದು.

ಶಾಸ್ತ್ರ ಗ್ರಂಥಗಳನ್ನು ಛಂದೋಬದ್ಧವಾಗಿ ರಚಿಸಿರುವವರಲ್ಲಿ ಜೈನ ಕವಿಗಳೇ ಅಧಿಕ. ಇವರ ಸೇವೆಯ ಫಲವಾಗಿ ಕನ್ನಡಿಗರು ಶಾಸ್ತ್ರಜ್ಞಾನಕ್ಕಾಗಿ ಯಾರ ಕಯ್ಯನ್ನೂ ಕಾಯುವಂತಿರಲಿಲ್ಲ.

ಭಾರತದಲ್ಲೆಲ್ಲಾ ವ್ಯಾಪಿಸಿರುವ ಭಾರತೀಯ ಸಂಸ್ಕೃತಿಯ ಜೀವನಾಡಿಯಾಗಿರುವ ಸಂಸ್ಕೃತ ಭಾಷೆಯಲ್ಲಿರುವ ಶಾಸ್ತ್ರ ಗ್ರಂಥಗಳು ಸಂಸ್ಕೃತವನ್ನು ತಿಳಿದವರಿಗೆ ಮಾತ್ರವಲ್ಲದೆ ಜನಸಾಮಾನ್ಯರಿಗೂ ಅರ್ಥವಾಗಲೆಂದು ದೇಶೀಯ ಭಾಷೆಯಲ್ಲಿಯೂ ಶಾಸ್ತ್ರ ಗ್ರಂಥಗಳ ರಚನೆ ನಡೆದಿರಬೇಕೆಂದು ತೋರುತ್ತದೆ. ಇದರಿಂದ ದೇಶೀಯ ಭಾಷೆಯ ಶಾಸ್ತ್ರಗ್ರಂಥಗಳಿಗೆ, ಕಾವ್ಯಗಳಿಗೆ ಹೇಗೋ ಹಾಗೆಯೆ ಸಂಸ್ಕೃತ ಗ್ರಂಥಗಳೇ ಆಕರವಾಗಿದ್ದುವೆಂದು ಸ್ಥೂಲವಾಗಿ ಹೇಳಬಹುದಾಗಿದೆ.

ಶಾಸ್ತ್ರ ಗ್ರಂಥಗಳನ್ನು ಪ್ರಚುರಪಡಿಸುವುದರಿಂದ ಮುಖ್ಯವಾಗಿ ಎರಡು ಉದ್ದೇಶಗಳು ಸಾಧ್ಯವಾಗಬಹುದು. ನಮ್ಮವರ ಅಜ್ಞಾನದ ಫಲವಾಗಿಯೋ ಔದಾಸೀನ್ಯದ ಪರಿಣಾಮವಾಗಿಯೋ ನೀರಿನ ಪಾಲೋ ಬೆಂಕಿಯ ಪಾಲೋ ಕೀಟಗಳ ಪಾಲೋ ಆಗಿ ನಶಿಸಿಹೋಗುತ್ತಿರುವ ಅತ್ಯಮೂಲ್ಯವಾದ ಪ್ರಾಚೀನ ಜ್ಞಾನಸಂಪತ್ತನ್ನು ನಾವು ಮತ್ತೆ ಗಳಿಸಿ ಉಳಿಸಿ ಬೆಳೆಸಿಕೊಳ್ಳುವಂತೆ ಮಾಡುವುದು ಮೊಟ್ಟಮೊದಲನೆಯ ಮಣಿಹ. ಎರಡನೆಯ ಉದ್ದೇಶ, ನಮ್ಮ ಹಿರಿಯರು ಸಾವಿರಾರು ವರುಷಗಳ ಅಮೂಲ್ಯ ಅನುಭವದಿಂದಲೂ ಪ್ರಯೋಗ ಪರೀಕ್ಷೆಗಳ ಆಧಾರದಿಂದಲೂ ಎಲ್ಲಕ್ಕೂ ಮಿಗಿಲಾಗಿ ಯೋಗಸಿದ್ಧಿಯಿಂದಲೂ ಲೋಕೋಪಕಾರವನ್ನೆ ಏಕೈಕ ಗುರಿಯನ್ನಾಗಿಟ್ಟುಕೊಂಡು ಅಧಿಕಾರವಾಣಿಯಿಂದ ಹೇಳಿರುವ ಶುದ್ಧ ಶಾಸ್ತ್ರಗಳ ಸತ್ಯಾಸತ್ಯತೆಗಳನ್ನು ಆಧುನಿಕ ಶಾಸ್ತ್ರೀಯ ದೃಷ್ಟಿಯಿಂದ, ತೆರೆದ ಮನಸ್ಸಿನಿಂದ ಅದ್ಯಂತ ಪರಿಶೀಲಿಸಿ ಇಂದಿಗೂ ಉಪಯುಕ್ತವಾದುದೆಂದು ಕಂಡುಬಂದುದನ್ನು ಗ್ರಹಿಸುವುದು ; ಇಂದು ಅನುಪಯುಕ್ತವೆಂದು ತೋರಿದುದನ್ನು ಅಥವಾ ಸರಿಯಲ್ಲದುದನ್ನು ಅಥವಾ ಸದ್ಯಕ್ಕೆ ಸಮ್ಮತವಲ್ಲದುದನ್ನು ಸಂಶಯಗ್ರಸ್ತವೆಂದು ಸಕಾರಣವಾಗಿ ಸಾರುವುದು. ಈ ಉದ್ದೇಶಗಳನ್ನು ನಮ್ಮ ಸಂಸ್ಥೆ ಶಕ್ತ್ಯಾನುಸಾರ ನೆರವೇರಿಸಿಕೊಡುತ್ತಿದೆ. ಈ ಮಹತ್ಕಾರ್ಯವನ್ನು ದೇಶಾಭಿಮಾನಿಗಳೂ ವಿದ್ಯಾಭಿಮಾನಿಗಳೂ ಸನಾತನ ಸಾರಸ್ವತ ಸಂಪತ್ತಿನ ವಿಷಯದಲ್ಲಿ ನಂಬಿಕೆ ವಿಶ್ವಾಸವಿರುವವರೂ ಆಗಿರುವ ಭಾರತೀಯ ವಿಜ್ಞಾನಯೋಗಿಗಳು ಇನ್ನೂ ಅಧಿಕವಾಗಿ ಕೈಗೊಳ್ಳುವರೆಂದು ಆಶಿಸಬಹುದು.

ಕೇಂದ್ರ ಸರ್ಕಾರದ ವಿದ್ಯಾಖಾತೆಯು ವೈಜ್ಞಾನಿಕ ಅಥವಾ ಪಾರಿಭಾಷಿಕ ವಿಷಯಗಳಿಗೆ ಸಂಬಂಧಪಟ್ಟ ಪಾರಿಭಾಷಿಕ ಪದಗಳ ಕೋಶವೊಂದನ್ನು ತಯಾರಿಸಿದೆ. ಅಂತಹ ವಿಶಿಷ್ಟ ಕೋಶಕ್ಕೆ ಪೂರಕವೂ ಪೋಷಕವೂ ಆಗುವಂಥ ಶಬ್ದ ಸಂಪತ್ತಿಯು ಪ್ರಾಚೀನ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳಲ್ಲಿಯೂ ಲಭಿಸುತ್ತಿರುವುದು ಅಭಿಮಾನದ ಸಂಗತಿಯೇ ಸರಿ. ಇದೇ 'ಜಾತಕತಿಲಕ'ದ ಮೂರನೆಯ ಪರಿಶಿಷ್ಟವು ಈ ಮಾತನ್ನು ಇನ್ನಷ್ಟು ಪುಷ್ಟೀಕರಿಸಬಲ್ಲುದು. ಭಾಷಾಚರಿತ್ರೆಯನ್ನು ಅಭ್ಯಾಸಮಾಡುವವರಿಗೂ ಈ ಶಬ್ದಕೋಶದಿಂದ ಪ್ರಯೋಜನವಾಗಬಹುದು.

ಈ ಗ್ರಂಥವು ಅಚ್ಚಿಗೆ ಸಿದ್ಧವಾಗುತ್ತಿದ್ದಾಗ ಇದೇ ಗ್ರಂಥ ಮದರಾಸು ವಿಶ್ವ ವಿದ್ಯಾನಿಲಯದಲ್ಲಿ ಪ್ರಕಟವಾಯಿತು. ಆದರೆ ಮೂಲವಷ್ಟೆ ಅಚ್ಚಾಗಿ ಬೆಳಕಿಗೆ ಬಂದಿತು. ಹಳಗನ್ನಡದಲ್ಲಿ, ಎಂಟು ನೂರು ವರ್ಷಗಳಷ್ಟು ಹಿಂದಿನ ಕನ್ನಡದಲ್ಲಿ, ಬರೆದಿರುವ ಶಾಸ್ತ್ರ ಗ್ರಂಥಗಳನ್ನು ಅವು ಇದ್ದಂತೆಯೆ ಪ್ರತಿ ಎತ್ತಿಸಿ ಕೃತಿಕಾರನು ಬಳಸಿಕೊಂಡಿರುವ ಆಕರ ಗ್ರಂಥಗಳನ್ನು ನೋಡಿ ಸಾಧ್ಯವಿದ್ದಮಟ್ಟಿಗೆ ಪರಿಷ್ಕರಿಸಿ ಹೊಸಗನ್ನಡದಲ್ಲಿ ಟೀಕೆಯನ್ನೂ ಬರೆದು ಸೇರಿಸಿ ಪ್ರಕಟಗೊಳಿಸಿದರೆ ಮೂಲ ಕೃತಿಕರ್ತನ ಉದ್ದೇಶವು ಹೆಚ್ಚು ಸಫಲ ವಾದೀತೆಂದೂ ಕನ್ನಡವನ್ನು ಮಾತ್ರ ಬಲ್ಲ ಶಾಸ್ತ್ರಜ್ಞರಿಗೂ, ಜನಸಾಮಾನ್ಯರಿಗೂ ಕೃತಿ ಯಿಂದ ಪ್ರಯೋಜನ ಪಡೆಯುವ ಅವಕಾಶವು ಲಭಿಸೀತೆಂದೂ ಭಾವಿಸಿ, ಪ್ರಾರಂಭ ವಾಗಿದ್ದ ಕೆಲಸವನ್ನು ಅಷ್ಟಕ್ಕೆ ನಿಲ್ಲಿಸದೆ ಗ್ರಂಥವನ್ನು ಪ್ರಕಟಿಸಲಾಯಿತು.

ಜ್ಯೋತಿಶ್ಶಾಸ್ತ್ರವನ್ನು ಚೆನ್ನಾಗಿ ತಿಳಿದಿರುವ ಆ ಶಾಸ್ತ್ರದಲ್ಲಿಯೂ ವಿದ್ವಾನರಾಗಿ ರುವ ಕನ್ನಡ ವಿದ್ವಾಂಸರಾದ ಶ್ರೀ ಎಸ್. ಎನ್. ಕೃಷ್ಣಜೋಯಿಸರು ತಮಗೆ ವಹಿಸಿದ್ದ ಈ ಕೆಲಸವನ್ನು ತುಂಬ ನಿಷ್ಠೆಯಿಂದಲೂ ಶ್ರದ್ಧೆಯಿಂದಲೂ ನಿರ್ವಹಿಸಿರುವರೆಂಬುದು ಗ್ರಂಥಾವಲೋಕನದಿಂದ ತಾನೆ ಗೊತ್ತಾಗುತ್ತದೆ.

ಈ ಗ್ರಂಥವನ್ನು ಸಕಾಲದಲ್ಲಿ ಅಚ್ಚುಮಾಡಿಕೊಟ್ಟ ಮೈಸೂರಿನ ಸರಕಾರೀ ಶಾಖಾ ಮುದ್ರಣಾಲಯದ ಡೆಪ್ಯುಟಿ ಡೈರೆಕ್ಟರ್ ಅವರಿಗೆ ನಮ್ಮ ಹೃತ್ಪೂರ್ವಕ ನೆನವರಿಕೆಗಳು.

ಮೈಸೂರು
ತಾ|| ೨೦-೮-೧೯೫೩

ಎಚ್. ದೇವೀರಪ್ಪ,
ಡೈರೆಕ್ಟರ್.

# ಉಪೋದ್ಘಾತ

ಗಗನಕೆ ಸಹಜಾಭರಣಂ
ಜಗದಾತ್ಮಂ ಕಲ್ಪಿತ ಶಶಿಮೂರ್ತಿಯೆನಿಪ್ಪಾ
ಜಗತಃಪ್ರಸೂತಿ ನೀಡುಗೆ
ಸೊಗಮಂ ದ್ಯುತಕನಕಸದೃಶ ದಶಶತಕಿರಣಂ

## ಜ್ಯೋತಿಶ್ಶಾಸ್ತ್ರದ ಪರಿಚಯ ಮತ್ತು ಅದರ ಸ್ಥಾನ

ಸಾಮಾನ್ಯವಾಗಿ ನಭೋಮಂಡಲದಲ್ಲಿ ನಿತ್ಯವಾಗಿ ಸರ್ವತ್ರ ಬೆಳಗುತ್ತಿರುವ ಜ್ಯೋತಿಸ್ಸುಗಳನ್ನು ನೋಡದವರಾರಿದ್ದಾರೆ? ಇವುಗಳಲ್ಲಿ ಕೆಲವನ್ನು ನೋಡುತ್ತಲೆ ಮಾನವನ ಚಿತ್ತ ವಿಕಸಿತವಾಗುತ್ತದೆ. ಈ ವಿಕಾಸಕ್ಕೆ ಮಾನವನ ಮೇಲೆ ಆ ಜ್ಯೋತಿಸ್ಸುಗಳು ಬೀರುವ ಪ್ರಭಾವವೇ ಕಾರಣ. ಈ ಪ್ರಭಾವವು ಮಾನವನ ಮೇಲೆ ಮಾತ್ರವಲ್ಲ; ಸಂಪೂರ್ಣ ಜಗತ್ತಿನ ಮೇಲೆಯೇ ವಿಶೇಷವಾಗಿ ವ್ಯಾಪಿಸಿದೆ. ಕೇವಲ ಮೋಡದಿಂದ ಆವೃತನಾದ ಜ್ಯೋತಿಃ ಪ್ರಧಾನನಾದ ಸೂರ್ಯನನ್ನು ಈ ನಭೋಮಂಡಲದಲ್ಲಿ ಕಾಣದಿದ್ದರೆ ಆ ದಿನವನ್ನು ಮಾನವ ದುರ್ದಿನವೆಂದು ಕರೆಯುತ್ತಾನೆ. ಚಂದ್ರೋದಯವನ್ನು ನೋಡಿ ವಿರಹಿಗೆ ದುಃಖವೂ ಉಳಿದವರಿಗೆ ಚಿತ್ತಾಹ್ಲಾದವೂ ತಾನಾಗಿಯೇ ಆಗುವುದಲ್ಲವೇ ? ಸೂರ್ಯನನ್ನು ಕಂಡೊಡನೆ ಜಗತ್ತೇ ಎಚ್ಚರಗೊಂಡು ಉತ್ಸಾಹಪೂರಿತವಾಗುವುದಿಲ್ಲವೇ ? ಇವೆಲ್ಲಕ್ಕೂ ಆ ಜ್ಯೋತಿಸ್ಸುಗಳ ಪ್ರಭಾವವೇ ಕಾರಣ. ಹೀಗೆ ಜ್ಯೋತಿಸ್ಸುಗಳು ಇಂತಹ ಪ್ರಭಾವವನ್ನು ಪಡೆದಿರುವುದು ಮಾತ್ರವಲ್ಲ; ಇವು ಶ್ರುತಿಯಲ್ಲಿ ವಿಧಿಸಿರುವ ಮಾನವನ ಕರ್ಮಾಚರಣೆಗೆ ಅತ್ಯಾವಶ್ಯಕವಾದ ಕಾಲವಿಧಾನವನ್ನೂ ತಿಳಿಸುತ್ತವೆ.

ಆಕಾಶದಲ್ಲಿ ಈ ಜ್ಯೋತಿಸ್ಸುಗಳಿರುವ ಸ್ಥಾನ, ಇವುಗಳ ಗತಿ, ಜಗತ್ತಿನ ಮೇಲೆ ಇವುಗಳು ಬೀರುವ ಪ್ರಭಾವ, ಶ್ರುತ್ಯುಕ್ತ ಕರ್ಮಾನುಷ್ಠಾನ ಕಾಲ ಇವೇ ಮೊದಲಾದ ವಿಷಯಗಳನ್ನು ತಿಳಿಸುವ ವಿಜ್ಞಾನವೇ ಜ್ಯೌತಿಷ.

ಈ ಯುಗದಲ್ಲಿ ನಮ್ಮ ಭೂಗೋಳದಿಂದ ಖಗೋಳಕ್ಕೆ ಪ್ರಯಾಣ ಮಾಡುವ ಅನೇಕ ವೈಜ್ಞಾನಿಕ ಪ್ರಯೋಗಗಳು ನಡೆಯುತ್ತಲೇ ಇವೆ. ಇವು ನಮಗೆ ಹೊಸತೆಂಥೇ ಕಂಡುಬರುತ್ತಿವೆ. ಆದರೆ ನಮ್ಮ ಭಾರತೀಯ ಪುರಾತನ ಋಷಿಗಳ ಚರಿತಗಳಿಂದ ಹಿಂದೆ ಲೋಕಾಂತರ ಸಂಚಾರವಿದ್ದಿತೆನ್ನುವ ವಿಚಾರ ಪ್ರತಿಯೊಬ್ಬ ಭಾರತೀಯನಿಗೂ ತಿಳಿದ ವಿಚಾರವಾಗಿದೆ. ಈ ವಿಧವಾದ ಅಸಾಧಾರಣ ಶಕ್ತಿ ಆ ಋಷಿಗಳಲ್ಲಿದ್ದುದರಿಂದಲೇ ಅವರು ಆ ಲೋಕಗಳ ಸಂಚಾರದಿಂದಲೂ ಮತ್ತು ತಾವು ಸಂಪಾದಿಸಿದ ಅತೀಂದ್ರಿಯ ಜ್ಞಾನದಿಂದಲೂ ಮಾನವನ ಕಲ್ಯಾಣಕ್ಕಾಗಿ ಆತನ ಅಳವಿಗನುಗುಣವಾಗಿ ವಿಷಯಗಳನ್ನು ಸಂಗ್ರಹಿಸಿ ಅವುಗಳನ್ನು ಶಿಷ್ಯವರ್ಗದಲ್ಲಿ ಉಪದೇಶಿಸಿರುತ್ತಾರೆ. ಈ ಉಪದೇಶಗಳು

ಅನೇಕವಾಗಿವೆ. ಇವನ್ನೇ ಶಾಸ್ತ್ರವೆಂದು ಕರೆಯುತ್ತಾರೆ. ಇವುಗಳಲ್ಲಿ ಶಿಕ್ಷಾ ವ್ಯಾಕರಣ ಛಂದಸ್ಸು ನಿರುಕ್ತ ಜ್ಯೌತಿಷ ಕಲ್ಪ ಈ ಆರೂ ವೇದಕ್ಕೆ ಅಂಗರೂಪ ವಾಗಿರುವುವು. ಈ ಆರರಲ್ಲಿ ಕಣ್ಣಿನ ಸ್ಥಾನ ಜ್ಯೋತಿಶ್ಶಾಸ್ತ್ರಕ್ಕಿದೆ. ಶರೀರಕ್ಕೆ ಕಣ್ಣು ಹೇಗೆ ಪ್ರಧಾನವೋ ಅಂತೆಯೇ ಜ್ಯೋತಿಶ್ಶಾಸ್ತ್ರವು ವೇದಕ್ಕೆ ಪ್ರಧಾನವಾದ ಅಂಗವಾಗಿದೆ. ವೇದಕ್ಕೆ ಕಣ್ಣಿನಂತಿರುವ ಈ ಜ್ಯೋತಿಶ್ಶಾಸ್ತ್ರವನ್ನು ಕಾಲವಿಧಾಯಕ ಶಾಸ್ತ್ರವೆಂದೂ ಕರೆಯುತ್ತಾರೆ.

ಭಾರತೀಯ ಅಲೌಕಿಕ ವಿದ್ಯಾಸಮೂಹದಲ್ಲಿ ಜ್ಯೌತಿಷವೂ ಒಂದು. ಈ ವಿದ್ಯೆಯ ಆಧಾರದಿಂದ ವಿದ್ವಾಂಸರು ಚಂದ್ರ ಸೂರ್ಯಾದಿ ಜ್ಯೋತಿಸ್ಸ್ವರೂಪ ಗಳಾದ ಗ್ರಹಗಳ ಪ್ರಭಾವದಿಂದ ಪ್ರಪಂಚಕ್ಕೆ ಸಂಭವಿಸತಕ್ಕ ಫಲಾಫಲಗಳನ್ನು ತಿಳಿಸುತ್ತಾರೆ. ಪಾಮರನಿಂದ ಜ್ಞಾನಿಯವರೆಗೆ ಪ್ರಪಂಚದ ಎಲ್ಲ ಜನರಿಗೂ ಈ ಶಾಸ್ತ್ರದ ಆವಶ್ಯಕತೆ ಇದೆ. ಇಷ್ಟುಮಾತ್ರವೆ ಅಲ್ಲ, 'ಸಾಮುದ್ರಿಕ ಜ್ಯೌತಿಷ ಮಂತ್ರ ವಾದಾಃ ಪದೇ ಪದೇ ಕೌತುಕಮಾವಹಂತಿ' ಎಂಬ ಪ್ರಾಚೀನ ಸೂಕ್ತಿಯಂತೆ [1] ಎಂತವನಿಗೂ ಈ ಶಾಸ್ತ್ರವು ಕುತೂಹಲವನ್ನುಂಟುಮಾಡುತ್ತದೆ. ಈ ಶಾಸ್ತ್ರ ಜ್ಞಾನವು ಭೂಲೋಕದ ಕಲ್ಪತರು. ಮಾನವನ ಮಂಗಳವೇ ಇದರ ಫಲ. ಧರ್ಮದ ಕಟ್ಟುಪಾಡುಗಳನ್ನು ಬಿಡದೆ ಅದರಂತೆ ನಡೆಯುವ ಭಾರತೀಯರಿಗಂತೂ ಇದರ ಉಪಯೋಗ ಅತ್ಯಧಿಕ.

ಶಾಸ್ತ್ರಪ್ರವರ್ತಕರು ಈ ಶಾಸ್ತ್ರವನ್ನು ಮೂರು ಪಂಗಡಗಳನ್ನಾಗಿ ವಿಭಾಗಿ ಸಿರುತ್ತಾರೆ. ಈ ವಿಭಾಗಗಳಿಗೆ ಸ್ಕಂಧಗಳೆಂದು ಹೆಸರು. ಗಣಿತ ಹೋರೆ ಸಂಹಿತೆ ಇವೇ ಜ್ಯೋತಿಶ್ಶಾಸ್ತ್ರದ ಆ ಮೂರು ಸ್ಕಂಧಗಳು.

ಮೊದಲನೆಯ ಗಣಿತ ಸ್ಕಂಧದಲ್ಲಿ ಜ್ಯೋತಿಸ್ಸ್ವರೂಪಗಳಾದ ಗ್ರಹ ನಕ್ಷತ್ರಗಳು ನಮಗೆ ಬೇಕಾದ ಕಾಲದಲ್ಲಿ ಗಗನದ ಯಾವ ವಿಭಾಗದಲ್ಲಿವೆ ಎನ್ನುವುದು, ಸೂರ್ಯ ಚಂದ್ರಗ್ರಹಣ, ವರ್ಷ ಮಾಸಾದಿ ಕಾಲವಿಭಾಗ ಇವೇ ಮೊದಲಾದ ವಿಷಯ ಗಳನ್ನು ಲೆಕ್ಕಮಾಡಿ ತಿಳಿಯುವ ವಿಧಾನವಿದೆ.

ಎರಡನೆಯ ಹೋರಾಸ್ಕಂಧದಲ್ಲಿ ವಿಧ್ಯುಕ್ತ ಕರ್ಮಾನುಷ್ಠಾನ ಕಾಲವನ್ನು ತಿಳಿಸುವ ಮುಹೂರ್ತಭಾಗ, ಪ್ರಶ್ನಕಾಲದಿಂದ ನಡೆದಿರುವ ಮತ್ತು ನಡೆಯುವ ಫಲಗಳನ್ನು ತಿಳಿಸುವ ಪ್ರಶ್ನಭಾಗ, ಮಾನವನು ಹುಟ್ಟಿದ ಕಾಲದಲ್ಲಿರುವ ಗ್ರಹಗಳ ಸನ್ನಿವೇಶದಿಂದ ಆತನ ಜೀವಿತ ಕಾಲದಲ್ಲಿ ಸಂಭವಿಸತಕ್ಕ ಫಲಗಳನ್ನು ತಿಳಿಸುವ ಫಲಭಾಗ ಈ ಮೂರೂ ಅಡಕವಾಗಿವೆ.

---

[1] ಸೂರ್ಯಸಿದ್ಧಾಂತಕ್ಕೆ ವ್ಯಾಖ್ಯಾನ ಬರೆದಿರುವ ರಂಗನಾಥ ದೈವಜ್ಞನ ಅಣ್ಣನಾದ ಕೃಷ್ಣ ದೈವಜ್ಞನು ಜಹಂಗೀರನ ಆಸ್ಥಾನದಲ್ಲೂ ಇದೇ ರಂಗನಾಥ ದೈವಜ್ಞನ ಮಗ ಮುನೀಶ್ವರನು ಷಹಜಾನನ ಆಸ್ಥಾನದಲ್ಲೂ ಇದ್ದರೆನ್ನುವ ವಿಚಾರ ಹೊರಗಿನಿಂದ ನಮ್ಮ ದೇಶಕ್ಕೆ ಬಂದಿರುವ ಮೊಗಲರಿಗೂ ಈ ಹಿಂದೂ ಶಾಸ್ತ್ರದಲ್ಲಿ ಮನ್ನಣೆ ಇತ್ತು ಎನ್ನುವುದಕ್ಕೆ ನಿದರ್ಶನವಾಗಿದೆ.

ಮೂರನೆಯ ಸಂಹಿತಾಸ್ಕಂಧದಲ್ಲಿ ಗ್ರಹಗಳ ಸನ್ನಿವೇಶದಿಂದ ಮತ್ತು ಉತ್ಪಾತಗಳಿಂದ ದೇಶಕ್ಕೆ ಸಾಮೂಹಿಕವಾಗಿ ಸಂಭವಿಸತಕ್ಕ ಫಲಾಫಲಗಳು ಬೋಧಿತವಾಗಿವೆ.

ಈ ಮೂರರಲ್ಲಿ ಎರಡನೆಯ ಸ್ಕಂಧಕ್ಕೆ ಸೇರಿದ ಫಲಶಾಸ್ತ್ರದ ಬೆಳವಣಿಗೆಯ ಗ್ರಂಥಗಳಲ್ಲಿ ಈ ಜಾತಕತಿಲಕ ಗ್ರಂಥವೂ ಒಂದು. ಫಲಶಾಸ್ತ್ರದ ವ್ಯಾಪ್ತಿ ಕೇವಲ ಭಾರತೀಯರಲ್ಲಿ ಮಾತ್ರವಲ್ಲ, ಪ್ರಪಂಚದ ಎಲ್ಲ ದೇಶೀಯರಲ್ಲೂ ಇದೆ.

## ಜ್ಯೋತಿಶ್ಶಾಸ್ತ್ರದ ಹುಟ್ಟು ಮತ್ತು ಬೆಳವಣಿಗೆ

[1] 'ಸಮಗ್ರ ಜ್ಯೋತಿಶ್ಶಾಸ್ತ್ರವನ್ನು ಆದಿಪುರುಷನಾದ ಹಿರಣ್ಯಗರ್ಭನಿಂದ ಬ್ರಹ್ಮನು ಮೊದಲು ತಿಳಿದು ತನ್ನನ್ನು ಪ್ರಾರ್ಥಿಸಿದ ಋಷಿಗಳ ಸಮುದಾಯಕ್ಕೆ ಅದನ್ನು (ಜ್ಞಾನ ಚಕ್ಷುಸ್ಸನ್ನು) ಉಪದೇಶಿಸಿದನು' ಎಂದು ವಸಿಷ್ಠಮಹರ್ಷಿಗಳು ಹೇಳಿರುತ್ತಾರೆ.

[2] ಯಜುರ್ವೇದದಲ್ಲಿ ಈ ಶಾಸ್ತ್ರಕ್ಕೆ ಸಂಬಂಧಪಟ್ಟ ಅನೇಕ ಮೂಲಭೂತ ವಿಚಾರಗಳನ್ನು ಕಾಣಬಹುದು. ಅಥರ್ವಣವೇದದ ಸಂಹಿತಾವಿಧಿಯಲ್ಲಿ ಮಾನವನಿಗೆ ಮತ್ತು ದೇಶಕ್ಕೆ ಗ್ರಹಗಳಿಂದ ಉಂಟಾಗುವ ಅಶುಭಫಲನಿವೃತ್ತಿ ಮತ್ತು ಶುಭಫಲಪ್ರಾಪ್ತಿಗಾಗಿ ಶಾಂತಿಕ ಪೌಷ್ಟಿಕಕರ್ಮಗಳು ವಿವೃತವಾಗಿವೆ. ಇದರಿಂದ ವೇದಕಾಲದಿಂದಲೇ ಈ ಶಾಸ್ತ್ರವಿದ್ದಿತೆನ್ನುವುದು ಸ್ಪಷ್ಟಪಡುತ್ತದೆ. ವೇದಕಾಲದಿಂದ ಮುಂದೆ ವೇದೋಪಬೃಂಹಣರೂಪಗಳಾದ ಸ್ಮೃತಿ ಇತಿಹಾಸ ಪುರಾಣಾದಿಗಳಲ್ಲಿಯೂ ಈ ಶಾಸ್ತ್ರವಿಚಾರಗಳಿವೆ ಎನ್ನುವುದು ಆ ಆ ಗ್ರಂಥಗಳ ಪರಿಶೀಲನೆಯಿಂದ ಸ್ಪಷ್ಟಪಡುತ್ತದೆ.

ಇದಲ್ಲದೆ ಋಷಿಗಳು ಈ ವಿಷಯಗಳನ್ನೆಲ್ಲ ಸಂಗ್ರಹಿಸಿ ಮಾನವನ ಕಲ್ಯಾಣಕ್ಕಾಗಿಯೆ ಈ ಶಾಸ್ತ್ರವನ್ನು ಹೊರಗೆಡವಿದ್ದಾರೆ. ಈ ಗ್ರಂಥಗಳಲ್ಲಿ ಕೆಲವು ಮಾತ್ರ ಈಗ ಸಂಪೂರ್ಣವಾಗಿ ಉಪಲಬ್ಧವಿವೆ. ಸೂರ್ಯ, ಪಿತಾಮಹ, ವ್ಯಾಸ, ವಸಿಷ್ಠ, ಅತ್ರಿ, ಪರಾಶರ, ಕಶ್ಯಪ, ನಾರದ, ಗರ್ಗ, ಮರೀಚಿ, ಮನು, ಅಂಗಿರಸ್ಸು,

---

[1] ಜ್ಯೋತಿಶ್ಶಾಸ್ತ್ರಂ ಸಮಗ್ರಂ ಪ್ರಥಮ ಪುರುಷತಃ ಸ್ವರ್ಣಗರ್ಭಾದ್ವಿದಿತ್ವಾ
ಪೂರ್ವಂ ಬ್ರಹ್ಮಾ ತತೋಽಯಂ ನಿಖಿಲಮುನಿಗಣ ಪ್ರಾರ್ಥನಾದ್ವ್ಯಚ್ಚಕಾರ ।
ತಚ್ಚೇದಂ ಸುಪ್ರಸನ್ನಂ ಮೃದುಪದಸಿಕರೈರ್ಗ್ರಾಹ್ಯಮಧ್ಯಾತ್ಮರೂಪಂ
ಶಶ್ವದ್ವಿಶ್ವಪ್ರಕಾಶಂ ಗ್ರಹಚರಿತವಿದಾಂ ನಿರ್ಮಲಂ ಜ್ಞಾನಚಕ್ಷುಃ ॥
ಎಂದು ವಸಿಷ್ಠ ಮಹರ್ಷಿಗಳು ಹೇಳಿರುತ್ತಾರೆ.

[2] ವರ್ಷ, ಅಯನ, ಋತು, ಮಾಸ, ಪಕ್ಷ, ದಿನ, ತಿಥಿ, ವಾರ, ನಕ್ಷತ್ರ, ಪ್ರಾತಃ ಸಂಗವಾದಿ ಕಾಲವಿಭಾಗ—ಇವೇ ಮೊದಲಾದ ಸೂರ್ಯ ಚಂದ್ರರಿಗೆ ಸಂಬಂಧಪಟ್ಟ ವಿಷಯಗಳನ್ನು ಅಧಿಕವಾಗಿ ತೈತ್ತರೀಯ ಮತ್ತು ಶತಪಥ ಬ್ರಾಹ್ಮಣಗಳಲ್ಲಿ ಕಾಣಬಹುದು.

[3] ಶೌನಕ ಋಷಿಗಳ ವಚನದಂತೆ ಜ್ಯೋತಿಶ್ಶಾಸ್ತ್ರವು ೪ ಲಕ್ಷ ಗ್ರಂಥಗಳಲ್ಲಿ ಅಡಕವಾಗಿದೆ.

ಲೋಮಶ, ಪೌಲಸ್ತ್ಯ, ಚ್ಯವನ, ಯವನ, ಭೃಗು, ಶೌನಕ ಈ ಹದಿನೆಂಟು ಮಂದಿ ಆಚಾರ್ಯರು ಜ್ಯೋತಿಶ್ಶಾಸ್ತ್ರ ಪ್ರವರ್ತಕರಲ್ಲಿ ಮುಖ್ಯರು. ಈ ಆಚಾರ್ಯರಲ್ಲದೆ ಯಾಜ್ಞವಲ್ಕ್ಯ, ಮಾಂಡವ್ಯ, ಭರದ್ವಾಜ, ಶುಕ ಇವರೇ ಮೊದಲಾದ ಇನ್ನೂ ಅನೇಕ ಋಷಿಗಳ ಶ್ಲೋಕಗಳು ಕೆಲವು ಗ್ರಂಥಗಳಲ್ಲಿ ಉದ್ಧೃತವಾಗಿರುವುದರಿಂದ ಆ ಋಷಿಗಳಿಂದ ವಿರಚಿತವಾದ ಗ್ರಂಥಗಳೂ ಇದ್ದುವೆಂದು ಸ್ಪಷ್ಟಪಡುತ್ತದೆ. ಆರ್ಷೇಯ ಗ್ರಂಥಗಳನ್ನು ಬಿಟ್ಟರೆ ಕ್ರಿಸ್ತಾಬ್ದಕ್ಕೆ ಪೂರ್ವದಲ್ಲಿ ನೂತನವಾಗಿ ರಚಿತವಾಗಿರುವ ಗ್ರಂಥವಾವುದೂ ದೊರೆಯುವುದಿಲ್ಲ. ಕ್ರಿಸ್ತಾಬ್ದ ೫ನೇ ಶತಮಾನದ ವೇಳೆಗೆ ಪ್ರಸಿದ್ಧನಾದ ಆರ್ಯಭಟನ ಗ್ರಂಥವನ್ನು ಕಾಣಬಹುದು. ಅಲ್ಲಿಂದ ಮುಂದೆ ಲಲ್ಲ, ವರಾಹಮಿಹಿರ, ಶ್ರೀಪತಿ, ಕೇಶವ, ಕಲ್ಯಾಣವರ್ಮ, ಭಾಸ್ಕರ, ವೈದ್ಯನಾಥ, ಗಣೇಶ, ಜೀವನಾಥ, ಕೃಷ್ಣಮಿಶ್ರ, ಮಂತ್ರೇಶ್ವರ ಮೊದಲಾದವರು ಆರ್ಷೇಯ ಗ್ರಂಥಗಳ ಆಧಾರದ ಮೇಲೆ ಸ್ವತಂತ್ರ ಗ್ರಂಥಗಳನ್ನು ಕೆಲವರೂ ಸಂಗ್ರಹರೂಪವಾದ ಗ್ರಂಥಗಳನ್ನು ಕೆಲವರೂ ರಚಿಸಿರುತ್ತಾರೆ.[1] ಇವರಲ್ಲಿ ವರಾಹಮಿಹಿರಾಚಾರ್ಯನು ಅತ್ಯಂತ ಪ್ರಸಿದ್ಧನು. ಈತನು ಕೇವಲ ಆರ್ಷೇಯ ಗ್ರಂಥವನ್ನು ಮಾತ್ರವಲ್ಲದೆ ಇತರ ಪರ್ಷಿಯಾ, ಗ್ರೀಸ್ ಮೊದಲಾದ ದೇಶಗಳಲ್ಲಿ ಪ್ರಚಾರದಲ್ಲಿದ್ದ ಗ್ರಂಥಗಳನ್ನೂ ಅಧ್ಯಯನಮಾಡಿ ಅವುಗಳಲ್ಲಿ ಕೆಲವನ್ನು ತನ್ನ ಗ್ರಂಥದಲ್ಲಿ ಸಂಗ್ರಹಿಸಿರುತ್ತಾನೆ[2]. ಇದನ್ನೇ ಮುಖ್ಯವಾಗಿಟ್ಟುಕೊಂಡು ಕೆಲವು ಚಾರಿತ್ರಿಕರು ನಮ್ಮ ಈ ಜ್ಯೋತಿಶ್ಶಾಸ್ತ್ರವು ಪರದೇಶದಿಂದ ಹಿಂದೂ ದೇಶಕ್ಕೆ ಬಂದಿತೆಂದು ಆರೋಪಿಸುತ್ತಾರೆ. ಆದರೆ ಇದು ಕೇವಲ ಆರೋಪಣೆ ಮಾತ್ರ ; ವಸ್ತು ಸ್ಥಿತಿಯಲ್ಲ. ಈ ಶಾಸ್ತ್ರ ವೇದಕಾಲದಿಂದಲೂ ಭಾರತೀಯರಲ್ಲಿ ಇದ್ದಿತೆನ್ನುವುದನ್ನು ಹಿಂದೆಯೇ ಸ್ಪಷ್ಟಪಡಿಸಿದೆ.

ಇದರಿಂದ ನಮ್ಮ ದೇಶದಲ್ಲಿ ಈ ಶಾಸ್ತ್ರವಿತ್ತು, ಉಳಿದ ದೇಶಗಳಲ್ಲಿ ಇರಲಿಲ್ಲವೆಂದಲ್ಲ. ಆ ದೇಶಗಳಲ್ಲೂ ಬೇರೊಂದು ವಿಧದಲ್ಲಿ ಈ ಶಾಸ್ತ್ರವು ಬೆಳೆಯುತ್ತಿದ್ದಿರಬಹುದು. ಆದರೆ ಅಲ್ಲಿಂದಲೇ ನಮ್ಮ ದೇಶಕ್ಕೆ ಈ ಶಾಸ್ತ್ರ ಬಂದಿತೆನ್ನುವುದು ಮಾತ್ರ ಸರಿಯಾದ ಅಭಿಪ್ರಾಯವಲ್ಲ. ಅಲ್ಲದೆ ಒಂದು ಕಾಲದಲ್ಲಿ ಗ್ರೀಸ್, ಅರೇಬಿಯಾ, ಚೀನಾ, ಈಜಿಪ್ಟ್, ಪರ್ಷಿಯಾ ಈ ದೇಶಗಳೆಲ್ಲ ಒಂದೇ ವಿಭಾಗವಾಗಿದ್ದು ಜನರು ಪರಸ್ಪರ ಕಲೆತು ಎಲ್ಲೆಡೆಯಲ್ಲೂ ಒಂದೇ ವಿಧವಾದ ಸ್ಥಿತಿ ಇದ್ದಿರಬಹುದೆಂದು ಐತಿಹಾಸಿಕ ಮತ್ತು ಚಾರಿತ್ರಿಕ ದೃಷ್ಟಿಯಿಂದ ಊಹಿಸಬಹುದು. ಅಂತು ಈ ಶಾಸ್ತ್ರದ ಹುಟ್ಟು ಪೌರಸ್ತ್ಯ ದೇಶದಲ್ಲಿ ಎನ್ನುವುದು ನಿರ್ವಿವಾದವಾದ ವಿಚಾರ.

---

[1] ಜ್ಯೋತಿಶ್ಶಾಸ್ತ್ರ ಪ್ರವರ್ತಕರಂತೆ ಜ್ಯೋತಿರ್ನಿಬಂಧ ಕರ್ತೃಗಳಲ್ಲಿಯೂ ವರಾಹ, ನೃಸಿಂಹ, ಶ್ರೀಪತಿ, ಸತ್ಯ, ಭಾಸ್ಕರ, ಬ್ರಹ್ಮಗುಪ್ತ, ವೈದ್ಯನಾಥ, ಲಲ್ಲ, ಶ್ರೀಧರ, ರೇಣುಕ ಈ ಹತ್ತು ಮಂದಿ ಪ್ರಸಿದ್ಧರೆಂದು ಗ್ರಂಥಗಳಿಂದ ತಿಳಿದುಬರುತ್ತದೆ.

[2] ಬೃಹಜ್ಜಾತಕದಲ್ಲಿ ಒಟ್ಟುಸುಮಾರು ೩೬ ಗ್ರೀಕ್ ಶಬ್ದಗಳಿವೆ.

ಸಾಮಾನ್ಯವಾಗಿ ಪ್ರತಿಯೊಬ್ಬ ಜ್ಯೌತಿಷಾಚಾರ್ಯನೂ ಮೂರು ಸ್ಕಂಧಗಳಲ್ಲೂ ಗ್ರಂಥಗಳನ್ನು ರಚಿಸಿರುತ್ತಾನೆ. ಈ ಗ್ರಂಥಗಳಿರುವುದು ಸಂಸ್ಕೃತ ವಾಣಿಯಲ್ಲಿ. ಇವುಗಳಲ್ಲಿ ಬೃಹಜ್ಜಾತಕವೆನ್ನುವುದು ಎರಡನೆಯ ಹೋರಾ ಸ್ಕಂಧಕ್ಕೆ ಸಂಬಂಧಪಟ್ಟ ಒಂದು ಫಲಗ್ರಂಥ. ಇದರ ಕರ್ತೃ ವರಾಹಮಿಹಿರ. ಈತನು ಲಘುಜಾತಕವೆಂಬ ಮತ್ತೊಂದು ಫಲಗ್ರಂಥವನ್ನೂ ಬರೆದಿರುತ್ತಾನೆ. ವಿಕ್ರಮಾದಿತ್ಯನ [1] ಆಸ್ಥಾನದ ನವರತ್ನಗಳಲ್ಲಿ ಈತನೂ ಒಬ್ಬ. ಉಳಿದೆರಡು ಸ್ಕಂಧಗಳಲ್ಲೂ ಈತನು ಗ್ರಂಥಗಳನ್ನು ರಚಿಸಿರುತ್ತಾನೆ. ಲಘುಜಾತಕ ಬೃಹಜ್ಜಾತಕಗಳೆರಡಕ್ಕೂ ಭಟ್ಟೋತ್ಪಲರು (ಕ್ರಿ. ಶ. ೯೬೬) 'ವಿವೃತಿ' ಎನ್ನುವ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಬೃಹಜ್ಜಾತಕಕ್ಕೆ ಇದಲ್ಲದೆ ಇನ್ನೂ ಅನೇಕ ವ್ಯಾಖ್ಯಾನಗಳಿವೆ; ಅಲ್ಲದೆ ದೇಶ ಭಾಷೆಗಳ ಪರಿವರ್ತನಗಳೂ ಇರುವುವು.

ಬೃಹಜ್ಜಾತಕದಂತೆ ಸಾರಾವಳಿ ಎನ್ನುವುದೂ ಮತ್ತೊಂದು ಫಲಗ್ರಂಥ. ಇದರ ಕರ್ತೃ ಕಲ್ಯಾಣವರ್ಮ. ಈತನ ಕಾಲ ಸುಮಾರು ೬ನೇ ಶತಮಾನದ ಆದಿಭಾಗ. [2] ಈ ಮೂರು ಸಂಸ್ಕೃತ ಫಲಗ್ರಂಥಗಳನ್ನು ಸಂಗ್ರಹಿಸಿ ಅದನ್ನೇ ಕನ್ನಡಿಸಿ ರಚಿಸಿರುವ [3] ಮೊದಲನೆಯ ಕನ್ನಡ ಫಲಗ್ರಂಥವೆ ಶ್ರೀಧರಾಚಾರ್ಯ ವಿರಚಿತವಾದ ಈ ಜಾತಕತಿಲಕ.

—

[1] 'ಧನ್ವಂತರಿ ಕ್ಷಪಣಕಾಮರಸಿಂಹ ಶಂಕು ವೇತಾಲಭಟ್ಟ ಘಟ ಖರ್ಪರ ಕಾಲಿದಾಸಾಃ | ಖ್ಯಾತೋ ವರಾಹಮಿಹಿರೋ ನೃಪತೇಃ ಸಭಾಯಾಂ ರತ್ನಾನಿ ವೈ ವರರುಚಿರ್ನವ ವಿಕ್ರಮಸ್ಯ॥ ಈ ಶ್ಲೋಕದಿಂದ ನವರತ್ನಗಳಲ್ಲಿ ವರಾಹಮಿಹಿರನೂ ಒಬ್ಬ ಎನ್ನುವುದು ಸ್ಪಷ್ಟಪಡುತ್ತದೆ. ವರಾಹಮಿಹಿರನು ಪಂಚಸಿದ್ಧಾಂತಿಕಾ, ಬೃಹತ್ಸಂಹಿತಾ, ಬೃಹದ್ಯಾತ್ರಾ, ಲಘುಯಾತ್ರಾ, ಯೋಗಯಾತ್ರಾ, ಬೃಹದ್ವಿವಾಹ ಪಟಲ, ಲಘುವಿವಾಹ ಪಟಲ, ಲಘುಸಂಹಿತಾ, ಬೃಹಜ್ಜಾತಕ, ಲಘುಜಾತಕ ಈ ಹತ್ತು ಗ್ರಂಥಗಳನ್ನು ರಚಿಸಿದ್ದಾನೆ. ಈತನ ಕಾಲ ಆರನೆಯ ಶತಮಾನದ ಆರಂಭ.

[2] ಬೃಹಜ್ಜಾತಕದಲ್ಲಿ ೩೮೩ ಶ್ಲೋಕಗಳಿಂದ ಕೂಡಿದ ೨೬ ಅಧ್ಯಾಯಗಳಿವೆ. (ಅಧ್ಯಾಯ ಮತ್ತು ಶ್ಲೋಕ ಸಂಖ್ಯೆಯಲ್ಲಿ ಮತಭೇದಗಳಿವೆ.) ಲಘುಜಾತಕದಲ್ಲಿ ೧೮೬ ಶ್ಲೋಕಗಳಿಂದ ಕೂಡಿದ ೧೬ ಅಧ್ಯಾಯಗಳಿವೆ. ಸಾರಾವಳಿಯಲ್ಲಿ ಸುಮಾರು ೨೦೦೦ ಶ್ಲೋಕಗಳಿಂದ ಕೂಡಿದ ೪೨ ಅಧ್ಯಾಯಗಳಿವೆ.

[3] ನಾಗವರ್ಮನ ಕಾವ್ಯಾವಲೋಕನದ ಸಮಾಸ ಪ್ರಕರಣದ ಆರಂಭದಲ್ಲಿ ಉದಹರಿಸಿರುವ

'ಊರೇೞರ್ ಮನೆ ಮಾಡ
ಲ್ಕಾರಂಭಂಗೆಯ್ಯರೆಟ್ಟುಗೊಳರಾಳಾಳ
ಲ್ಕಾರಾಮುಮಿಡರ್ಕೆಂದುಂ
ದಾರುಣ ತಾರೆಗಳನುಱಿಯೆ ಪೆಱವಱೊಳುಚಿತಂ'

ಈ ಪದ್ಯ ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಪಟ್ಟ ವಿಚಾರವನ್ನು ತಿಳಿಸುತ್ತದೆ. ಇದು ಯಾವ ಗ್ರಂಥದ್ದು ಎನ್ನುವುದು ತಿಳಿದುಬರುವುದಿಲ್ಲ. ನಾಗವರ್ಮನ ಕಾಲಕ್ಕಿಂತ (ಕ್ರಿ.ಶ. ೧೧೩೮–೫೦) ಮೊದಲು ಮುಹೂರ್ತ ವಿಚಾರವನ್ನು ತಿಳಿಸುವ ಒಂದು ಗ್ರಂಥ ಕನ್ನಡದಲ್ಲಿದ್ದಿರಬಹುದೆಂದು ಇದರಿಂದ ಊಹಿಸಬಹುದು.

## ಕವಿಯ ವಿಚಾರ

ಈ ಜಾತಕತಿಲಕ ಗ್ರಂಥದ ಕರ್ತೃವಾದ ಶ್ರೀಧರಾಚಾರ್ಯನ ಜನ್ಮಸ್ಥಳ ಪ್ರಸಿದ್ಧವಾದ ಬೆಳುವಲನಾಡಿಗೆ ತಿಲಕದಂತಿದ್ದ ನಱುಗುಂದ.[1] ಈತನ ಜನ್ಮ ದಿನ ಮತ್ತು ಜೀವಿತದ ಕಾಲಾವಧಿ ಖಚಿತವಾಗಿ ತಿಳಿದುಬರುವುದಿಲ್ಲ. 'ಶಕ ವರ್ಷ ೯೭೧ (ಕ್ರಿ.ಶ. ೧೦೪೯)ನೇ ವಿರೋಧಿ ಸಂವತ್ಸರದ ಮಾರ್ಗಶೀರ್ಷ ಮಾಸ ಕೃಷ್ಣ ಪಕ್ಷದ ಚತುರ್ಥೀ ಗುರುವಾರ ಪುಷ್ಯ ನಕ್ಷತ್ರದಲ್ಲಿ ಈ ಗ್ರಂಥವನ್ನು ಪ್ರಕಾಶಪಡಿಸಿದೆನೆಂದು[2] ಗ್ರಂಥಾಂತ್ಯದಲ್ಲಿ ಹೇಳಿರುವುದರಿಂದ ಶ್ರೀಧರನು ೧೧ನೇ ಶತಮಾನದ ಮಧ್ಯಭಾಗದಲ್ಲಿದ್ದವನೆಂದು ತಿಳಿದುಬರುತ್ತದೆ.

ಕವಿ ತನ್ನ ಮತವಾವುದೆನ್ನುವುದನ್ನು ಗ್ರಂಥದಲ್ಲಿ ವಾಚ್ಯವಾಗಿ ತಿಳಿಸಿಲ್ಲ. ಆದರೆ ಗ್ರಂಥಾರಂಭದಲ್ಲಿ ಈತನು ಜಿನನನ್ನು ಸ್ತುತಿಸಿದ್ದಾನೆ, ಮತ್ತು ತನ್ನನ್ನು 'ವಿಪ್ರಕುಲೋತ್ತಮಂ' ಎಂದೂ ಹೇಳಿಕೊಂಡಿರುತ್ತಾನೆ. ಇದರಿಂದ ಶ್ರೀಧರನು ಜೈನ ಬ್ರಾಹ್ಮಣನೆಂದು ತಿಳಿದುಬರುತ್ತದೆ. ಇದಲ್ಲದೆ ಗ್ರಂಥಾದಿಯಲ್ಲಿ[3] ವ್ಯಂಗ್ಯ ಮರ್ಯಾದೆಯಿಂದ ಪಂಪ ಗಜಾಂಕುಶ ಮತ್ತು ರನ್ನಾದಿ ಜೈನ ಮಹಾಕವಿಗಳನ್ನು ಸ್ಮರಿಸಿರುವುದು, 'ಸಮ್ಯಕ್ತ್ವ' ಎಂಬ ಜೈನ ಮತಧರ್ಮ ಬೋಧಕ ಪದವನ್ನು 'ಸಮ್ಯಕ್ತ್ವರತ್ನಾಕರ' ಎಂದು ಬಿರುದಿನಲ್ಲಿ ಸೇರಿಸಿಕೊಂಡಿರುವುದು, ಪ್ರವ್ರಜ್ಯಾ ಯೋಗಗಳಲ್ಲಿ ಜಿನಯೋಗಿ ಯೋಗವನ್ನು (ಪು ೧೭೦ ಪ ೨) ಹೇಳಿರುವುದು, ಜಿನಧರ್ಮ ಬೋಧಕವಾದ ಚಂದ್ರಪ್ರಭಚರಿತೆಯೆಂಬ ಮತ್ತೊಂದು ಕಾವ್ಯಗ್ರಂಥವನ್ನು ರಚಿಸಿರುವುದು ಮತ್ತು ಪ್ರತಿ ಅಧಿಕಾರದ ಕೊನೆಯಲ್ಲೂ 'ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ' ಎಂದು (ಜಿನಪಾದಸೇವಕನೆಂದು) ಹೇಳಿಕೊಂಡಿರುವುದು, ಇವೆಲ್ಲ ಈ ಕವಿ ಜೈನಮತದವನೆಂಬುದನ್ನು ಪುಷ್ಟೀಕರಿಸುತ್ತವೆ. ನಾಗಕುಮಾರ ಕಥೆಯನ್ನು (ಸಾಂಗತ್ಯ ಛಂದಸ್ಸಿನಲ್ಲಿ) ಬರೆದಿರುವ ಬಾಹುಬಲಿಯು (ಕ್ರಿ.ಶ. ೧೫೬೦) 'ಜ್ಯೋತಿಷ ವಿದ್ಯೆಗೆ ಮೊದಲಿಗ ಸಲೆ ವಾದಿವ್ರಾತ ಭಯಂಕರನೆನಿಪ ಖ್ಯಾತಿಗೆ ನೆಲೆಯಾದ

---

[1] ಈಗಿನ ಧಾರ್ವಾಡ ಜಿಲ್ಲೆಯಲ್ಲಿ ಈ ನಱುಗುಂದ ಗ್ರಾಮವಿದೆ. ಚಾಳುಕ್ಯ ರಾಜನಾದ ಆಹವಮಲ್ಲನ [ಕ್ರಿ. ಶ. ೧೦೪೨–೧೦೬೮] ಆಳ್ವಿಕೆಯಲ್ಲಿದ್ದ ನಾಡು ಬೆಳುವಲ. ಈ ನಾಡಿಗೆ ಮುನ್ನೂರು ಗ್ರಾಮಗಳು ಸೇರಿದ್ದವು. ಇವುಗಳಲ್ಲಿ ಮುಖ್ಯವಾದದ್ದು ನಱುಗುಂದ.

[2] 'ಧರಣಿಗಿರಿ ಶಕಾಬ್ದಂ ವಿರೋಧಿವತ್ಸರದ ಮಾರ್ಗಶೀರ್ಷದ ಶುಕ್ಲೇತರದ ಚತುರ್ಥೀ ದಿವಸದ ಗುರುಪುಷ್ಯದೊಳೆಸದುದಿಳೆಗೆ ಜಾತಕತಿಲಕಂ' (ಅಧಿ ೨೪, ಪ ೪೪).

[3] 'ಅನವದ್ಯಂ ಕವಿತಾ ಗುಣಾರ್ಣವನಿಳಾದೇವಾನ್ವಯಾಬ್ಧ್ಯಂಬುಜಾರಿನಿಭಂ ಪ್ರೌಢ ವಿಲಾಸಿನೀ ಮನಸಿಜಂ ಶ್ರೀಶೀಲಭದ್ರಂ ದ್ವಿಷಜ್ಜನ ದುರ್ವಾರಗಜಾಂಕುಶಂ ಸುಜನರತ್ನಂ ತಾನೆನಲ್ಕೇಂ [ಕೃತಾ]ರ್ಥನೊ ಕರ್ಣಾಟಕವೀಂದ್ರ ಸದ್ಗುಣಗಣಂ ಪ್ರಜ್ಞಾಧರಂ ಶ್ರೀಧರಂ' (ಅಧಿ ೧, ಪ ೫) ಕವಿತಾಗುಣಾರ್ಣವ (ಆದಿಪಂಪ ಕ್ರಿ.ಶ. ೯೪೧) ಅಂಬುಜಾರಿ (ಚಂದ್ರಭಟ್ಟ ಸು ಕ್ರಿ.ಶ. ೧೦೦೦) ಮನಸಿಜ (ಕ್ರಿ.ಶ. ೧೦೦೦) ಗಜಾಂಕುಶ (ಕ್ರಿ.ಶ. ೧೦೦೦) ರನ್ನ (ಕ್ರಿ.ಶ. ೯೯೩) ಶೀಲಭದ್ರ (ಗುಣವರ್ಮ ಕ್ರಿ.ಶ. ೯೦೦) ಈ ಕವಿಗಳ ಹೆಸರುಗಳನ್ನು ಈ ಪದ್ಯದಲ್ಲಿ ಶ್ರೀಧರನು ಸ್ಮರಿಸಿದ್ದಾನೆ.

ಶ್ರೀಧರಾಚಾರ್ಯರ ಪ್ರೀತಿ ಮಿಗೆ ಬಲಗೊಂಬೆ' ಎಂದು ಶ್ರೀಧರಾಚಾರ್ಯನನ್ನು ತನ್ನ ಗ್ರಂಥದಲ್ಲಿ ಸ್ತುತಿಸಿ ನಮಸ್ಕರಿಸಿರುತ್ತಾನೆ. ನಾಗಕುಮಾರನನ್ನು ಬಿಟ್ಟರೆ ಮತ್ತಾವ ಕವಿಯೂ ಈ ಶ್ರೀಧರಾಚಾರ್ಯನನ್ನು ಸ್ಮರಿಸಿರುವುದು ತಿಳಿದು ಬರುವುದಿಲ್ಲ.

ಈತನು ಗ್ರಂಥಾರಂಭದಲ್ಲಿ ಪಂಪಾದಿಕವಿಗಳನ್ನು ಸ್ಮರಿಸಿರುವಂತೆ ಜ್ಯೋತಿಷಾಚಾರ್ಯರಲ್ಲಿ ಮುಖ್ಯನಾದ ಆರ್ಯಭಟ್ಟನನ್ನೂ ಸ್ಮರಿಸಿದ್ದಾನೆ. ಆದರೆ ತಾನು ಕನ್ನಡಿಸಿರುವ ಸಂಸ್ಕೃತ ಜ್ಯೌತಿಷ ಗ್ರಂಥಕರ್ತೃಗಳಾದ ವರಾಹಮಿಹಿರ ಮತ್ತು ಕಲ್ಯಾಣವರ್ಮರ ಹೆಸರನ್ನು ಒಂದೆಡೆಯಲ್ಲೂ ತಿಳಿಸಿಲ್ಲ.

ಪ್ರಸಿದ್ಧ ಕವಿಗಳಿಗೆ ರಾಜಾಶ್ರಯವಿದ್ದಿತೆನ್ನುವ ವಿಚಾರವು ಕವಿಚರಿತ್ರೆಯ ಅವಲೋಕನದಿಂದ ಸ್ಪಷ್ಟಪಡುತ್ತದೆ. ಇದರಂತೆ ಈ ಕವಿಗೂ ರಾಜಾಶ್ರಯ ವಿದ್ದಿತೆಂದು ಹೇಳಲು ಸ್ಪಷ್ಟವಾದ ಕುರುಹುಗಳಾವುವೂ ಇಲ್ಲ. ಗ್ರಂಥದ ಕೊನೆಯ ಪದ್ಯದಲ್ಲಿ *'ಧಾತ್ರಿಯನಾಹವಮಲ್ಲ ಭೂಮಿಪಾಲನೊಸೆದಾಳ್ಗೆ' ಎಂದು ಹೇಳಿರು ವುದನ್ನು ಬಿಟ್ಟರೆ ಗ್ರಂಥದಲ್ಲಿ ರಾಜನ ವಿಚಾರವಾಗಿ ಮತ್ತೇನೂ ಇರುವುದಿಲ್ಲ. ಈ ಕವಿ ಹೇಳಿಕೊಂಡಿರುವ ಬಿರುದುಗಳು ರಾಜಾಶ್ರಯವಿಲ್ಲದೆ ದೊರೆಯುವುದು ದುರ್ಲಭ, ಇದರಿಂದ ಈ ಕವಿ ಆಹವಮಲ್ಲನ ಆಸ್ಥಾನ ಪಂಡಿತನಾಗಿದ್ದಿರ ಬಹುದೆಂದು ಊಹಿಸಬಹುದು. ಆದರೆ ಈತನ ಬಿರುದುಗಳಲ್ಲಿ 'ಬುಧಮಿತ್ರ' ಎನ್ನುವುದನ್ನೇ ಅಧಿಕವಾಗಿ ಪ್ರಯೋಗಿಸಿರುವುದರಿಂದಲೂ ಮತ್ತು ಬುಧನಿವಹದ ಆದೇಶದಂತೆ ತಾನು ಜಾತಕತಿಲಕವನ್ನು ರಚಿಸಿದೆನೆಂದು ಹೇಳಿಕೊಂಡಿರುವುದ ರಿಂದಲೂ ವಿದ್ವಾಂಸಮಿತ್ರನಾದ ಶ್ರೀಧರನ ಶಾಸ್ತ್ರ ಮತ್ತು ಕವಿತ್ವದ ಪಾಂಡಿತ್ಯಕ್ಕೆ ಮನ್ನಣೆಯಿತ್ತು ಬುಧನಿವಹವೇ ಶ್ರೀಧರನಿಗೆ ಬಿರುದುಗಳನ್ನು ಕೊಟ್ಟಿರಬಹು ದೆಂದೂ ಹೇಳಬಹುದು.

†[1]ಪ್ರಜ್ಞಾಧರ, [2]ವಾಕ್ಛ್ರೀಧರ (ವಚೋಲಕ್ಷ್ಮೀಧರ, ವಚೋವಿಭವಧರ), [3]ಶಾಸ್ತ್ರ ಕವಿತಾಚತುರ, [4]ಕರಣರತ್ನ, [5]ಬುಧತಿಲಕ, [6]ಬುಧಮಿತ್ರ, [7]ಸಮ್ಯಕ್ತ್ವ—

* ಚಾಳುಕ್ಯರಲ್ಲಿ ಜಯಸಿಂಹ ಜಗದೇಕಮಲ್ಲನ ಮಗನಾದ ಮೊದಲನೆಯ ಸೋಮೇಶ್ವರನೇ ಈ ಆಹವಮಲ್ಲ. ಈತನಿಗೆ ತ್ರೈಲೋಕ್ಯಮಲ್ಲನೆಂಬ ಹೆಸರೂ ಇದ್ದಿತು. ಸತ್ವಶಾಲಿಯೂ ಯುದ್ಧೋತ್ಸಾಹಿಯೂ ಆದ ಈತನು ಚೋಳರೊಡನೆ ಯುದ್ಧಮಾಡಿ ಜಯಶಾಲಿಯಾಗಿ ಪ್ರಸಿದ್ಧ ನಾಗಿದ್ದನು.

† ಶ್ರೀಧರಾಚಾರ್ಯನು ಜಾತಕತಿಲಕದಲ್ಲಿ ಹೇಳಿಕೊಂಡಿರುವ ಬಿರುದುಗಳಿರುವ ಅಧಿ ಕಾರ ಮತ್ತು ಪದ್ಯಗಳ ಸಂಖ್ಯೆಯನ್ನು ಈ ಕೆಳಗೆ ಕೊಟ್ಟಿದೆ:—

[1] ಅಧಿ ೧ ಪ. ೫. [2] ಅಧಿ. ೧ ಪ. ೪, ೭ ಅಧಿ. ೨೪ ಪ. ೪೧. [3] ಅಧಿ.೧ ಪ ೧೧. [4] ಅಧಿ.೧ ಪ. ೬. [5] ಅಧಿ. ೧ ಪ. ೧೮. [6] ಅಧಿ. ೧ ಪ. ೪೫, ಅಧಿ. ೩, ಪ ೧೨, ಅಧಿ. ೭ ಪ. ೪, ೮, ೧೫, ೧೯ ಅಧಿ ೧೨ ಪ. ೨೯, ೩೧, ಅಧಿ. ೧೩ ಪ ೧೯, ಅಧಿ. ೧೪ ಪ ೨, ೧೧, ಅಧಿ. ೧೫ ಪ. ೫, ಅಧಿ. ೧೭ ಪ. ೨೧. [7] ಅಧಿ ೨ ಪ. ೧೪, ಅಧಿ. ೮ ಪ. ೧೫, ಅಧಿ. ೧೨ ಪ. ೨, ಅಧಿ. ೧೩ ಪ. ೧೫, ಅಧಿ. ೧೪ ಪ. ೧೨, ಅಧಿ. ೧೭ ಪ. ೨೨, ಅಧಿ. ೨೧ ಪ. ೧೦.

ರತ್ನಾಕರ, [1] ಕವಿರಾಜಬಾಂಧವ, [2] ಪದ್ಯವಿದ್ಯಾಧರ, [3] ಸುಜನೈಕಬಾಂಧವ, [4] ಗದ್ಯಪದ್ಯವಿದ್ಯಾಧರ, [5] ರಸಭಾವ ಸಮನ್ವಿತ ಎಂಬ ಈ ಬಿರುದುಗಳು ಶ್ರೀಧರಾಚಾರ್ಯನಿಗೆ ಇದ್ದುವೆಂದು ಈತನ ಜಾತಕತಿಲಕ ಗ್ರಂಥದಿಂದ ತಿಳಿದುಬರುತ್ತದೆ. ಕಾವ್ಯಕವಿತ್ವ ಭೂಷಣವಾದ ಚಂದ್ರಪ್ರಭ ಚರಿತೆ, ಮತ್ತು ಶಾಸ್ತ್ರಕವಿತ್ವ ಭೂಷಣವಾದ ಜಾತಕತಿಲಕ ಈ ಎರಡೂ ಶ್ರೀಧರವಿರಚಿತ ಕೃತಿಗಳೆಂದು 'ಸುಭಗವಚಂ ಕಾವ್ಯಕವಿತ್ವ ಭೂಷಣಂ ಶ್ರೀಧರಾರ್ಯರಚಿತಂ ಚಂದ್ರಪ್ರಭ ಚರಿತಂ ಶಾಸ್ತ್ರ ಕವಿತ್ವ ಭೂಷಣಂ ಧರೆಗೆ ನೆಗಟ್ದ ಜಾತಕತಿಲಕಂ' (ಅಧಿ ೨೪ ಪ ೩೯) ಎನ್ನುವ ಪದ್ಯದಿಂದ ವ್ಯಕ್ತಪಡುತ್ತದೆ. ಇದರಿಂದಲೇ ಈ ಕವಿ ಮೊದಲು ಚಂದ್ರಪ್ರಭ ಚರಿತೆಯನ್ನು ರಚಿಸಿ ಅನಂತರ ಜಾತಕತಿಲಕ ಗ್ರಂಥವನ್ನು ರಚಿಸಿರಬಹುದೆಂದೂ ಊಹಿಸಬಹುದು. ಈ ಎರಡು ಕೃತಿಗಳಲ್ಲಿ ಚಂದ್ರಪ್ರಭ ಚರಿತೆಯು ಉಪಲಬ್ಧವಾಗಿಲ್ಲ. ಈ ಗ್ರಂಥವು ದೊರೆತರೆ ಶ್ರೀಧರಾರ್ಯನ ವಿಚಾರವಾಗಿ ಅಧಿಕಾಂಶಗಳು ತಿಳಿದುಬರಬಹುದು.

## ಜಾತಕತಿಲಕ

ಇದು ಮಾನವನ ಜೀವಿತ ಕಾಲದಲ್ಲಿ ಜನನಕಾಲದ ಗ್ರಹಗಳ ಸನ್ನಿವೇಶದಿಂದ ಪೂರ್ವಜನ್ಮದ ಕರ್ಮಾನುಗುಣವಾಗಿ ಸಂಭವಿಸುವ ಶುಭಾಶುಭಫಲಗಳನ್ನು ತಿಳಿಸುವ ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥ. ಶಾಸ್ತ್ರಗ್ರಂಥಗಳಿರುವುದು ಸಂಸ್ಕೃತ ಭಾಷೆಯಲ್ಲಿ. ಸಂಸ್ಕೃತವನ್ನು ಬಲ್ಲ ಇತರ ಭಾಷಾಪಂಡಿತರು ಈ ಗ್ರಂಥಗಳನ್ನು ಅಧಿಕರಿಸಿ ಅಥವಾ ಅವನ್ನೇ ಭಾಷಾಂತರೀಕರಿಸಿ ತಮ್ಮತಮ್ಮ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿರುತ್ತಾರೆ. ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವ ಬೃಹಜ್ಜಾತಕ, ಲಘುಜಾತಕ, ಸಾರಾವಳಿ ಈ ಮೂರು ಜ್ಯೌತಿಷ ಫಲಗ್ರಂಥಗಳಿಂದ ಸಾರವಾದ ಭಾಗಗಳನ್ನು ಸಂಗ್ರಹಿಸಿ ಅವನ್ನು ಕನ್ನಡಿಸಿ ರಚಿಸಿರುವ ಮೊದಲನೆಯ ಕನ್ನಡ[6] ಫಲಜ್ಯೌತಿಷಗ್ರಂಥವೇ ಇದು. 'ಮುನ್ನಾರೂ ಜಾತಕಶಾಸ್ತ್ರವನ್ನು ಕನ್ನಡದಲ್ಲಿ ವ್ಯಕ್ತವಾಗಿ ಹೇಳಿದವರಿಲ್ಲ; ಇನ್ನು ಮುಂದೆಯೂ ಹೇಳುವವರಿಲ್ಲ. ಶ್ರೀಧರನೇ ಇದನ್ನು ಹೇಳಲು ಸಮರ್ಥ' ಎಂದು ಸಕಲ ಬುಧನಿವಹವೂ ಹೊಗಳಿ ಜಾತಕತಿಲಕವನ್ನು ರಚಿಸುವಂತೆ ತಿಳಿಸಲು ತಾನು ಹಲವು ಶಾಸ್ತ್ರಗ್ರಂಥಗಳನ್ನು ನೋಡಿ ಜಳ್ಳನ್ನು ಬಿಟ್ಟು ಸಾರವಾದ ವಿಚಾರಗಳನ್ನು ಸಂಗ್ರಹಿಸಿ ಬುಧಾವಳಿಗೆ ತಿಳಿಯುವಂತೆ ಬುಧತಿಲಕವಾದ ಈ ಕೃತಿಯನ್ನು ರಚಿಸುವೆನೆಂದು

---

[1] ಅಧಿ. ೮ ಪ ೧೪, ಅಧಿ. ೧೭ ಪ ೧೯. [2] ಅಧಿ. ೯ ಪ. ೩, ಅಧಿ. ೧೨ ಪ ೧೯, ಅಧಿ. ೧೪ ಪ ೮, ೧೦, ಅಧಿ ೧೫ ಪ. ೨, ಅಧಿ. ೨೨ ಪ. ೫, ೮, ಅಧಿ. ೨೪ ಪ. ೩೧. [3] ಅಧಿ. ೨೨ ಪ. ೨೧. [4] ಅಧಿ. ೨೪ ಪ. ೪೩. [5] ರಸಭಾವ ಸಮನ್ವಿತ, ಸುಭಗ, ಅಖಿಳವೇದಿ, ಅನ್ವಿತ, ಸಮಗ್ರ ಇವುಗಳನ್ನು ಚಂದ್ರಪ್ರಭಚರಿತೆಯಲ್ಲಿ ಉಪಯೋಗಿಸಿರಬಹುದು. [6] ಜೈನಮತ ಪ್ರಕ್ರಿಯೆಯಂತೆ ಪ್ರಾಣಿಸಾಮಾನ್ಯಕ್ಕೂ ಪೂರ್ವಜನ್ಮದ ಕರ್ಮಗಳೇ ಈ ಜನ್ಮದಲ್ಲಿ ಶುಭಾಶುಭ ಫಲಗಳನ್ನು ಕೊಡುತ್ತವೆ. ಗ್ರಹಗಳು ಫಲಪ್ರದಗಳಲ್ಲ. ಇದರಿಂದ ಜೈನಮತ ಸಂಪ್ರದಾಯದಂತೆ ಗ್ರಹಶಾಂತಿ ದೇವತಾ ಪೂಜೆಗಳಿಂದ ದುಷ್ಟಫಲಗಳನ್ನು ನಿವಾರಿಸಲು ಶಕ್ಯವಿಲ್ಲ. ಆದುದರಿಂದಲೇ ಜೈನರಾರೂ ಜ್ಯೌತಿಷ ಫಲಗ್ರಂಥಗಳನ್ನು ರಚಿಸಿರುವುದು ಕಂಡುಬರುವುದಿಲ್ಲ. ಈ ಸನ್ನಿವೇಶದಲ್ಲಿ ಶ್ರೀಧರನು ಜೈನಮತದವನಾದರೂ ಫಲಗ್ರಂಥವಾದ ಜಾತಕತಿಲಕವನ್ನು ರಚಿಸಿರುವುದು ಗಮನಾರ್ಹ.

ಗ್ರಂಥದ ಆದಿಯಲ್ಲಿ ೧೬, ೧೭, ೧೮ನೇ ಪದ್ಯಗಳಲ್ಲಿ ಹೇಳಿಕೊಂಡಿರು ತೆ. ಇದಲ್ಲದೆ ಗ್ರಂಥಾದಿಯಲ್ಲಿ 'ಚಿತ್ರದಂತೆ ಮನೋಹರವೂ ದುರ್ಯೋಧ ಸೇನೆಯಂತೆ ಕರ್ಣಸುಂದರವೂ ಗಣಿಕೆಯಂತೆ ಭಾವಾದ್ಯಲಂಕಾರ ುರವೂ' ಆಗಿರುವ ಈ ಕೃತಿಯನ್ನು ರಚಿಸಿರುವೆನೆಂದು ತಿಳಿಸಿದ್ದಾನೆ ಈ ಕವಿ. ಾಂತ ಕವಿಗಳು ವರ್ಣನೆ ಅಲಂಕಾರ ರಸ ಮತ್ತು ಭಾವಗಳಿಂದ ಕೂಡಿದ ್ಯಕೃತಿಗಳನ್ನು ರಚಿಸಿರುವುದೇನೋ ನಿಜ, ಆದರೆ ಈ ಜೋಯಿಸಗಬ್ಬ ಾರ್ಗದುರ್ಗ. ಇದರಲ್ಲಿ ರಸವನ್ನು ಪಡೆಯುವುದೆಂದರೆ ನೀರನ್ನು ಕಡೆದು ಗಾಗಿ ಒರಲುವಂತೆಯೇ ಸರಿ. ಇದೇನು ಸುಸಾಧ್ಯವೇ? ಕುಕವಿಯಾದರೂ ಟಿ ವಿರಚನೆಯಲ್ಲಿ ಒಮ್ಮೆಯಾದರೂ ರಂಜಿಸಬಲ್ಲ, ಆದರೆ ಆತ್ಮರುಚಿವ್ಯಪೇತ ಸ್ತ್ರಾರ್ಥ ರಚನೆಯಲ್ಲಿ ಸುಕವಿಯಲ್ಲದವ ರಂಜಿಸಬಲ್ಲನೇ? [1] ಪ್ರಸುವದ ನೆಯ ಅರಿವು ಮಗುವನ್ನು ಹಡೆದ ಅಬಲೆಗಿರುವುದಲ್ಲದೆ ಬಂಜೆಗೆ ಈ ೕನೆಯ ಅಱಿವೆಂತು? ಇದರಂತೆ ಶಾಸ್ತ್ರಕಾವ್ಯರಚನೆಯ ಕಷ್ಟ ವಿಬುಧ ುಮುದಾಯಕ್ಕೆ ತಿಳಿದಿರುವುದಲ್ಲದೆ ಕುಕವಿಗೆ ಈ ಕೃತಿ ರಚನೆಯ ಕಷ್ಟ ಹೇಗೆ ತಾನೆ ತಿಳಿಯಲು ಸಾಧ್ಯ? ಶ್ರುತಿಸುಂದರವೂ ಝಟಿತಿ ಅರ್ಥಬೋಧಕವೂ ಮನೋಜ್ಞವೂ ದೋಷವಿವರ್ಜಿತವೂ ಪ್ರಾಸಬದ್ಧವೂ ಶಾಸ್ತ್ರಾನುಗುಣವೂ ಆಗಿರುವಂತೆ ರಚಿಸಿರುವ ವ್ಯಥಾಕ್ಷರಗಳಿಲ್ಲದ ಈ ಕೃತಿಯನ್ನು ಓದಿದರೆ ಯಾರು ತಾನೆ ತಮ್ಮ ಮೆಚ್ಚುಗೆಯನ್ನು ತೋರ್ಪಡಿಸುವುದಿಲ್ಲ? ಸಾಮಾನ್ಯಜನ ಜೋಯಿಸ ಗಬ್ಬವನ್ನು ಅರಿಯಲಾರದೆ ಇದನ್ನು ಅಸಾರವೆಂದು ಅಲ್ಲಗಳೆಯುವುದುಂಟು. ಆದರೆ ಅಂತಹವರಿಗೂ ಆದೇಯವಾಗಿದೆ ಈ ಕೃತಿ. 'ಶಾಸ್ತ್ರಾರ್ಥವನ್ನು ಸೂಚಿಸಿದ್ದೇನೆ; ಔಚಿತ್ಯದಿಂದ ತಿಳಿದುಕೊಳ್ಳುವುದು ಎನ್ನದೆ ಓದಿದೊಡನೆಯೇ ಹೃದ್ಗೋಚರವಾಗುವಂತಿದೆ ಈ ಕೃತಿ' ಎಂದು ಶ್ರೀಧರನು ತನ್ನ ಕವಿತಾ ಧೋರಣೆಯನ್ನು ಹೇಳಿಕೊಂಡಿದ್ದಾನೆ; ಇದು ಸ್ತುತಿಯಲ್ಲ, ನಿಜವಾದುದೇ. ಮತ್ತೆ ಗ್ರಂಥಾಂತ್ಯದಲ್ಲೂ ರಸವತ್ಕಾವ್ಯವಿದರಾದ ಪುರಾತನ ಕವಿಗಳಲ್ಲಿ ಜೋಯಿಸಗಬ್ಬವನ್ನು ರಚಿಸಿ ರಂಜಿಸಿದವರಾರೂ ಇಲ್ಲ; ಈ ಕಾರ್ಯವನ್ನು ನೀನು ಮಾಡು; ಎಂದು ತಜ್ಜ್ಞರು ಹೇಳಲು ಅವರ ಆದೇಶದಂತೆ ಅಮಿತಾರ್ಥವೂ ಸಕಲಾಚಾರ್ಯಮತಾಂತಸ್ಸಾರವೂ ಅತಿಗಭೀರವೂ ಹೃದಯಂಗಮವೂ ಅನ್ಯ ಶಾಸ್ತ್ರ ನಿರಪೇಕ್ಷವೂ ಅಖಿಳ ಶಾಸ್ತ್ರಾಪಾರ ಸಾರಾರ್ಥವೂ ಸಮಗ್ರವೂ ಆಗಿ ರುವ ಕೃತಿಯನ್ನು ರಚಿಸಿರುವೆನೆಂದು ಹೇಳಿಕೊಂಡಿರುತ್ತಾನೆ. ಲಲಿತವೂ ವಾಗ್ದೇವಿಯ ಮುಖತಿಲಕವೂ ದೈವಜ್ಞರ ವದನತಿಲಕವೂ ವಿದ್ವಜ್ಜನಕುಲದ ಮುಖತಿಲಕವೂ ಆದ ಈ ಶಾಸ್ತ್ರಗ್ರಂಥ ಸುಲಭವೂ ಉಚಿತವಾದ ಕ್ರಿಯಾಪದ

---

[1] 'ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ । ನ ಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವವೇದನಾಂ ॥' ಎನ್ನುವ ಸಂಸ್ಕೃತ ಶ್ಲೋಕವನ್ನೇ 'ವಿಬುಧ ಕದಂಬಕ ಮಱಿಗುಂ ವಿಬುಧ ಪರಿಶ್ರಮಮನನುಖದಿಂದೆ ಮಗಂ ಬೆತ್ತಬರೆಯಱಿವಂದದಿಂ ಬಂಜೆ ಬೇನೆ ಯಱಿದಪಳೇ ಕುಕವಿಯೇನಱಿದಪನೇ ॥' ಎಂದು ಶ್ರೀಧರನು ಕನ್ನಡಿಸಿದ್ದಾನೆ.

ಮತ್ತು ಕಾರಕಗಳನ್ನೊಳಗೊಂಡೂ ಅಪಶಬ್ದಗಳಿಂದ ದೂರವಾಗಿಯೂ ನೇಯದೋಷವಿಲ್ಲದಂತೆಯೂ ಸಾರ್ಥಕಪದವಿನ್ಯಾಸದಿಂದ ಕೂಡಿಯೂ ಇರುವುದನ್ನು ನೋಡಿ ಇದನ್ನು ಹೊಗಳದವರೂ ಇದ್ದಾರೆಯೇ ? ಎಂದು ಹೇಳಿರುವುದು ತಾತ್ವಿಕವಾಗಿಯೇ ಇದೆ. ಇದು ಶಾಸ್ತ್ರಗ್ರಂಥವಾದುದರಿಂದ ಇದರಲ್ಲಿ ಜ್ಯೋತಿಶ್ಶಾಸ್ತ್ರದ ಧರ್ಮವನ್ನೂ ಚಂದ್ರಪ್ರಭಚರಿತೆಯಾದ ಮತ್ತೊಂದು ಗ್ರಂಥದಲ್ಲಿ ಕಾವ್ಯಧರ್ಮ ಜಿನಧರ್ಮಗಳನ್ನೂ ಜಗತ್ತಿಗೆ ತಿಳಿಸಿರುವೆನೆಂದು ಹೇಳಿರುವನು. ಇದರಿಂದ ಈ ಶಾಸ್ತ್ರಕಾವ್ಯದಲ್ಲಿ ಕಾವ್ಯಧರ್ಮಗಳಾದ ರಸ, ಭಾವ, ಅಲಂಕಾರ, ವರ್ಣನೆ ಮೊದಲಾದುವುಗಳಿಗೆ ಎಡೆಯಿಲ್ಲ. ಆದರೂ ತನ್ನ ಪ್ರೌಢಿಮೆಯನ್ನು ತೋರ್ಪಡಿಸಲು ಸಿಕ್ಕಿದ ಅವಕಾಶವನ್ನೇ ಉಪಯೋಗಿಸಿಕೊಂಡು ಹೇಳಿರುವ ಉಪಮಾ ರೂಪಕ ಮೊದಲಾದ ಕೆಲವು [1]ಅಲಂಕಾರಗಳನ್ನು ಈ ಗ್ರಂಥದಲ್ಲಿ ಕಾಣಬಹುದು. ಜಗತ್ಪ್ರಸಿದ್ಧ ಚಿರಂತನ ನೂತನ ಮಹಾಕವೀಶ್ವರ ಕೃತ ಶಾಸ್ತ್ರಾಂತರ ಸಾರತೆ ತನ್ನ ಈ ಕೃತಿಯಲ್ಲಿ ನೆಲಸಲಿ ಎಂದು ಗ್ರಂಥಾದಿಯಲ್ಲಿ ಕವಿತಾಸಾಮರ್ಥ್ಯ ಮತ್ತು ಶಾಸ್ತ್ರಪಾಂಡಿತ್ಯವನ್ನು ಈ ಕವಿ ಹೊಗಳಿಕೊಂಡಿರುತ್ತಾನೆ. ಕವಿಯು ಈ ಗ್ರಂಥದಲ್ಲಿ ಕೆಲವು ಅಪೂರ್ವ ಶಬ್ದಗಳನ್ನು ಪ್ರಯೋಗಿಸಿರುತ್ತಾನೆ. ಅವನ್ನು ಮೂರನೆಯ ಪರಿಶಿಷ್ಟದ ಕೊನೆಯಲ್ಲಿ ಸಂಗ್ರಹಿಸಿ ಅರ್ಥದೊಡನೆ ಕೊಟ್ಟಿದೆ.

ಈ ಶಾಸ್ತ್ರಕಾವ್ಯದ ಒಂದು ನೋಟದಿಂದಲೇ ಕವಿಯು ಹೇಳಿಕೊಂಡಿರುವ ಪ್ರೌಢಿಮೆಯೆಲ್ಲ ಸಾರ್ಥಕ ಎಂದು ಸ್ಪಷ್ಟಪಡುತ್ತದೆ.

ಈ ಗ್ರಂಥದಲ್ಲಿ ೨೪ ಅಧಿಕಾರಗಳಿವೆ. ಇದನ್ನೇ

'ತರದಿಂ ಸಂಜ್ಞೆ ಬಲಾಬಲವಾಧಾನಂ ಜನ್ಮ ತಿರ್ಯಗ್ಜನ್ಮಾರಿಷ್ಟಾರಿಷ್ಟ
ಹರಣಮಾಯುರ್ದಾಯಂ ದಶಾಂತರ್ದಶೆಯಷ್ಟಕವರ್ಗಂ ಕರ್ಮಾಜೀವನಂ
ಧರಣೀನಾಥ ನಾಭಸ ಚಾಂದ್ರ ದ್ವಿತ್ರಿಗ್ರಹಾದಿ ದೀಕ್ಷಾಯೋಗಂ ರಾಶಿಫಲೋ
ತ್ಕರ ವಿಲಗ್ನಭಾವತ್ರ್ಯಂಶಲಕ್ಷಣ ದೃಷ್ಟಿಫಲಾನಿಷ್ಟಂ ಸ್ತ್ರೀಜಾತಕಂ'

(ಅಧಿ. ೨೪ ಶ್ಲೋ. ೩೪.)

---

1 ಜಾತಕತಿಲಕದಲ್ಲಿ ಕಂಡುಬರುವ ಕೆಲವು ಅಲಂಕಾರಗಳು—

೧. 'ಜೋಯಿಸಗಟ್ಟುಮಪ್ಪುದೆಲ್ಲಂ ಕವಿಮಾರ್ಗ ದುರ್ಗಮದಟ್ಟೊಳ್ ರಸಮಂ ಪಡೆವಲ್ಲಿ ಪೂಣ್ದು ನೀರಂ ಕಡೆವಲ್ಲಿ ಬೆಣ್ಣೆಗೋಲ್ವಂತೆವೊಲಕ್ಕುಂ' (ಅಧಿ ೧ ಪ ೭) ನಿದರ್ಶನಾ.

೨. ಶಿಶುವಂ ತಾಯ್ ರಕ್ಷಿಪೊಂದಂದದಿಂ (ಅಧಿ ೭ ಪ ೫) ಉಪಮಾ.

೩. ಬಂಜೆ ಬೇನೆಯನಱಿದಪಳೇ ಕುಕವಿಯೇನಱಿದಪನೇ (ಅಧಿ ೧ ಪ ೧೦) ಪ್ರತಿವಸ್ತೂಪಮಾ.

೪. ತಮಮೊದ್ದು ಕಿಡುವ ತೆಱದಿಂ ಕಿಡುಗುಂ (ಅಧಿ ೭ ಪ ೨) ಉಪಮಾ.

೫. ಕರೀಂದ್ರಮುಂ ಸಿಂಹದವೊಲ್ (ಅಧಿ ೭ ಪ ೧೩) ಉಪಮಾ.

೬. ರುಜೆ ಕಿಡುವ ತೆಱದಿ ವೀರ್ಯೌಷಧಿಯಿಂ (ಅಧಿ ೧೪ ಪ ೫) ಉಪಮಾ.

೭. ನಿಜಕುಲಾಂಬುಜಾಕರ ಮಿತ್ರಂ (ಅಧಿ ೨೪ ಪ ೪೨) ರೂಪಕ.

೮. ಪನ್ನಗಧ್ವಜಮಹೀಭೃತ್ಸೇನೆಯೋಲ್ ಕರ್ಣಸೌಂದರಂ (ಅಧಿ ೧ ಪ ೭) ಶ್ಲಿಷ್ಟೋಪಮಾ.

' ಮನುಜರ ನಿರ್ಯಾಣಪ್ರಾ
ಪ್ತಿ ನಷ್ಟಜಾತಕಮೆನಿಪ್ಪ ಭೇದದಿನಖಿಳಾ
ವನಿಯೊಳ್ ನೆಗಳ್ದಿತ್ತಿರ್ಪ
ತ್ತು ನಾಲ್ಕುಮಧಿಕಾರದಿಂದೆ ಜಾತಕತಿಲಕಂ '

(ಅಧಿ. ೨೪ ಶ್ಲೋ. ೩೫.)

ಎಂದು ಗ್ರಂಥಾಂತ್ಯದಲ್ಲಿಯ ಈ ಎರಡು ಪದ್ಯಗಳಿಂದ ಸ್ಪಷ್ಟಪಡಿಸಿರುತ್ತಾನೆ. ಈ ಅಧಿಕಾರಗಳಿಗೆ ಪ್ರಕರಣಗಳೆಂಬ ಹೆಸರೂ ಉಂಟು; ಇವುಗಳಲ್ಲಿ ಸಂಜ್ಞಾಪ್ರಕರಣ (ಅಧಿ ೧), ಬಲಾಬಲಪ್ರಕರಣ (ಅಧಿ ೨), ದ್ವಿತ್ರಿಗ್ರಹಯೋಗ ಪ್ರಕರಣ (ಅಧಿ ೧೩) ಈ ಮೂರು ಅಧಿಕಾರಗಳಲ್ಲಿ ಲಘುಜಾತಕದ ಶ್ಲೋಕಗಳನ್ನೂ, ಕರ್ಮಾಜೀವನಪ್ರಕರಣ (ಅಧಿ ೧೧), ರಾಶಿಪ್ರಕರಣ (ಅಧಿ ೧೭), ದ್ರೇಕ್ಕಾಣ ಪ್ರಕರಣ (ಅಧಿ ೧೯, ಅನಿಷ್ಟಪ್ರಕರಣ (ಅಧಿ ೨೧), ನಷ್ಟಜಾತಕ ಪ್ರಕರಣ (ಅಧಿ ೨೪) ಈ ಐದು ಅಧಿಕಾರಗಳಲ್ಲಿ ಬೃಹಜ್ಜಾತಕದ ಶ್ಲೋಕಗಳನ್ನೂ, ಅರಿಷ್ಟಭಂಗಪ್ರಕರಣದಲ್ಲಿ (ಅಧಿ ೭) ಸಾರಾವಳೀಗ್ರಂಥದ ಶ್ಲೋಕಗಳನ್ನೂ, ಆಧಾನ ಪ್ರಕರಣ (ಅಧಿ ೩), ದಶಾಂತರ್ದಶಾ ಪ್ರಕರಣ (ಅಧಿ ೯), ಅಷ್ಟಕವರ್ಗಪ್ರಕರಣ (ಅಧಿ ೧೦), ನಾಭಸಯೋಗ ಪ್ರಕರಣ (ಅಧಿ ೧೩), ಚಾಂದ್ರಯೋಗ ಪ್ರಕರಣ (ಅಧಿ ೧೪), ಪ್ರವ್ರಜ್ಯಾಯೋಗಪ್ರಕರಣ (ಅಧಿ ೧೬), ಲಗ್ನಾದಿಭಾವ ಪ್ರಕರಣ(ಅಧಿ ೧೮), ದೃಷ್ಟಿಪ್ರಕರಣ (ಅಧಿ ೨೦), ಸ್ತ್ರೀಜಾತಕಫಲ ಪ್ರಕರಣ(ಅಧಿ ೨೨), ನಿರ್ಯಾಣಪ್ರಕರಣ (ಅಧಿ ೨೩) ಈ ಹತ್ತು ಅಧಿಕಾರಗಳಲ್ಲಿ ಲಘು ಮತ್ತು ಬೃಹಜ್ಜಾತಕದ ಶ್ಲೋಕಗಳನ್ನೂ, ವಿಯೋನಿಜನ್ಮಪ್ರಕರಣ(ಅಧಿ ೫)ದಲ್ಲಿ ಬೃಹಜ್ಜಾತಕದ ಮತ್ತು ಸಾರಾವಳಿಯ ಶ್ಲೋಕಗಳನ್ನೂ, ಜನ್ಮಪ್ರಕರಣ (ಅಧಿ ೪), ಅರಿಷ್ಟಯೋಗಪ್ರಕರಣ (ಅಧಿ ೬), ಆಯುರ್ದಾಯಪ್ರಕರಣ (ಅಧಿ ೮), ರಾಜಯೋಗಪ್ರಕರಣ (ಅಧಿ ೧೨) ಈ ನಾಲ್ಕು ಪ್ರಕರಣಗಳಲ್ಲಿ ಲಘುಜಾತಕ, ಬೃಹಜ್ಜಾತಕ, ಸಾರಾವಳಿ ಈ ಮೂರು ಗ್ರಂಥಗಳ ಶ್ಲೋಕಗಳನ್ನೂ ಸಂಗ್ರಹಿಸಿ ಕನ್ನಡಿಸಿರುತ್ತಾನೆ. ಇಪ್ಪತ್ತನಾಲ್ಕನೆಯ ಅಧಿಕಾರದ ೧೨ನೇ ಪದ್ಯವನ್ನು ವರಾಹಮಿಹಿರನ ಬೃಹತ್ಸಂಹಿತಾ ಗ್ರಂಥದಿಂದಲೂ ಒಂಬತ್ತನೆಯ ಅಧಿಕಾರದ ೧೦ನೇ ಪದ್ಯವನ್ನು ಸತ್ಯಾಚಾರ್ಯರ ಶ್ಲೋಕದಿಂದಲೂ ಸಂಗ್ರಹಿಸಿರಬಹುದು; ಇದರಂತೆ ಅಷ್ಟಕವರ್ಗಪ್ರಕರಣದ (ಅಧಿ ೧೦) ಎರಡನೆಯ ಪದ್ಯದ ಅಭಿಪ್ರಾಯವು ಶ್ರೀಧರನಿಗಿಂತಲೂ ಅರ್ವಾಚೀನನಾದ ಮಂತ್ರೇಶ್ವರನ ಫಲದೀಪಿಕಾಗ್ರಂಥದ ೨೩ನೇ ಅಧ್ಯಾಯದ ೨ನೇ ಶ್ಲೋಕದಲ್ಲಿರುವುದನ್ನು ಕಾಣಬಹುದು. ಒಟ್ಟಿನಲ್ಲಿ ಶಾಸ್ತ್ರ ವಿಚಾರಕ್ಕೆ ಸಂಬಂಧಪಟ್ಟಂತೆ ಸುಮಾರು ಹತ್ತು ಹನ್ನೆರಡು ಪದ್ಯಗಳಿಗೆ ಮೂಲಭೂತವಾದ ಶ್ಲೋಕಗಳಾವುವೆನ್ನುವುದು ತಿಳಿದುಬಂದಿಲ್ಲ.

ಕವಿ ಈ ಗ್ರಂಥದಲ್ಲಿ ಪ್ರತಿ ಪ್ರಕರಣದಲ್ಲಿಯೂ ಪ್ರಯೋಗಿಸಿರುವ ವೃತ್ತಪ್ರಭೇದ, ಪದ್ಯಸಂಖ್ಯೆ ಇವನ್ನು ಸುಲಭವಾಗಿ ತಿಳಿಯುವಂತೆ ಮುಂದೆ ಪಟ್ಟಿಮಾಡಿ ಕೊಟ್ಟಿದೆ.

ಜಾತಕತಿಲಕ ಗ್ರಂಥದಲ್ಲಿರುವ ಪ್ರಕರಣಗಳು ಮತ್ತು ವೃತ್ತಪ್ರಭೇದಗಳ ಪದ್ಯಸಂಖ್ಯೆಯನ್ನು ತೋರಿಸುವ ಪಟ್ಟಿ.

| ಪ್ರಕರಣಗಳು | | ಕಂದ | ಮತ್ತೇಭವಿಕ್ರೀಡಿತ | ಚಂಪಕಮಾಲೆ | ಮಹಾಸ್ರಗ್ಧರೆ | ಅಕ್ಕರ | ಶಾರ್ದೂಲವಿಕ್ರೀಡಿತ | ಪೃಥ್ವಿ | ಉತ್ಪಲಮಾಲೆ | ಒಟ್ಟು ಪದ್ಯಸಂಖ್ಯೆ |
|---|---|---|---|---|---|---|---|---|---|---|
| ೧ ಸಂಜ್ಞಾ | ... | ೩೧ | ೯ | ೪ | ... | ... | ... | ... | ೧ | ೪೫ |
| ೨ ಬಲಾಬಲ | ... | ೧೯ | ೪ | ೧ | ... | ೧ | ... | ... | ... | ೨೫ |
| ೩ ಗರ್ಭಾಧಾನ | ... | ೩ | ೧೨ | ೪ | ... | ... | ... | ... | ... | ೧೯ |
| ೪ ಜನ್ಮ | ... | ೨೬ | ೯ | ೩ | ೧ | ೧ | ... | ೧ | ... | ೪೧ |
| ೫ ವಿಯೋನಿ | ... | ೮ | ೩ | ... | ೧ | ... | ... | ... | ... | ೧೨ |
| ೬ ಅರಿಷ್ಟ | ... | ೪೨ | ೬ | ೧ | ೧ | ೧ | ೧ | ... | ... | ೫೨ |
| ೭ ಅರಿಷ್ಟಭಂಗ | ... | ೧೫ | ೨ | ... | ೧ | ... | ೧ | ... | ... | ೧೯ |
| ೮ ಆಯುರ್ದಾಯ | ... | ೪ | ೯ | ೨ | ... | ೧ | ... | ... | ... | ೧೬ |
| ೯ ದಶಾಂತರ್ದಶಾ | ... | ೧೫ | ೧೨ | ೧ | ೨ | ... | ... | ... | ... | ೩೦ |
| ೧೦ ಅಷ್ಟಕವರ್ಗ | ... | ೪ | ೪ | ೧ | ೬ | ೧ | ... | ... | ... | ೧೬ |
| ೧೧ ಕರ್ಮಾಜೀವನ | ... | ೪ | ೩ | ೧ | ... | ... | ... | ... | ... | ೮ |
| ೧೨ ರಾಜಯೋಗ | ... | ೨೬ | ೩ | ೨ | ೨ | ... | ... | ... | ... | ೩೩ |
| ೧೩ ನಾಭಸಯೋಗ | ... | ೧೧ | ೫ | ೩ | ... | ... | ... | ... | ... | ೧೯ |

## ಜಾತಕತಿಲಕ ಗ್ರಂಥದಲ್ಲಿರುವ ಪ್ರಕರಣಗಳು ಮತ್ತು ವೃತ್ತಪ್ರಭೇದಗಳ ಪದ್ಯಸಂಖ್ಯೆಯನ್ನು ತೋರಿಸುವ ಪಟ್ಟಿ.

| ಪ್ರಕರಣಗಳು | ಕಂದ | ಮತ್ತೇಭವಿಕ್ರೀಡಿತ | ಚಂಪಕಮಾಲೆ | ಮಹಾಸ್ರಗ್ಧರೆ | ಅಕ್ಕರ | ಶಾರ್ದೂಲವಿಕ್ರೀಡಿತ | ಪೃಥ್ವಿ | ಉತ್ಪಲಮಾಲೆ | ಒಟ್ಟು ಪದ್ಯಸಂಖ್ಯೆ |
|---|---|---|---|---|---|---|---|---|---|
| ೧೪ ಚಾಂದ್ರಯೋಗ ... | ೬ | ೭ | ... | ... | ... | ... | ... | ... | ೧೩ |
| ೧೫ ದ್ವಿತ್ರಿಗ್ರಹಯೋಗ ... | ೫ | ೪ | ... | ... | ... | ... | ... | ... | ೯ |
| ೧೬ ಪ್ರವ್ರಜ್ಯಾಯೋಗ ... | ೧ | ೩ | ೧ | ... | ... | ... | ... | ... | ೫ |
| ೧೭ ರಾಶಿ ... | ೨ | ೨೫ | ೪ | ೨ | ... | ೧ | ೧ | ... | ೩೫ |
| ೧೮ ಲಗ್ನಾದಿಭಾವ ... | ೬ | ೧೨ | ... | ... | ... | ... | ... | ... | ೧೮ |
| ೧೯ ದ್ರೇಕ್ಕಾಣ ... | ೩೬ | | ... | ... | ... | ... | ... | ... | ೩೬ |
| ೨೦ ದೃಷ್ಟಿ ... | ೨೩ | ೨ | ... | ... | ... | ... | ೧ | ... | ೨೬ |
| ೨೧ ಅನಿಷ್ಟಯೋಗ ... | ೯ | ೧೧ | ೨ | ೨ | ... | ೧ | ... | ... | ೨೫ |
| ೨೨ ಸ್ತ್ರೀಜಾತಕ ... | ೭ | ೧೩ | ೪ | ೧ | ... | ... | ... | ... | ೨೫ |
| ೨೩ ನಿರ್ಯಾಣ ... | ೧೫ | ೧೦ | ೨ | ೧ | ... | ... | ... | ... | ೨೮ |
| ೨೪ ನಷ್ಟಜಾತಕ ... | ೨೭ | ೯ | ೩ | ೧ | ೪ | ... | ... | ೧ | ೪೫ |
| ಒಟ್ಟು ಪದ್ಯ ಸಂಖ್ಯೆ ... | ೩೪೫ | ೧೭೭ | ೩೯ | ೨೧ | ೯ | ೪ | ೩ | ೨ | ೬೦೦ |

ಎಂಟು ವಿಧ ಛಂದೋವಿಶೇಷಗಳನ್ನೊಳಗೊಂಡ ೭೦೦ ಪದ್ಯಗಳಿಂದ ಕೂಡಿರುವ ಈ ಶಾಸ್ತ್ರಗ್ರಂಥದ ಕವಿಯು ಕವಿತಾಧೋರಣಿ ಎಷ್ಟರಮಟ್ಟಿನದು ಎನ್ನು ವುದು ಇದರಿಂದ ವ್ಯಕ್ತವಾಗುತ್ತದೆ. ಇದಲ್ಲದೆ ಒಂದೇ ಶ್ಲೋಕದ ವಿಷಯವನ್ನು ಮೂರು ನಾಲ್ಕು ಪದ್ಯಗಳಲ್ಲಿ ವಿಸ್ತರಿಸಿ ಹೇಳಿರುವುದನ್ನೂ ಎರಡು ಮೂರು ಶ್ಲೋಕ ಗಳಲ್ಲಿ ಪ್ರತಿಪಾದಿತವಾಗಿರುವ ವಿಷಯಗಳನ್ನು ಒಂದೇ ಪದ್ಯದಲ್ಲಿ ಅಡಕಮಾಡಿ ಹೇಳಿರುವುದನ್ನೂ ನೋಡಿದರೆ ಈ ಕವಿಯ ಕವಿತಾಚಾತುರ್ಯವು ವೇದ್ಯವಾಗುತ್ತದೆ.

## ಗ್ರಂಥ ಪ್ರತಿಪಾದ್ಯ ವಿಷಯ

ಕತ್ತಲೆಯಲ್ಲಿರುವ ವಸ್ತುವನ್ನು ಪ್ರಕಾಶಿಸುವ ದೀಪದಂತೆ ಗೂಢವಾದ ಬ್ರಹ್ಮನು ಬರೆದಿರುವ ಹಣೆಯ ಬರೆಹವನ್ನು ಪ್ರಕಾಶಪಡಿಸುತ್ತದೆ ಈ ಶಾಸ್ತ್ರ ಗ್ರಂಥ. ಈ ಹಣೆಯ ಬರೆಹ ಪೂರ್ವಜನ್ಮದಲ್ಲಿ ಮಾಡಿರುವ ಕರ್ಮಗಳಿಗನುಗುಣ ವಾಗಿರುತ್ತದೆ. 'ಮಾಡಿದ್ದುಣ್ಣೋ ಮಾರಾಯ' 'ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ' ಎನ್ನುವ ಲೋಕೋಕ್ತಿಗಳೂ ಈ ಅಂಶವನ್ನೇ ವ್ಯಕ್ತಪಡಿಸುತ್ತವೆ. ಕರ್ಮಗಳು ಜಡವಾದುದರಿಂದ ತಾವೇ ಸ್ವತಃ ಶುಭಾಶುಭ ಫಲಗಳನ್ನು ಕೊಡುವುದಿಲ್ಲ. ಸ್ವತಂತ್ರ ಚೇತನದಿಂದ ಪ್ರೇರಿತಗಳಾಗಿ ಅವು ಫಲಗಳನ್ನು ಕೊಡುತ್ತವೆ. ಸ್ವತಂತ್ರ ಚೇತನವನ್ನೇ ವಿಷ್ಣು, ಶಿವ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ಸ್ವತಂತ್ರ ಚೇತನದ ಅನುಗ್ರಹದಿಂದುಂ ಟಾದ ಶಕ್ತಿವಿಶೇಷಗಳಿಂದ ಕೂಡಿದ ದೇವಾದಿ ಚೇತನಗಳಿಂದ ಪ್ರೇರಿತರಾದ ಗ್ರಹಗಳು ಕರ್ಮಾನುಗುಣವಾದ ಫಲಗಳನ್ನು ಕೊಡುತ್ತವೆ. 'ದೇವತಾ ಗ್ರಹ ರೂಪೇಣ ಪ್ರದಿಶಂತಿ ಶುಭಾಶುಭಂ। ಫಲಂ ಪ್ರಾಗಾರ್ಜಿತಂ ಯಸ್ಯ ತದ್ದದಾತಿ ಸ್ವಕೀಯಕಂ ॥' ಎನ್ನುವ ಶ್ಲೋಕದಿಂದ ದೇವತೆಗಳು ಗ್ರಹರೂಪದಿಂದ ಅವ ರವರ ಪ್ರಾಕ್ಕರ್ಮಾರ್ಜಿತ ಶುಭಾಶುಭಫಲಗಳಿಗನುಗುಣವಾದ ಫಲಗಳನ್ನು ಅವರವರಿಗೆ ಕೊಡುತ್ತಾರೆ ಎಂದು ಸ್ಪಷ್ಟಪಡುತ್ತದೆ.

ಕರ್ಮಾನುಗುಣವಾಗಿ ಆಗಬೇಕಾಗಿರುವ ಫಲ ನಡದೇ ನಡೆಯುತ್ತದೆ; ಇದನ್ನು ತಿಳಿದುಕೊಳ್ಳುವುದರಿಂದ ಆಗುವ ಪ್ರಯೋಜನ ಏನು? ಎಂದು ಕೆಲವರು ಆಕ್ಷೇಪಿಸುತ್ತಾರೆ. ಇದಕ್ಕೆ ಶಾಸ್ತ್ರಜ್ಞರು ಹೇಳುವ ಸಮಾಧಾನ ಈ ರೀತಿ ಇದೆ: ದೃಢ ಅದೃಢ ಎಂದು ಕರ್ಮಗಳು ಎರಡು ವಿಧ. ಈ ಎರಡು ವಿಧ ಕರ್ಮಗಳಿಂದಲೂ ಫಲಗಳು ಸಂಭವಿಸುತ್ತವೆ. ದಶಾಫಲಗಳು ದೃಢ ಕರ್ಮೋಪಾರ್ಜಿತಗಳು; ಅಷ್ಟಕವರ್ಗ, ಗೋಚರ ಫಲಗಳು ಅದೃಢ ಕರ್ಮೋ ಪಾರ್ಜಿತಗಳು; ಯೋಗಫಲಗಳು ದೃಢಾದೃಢ ಉಭಯ ಕರ್ಮೋಪಾರ್ಜಿತಗಳು. ನಾವು ಅನುಭವಿಸುತ್ತಿರುವ ಫಲ ಯಾವ ವಿಧವಾದ ಕರ್ಮಕ್ಕೆ ಸಂಬಂಧಪಟ್ಟಿದ್ದೆ ನ್ನುವುದನ್ನು ನಿಷ್ಕೃಷ್ಟವಾಗಿ ಬೇರ್ಪಡಿಸಿ ತಿಳಿಯುವುದಕ್ಕಾಗುವುದಿಲ್ಲ. ಇವುಗಳಲ್ಲಿ ಅದೃಢಕರ್ಮೋಪಾರ್ಜಿತ ಅಶುಭ ಫಲಗಳನ್ನು ಶಾಂತ್ಯಾದಿಗಳಿಂದ ನಿವಾರಿಸಲು

ಸಾಧ್ಯ. ಆದಕಾರಣ ಸಂಭವಿಸಬಹುದಾದ ಅಶುಭ ಫಲಗಳನ್ನು ಗ್ರಹಸನ್ನಿವೇಶದಿಂದ ಮೊದಲೇ ತಿಳಿದು ಅವುಗಳನ್ನು ನಿವಾರಿಸಲು ಶಾಂತಿಯನ್ನು ಮಾಡಿ ಮಾನವನು ಶ್ರೇಯಸ್ಸನ್ನು ಪಡೆಯಬಹುದು. ಇದರಿಂದ ಫಲಶಾಸ್ತ್ರದ ಪ್ರಯೋಜನ ಮಾನವನಿಗಿದೆ ಎಂದು ವ್ಯಕ್ತಪಡುತ್ತದೆ.

ಸಂಸ್ಕೃತ ಜ್ಯೋತಿಶ್ಶಾಸ್ತ್ರಗ್ರಂಥಗಳಂತೆಯೇ ಈ ಕನ್ನಡ ಫಲ ಗ್ರಂಥವು ಸಂಜ್ಞಾಪ್ರಕರಣದಿಂದಲೇ ಪ್ರಾರಂಭವಾಗಿದೆ. ಕಾಲಪುರುಷನ ಅಂಗವಿಭಾಗ, ರಾಶಿವರ್ಣ, ಪುರುಷ–ಸ್ತ್ರೀ, ಕ್ರೂರ–ಸೌಮ್ಯ, ಮತ್ತು ಚರ–ಸ್ಥಿರ–ದ್ವಿಸ್ವಭಾವ ರಾಶಿಗಳು, ರಾಶಿಗಳಿಗೆ ದಿಕ್ಕು, ರಾಶ್ಯಧಿಪತಿಗಳು, ಷಡ್ವರ್ಗ ವಿಭಾಗ, ಚತುಷ್ಪದ–ಮನುಷ್ಯ–ಕೀಟ–ಜಲಚರ ರಾಶಿಗಳು, ರಾಶಿಗಳಿಗೆ ಕಾಲ ಮತ್ತು ದಿಗ್ಬಲ, ಗ್ರಾಮ್ಯಾರಣ್ಯ ರಾಶಿಗಳು, ದ್ವಾದಶಭಾವಗಳ ಹೆಸರು, ೩–೪–೫–೭–೮–೯–೧೨ನೇ ಸ್ಥಾನಗಳಿಗೆ ಸಂಜ್ಞೆ, ಕೇಂದ್ರ, ಪಣಫರ, ಆಪೋಕ್ಲಿಬ(ಮ), ಉಪಚಯ ಅಪಚಯ ಸ್ಥಾನಗಳು, ವರ್ಗೋತ್ತಮಾಂಶ, ಶೀರ್ಷೋದಯ ಪೃಷ್ಠೋದಯ ಉಭಯೋದಯ ರಾಶಿಗಳು, ಉಚ್ಚರಾಶಿಗಳು, ಪರಮೋಚ್ಚ ಭಾಗಗಳು, ನೀಚ ಮತ್ತು ಮೂಲತ್ರಿಕೋಣ ರಾಶಿಗಳು, ಗ್ರಹಗಳ ದೃಷ್ಟಿ ಈ ವಿಷಯಗಳ ವಿವರ ಮೊದಲನೆಯ ಸಂಜ್ಞಾಪ್ರಕರಣದಲ್ಲಿ ಸಂಗೃಹೀತವಾಗಿವೆ.

ಎರಡನೆಯ ಪ್ರಕರಣದಲ್ಲಿ ಗ್ರಹಗಳಿಗೆ ಸಂಬಂಧಪಟ್ಟಂತೆ ದಿಗಧಿಪತಿಗಳು, ಶುಭ ಪಾಪಗ್ರಹಗಳ ವಿವರ, ಪುರುಷ–ಸ್ತ್ರೀ–ನಪುಂಸಕಾಧಿಪತಿಗಳು, ವೇದಾಧಿಪತಿ ಮತ್ತು ವರ್ಣಾಧಿಪತಿಗಳು, ಗ್ರಹಗಳ ಷಡ್ಬಲ, ನಿಸರ್ಗ ಮತ್ತು ತತ್ಕಾಲ ಶತ್ರುಮಿತ್ರಾದಿಗಳು, ಗ್ರಹಗಳ ಸ್ವರೂಪ ಈ ವಿಚಾರಗಳು ಅಡಕವಾಗಿವೆ.

ಮೂರನೆಯ ಗರ್ಭಾಧಾನ ಪ್ರಕರಣದಲ್ಲಿ ಆಧಾನವಿಚಾರ, ದೀಪ ಜ್ಞಾನ, ಗರ್ಭಸ್ವರೂಪ, ಮಾಸಾಧಿಪತಿಗಳು ಮತ್ತು ಪ್ರಯೋಜನ, ಆಧಾನ ಲಗ್ನಫಲ, ಗ್ರಹಕಾರಕ ಮತ್ತು ಅದರ ಫಲ, ಗರ್ಭಸಂಭವಜ್ಞಾನ, ಪುರುಷ ಸ್ತ್ರೀ ಜನ್ಮ ಜ್ಞಾನ, ಯಮಳಾದಿ ಗರ್ಭಸಂಭವಯೋಗ, ವತ್ಸರತ್ರಯ ಮತ್ತು ದ್ವಾದಶ ವತ್ಸರ ಗರ್ಭಧಾರಣಯೋಗ, ಪ್ರಸವದಿನ ಮತ್ತು ಕಾಲಜ್ಞಾನ ಇವು ವರ್ಣಿತವಾಗಿವೆ.

ನಾಲ್ಕನೆಯ ಜನ್ಮಪ್ರಕರಣದಲ್ಲಿ ಗ್ರಹಗಳಿಗೆ ಸಾತ್ವಿಕ ರಾಜಸ ತಾಮಸ ಗುಣಗಳು, ಶಿಶುವಿನ ಗುಣ ಬಣ್ಣ ಮತ್ತು ಆಕಾರ, ಜನನಕಾಲದಲ್ಲಿ ತಂದೆಯ ಸಾನ್ನಿಧ್ಯಾಸಾನ್ನಿಧ್ಯ ವಿಚಾರ, ಪಿತೃಬಂಧನಯೋಗ, ಜಾರಜಾತಯೋಗ, ಜನ್ಮ ಲಗ್ನ ನಿರ್ಣಾಯಕಗಳಾದ ಸೂತಿಕಾಗೃಹದ್ವಾರ, ದೀಪ, ಸೂತಿಕಾಗೃಹ ಮತ್ತು ಹೆರಿಗೆಯ ಮಂಚ ಇವುಗಳ ಸ್ಥಿತಿ, ಹೆರಿಗೆ ಕಾಲದಲ್ಲಿ ಸೂತಿಕಾಗೃಹದಲ್ಲಿದ್ದವರ ಸಂಖ್ಯೆ, ಹೆರಿಗೆಯ ಸ್ಥಳ ಸನ್ನಿವೇಶ, ದೋಣಿಯಲ್ಲಿ ಜನನಯೋಗ, ಜನ್ಮಭೂಮಿ, ಜನ್ಮವಿಧಾನ ಜ್ಞಾನ, ನಾಳವೇಷ್ಟನ, ತಾಯಿಯೊಡನೆ ಕೂಸಿನ ಮರಣ, ತಾಯಿ ಬಿಸುಟರೂ ಚಿರಾಯುವಾಗುವ ಶಿಶು, .ಅಧಿಕಾಂಗ, ಹೀನಾಂಗ, ಮೂಗು,

ತೊದಳು, ಹುಟ್ಟುವಾಗಲೇ ಹಲ್ಲಿರುವುದು, ವಾಮನ, ಕುಬ್ಜ, ಹೆಳವು ಮತ್ತು ಕಿವುಡು ಈ ಯೋಗಗಳು ವಿವೃತವಾಗಿವೆ.

ಐದನೆಯ ವಿಯೋನಿ ಜನ್ಮಪ್ರಕರಣದಲ್ಲಿ ವಿಯೋನಿ ಜನ್ಮಜ್ಞಾನ, ರಾಶಿಗಳಿಗೆ ವಿಯೋನಿಯಃ ಶರೀರಕ್ಕೆ ತಕ್ಕಂತೆ ಅಂಗವಿಭಾಗ, ಪಶುವರ್ಣ, ಪಕ್ಷಿ ಮತ್ತು ವೃಕ್ಷಗಳ ಜನ್ಮಜ್ಞಾನ, ವೃಕ್ಷಸ್ವರೂಪ ಮತ್ತು ಅವುಗಳ ಸಂಖ್ಯೆ, ವಿಯೋನಿಗಳ ಆಯುಸ್ಸು ಇವು ವರ್ಣಿತವಾಗಿವೆ.

ಆರನೆಯ ಅರಿಷ್ಟಯೋಗ ಪ್ರಕರಣದಲ್ಲಿ ಹುಟ್ಟಿದ ಕೂಡಲೆ, ಹುಟ್ಟಿದ ಹದಿನಾರು ದಿನಗಳೊಳಗೆ, ಒಂದು, ನಾಲ್ಕು, ಆರು, ಎಂಟು ತಿಂಗಳುಗಳೊಳಗೆ, ಒಂದು, ಎರಡು, ಮೂರು, ಆರು, ಏಳು, ಒಂಬತ್ತು, ಹತ್ತು; ಹನ್ನೊಂದು, ಹನ್ನೆರಡು, ಹದಿನಾರು ವರ್ಷಗಳೊಳಗೆ ಮೃತ್ಯುವುಂಟಾಗುವ ಅರಿಷ್ಟಯೋಗಗಳು ಮತ್ತು ತಾಯಿಯೊಡನೆ ಶಿಶುವಿನ ಸಾವು, ಶಸ್ತ್ರಘಾತದಿಂದ ಮರಣ, ಗಂಡಾಂತ್ಯದಲ್ಲಿ ಜನಿಸುವುದರಿಂದ ಮೃತ್ಯು ಇವೇ ಮೊದಲಾದ ಬಾಲಾರಿಷ್ಟ ಯೋಗಗಳ ವಿವರವಿದೆ.

ಏಳನೆಯ ಅರಿಷ್ಟಭಂಗ ಪ್ರಕರಣದಲ್ಲಿ ಚಂದ್ರಾರಿಷ್ಟ, ಜನ್ಮರಾಶ್ಯಧಿಪತಿಯಿಂದ ಸಂಭವಿಸುವ ಅರಿಷ್ಟ, ಸರ್ವಾರಿಷ್ಟ ಇವುಗಳಿಗೆ ಭಂಗ ಉಂಟಾಗುವ ಯೋಗಗಳ ವಿಚಾರವಿದೆ.

ಎಂಟನೆಯ ಆಯುರ್ದಾಯ ಪ್ರಕರಣದಲ್ಲಿ ಅಂಶಾಯುರ್ದಾಯ, ಲಗ್ನಾಯುರ್ದಾಯ, ಆಯುರ್ದಾಯ ಹರಣಭರಣ ವಿಚಾರ, ಗ್ರಹವು ಪರಮಾಯುರ್ದಾಯವನ್ನು ಕೊಡುವ ಕಾಲ, ಮಾನವ, ಮೃಗ ಮತ್ತು ಪಕ್ಷಿವರ್ಗದ ಪರಮಾಯುರ್ದಾಯ ಪ್ರಮಾಣ, ಪೈಂಡಾಯುರ್ದಾಯ ಮತ್ತು ಇದರ ದೂಷಣೆ, ಅಮಿತಾಯುರ್ಯೋಗ ಮತ್ತು ಫಲ ಈ ವಿಚಾರಗಳು ಸಂಗೃಹೀತವಾಗಿವೆ.

ಒಂಬತ್ತನೆಯ ದಶಾಂತರ್ದಶಾ ಪ್ರಕರಣದಲ್ಲಿ ದಶಾಕಾಲ ಪ್ರಮಾಣ, ದಶಾಕ್ರಮ ಮತ್ತು ಪೌರ್ವಾಪರ್ಯ, ಶುಭಾಶುಭ ದಶೆಗಳು, ಅವರೋಹಿ ಆರೋಹಿದಶೆಗಳು, ಲಗ್ನದಶಾ ಫಲ, ಅಂತರ್ದಶಾವಿಭಾಗ, ಅಂತರ್ದಶಾಕ್ರಮ ಮತ್ತು ಫಲ, ನಿಸರ್ಗದಶಾಕ್ರಮ, ದಶಾಂತರ್ದಶೆಗಳ ಶುಭಾಶುಭ ಫಲ, ಅಂತರ್ದಶಾ ಪ್ರಾರಂಭಕಾಲದಲ್ಲಿ ಚಂದ್ರನಿರುವ ರಾಶಿಯಿಂದ ಫಲ, ಸೂರ್ಯಾದಿ ಗ್ರಹಗಳ ದಶಾಫಲ ಇವುಗಳ ವಿವರವಿದೆ.

ಹತ್ತನೆಯ ಅಷ್ಟಕವರ್ಗ ಪ್ರಕರಣದಲ್ಲಿ ಅಷ್ಟಕವರ್ಗವಿನ್ಯಾಸಕ್ರಮ, ಸೂರ್ಯಾದಿ ಗ್ರಹಗಳಿಂದ ಬಿಂದುಪ್ರದಸ್ಥಾನಗಳು, ಅಷ್ಟಕವರ್ಗ ಫಲ ಇವುಗಳ ವಿಚಾರವಿದೆ.

ಹನ್ನೊಂದನೆಯ ಕರ್ಮಜೀವನ ಪ್ರಕರಣದಲ್ಲಿ ಧನಪ್ರಾಪ್ತಿ, ವೃತ್ತಿ, ಜೀವಿಕೆಯ ನಿರ್ಣಯ ಈ ವಿಷಯಗಳಿವೆ.

ಹನ್ನೆರಡನೆಯ ರಾಜಯೋಗ ಪ್ರಕರಣದಲ್ಲಿ ರಾಜ ಮತ್ತು ಅನ್ಯವಂಶೀಯರಿಗೆ ಸಂಭವಿಸುವ ರಾಜಯೋಗ, ಕರ್ಕಾಟಕ, ಕನ್ಯಾ, ಮಕರ, ಮೀನ ಲಗ್ನಗಳಲ್ಲಿ ಹುಟ್ಟಿದವರಿಗೆ ಸಂಭವಿಸುವ ರಾಜಯೋಗ, ಅಕುಲೋದ್ಭವ ರಾಜಯೋಗ, ರಾಜಕುಮಾರ.ರಾಜಯೋಗ, ರಾಜಸಮ ಧನಿಕಯೋಗ, ಚೋರಸ್ವಾಮಿಯೋಗ, ಧನಾಢ್ಯಯೋಗ ಇವುಗಳ ವರ್ಣನೆ ಇದೆ.

ಹದಿಮೂರನೆಯ ನಾಭಸಯೋಗ ಪ್ರಕರಣದಲ್ಲಿ ರಜ್ಜು, ಮುಸಲ, ನಳ ಈ ಮೂರು ಆಶ್ರಯ ಯೋಗಗಳೂ, ಗದಾ, ಶಕಟ, ಶೃಂಗಾಟಕ, ವಿಹಗ, ಹಲ, ಚಕ್ರ, ಸಮುದ್ರ, ವಜ್ರ, ಯವ, ಕಮಲ, ವಾಪೀ, ಯೂಪ, ಇಷು, ಶಕ್ತಿ, ದಂಡ, ನೌ, ಕೂಟ, ಛತ್ರ, ಚಾಪ, ಅರ್ಧಚಂದ್ರ ಈ ಇಪ್ಪತ್ತು ಆಕೃತಿ ಯೋಗಗಳೂ, ಗೋಳ, ಯುಗ, ಶೂಲ, ಕೇದಾರ, ಪಾಶ, ದಾಮ, ವಲ್ಲಕೀ ಈ ಏಳು ಸಂಖ್ಯಾಯೋಗಗಳೂ, ಸರ್ಪ, ಮಾಲಾ ಎಂಬ ಎರಡು ದಲಯೋಗಗಳೂ ಹೀಗೆ ಒಟ್ಟು ಮೂವತ್ತೆರಡು ವಿಧ ನಾಭಸಯೋಗಗಳು ಮತ್ತು ಅವುಗಳ ಫಲಗಳೂ ವಿವೃತವಾಗಿವೆ.

ಹದಿನಾಲ್ಕನೆಯ ಚಾಂದ್ರಯೋಗಪ್ರಕರಣದಲ್ಲಿ ಸುನಫಾ, ಅನಫಾ, ಧುರುಧುರಾ, ಕೇಮದ್ರುಮ ಯೋಗಗಳು ಮತ್ತು ಅವುಗಳ ಫಲಗಳೂ ಚರ ಸ್ಥಿರ ದ್ವಿಸ್ವಭಾವ ರಾಶಿಸ್ಥಿತ ಚಂದ್ರಫಲ, ಅಧಿಯೋಗ ಮತ್ತು ಅದರ ಫಲ, ಸೂರ್ಯನಿಂದ ಕೇಂದ್ರ ಪಣಫರ ಆಪೋಕ್ಲೀಬದಲ್ಲಿರುವ ಚಂದ್ರಫಲ, ನವಾಂಶ ಫಲ ಇವು ವರ್ಣಿತವಾಗಿವೆ.

ಹದಿನೈದನೆಯ ದ್ವಿತ್ರಿಗ್ರಹಯೋಗ ಪ್ರಕರಣದಲ್ಲಿ ಸೂರ್ಯನೊಡನಿರುವ ಚಂದ್ರ ಮೊದಲಾದ ಗ್ರಹಗಳ ಫಲ, ಚಂದ್ರನೊಡನಿರುವ ಕುಜ ಮೊದಲಾದ ಗ್ರಹಗಳ ಫಲ, ಕುಜನೊಡನಿರುವ ಬುಧ ಮೊದಲಾದ ಗ್ರಹಗಳ ಫಲ, ಬುಧನೊಡನಿರುವ ಗುರು ಮೊದಲಾದ ಗ್ರಹಗಳ ಫಲ, ಗುರುವಿನೊಡನಿರುವ ಶುಕ್ರಶನಿಗಳ ಫಲ, ಶುಕ್ರನೊಡನಿರುವ ಶನಿಯ ಫಲ, ಸ್ವಗೃಹಸ್ಥಿತ ಗ್ರಹಫಲ, ಶತ್ರು–ನೀಚಕ್ಷೇತ್ರ ಸ್ಥಿತ ಗ್ರಹಫಲ ಇವುಗಳ ವಿವರವಿದೆ.

ಹದಿನಾರನೆಯ ಪ್ರವ್ರಜ್ಯಾಯೋಗ ಪ್ರಕರಣದಲ್ಲಿ ಪ್ರವ್ರಜ್ಯಾಯೋಗಸಂಭವ ಗ್ರಹಸ್ಥಿತಿ, ದೀಕ್ಷಾಭೇದಗಳು, ಶನಿಯಿಂದ ಪ್ರವ್ರಜ್ಯಾಸಂಭವಯೋಗ ಇವುಗಳ ವಿವರಣೆ ಇದೆ.

ಹದಿನೇಳನೆಯ ರಾಶಿಪ್ರಕರಣದಲ್ಲಿ ಮೇಷಾದಿ ಹನ್ನೆರಡು ರಾಶಿಗಳಲ್ಲಿ ಸೂರ್ಯ ಮೊದಲಾದ ಗ್ರಹಗಳಿರುವಾಗ ಪ್ರತ್ಯೇಕವಾಗಿ ಸಂಭವಿಸುವ ಫಲಗಳು ಮತ್ತು ಲಗ್ನಫಲ ನಿರ್ಣಯ ಇವುಗಳ ವಿಚಾರವಿದೆ.

ಹದಿನೆಂಟನೆಯ ಲಗ್ನಾದಿಭಾವ ಪ್ರಕರಣದಲ್ಲಿ ಸೂರ್ಯ ಮೊದಲಾದ ಏಳು ಗ್ರಹಗಳು ಲಗ್ನಾದಿ ಹನ್ನೆರಡು ಭಾವಗಳಲ್ಲಿ ಸಂಚರಿಸುವಾಗ ಸಂಭವಿಸುವ

ಭಾವಫಲಗಳೂ, ಕ್ಷೇತ್ರವಿಶೇಷದಿಂದ ಭಾವಫಲದಲ್ಲಿ ವಿಶೇಷವೂ, ಭಾವಫಲ ತಾರತಮ್ಯವೂ ವರ್ಣಿತವಾಗಿದೆ.

ಹತ್ತೊಂಬತ್ತನೆಯ ದ್ರೇಕ್ಕಾಣ ಪ್ರಕರಣದಲ್ಲಿ ಮೇಷಾದಿ ಹನ್ನೆರಡು ರಾಶಿಗಳಿಗೆ ಸಂಬಂಧಪಟ್ಟ[1] ಮೂವತ್ತಾರು ದ್ರೇಕ್ಕಾಣಗಳ ಸ್ವರೂಪ ವರ್ಣನೆ ಇದೆ.

ಇಪ್ಪತ್ತನೆಯ ದೃಷ್ಟಿ ಪ್ರಕರಣದಲ್ಲಿ ಮೇಷಾದಿ ಹನ್ನೆರಡುರಾಶಿ ಹೋರೆ ದ್ರೇಕ್ಕಾಣ ನವಾಂಶ ದ್ವಾದಶಾಂಶ ಇವುಗಳ ಸ್ಥಿತಿವಿಶೇಷದಿಂದ ಗ್ರಹದೃಷ್ಟಿ ಫಲ, ಸೂರ್ಯನಿಗೆ ಗ್ರಹದೃಷ್ಟಿಫಲ, ನವಾಂಶ ಸ್ಥಿತ ಗ್ರಹದೃಷ್ಟಿಫಲ, ವರ್ಗೋತ್ತಮ ಸ್ವ ಪರ ನವಾಂಶಸ್ಥಿತ ಗ್ರಹದೃಷ್ಟಿಫಲ, ರಾಶಿಯ ಅಧಿಪತಿ ಮೊದಲಾದವರ ದೃಷ್ಟಿಫಲ ಈ ಫಲಗಳು ವಿವೃತವಾಗಿವೆ.

ಇಪ್ಪತ್ತೊಂದನೆಯ ಅನಿಷ್ಟಯೋಗ ಪ್ರಕರಣದಲ್ಲಿ ಪತ್ನೀಪುತ್ರರಿಲ್ಲದಿರುವುದು, ಪತ್ನೀ ಮರಣ, ಕಾಣದಂಪತೀ, ಅವಯುವಹೀನ ಪತ್ನೀ, ವಂಧ್ಯಾಪತಿ, ಜಾರ, ವ್ಯಭಿಚಾರಶೀಲ ದಂಪತೀ, ಕೃಶತನು, ಸ್ವಕುಲನಾಶಕ, ಶಿಲ್ಪಿ, ದಾಸೀ–ಪುತ್ರ, ಲಿಂಗವ್ಯಾಧಿ, ಶ್ವೇತ ಕುಷ್ಠ, ಪ್ಲೀಹ, ಶ್ವಾಸ, ಕ್ಷಯ, ವಿದ್ರಧಿ, ಗುಲ್ಮವ್ಯಾಧಿ, ಕೃಶಾಂಗ, ತೊನ್ನು, ಕಿವುಡು, ಪಿಶಾಚ ಬಾಧೆ, ಹುಟ್ಟುಕುರುಡು, ವಾತವ್ಯಾಧಿ, ದಂತರೋಗ, ಬೋಳುತಲೆ, ದಂತವಿಕಾರ, ಕಾಕನೇತ್ರ, ವಿಕಲಾಂಗ, ಬಹುರೋಗ, ಮೂರ್ಛೆ, ಕ್ಷಯುವ್ಯಾಧಿ, ದಾಸ್ಯತ್ವ, ವಾಕ್ಪಾರುಷ್ಯ, ಉತ್ತಮಾಧಮ ಸೇವಕ, ಬಂಧನ ಈ ಫಲಗಳುಂಟಾಗುವ ಯೋಗಗಳ ವಿವರವಿದೆ.

ಇಪ್ಪತ್ತೆರಡನೆಯ ಸ್ತ್ರೀಜಾತಕ ಫಲಪ್ರಕರಣದಲ್ಲಿ ಸ್ತ್ರೀಜಾತಕಫಲ ಕಥನ ವ್ಯವಸ್ಥೆ, ಹೆಂಗಸಿನ ಆಕಾರ ಮತ್ತು ಸ್ವಭಾವ, ಸ್ತ್ರೀಜಾತಕದ ಲಗ್ನ ವಿಶೇಷದಿಂದ ತ್ರಿಂಶಾಂಶಫಲ, ಸ್ತ್ರೀಯರು ಪರಸ್ಪರ ನೆರೆಯುವುದು, ಭರ್ತೃವಿಚಾರ, ವೈಧವ್ಯ, ಸ್ವೈರಿಣೀ, ವ್ಯಭಿಚಾರಿಣೀಯೋಗ, ಲಗ್ನಸ್ಥಿತ ಗ್ರಹಫಲ, ಸೌಮಂಗಲ್ಯ ಯೋಗ, ಅಲ್ಪಪುತ್ರಯೋಗ, ಬ್ರಹ್ಮವಾದಿನೀಯೋಗ, ಯೋಗಸಮನ್ವಯಕಾಲ, ಪತ್ನಿಯಿಂದ ಪತಿಗುಂಟಾಗುವ ಫಲ ಇವುಗಳ ವಿಚಾರವಿದೆ.

ಇಪ್ಪತ್ತಮೂರನೆಯ ನಿರ್ಯಾಣಪ್ರಕರಣದಲ್ಲಿ ಸಾವಿಗೆ ಕಾರಣ, ಮೃತ್ಯು ಪ್ರದೇಶಜ್ಞಾನ, ಶೂಲಕ್ಕೇರಿಸುವುದು, ಬಂಧನ, ಜಲೋದರ ವ್ಯಾಧಿ, ನೀರು, ಕಾಷ್ಠಪಾತ, ಲಗುಡಪಾತ, ಗುದ್ದುವಿಕೆ, ಹೊಗೆ, ಬೆಂಕಿ, ಆಯುಧ, ರಾಜಕೋಪ, ಗಾಯದಲ್ಲಿ ಹುಳು ಬೀಳುವುದು, ವಾಹನ ಮತ್ತು ಯಂತ್ರದ ಅಪಘಾತ, ಮಲಮಧ್ಯದಲ್ಲಿ ಬೀಳುವುದು, ಗುಹ್ಯಸ್ಥಾನದಲ್ಲಿ ಹುಳು ಬೀಳುವುದು, ಶಸ್ತ್ರಚಿಕಿತ್ಸೆ, ನಗಾಗ್ರ ಕುಡ್ಯಾಶನಿನಿಪಾತ ಈ ಕಾರಣಗಳಿಂದ ಸಾವಿನ ಸಂಭವ, ಮರಣಕಾಲದ

---

[1] ನಮ್ಮ ಸಂಸ್ಥೆಯಲ್ಲಿರುವ ಕೈಬರೆಹದ ಶ್ರೀತತ್ತ್ವನಿಧಿ ಗ್ರಂಥದಲ್ಲಿರುವ ಚಿತ್ರಗಳನ್ನಾಧಾರಿಸಿ ದ್ರೇಕ್ಕಾಣ ಸ್ವರೂಪವರ್ಣನೆಗನುಗುಣವಾದ ದ್ರೇಕ್ಕಾಣದೇವತೆಗಳ ಚಿತ್ರಗಳನ್ನು ದ್ರೇಕ್ಕಾಣಾಧ್ಯಾಯದಲ್ಲಿ (ಪುಟ ೨೧೪—i, ii, iii, iv) ಕೊಟ್ಟಿದೆ.

ಮೂರ್ಛೆ, ಮರಣಾನಂತರ ಜೀವಂಗಳ ಗತಿ, ಹಿಂದಿನ ಮತ್ತು ಮುಂದಿನ ಜನ್ಮಸ್ಥಿತಿ, ಮೋಕ್ಷಪ್ರಾಪ್ತಿ ಈ ವಿಷಯಗಳಿಗೆ ಸಂಬಂಧಪಟ್ಟ ಯೋಗಗಳಿವೆ.

ಇಪ್ಪತ್ತನಾಲ್ಕನೆಯ ನಷ್ಟಜಾತಕ ಪ್ರಕರಣದಲ್ಲಿ ಪ್ರಶ್ನಕಾಲವಶದಿಂದ ಜನ್ಮಕಾಲದ ವರ್ಷ, ಅಯನ, ಋತು, ಮಾಸ, ದಿನ, ಜನ್ಮಕಾಲ, ನಕ್ಷತ್ರ, ಲಗ್ನಾದಿ ಷಡ್ವರ್ಗ ಇವುಗಳನ್ನು ತಿಳಿಯುವ ಕ್ರಮ, ಈ ವಿಚಾರದಲ್ಲಿ ಮತಾಂತರ, ಹೆಂಡತಿ, ಸೋದರ, ಮಗ, ಶತ್ರು ಇವರ ಜನ್ಮರಾಶಿಜ್ಞಾನ ಈ ವಿಷಯಗಳ ವಿವರವಿದೆ.

ಹೀಗೆ ಇಪ್ಪತ್ತನಾಲ್ಕು ಅಧಿಕಾರಗಳಿಂದ ಫಲಗಳನ್ನು ಹೇಳುವಾಗ [1] ಒಂದೆರಡೆಡೆಗಳಲ್ಲಿ ವಿಷಯಪೌನರುಕ್ತ್ಯವಿರುವಂತೆ ಕಂಡುಬರುತ್ತದೆ. ಒಂದೇ ವಿಧವಾದ ಫಲಪ್ರದ ಯೋಗಗಳನ್ನು ಒಂದೆಡೆಯಲ್ಲೇ ಹೇಳದಿರುವ ಸನ್ನಿವೇಶಗಳೂ ಒಂದೆರಡಿವೆ. ಮೂರು ಗ್ರಂಥಗಳ ಸಂಗ್ರಹವಾಗಿರುವ ಈ ಗ್ರಂಥದಲ್ಲಿ ವಿಷಯಗಳ ವೈಪುಲ್ಯವಿರುವುದರಿಂದ ಈ ವಿಚಾರ ಗಮನಾರ್ಹವಲ್ಲ.

ಶ್ರೀಧರಾಚಾರ್ಯನೇನೋ ಇಪ್ಪತ್ತನಾಲ್ಕು ಅಧಿಕಾರಗಳನ್ನೊಳಗೊಂಡ ಜಾತಕತಿಲಕವೆಂಬ ಈ ಸುಗಂಧ ಪುಷ್ಪವನ್ನು ಕನ್ನಡಿಗರಲ್ಲಿ ಸಮರ್ಪಿಸಿರುತ್ತಾನೆ. ಇದು ಶಾಸ್ತ್ರಕಾವ್ಯವಾದುದರಿಂದ ಇದರ ಸುವಾಸನೆ ಸರ್ವಜನಾಕರ್ಷಕವಾಗದೆ ಹೂವಿನಲ್ಲಿಯೇ ಹುದುಗಿ ಮ್ಲಾನವಾಗುವ ಸಂಭವ ಕಂಡುಬಂದ ಕಾರಣ ಅದರ ಕಂಪು ಎಲ್ಲ ಕಡೆಗೂ ವಾಯುವಿನಿಂದ ಒಯ್ಯಲ್ಪಡುವಂತೆ, ಮತ್ತು ಮೂಲಗ್ರಂಥ ಕುಸುಮದ ಕಂಪು ಎಲ್ಲರಿಗೂ ಲಭಿಸುವಂತೆ ಮಾಡಲು ಈ ಗ್ರಂಥಕ್ಕೆ ಟೀಕನ್ನು ರಚಿಸಲಾಗಿದೆ. ಮಲ್ಲಿಗೆಯೇನೋ ಸ್ವತಃ ನೋಡಲು ರಮ್ಯ ಮತ್ತು ಸುವಾಸನೆಯಿಂದ ಕೂಡಿದ ಪುಷ್ಪ. ಅದನ್ನೇ ಸಂಪಿಗೆ ಪಚ್ಚತೆನೆ ಗುಲಾಬಿ ಮೊದಲಾದುವುಗಳೊಡನೆ ಸೇರಿಸಿ ಕಟ್ಟಿದರೆ ಮಾಲೆ ಅಧಿಕವಾಗಿ ಶೋಭಿಸುವಂತೆ ಹಲವು ವಿಶೇಷಾಂಶಗಳನ್ನೊಳಗೊಂಡು ಶೋಭಿಸುವ ಈ ಟೀಕು ಕನ್ನಡಿಗರೆಲ್ಲರಿಗೂ ವಿಶೇಷವಾಗಿ ಉಪಯೋಗವಾಗದಿರದು.

ಗ್ರಂಥದ ಎರಡನೆಯ ಪರಿಶಿಷ್ಟದಲ್ಲಿ ಈ ಪದ್ಯಗಳಿಗೆ ಸಂವಾದಿಯಾದ ಸಂಸ್ಕೃತ ಶ್ಲೋಕಗಳನ್ನೂ ಮೂರನೆಯ ಪರಿಶಿಷ್ಟದಲ್ಲಿ ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಕೆಲವು ಪದಗಳ ಅರ್ಥ ಮತ್ತು ವಿವರವನ್ನೂ ಕೊಟ್ಟಿದೆ. ಈ ಎರಡು ಪರಿಶಿಷ್ಟಗಳ ಸಹಾಯದಿಂದ ಈ ಶಾಸ್ತ್ರಗ್ರಂಥದ ನಿಜಸ್ವರೂಪವನ್ನು ತಿಳಿಯಲು ಸಹಾಯವಾಗಬಹುದು. ಟೀಕಿನಲ್ಲಿ ಕೆಲವು ಕಡೆ ಪದ್ಯದ ಸಾಮಾನ್ಯ ನೋಟದಿಂದ

---

[1] ಜನ್ಮಪ್ರಕರಣದಲ್ಲ 'ಕೂಸು ತಾಯ್ಬುರಸಟಿಗುಂ' ಎಂಬ ೩೨ನೇ ಪದ್ಯದಲ್ಲಿ ಒಂದು ಯೋಗವನ್ನು ಹೇಳಿದೆ. ಇದೇ ಫಲಕೊಡುವ ಮತ್ತೊಂದುಯೋಗವನ್ನು ಅರಿಷ್ಟಯೋಗ ಪ್ರಕರಣದಲ್ಲಿ ೪೯ನೇ ಪದ್ಯದಲ್ಲಿ ಹೇಳಿದೆ. ರಾಜಯೋಗ ಪ್ರಕರಣದಲ್ಲಿ ಒಂದೇ ಲಗ್ನಕ್ಕೆ ಸಂಬಂಧಪಟ್ಟ ರಾಜಯೋಗಗಳನ್ನೆಲ್ಲ ಒಂದೆಡೆಯಲ್ಲೇ ಹೇಳಿಲ್ಲ. ರಾಶಿಗಳಿಗೆ ದಿವಾರಾತ್ರಿ ಸಂಜ್ಞೆಯನ್ನು ೧ನೇ ಅಧಿಕಾರದ ೩೯ನೇ ಪದ್ಯದಲ್ಲಿ ಹೇಳಿದ್ದರೂ ಮತ್ತೆ ೨೪ನೇ ಅಧಿಕಾರದ ೧ನೇ ಪದ್ಯದಲ್ಲಿಯೂ ಹೇಳಿದೆ.

ಕಂಡುಬರುವ ಅರ್ಥಕ್ಕಿಂತ ಬೇರೆಯಾದ ವಿಶೇಷ ಅರ್ಥಗಳಿರುವಂತಿದ್ದರೂ ಪದ್ಯಗಳಿಗೆ ಮೂಲಭೂತವಾದ ಶ್ಲೋಕಗಳ ಅರ್ಥಕ್ಕನುಗುಣವಾಗಿ ಪದ್ಯಗಳ ಅರ್ಥವನ್ನು ವಿವರಿಸಿದೆ. ಅವಶ್ಯಕವೆಂದು ತೋರಿಬಂದ ಕಡೆಗಳಲ್ಲಿ ಉದಾಹರಣೆ ಮತ್ತು ವಿವರಗಳನ್ನು ಕೊಟ್ಟಿದೆ. ಫಲಾಫಲಗಳನ್ನು ಕೊಡುವ ಗ್ರಹಗಳ ಚರಿತೆಯನ್ನು ತಿಳಿದುಕೊಳ್ಳಬೇಕೆಂಬ ಆಕಾಂಕ್ಷೆ ಸಹಜವಾಗಿ ಕೆಲವರಲ್ಲಿ ಮೂಡು ತ್ತದೆ. ಈ ಚರಿತ್ರೆ ಜ್ಯೋತಿಶ್ಶಾಸ್ತ್ರದ ಸಿದ್ಧಾಂತ ಗ್ರಂಥಗಳಲ್ಲಿ ಸಂಗ್ರಹವಾಗಿಯೂ ಪುರಾಣಗಳಲ್ಲಿ ಅಧಿಕವಾಗಿಯೂ ಕಂಡುಬರುತ್ತದೆ. ಅವುಗಳಲ್ಲಿ ಸೂರ್ಯಸಿದ್ಧಾಂತ, ಬ್ರಹ್ಮಾಂಡ ಮತ್ತು ಪಾದ್ಮ • ಪುರಾಣಗಳಲ್ಲಿರುವುದನ್ನು ಸಂಗ್ರಹಿಸಿ ಇಲ್ಲಿ ಪ್ರಾಸಂಗಿಕವಾಗಿ ಕೊಟ್ಟಿದೆ.

## ಗ್ರಹ ಚರಿತ್ರೆ

ವಾಸುದೇವಾಂಶನಾದ ಸಂಕರ್ಷಣನು ಮೊದಲು ಜಲವನ್ನು ನಿರ್ಮಿಸಿ ಆ ಜಲದಲ್ಲಿ ಶಕ್ತಿವಿಶೇಷ (ವೀರ್ಯ) ವನ್ನು ಬಿಟ್ಟನು. ಆ ಶಕ್ತಿಯಿಂದ ಕೂಡಿದ ಜಲವು ಚಿನ್ನದ ಚೆಂಡಿನಂತೆ ಗುಂಡಾದ ಒಂದು ವಸ್ತುವಾಯಿತು. ಕತ್ತಲೆಯಿಂದ ಆವೃತವಾದ ಆ ಚಿನ್ನದ ಗೋಲಾಕೃತಿಯಲ್ಲಿ ಸಂಕರ್ಷಣಾಂಶದಿಂದ ಅನಿರುದ್ಧನು ಕಾಣಿಸಿಕೊಂಡನು. ಮೊದಲು ಕಾಣಿಸಿಕೊಂಡುದರಿಂದ ಈ ಅನಿರುದ್ಧನನ್ನು ಆದಿತ್ಯನೆಂದು ಕರೆಯುತ್ತಾರೆ. ಆದಿತ್ಯನು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೂ ಲೋಕಪ್ರಕಾಶಕನೂ ಆಗಿ ಸುವರ್ಣಾಂಡಮಧ್ಯದಲ್ಲಿ ಸದಾಕಾಲದಲ್ಲೂ ಸುತ್ತುತ್ತ ಇರುತ್ತಾನೆ. ಈ ಆದಿತ್ಯನ ಮಂಡಲವೇ ಋಗ್ವೇದ ಮಂತ್ರಗಳು. ಸಾಮವೇದ ಮಂತ್ರಗಳೇ ಆ ಮಂಡಲದ ಕಿರಣಗಳು. ಯಜುರ್ವೇದ ಮಂತ್ರಗಳು ಆ ಮಂಡಲದ ಸ್ವರೂಪ. ಈ ವಿಧವಾಗಿ ಮೂರುವೇದಗಳ ಸ್ವರೂಪದಿಂದಿರುವ ಈ ಆದಿತ್ಯನೇ ಕಾಲಕ್ಕೆ ಕಾರಣನು ಮತ್ತು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುವುದರಲ್ಲಿ ಸಮರ್ಥನು. ಜಗತ್ತೆಲ್ಲ ಈತನಲ್ಲೇ ಅಡಗಿದೆ. ಜಗತ್ತೇ ಈತನ ರಥ. ಇದಕ್ಕೆ ಹನ್ನೆರಡು ತಿಂಗಳುಗಳಿಂದ ಕೂಡಿದ ವರ್ಷವೇ ಚಕ್ರ. ಗಾಯತ್ರೀ ಮೊದಲಾದ ಏಳು ಛಂದಸ್ಸುಗಳೇ ಕುದುರೆಗಳು. ಈ ಅನಿರುದ್ಧನು ಅಹಂಕಾರ ತತ್ತ್ವದಿಂದ ಕೂಡಿದ ಬ್ರಹ್ಮನನ್ನು ಜಗತ್ಸೃಷ್ಟಿಮಾಡಲು ಸೃಜಿಸಿ ಆತನಿಗೆ ಶ್ರೇಷ್ಠವಾದ ವೇದಗಳನ್ನು ಕೊಟ್ಟು ಸುವರ್ಣಾಂಡಮಧ್ಯದಲ್ಲಿ ಆತನನ್ನಿಟ್ಟಿರುವನು. ಬ್ರಹ್ಮನಿಗೆ ಸೃಷ್ಟಿಸುವ ಇಚ್ಛೆಯಾದ ಕೂಡಲೆ ಆತನ ಮನಸ್ಸಿನಿಂದ ಚಂದ್ರನೂ ಕಣ್ಣಿನಿಂದ ತೇಜೋರೂಪಿಯಾದ ಸೂರ್ಯನೂ ಹುಟ್ಟಿದರು. ಸೂರ್ಯನು ತೇಜೋರೂಪಿ ; ಚಂದ್ರನು ಜಲರೂಪಿ ; ಅನಂತರ ಮನಸ್ಸಿನಿಂದ ಆಕಾಶ; ಆಕಾಶದಿಂದ ವಾಯು; ವಾಯುವಿನಿಂದ ಅಗ್ನಿ; ಅಗ್ನಿಯಿಂದ ನೀರು; ನೀರಿನಿಂದ ಪೃಥಿವಿ ; ಈ ಕ್ರಮದಲ್ಲಿ ಪಂಚಭೂತ ಸೃಷ್ಟಿಯಾದ ಮೇಲೆ ಇವುಗಳಿಂದ ಕುಜ

ಬುಧ ಗುರು ಶುಕ್ರ ಶನಿ ಈ ಐದು ಗ್ರಹಗಳ ಸೃಷ್ಟಿ[1] ಆಗಿದೆ. ಚಂದ್ರ ಬುಧ ಶುಕ್ರ ಸೂರ್ಯ ಕುಜ ಗುರು ಶನಿ ಈ ಕ್ರಮದಲ್ಲಿ ಗ್ರಹಗಳು ಮೇಲೆ ಮೇಲೆ ಇದ್ದು ತಮ ತಮಗೆ ನಿಯತವಾದ ಮಾರ್ಗಗಳಲ್ಲಿ ಭೂಮಿಯ ಸುತ್ತಲೂ ಸುತ್ತುತ್ತಿದ್ದಾರೆ[2] ಎಂದು ಸೂರ್ಯಸಿದ್ಧಾಂತ ಗ್ರಂಥದಲ್ಲಿದೆ.

'ಗ್ರಹಗಳ ಅಧಿಪತಿ ಸೂರ್ಯ, ನಕ್ಷತ್ರಗಳಿಗೆ ಒಡೆಯ ಚಂದ್ರ, ಸುರರ ಸೇನಾಪತಿಯಾದ ಸ್ಕಂದನೇ ಅಂಗಾರಕ, ನಾರಾಯಣನೇ ಬುಧ, ದೇವಗುರುವೇ ಗುರು, ಅಸುರಗುರುವೇ ಶುಕ್ರ, ಯಮನೇ ಶನಿ'[3]. ಸಹಸ್ರ ರಶ್ಮಿಯಾದ ಸೂರ್ಯನ ಕಿರಣಗಳಲ್ಲಿ ಸುಷುಮ್ನಾ ಕಿರಣವು ಚಂದ್ರನಿಗೂ, ಹರಿಕೇಶವು ನಕ್ಷತ್ರಗಳಿಗೂ, ವಿಶ್ವಕರ್ಮವು ಬುಧನಿಗೂ, ವಿಶ್ವಶ್ರವೆಯು ಶುಕ್ರನಿಗೂ, ಸಂಪದ್ವಸುವು ಕುಜನಿಗೂ, ಅರ್ವಾವಸುವು ಗುರುವಿಗೂ, ಸ್ವರಾಟ್ ಕಿರಣವು ಶನಿಗೂ ಪ್ರಕಾಶಕವಾಗಿವೆ. ತೇಜಸ್ಸು ಮತ್ತು ಜಲವನ್ನು ಹರಿಯುವಂತೆ ಮಾಡುವುದರಿಂದ ಸೂರ್ಯನನ್ನು ಸವಿತೃ ಎಂದು ಕರೆಯುತ್ತಾರೆ.

ಈ ಗ್ರಹ (ಜ್ಯೋತಿರ್ಮಂಡಲ) ರೂಪವಾದ ಸ್ಥಾನಗಳು ದೇವಗೃಹಗಳು. ದೇವಗೃಹಗಳ ಹೆಸರಿನಿಂದಲೇ ಅಲ್ಲಿ ವಾಸಮಾಡುವ ದೇವತೆಗಳನ್ನು ಕರೆಯುತ್ತಾರೆ. ಈ ಎಲ್ಲ ತೇಜಃಸ್ಥಾನಗಳೂ ಪುಣ್ಯವಂತರಿಗೆ ಪುಣ್ಯಫಲಭೋಗಕ್ಕಾಗಿ ಸೃಷ್ಟ್ಯಾದಿಯಲ್ಲಿ ರಚಿಸಲ್ಪಟ್ಟಿವೆ. ಇವು ಪ್ರಳಯಕಾಲದವರೆಗೂ ಶಾಶ್ವತ ವಾಗಿರುತ್ತವೆ. ಒಂದೊಂದು ಮನ್ವಂತರದಲ್ಲೂ ಬೇರೆ ಬೇರೆಯವರು ಈ ಸ್ಥಾನಗಳಿಗೆ ಅಧಿಕಾರಿಗಳಾಗಿರುತ್ತಾರೆ. ಈಗಿನ ವೈವಸ್ವತ ಮನ್ವಂತರದಲ್ಲಿ ಅದಿತಿಪುತ್ರನಾದ ವಿವಸ್ವಾನ್ ಎಂಬುವನು ಸೂರ್ಯನಾಗಿಯೂ, ಧರ್ಮ ಪುತ್ರನಾದ ತ್ವಿಷಿ ಅಥವಾ ವಸು ಎಂಬುವನು ಚಂದ್ರನಾಗಿಯೂ, ರಾಕ್ಷಸ ಗುರುವಾದ ಭೃಗುಮುನಿಯ ಪುತ್ರನು ಶುಕ್ರನಾಗಿಯೂ, ಅಂಗಿರಸ್ಸಿನ ಪುತ್ರನಾದ ಬೃಹತ್ತೇಜನು ದೇವಗುರುವಾಗಿಯೂ, 'ತ್ವಿಷಿ' ಎಂಬುವನ ಪುತ್ರನು ಬುಧ ನಾಗಿಯೂ, ಸೂರ್ಯನಿಗೆ 'ಸಂಜ್ಞಾ' ಎಂಬ ಪತ್ನಿಯಲ್ಲಿ ಹುಟ್ಟಿದ ವಿರೂಪನಾದ ಪುತ್ರನು ಶನಿಯಾಗಿಯೂ, ಅಗ್ನಿಗೆ 'ವಿಕೇಶಿ' ಎಂಬ ಪತ್ನಿಯಲ್ಲಿ ಹುಟ್ಟಿದ ಯುವಕನಾದ ಪುತ್ರನು ಅಂಗಾರಕನಾಗಿಯೂ, ದಕ್ಷಬ್ರಹ್ಮನ ಪುತ್ರಿಯರು ಋಕ್ಷ (ನಕ್ಷತ್ರ)ಗಳಾಗಿಯೂ ಆಯಾಗೃಹಗಳಲ್ಲಿ ರಾಜಿಸುತ್ತಿರುವರು.

ಸೂರ್ಯನ ಗೃಹ ಶುಭ್ರವೂ ಅಗ್ನಿಮಯವೂ ಆಗಿದೆ. ಚಂದ್ರನ ಗೃಹ ಶುಕ್ಲವರ್ಣದಿಂದ ಕೂಡಿ ಜಲಮಯವಾಗಿದೆ. ಬುಧನ ಗೃಹ ಶ್ಯಾಮವರ್ಣ ದಿಂದ ಕೂಡಿ ಜಲಮಯವಾಗಿದೆ. ಶುಕ್ರನ ಗೃಹ ಶುಭ್ರವೂ ಜಲಮಯವೂ

---

[1] ಬ್ರಹ್ಮನಿಗೆ ಗ್ರಹ ನಕ್ಷತ್ರ ದೇವ ದೈತ್ಯಾದಿಗಳನ್ನು ಸೃಷ್ಟಿಸಲು ೪೭೪೦೦ ದಿವ್ಯ ವರ್ಷಗಳಾದುವೆಂದು ಸೂರ್ಯಸಿದ್ಧಾಂತ ಅಧ್ಯಾಯ ೧ ಶ್ಲೋಕ ೨೪ ರಲ್ಲಿದೆ.

[2] ಮುಖ ಪತ್ರದಲ್ಲಿ ಈ ಕ್ರಮವನ್ನನುಸರಿಸಿ ಚಿತ್ರವನ್ನು ಕೊಟ್ಟಿದೆ.

[3] ಗ್ರಹಗಳು ಈ ದೇವತೆಗಳ ಅಂಶಸ್ವರೂಪರಾಗಿರುತ್ತಾರೆ.

ಪದ್ಮಾಕೃತಿಯುಳ್ಳುದೂ ಆಗಿದೆ. ಅಂಗಾರಕನ ಗೃಹ ಲೋಹಿತವರ್ಣದಿಂದ ಕೂಡಿ ಜಲಮಯವಾಗಿದೆ. ಗುರುವಿನ ಗೃಹ ಹಸಿರು ವರ್ಣದಿಂದ ಕೂಡಿ ಜಲಮಯವಾಗಿದೆ. ಶನಿಯು ಗೃಹ ಕೃಷ್ಣವರ್ಣದಿಂದ ಕೂಡಿ ಜಲಮಯವಾಗಿದೆ.

ಸೂರ್ಯನಲ್ಲಿ ಮಾಸಭೇದದಿಂದ ವಿಷ್ಣು, ಧಾತೃ, ಭಗ, ಪೂಷಾ, ಮಿತ್ರ, ಇಂದ್ರ, ವರುಣ, ಅರ್ಯಮಾ, ವಿವಸ್ವಾನ್, ಅಂಶುಮಾನ್, ಪರ್ಜನ್ಯ, ತ್ವಷ್ಟೃ ಈ ಹನ್ನೆರಡು ಮಂದಿ ದೇವತೆಗಳ ಅಂಶವಿರುತ್ತದೆ ಇದರಿಂದ ಸೂರ್ಯನ [1]ಕಿರಣಸಂಖ್ಯೆಯಲ್ಲೂ ವ್ಯತ್ಯಾಸವಿರುತ್ತದೆ. ಸೂರ್ಯನಲ್ಲಿ ವಿಷ್ಣ್ವಂಶವಿದ್ದಾಗ ೧೨೦೦, ಅರ್ಯಮಾಂಶದಲ್ಲ ೧೩೦೦, ವಿವಸ್ವಂತ, ತ್ವಷ್ಟೃ ಮತ್ತು ಧಾತ್ರಂಶಗಳಲ್ಲಿ ೧೧೦೦, ಅಂಶುಮಂತನ ಅಂಶದಲ್ಲಿ ೧೫೦೦, ಪರ್ಜನ್ಯ (ವರುಣನ) ಅಂಶದಲ್ಲಿ ೧೪೦೦, ಭಗ ಮತ್ತು ಮಿತ್ರಾಂಶಗಳಲ್ಲಿ ೧೦೦೦, ಇಂದ್ರಾಂಶದಲ್ಲಿ ೧೬೦೦, ಪೂಷಾಂಶದಲ್ಲಿ ೯೦೦ ಕಿರಣಗಳಿರುತ್ತವೆ ಎಂದು ಬ್ರಹ್ಮಾಂಡ ಪುರಾಣದಲ್ಲಿ ಗ್ರಹಚರಿತ್ರೆ ವರ್ಣಿತವಾಗಿದೆ.

'ಅಷ್ಟಮೂರ್ತಿಗಳಾದ ಭವ ಶರ್ವ ಈಶಾನ ಶಿವ ಪಶುಪತಿ ಭೀಮ ಉಗ್ರ ಮಹಾದೇವರ ಸ್ವರೂಪಗಳಾಗಿ ಸೂರ್ಯ ನೀರು ಭೂಮಿ ಬೆಂಕಿ ಗಾಳಿ ಆಕಾಶ ದೀಕ್ಷಿತ ಚಂದ್ರ ಈ ಎಂಟೂ ಇವೆ. ಇವುಗಳಲ್ಲಿ ಸೂರ್ಯನಿಗೆ ಸುವರ್ಚಲೆಯಲ್ಲಿ ಶನಿಯೂ, ನೀರಿಗೆ ಉಷೆಯಲ್ಲಿ ಶುಕ್ರನೂ, ಭೂಮಿಗೆ ವಿಕೇಶಿಯಲ್ಲಿ ಅಂಗಾರಕನೂ, ಚಂದ್ರನಿಗೆ ರೋಹಿಣಿಯಲ್ಲಿ ಬುಧನೂ ಹುಟ್ಟಿದರೆಂದು ಪದ್ಮ ಪುರಾಣದಲ್ಲಿದೆ.'

ಇದಲ್ಲದೆ ಕಶ್ಯಪ ಬ್ರಹ್ಮನಿಂದ ಅದಿತಿಯಲ್ಲಿ ಸೂರ್ಯನೂ, ಬ್ರಹ್ಮಪುತ್ರನಾದ ಅತ್ರಿಯ ನೇತ್ರದಿಂದ ಚಂದ್ರನೂ, ಚಂದ್ರನಿಂದ ತಾರೆಯಲ್ಲಿ ಬುಧನೂ ಹುಟ್ಟಿರುವರೆಂದೂ, ಅಮೃತಮಥನ ಕಾಲದಲ್ಲಿ ಚಂದ್ರನು ಹುಟ್ಟಿದನೆಂದೂ ಮತ್ತೆ ಕೆಲವು ಗ್ರಂಥಗಳಲ್ಲಿವೆ. ಹೀಗೆ ಎಲ್ಲ ಗ್ರಂಥಗಳಿಂದಲೂ ಗ್ರಹಚರಿತ್ರೆಯನ್ನು ಸಂಗ್ರಹಿಸಿ ಅವುಗಳಲ್ಲಿ ಕಂಡುಬರುವ ವಿರೋಧವನ್ನು ಶಾಸ್ತ್ರಕಾರರು ಹೇಳುವಂತೆ ಯುಗಭೇದ ವ್ಯವಸ್ಥೆಯಿಂದ ಪರಿಹರಿಸಿಕೊಳ್ಳಬಹುದು.

ಈ ಗ್ರಂಥವನ್ನು ನಮಗೆ ದೊರೆತಿರುವ ಎರಡು ಪ್ರತಿಗಳ ಸಹಾಯದಿಂದ ಸಂಪಾದಿಸಲಾಗಿದೆ.

---

[1]ಸೂರ್ಯಕಿರಣದ ಉಗ್ರತೆಯನ್ನು ಸಹಿಸಲಾರದೆ ಆತನ ಪತ್ನಿಯಾದ ಸಂಜ್ಞೆಯು ಹೊರಟು ಹೋಗಲು ಇದನ್ನು ತಿಳಿದು ಸೂರ್ಯನು ತನ್ನ ಕಿರಣದ ಉಗ್ರತೆಯನ್ನು ಕಡಮೆಮಾಡಿಕೊಳ್ಳಬೇಕೆಂದು ಬ್ರಹ್ಮನನ್ನು ಕೇಳಿಕೊಳ್ಳಲು ಬ್ರಹ್ಮನು ವಿಶ್ವಕರ್ಮನನ್ನು ಕರೆಸಿ ವಜ್ರದ ಚಕ್ರವನ್ನು ಮಾಡಿಸಿ ಪ್ರಳಯಾಗ್ನಿಯಂತಿದ್ದ ಆ ಸೂರ್ಯಮಂಡಲವನ್ನು ಸಾಣೆಗೆ ಕೊಟ್ಟು ಕಿರಣಗಳನ್ನು ಕಡಮೆಮಾಡಿದನು. ಆಗ ಸುತ್ತಲೂ ಹಾರಿದ ಕಿರಣಶಕಲಗಳಿಂದ ವಿಷ್ಣುವಿಗೆ ಸುದರ್ಶನವನ್ನೂ, ಯಮನಿಗೆ ಯಮದಂಡವನ್ನೂ, ಶಿವನಿಗೆ ಶೂಲವನ್ನೂ, ಕಾಲನಿಗೆ ಖಡ್ಗವನ್ನೂ, ಗುಹನಿಗೆ ಶಕ್ತ್ಯಾಯುಧವನ್ನೂ, ಚಂಡಿಕೆಗೆ ಶಕ್ತಿಯನ್ನೂ, ಬ್ರಹ್ಮನ ಅಪ್ಪಣೆಯಂತೆ ದೇವತಾಬಡಗಿಯಾದ ವಿಶ್ವಕರ್ಮನು ಮಾಡಿಕೊಟ್ಟನು. ಇದರಿಂದ ಉಗ್ರತೆಯು ಕಡಮೆಯಾಗಿ ೧೦೦೦ ಕಿರಣಗಳಿಂದ ಪ್ರಕಾಶಿಸುತ್ತಿದ್ದಾನೆ ಎಂದು ಪುರಾಣಗಳಲ್ಲಿದೆ.

## ಪ್ರತಿಗಳ ವಿವರ

ಈ ಎರಡೂ ನಮ್ಮ ಸಂಸ್ಥೆಯ ಕೋಶಾಗಾರದಲ್ಲಿರುವ ಪ್ರತಿಗಳೇ. ಇವೆರಡರಲ್ಲಿ ಮೊದಲನೆಯದು ಕೆ ೨೮೫ನೇ ನಂಬರಿನ ಓಲೆಪ್ರತಿ. ಇದಕ್ಕೆ 'ಕ' ಎಂದು ಅಂಕಿತ ಕೊಟ್ಟಿದೆ. ಇದರ ಉದ್ದ ೯½ ಅಂಗುಲಗಳು. ಅಗಲ ೨ ಅಂಗುಲಗಳು. ಪ್ರತಿ ಶಿಥಿಲವಾಗಿರದೆ ಉತ್ತಮಸ್ಥಿತಿಯಲ್ಲಿದೆ. ಓಲೆಯ ಪ್ರತಿಪಾರ್ಶ್ವದಲ್ಲೂ ಐದರಿಂದ ಒಂಬತ್ತರವರೆಗೂ ಸಾಲುಗಳಿವೆ. ಏಳು ಸಾಲು ಗಳಿರುವ ಓಲೆಗಳೇ ಅಧಿಕವಾಗಿ ಕಂಡುಬರುತ್ತವೆ. ಪ್ರತಿಸಾಲಿನಲ್ಲೂ ೪೫ರಿಂದ ೫೦ರ ವರೆಗೆ ಅಕ್ಷರಗಳಿವೆ. ಪತ್ರಸಂಖ್ಯೆ ೯೫ರಿಂದ ೧೭೭ರ ವರೆಗಿದೆ. ಇದ ರಿಂದ ಮೊದಲಿನ ೯೪ ಓಲೆಗಳಲ್ಲಿ ಇದೇ ಕವಿಯ ಮತ್ತೊಂದು ಗ್ರಂಥವಿದ್ದು ಅದನ್ನು ಯಾರಾದರೂ ಇದರಿಂದ ಬೇರ್ಪಡಿಸಿರಬಹುದೆಂದು ಊಹಿಸಬಹುದು. ಜಾತಕತಿಲಕ ಗ್ರಂಥವು ೯೫ನೇ ಪತ್ರದಲ್ಲಿ ಆರಂಭವಾಗಿ ೧೭೦ನೇ ಪತ್ರದಲ್ಲಿ ಮುಗಿದಿದೆ. ಇದರಲ್ಲಿ ಗ್ರಂಥಭಾಗವಲ್ಲದ ಅಷ್ಟಕವರ್ಗ ಸಂಖ್ಯೆಗಳು, ಅಷ್ಟಕವರ್ಗ ವಿಚಾರ ಮತ್ತು ಕಾರಕಗಳನ್ನು ತಿಳಿಸುವ ಸಂಸ್ಕೃತ ಶ್ಲೋಕಗಳು ೧೨೮, ೧೨೯, ೧೩೦, ೧೩೧ನೇ ಪತ್ರಗಳಲ್ಲಿ ಬರೆದಿದೆ. ಓಲೆಬರಹದಲ್ಲಿ ಅಶುದ್ಧ ಎಷ್ಟಿದೆ ಎನ್ನುವು ದನ್ನೂ, ಲಿಪಿಕಾರರು ಹೇಗೆ ಅಧಿಕ ವಿಚಾರಗಳನ್ನು ಗ್ರಂಥಮಧ್ಯದಲ್ಲಿ ಸೇರಿಸುತ್ತಾರೆ ಎನ್ನುವುದನ್ನೂ ಮತ್ತು ಪ್ರತಿಕಾರರು ವಿಷಯದ ಅರಿವಿಲ್ಲದೆಯೇ ಸರಿಯಾಗಿರು ವುದನ್ನು ತಪ್ಪುತಪ್ಪಾಗಿ ಪ್ರತಿಮಾಡಿರುವಂತೆಯೇ ಆ ಭಾಗಗಳು ಮುದ್ರಿತ ವಾಗುತ್ತವೆ ಎನ್ನುವುದನ್ನೂ ವ್ಯಕ್ತಪಡಿಸುವುದಕ್ಕೆ ಮೇಲೆ ತಿಳಿಸಿದ ನಾಲ್ಕು ಪತ್ರಗಳ ಪಡಿಯಚ್ಚುಗಳನ್ನು ಮೊದಲನೆಯ ಪರಿಶಿಷ್ಟದಲ್ಲಿ ಕೊಟ್ಟಿದೆ. ೧೭೧ನೇ ಪತ್ರದಿಂದ ೧೭೭ರ ವರೆಗೆ ಪ್ರಕೃತ ಗ್ರಂಥದ ಭಾಗವಲ್ಲದ ಶ್ರೀಪತಿ ಪದ್ಧತಿ ಗ್ರಂಥದ ಕೆಲವು ಶ್ಲೋಕಗಳೂ, ಅಲ್ಲಿಂದ ಮುಂದಕ್ಕೆ ಅಷ್ಟಕವರ್ಗದಿಂದ ಆಯದಾರ್ಯವನ್ನು ತರುವ ಕ್ರಮದ ವಿವರವೂ ಇದೆ. ಈ ಪ್ರತಿಯ ಕೊನೆ ಯಲ್ಲಿ ಪ್ರತಿಕಾರನ ವಿಚಾರವಾಗಲೀ, ಪ್ರತಿಮಾಡಿದ ಕಾಲವಾಗಲೀ ದೊರಕುವುದಿಲ್ಲ. ಇದರ ಅಕ್ಷರಗಳು ಸ್ಫುಟವಾಗಿಯೂ, ಸುಂದರವಾಗಿಯೂ ಓದಲು ಸುಲಭ ವಾಗಿಯೂ ಇವೆ. ಇದರಲ್ಲಿ ತಪ್ಪು ಬರವಣಿಗೆಯೂ ಅಕ್ಷರಸ್ಖಾಲಿತ್ಯಗಳೂ ಅಧಿಕ ವಾಗಿವೆ. 'ಱ' 'ೞ' ಅಕ್ಷರಗಳಿಲ್ಲ. ಗೃಹವೆಂದಿರಬೇಕಾದೆಡೆಗಳಲ್ಲಿ ಗ್ರಹವೆಂದೂ, ಗ್ರಹಕ್ಕೆ ಪ್ರತಿಯಾಗಿ ಗೃಹವೆಂದೂ ಇದೆ. ಇತರ ಓಲೆಗಳಲ್ಲಿ ಕಾಣಬಹುದಾದ 'ಶ' ಕ್ಕೆ 'ಸ' ಎಂದು ಬರೆದಿರುವುದು, 'ದ' ಅಕ್ಷರದ ಹೊಕ್ಕುಳಿನೊಳಗೆ ಸೊನ್ನೆಯನ್ನು ಸೇರಿಸಿ ಅದನ್ನು 'ಥ' ಅಕ್ಷರಕ್ಕೆ ಪ್ರತಿಯಾಗಿ ಬರೆದಿರುವುದು, ಇವುಗಳನ್ನು ಈ ಪ್ರತಿಯಲ್ಲೂ ಕಾಣಬಹುದು. [1] 'ಮ' ಅಕ್ಷರವನ್ನು

---

[1] ಅನುಮಿಷರ್ಂ ತ್ರಿಯುಳೊಂದಿದ (ಪತ್ರ ೧೪೦ ಅಧಿ ೧೫ ಪದ್ಯ ೪), ಅರ್ರುತಕರಂ(ಪತ್ರ ೧೪೮ ಅಧಿ ೧೮ ಪದ್ಯ ೫), ತುರ್ಗಾಂತಿರ್ದ್ರೇಕ್ಕಾಣಂ(ಪತ್ರ ೧೫೨ ಅಧಿ ೧೯ ಪದ್ಯ ೨೧) ಬಹುರ್ರೋಮತನುರ್ ಕರಾಭದಂಷ್ಟ್ರದ್ವಿತಯಂ (ಪತ್ರ ೧೫೨ ಅಧಿ ೧೯ ಪದ್ಯ ೨೮), ಘಟಗೃಹಾದಿರ್ದ್ರೇಕ್ಕಾಣಂ (ಪತ್ರ ೧೫೩ ಅಧಿ ೧೯ ಪದ್ಯ ೩೧), ಪುಷ್ಟಂ ಮಧ್ಯರ್ನಲ್ಪಂ ಶುಭಪಲಮಂ (ಪತ್ರ ೧೫೫ ಅಧಿ ೨೦ ಪದ್ಯ ೨೫) ಈ ಉದಾಹರಣೆಗಳಿಂದ ಅಕ್ಷರವೈಚಿತ್ರ್ಯವು ಸ್ಪಷ್ಟಪಡುತ್ತದೆ.

'ರ್' ಎಂದು ಕೆಲವೆಡೆಗಳಲ್ಲಿ ಬರೆದಿರುವುದು ಈ ಪ್ರತಿಯಲ್ಲಿ ಕಂಡುಬರುವ ಅಕ್ಷರ ವೈಚಿತ್ರ್ಯ.

ಎರಡನೆಯದು ಕೆ. ಎ. 237ನೇ ನಂಬರಿನ ಕೈಬರಹದ ಕಾಗದದ ಪ್ರತಿ. ಇದಕ್ಕೆ 'ಗ' ಎಂದು ಅಂಕಿತಮಾಡಿದೆ. ಇದು ಮತ್ತೊಂದು ಓಲೆಯ ಪ್ರತಿ ಕೃತಿ. ಇದರ ಮಾತೃಕೆಯ ೪೪, ೬೬, ೮೪, ೧೦೫, ೧೧೩ನೇ ಓಲೆಗಳು ಇರಲಿಲ್ಲವೆಂದು ಪ್ರತಿಕಾರರು ಆದಿಯಲ್ಲಿ ಬರೆದಿರುತ್ತಾರೆ. ಇದನ್ನು ೧೭–೮–೧೯೧೦ರಲ್ಲಿ ಪ್ರತಿಮಾಡಿ ಮುಗಿಸಿರುವಂತೆ ಪ್ರತಿಯಿಂದ ತಿಳಿದು ಬರುತ್ತದೆ. ಇದನ್ನು ಪ್ರತಿಮಾಡಿರುವವರು ಶ್ರೀ ಬಿ. ರಾಮಸ್ವಾಮಿ ಶಾಸ್ತ್ರಿಗಳು. ಇದರ ಮೂಲಮಾತೃಕೆ ಈಗ ದೊರೆಯಲಿಲ್ಲ. ಗ್ರಂಥವನ್ನು ಪುಟದ ಒಂದೇ ಪಾರ್ಶ್ವದಲ್ಲಿ ಬರೆದಿದೆ. ಇದರಲ್ಲಿ ೧೮೬ ಪುಟಗಳಿವೆ. ಗ್ರಂಥಲೋಪ ಅಧಿಕ. 'ಱ' ಅಕ್ಷರ ಕೆಲವು ಕಡೆ ಇದೆ; ಅದು ಸರಿಯಾಗಿಲ್ಲ. 'ೞ' ಅಕ್ಷರದ ಪ್ರಯೋಗವಿಲ್ಲ. ಪ್ರತಿ ಶಿಥಿಲವಾಗಿದೆ. ಗ್ರಂಥಾಂತ್ಯದಲ್ಲಿ—

" ಒಂದು ಬೀಜಕೆ ಮೂಱು ಕವಲು ಮೊಳೆತುದು ಕೂಡೆ
ಸಂದಿರ್ಪ ಹದಿಮೂಱು ಕೋಡಾಯಿತದಱಿಂದ
ಮುಂದೆ ಹತ್ತೊಂಬತ್ತು ಕೆಲಗೊನೆಯ ಪಲ್ಲೈಸೆ ಸಂದ ತಳಿರು ಮೂವತ್ತೊಂದು
ಒಂದು ನೂಱ ಹದಿಮೂಱುಮವು ಹದಿನೇಳೊಂಬೆ
ಅಂದದೆಲೆ ನವಗುಣವನಾಂತಂಬರದ ಸಸಿಯಂ ಮುಟ್ಟಿ
ನಿಂದ ಫಲ ವರುಷಕ್ಕೊಂದು ಪೆರ್ಚಿಸುತಾ ಲೆಕ್ಕ ತೆರದಿಂ ಬೆಳಸಿರ್ಪುದು "

ಮಲೆಯೂರ ವಿಜಯಪ್ಪೈಯ್ಯನ ಕೈಯ ಬರಹದ ಈ ಪದ್ಯ ಎಂದು ಬರೆದಿದೆ– ಎಂದು ಪ್ರತಿಕಾರರು ಬರೆದಿರುತ್ತಾರೆ.

'ಕ' 'ಗ' ಈ ಎರಡು ಪ್ರತಿಗಳ ಆಧಾರದ ಮೇಲೆ ಜಾತಕತಿಲಕ ಗ್ರಂಥವನ್ನು ಮುದ್ರಿಸಲಾಗಿದೆ. ಮುದ್ರಣಕಾರ್ಯ ಆರಂಭವಾದ ತರುಣದಲ್ಲೇ ಮದ್ರಾಸ್ ವಿಶ್ವವಿದ್ಯಾನಿಲಯ ಈ ಗ್ರಂಥವನ್ನು ಆಗತಾನೆ ಪ್ರಕಾಶಪಡಿಸಿದೆ ಎನ್ನುವ ವಿಚಾರ ತಿಳಿದು ಬಂದಿತು. ಕೂಡಲೇ ಆ ಪ್ರತಿಯನ್ನು ತರಿಸಿ ನೋಡಲಾಗಿ ಅಲ್ಪವ್ಯತ್ಯಾಸಗಳಿಂದ ಕೂಡಿದ ನಮ್ಮ ಸಂಸ್ಥೆಯ (ಕ) ಪ್ರತಿಯೇ ಅಲ್ಲಿ ಮುದ್ರಿತವಾಗಿದೆ [1]ಎನ್ನುವುದು ವೇದ್ಯವಾಯಿತು.

೧. ಓಲೆ ಪತ್ರಗಳನ್ನೆಲ್ಲಾ ಒಟ್ಟಿಗೆ ಕಟ್ಟಿಡಲು ಮಧ್ಯದಲ್ಲಿ ರಂಧ್ರ ಮಾಡುವುದಕ್ಕಾಗಿ ಎರಡು ಕಡೆ ಸ್ವಲ್ಪ ಸ್ಥಳವನ್ನು ಬಿಟ್ಟು ಗ್ರಂಥಗಳನ್ನು ಬರೆಯುವುದು ರೂಢಿಯಲ್ಲಿದೆ. ಇದರಿಂದ ಓಲೆಯಲ್ಲಿ ಬರೆದಿರುವ ಪ್ರತಿಸಾಲೂ ಮೂರುವಿಭಾಗಗಳಾಗಿ ಕಂಡುಬರುತ್ತದೆ. ಆ ವಿಭಾಗಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಓದದೆ ಪ್ರತಿಸಾಲನ್ನೂ ಪೂರ್ತಿಯಾಗಿಯೇ ಓದಬೇಕು. ಇದು

---

[1] ಈ ಗ್ರಂಥದ ಮುನ್ನುಡಿಯಲ್ಲಿ ನಮ್ಮ ಸಂಸ್ಥೆಯ ಪ್ರತಿಗಳ ವಿಚಾರವಿಲ್ಲ.

ವಸ್ತುಸ್ಥಿತಿ. ಪ್ರಕೃತ ಓಲೆಯಲ್ಲೂ ಇದೇ ರೀತಿ ಬರೆದಿದೆ. ಆದರೆ ೧೨೮, ೧೯೯ನೇ ಓಲೆಗಳಲ್ಲಿ ಅಷ್ಟಕವರ್ಗ ಬಿಂದುಗಳನ್ನು ಸಂಗ್ರಹಿಸಿ ಕೊಟ್ಟಿದೆ. ಇದು ಗ್ರಂಥದ ಭಾಗವಲ್ಲ. ಇದನ್ನು ಪ್ರತಿಕಾರರಾರೋ ಮಧ್ಯದಲ್ಲಿ ಸೇರಿಸಿ ರುತ್ತಾರೆ. ಈ ಬಿಂದುಗಳನ್ನು ಕ್ರಮವಾಗಿ ಪೂರ್ತಿಸಾಲಿನಲ್ಲಿ ಬರೆಯದೆ ಒಂದೊಂದು ವಿಭಾಗದಲ್ಲೂ ಪ್ರತ್ಯೇಕ ಪ್ರತ್ಯೇಕವಾಗಿ ಬರೆದಿರುತ್ತಾರೆ. ಇದನ್ನು ಓದಬೇಕಾದರೆ ಮೊದಲು ಒಂದನೆಯ ವಿಭಾಗವನ್ನು ಪೂರ್ತಿಯಾಗಿಯೂ ಅನಂತರ ಎರಡನೆಯ ವಿಭಾಗದಲ್ಲಿರುವುದನ್ನೂ ಅದಾದ ಮೇಲೆ ಮೂರನೆಯ ವಿಭಾಗದಲ್ಲಿರುವುದನ್ನೂ ಓದಬೇಕು. ' ಜ್ಯೋತಿಶ್ಶಾಸ್ತ್ರದ ಪರಿಚಯವಿರುವವರಿಗೆ ಮಾತ್ರ ವಿಷಯ ವಿಭಾಗಜ್ಞಾನವಿರುವುದರಿಂದ ಇದನ್ನು ಪ್ರತ್ಯೇಕವಾಗಿ ಓದ ಬೇಕೆಂದು ತಿಳಿಯುತ್ತದೆ. ಈ ಶಾಸ್ತ್ರಪರಿಚಯವಿಲ್ಲದವರು ಇದನ್ನು ಉಳಿದ ಓಲೆಗಳ ಕ್ರಮದಲ್ಲಿಯೇ ಓದುತ್ತಾರೆ. ಈ ಓಲೆಗಳ ಪಡಿಯಚ್ಚುಗಳನ್ನು ಪರಿ ಶಿಷ್ಟ ೧ರಲ್ಲಿ ಕೊಟ್ಟಿದೆ. ಇತರ ಓಲೆಗಳಂತೆ ಇದನ್ನು ಓದಿದರೆ " ಆದಿತ್ಯಂಗೆ ೧।೨।೪।೭।೮।೯।೧೦।೧೧. ಅಂತು ಆದಿತ್ಯನ ಬಿಂದು ೪೮॥ ಲಗ್ನಕ್ಕೆ ೩।೬। ೧೦।೧೧. ಅಂತು ಚಂದ್ರನ ಬಿಂದು ೪೯॥" ಎಂದಾಗುತ್ತದೆ. ಆದರೆ ಇದು ಅಸಂಬದ್ಧವಾಗಿದೆ. ಈ ವಿಧವಾದ ದೋಷ ಶಾಸ್ತ್ರಗ್ರಂಥಪರಿಚಯವಿಲ್ಲದ ಪ್ರತಿಕಾರರಿಂದಾಗಿ ಅದನ್ನು ಶಾಸ್ತ್ರವನ್ನು ತಿಳಿದವರಾದರೂ ಸರಿಪಡಿಸಲು ಸಾಧ್ಯವಾಗದೆ ತಪ್ಪನ್ನು ಇರುವಂತೆಯೇ ಮುದ್ರಣ ಮಾಡಬೇಕಾಗಿ ಬರುತ್ತದೆ. *ಈ ಅಷ್ಟಕ ಬಿಂದು ಸಂಖ್ಯಾಕ್ರಮ ಮದ್ರಾಸ್ ಮುದ್ರಿತ ಪ್ರತಿಯಲ್ಲಿ ಕಂಡು ಬರುವುದು.

೨. ಗ್ರಂಥಪಾತಗಳು ' ಕ ' ಪ್ರತಿಯಲ್ಲಿರುವಂತೆಯೇ ಕಂಡುಬರುವುದು.

೩. ಗ್ರಹಕ್ಕೆ ಪ್ರತಿಯಾಗಿ ಗೃಹವೂ, ಗೃಹಕ್ಕೆ ಪ್ರತಿಯಾಗಿ ಗ್ರಹವೂ ಇರುವುದು.

೪. *ಕರ್ಮಜೀವನ ಪ್ರಕರಣದ ಮೊದಲನೆಯ ಪದ್ಯವಾದ 'ಜಲರುಹ ಬಂಧು ಚಂದ್ರಮನಿನಕ್ಕೆ' ಎನ್ನುವ ಪದ್ಯ ಆ ಪ್ರಕರಣದ ಆದಿಯಲ್ಲಿರದೆ ಅಷ್ಟಕವರ್ಗದ ಬಿಂದುಗಳನ್ನು ತಿಳಿಸುವುದಕ್ಕೆ ಮೊದಲು 'ಕ' ಪ್ರತಿಯಲ್ಲಿರು ವಂತೆಯೇ ಇರುವುದು.

೫. 'ಕ' ಪ್ರತಿಯಲ್ಲಿರುವ ಕೆಲವು ನಿರ್ದಿಷ್ಟ ಪಾಠಗಳೇ ಈ ಮುದ್ರಿತ ಪ್ರತಿಯಲ್ಲಿರುವುದು.

ಈ ಕಾರಣಗಳಿಂದ ನಮ್ಮ ಸಂಸ್ಥೆಯ ಓಲೆಯ ಪ್ರತಿಕೃತಿ ಆ ಮುದ್ರಿತ ಪ್ರತಿಗೆ ಆಧಾರವೆಂದು ನಿಶ್ಚಯಿಸಬಹುದು.

ಇದರಿಂದ ಈ ಗ್ರಂಥದ ಸಂಶೋಧನಾ ಕಾರ್ಯದಲ್ಲಿ ಮುದ್ರಿತ ಪ್ರತಿ ಯಿಂದ ನಮಗೆ ಸ್ವಲ್ಪವೂ ಸಹಾಯವಾಗಲಿಲ್ಲ.

---

* ಪರಿಶಿಷ್ಟ ೧ರಲ್ಲಿ ಕೊಟ್ಟಿರುವ ಓಲೆಯ ಪಡಿಯಚ್ಚಿನಿಂದ ಈ ಅಂಶವು ಸ್ಪಷ್ಟಪಡುತ್ತದೆ

ಸಂಸ್ಕೃತದಲ್ಲಿರುವ ಬೃಹಜ್ಜಾತಕ ಲಘುಜಾತಕ ಸಾರಾವಳೀ ಗ್ರಂಥಗಳ ಸಹಾಯದಿಂದ ಗ್ರಂಥಲೋಪಾದಿಗಳನ್ನು ಪೂರ್ಣಮಾಡಿ ಸಾಧ್ಯವಾದಷ್ಟು ಸಂಶೋಧಿಸಿ ಈ ಗ್ರಂಥವನ್ನು ಮುದ್ರಿಸಿದೆ. ಮೂಲಗ್ರಂಥದೊಡನೆ ಕಂಡು ಬರುವ ವ್ಯತ್ಯಾಸಗಳನ್ನೂ ಮತ್ತು ವಿಶೇಷ ವಿಚಾರಗಳನ್ನೂ ಕೆಲವು ಕಡೆ ಉದಾಹರಣೆಗಳನ್ನೂ ಆಯಾ ಪದ್ಯಕ್ಕೆ ಸಂಬಂಧಪಟ್ಟ ಟೀಕಿನ ಕೆಳಗಡೆ ಇರುವ ವಿಶೇಷಾಂಶದಲ್ಲಿ ಸಂಗ್ರಹಿಸಲಾಗಿದೆ.

(ಕ. ಗ) ಪ್ರತಿಗಳೆರಡರ ಪಾಠಗಳೂ ಸರಿಯಾಗಿಲ್ಲದಿರುವೆಡೆಗಳಲ್ಲಿ ಅವನ್ನು ಪಾಠಾಂತರವಾಗಿ ಅಡಿಯಲ್ಲೂ ಅಧಿಕವಾಗಿ ಅಕ್ಷರಗಳನ್ನು ಸೇರಿಸಿದ್ದರೆ ಅವನ್ನು ಕಂಸದಲ್ಲೂ ವಿಷಯಗಳನ್ನು ವಿಭಾಗಿಸಿ ಅವುಗಳ ಸೂಚನೆಯನ್ನು ಆಯಾ ಪದ್ಯಗಳ ಮೇಲೆ ಕಂಸದಲ್ಲೂ ಕೊಟ್ಟಿದೆ. ಇದರ ಸಹಾಯದಿಂದ ಪದ್ಯದಲ್ಲಿ ಹೇಳಿರುವ ವಿಷಯವೇನೆನ್ನುವುದು ವ್ಯಕ್ತವಾಗುತ್ತದೆ.

ಕವಿಯ ಕಾಲಕ್ಕೆ 'ಱ' 'ೞ' ಅಕ್ಷರಗಳ ಪ್ರಯೋಗವಿದ್ದುದರಿಂದ (ಕ, ಗ) ಪ್ರತಿಗಳಲ್ಲಿಲ್ಲದಿದ್ದರೂ ಈ ಅಕ್ಷರಗಳನ್ನು ಅರ್ಥಾನುಗುಣವಾಗಿ ಪ್ರಯೋಗಿಸಿದೆ.

ಪ್ರತ್ಯಂತರಗಳು ದೊರೆತಿದ್ದರೆ ಕವಿಯ ಪಾಠಗಳೇ ದೊರೆಯಬಹುದಾಗಿತ್ತು. ಒಂದುವೇಳೆ ಪ್ರತ್ಯಂತರಗಳು ಇನ್ನುಮೇಲಾದರೂ ದೊರೆತರೆ ಅದನ್ನು ಮುಂದಣ ಮುದ್ರಣದಲ್ಲಿ ಉಪಯೋಗಿಸಿಕೊಳ್ಳಲಾಗುತ್ತದೆ.

ಈ ಮುದ್ರಣದಲ್ಲೂ ಪ್ರಮಾದ ವಶದಿಂದ ಉಂಟಾಗಿರಬಹುದಾದ ಕೆಲವು ತಪ್ಪುಗಳನ್ನು ಪಟ್ಟಿಮಾಡಿ ಶುದ್ಧಾಶುದ್ಧದಲ್ಲಿ ಕೊಟ್ಟಿದೆ. ಕೆಲವು ಕಡೆ ಎರಡು ಪ್ರತಿಗಳಲ್ಲಿಯೂ ಇರುವಂತೆ * ಹೊಸಗನ್ನಡ ಪದಗಳನ್ನೇ ಈ ಮುದ್ರಿತಪ್ರತಿ ಯಲ್ಲಿಯೂ ಕೊಟ್ಟಿದೆ; ಮುದ್ರಣಕ್ಕೆ ಮುಂಚೆ ತಿದ್ದಲು ಸ್ಫೂರ್ತಿಗೆ ಬರದ ಅನಂತರ ತಿಳಿದುಬಂದ ಕೆಲವು ಪಾಠಗಳನ್ನೂ ಈ ಶುದ್ಧಾಶುದ್ಧದಲ್ಲಿ (ಒಪ್ಪೋಲೆಯಲ್ಲಿ)ಯೇ ಸೇರಿಸಿದೆ.

ಇದು ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಫಲಗ್ರಂಥವಾಗಿರುವುದರಿಂದ ಗ್ರಂಥದ ಹೊರ ನೋಟದಿಂದಲೇ ಈ ಪುಸ್ತಕದ ಸ್ವರೂಪವೇನು ಎಂದು ತಿಳಿದುಬರುವಂತೆ ಒಂದು ತ್ರಿವರ್ಣರಂಜಿತ ಚಿತ್ರವನ್ನು ಕೊಟ್ಟಿದೆ. ಚಿತ್ರದ ವಿವರ ಈ ರೀತಿ ಇದೆ.

ಚಿತ್ರದಮಧ್ಯದಲ್ಲಿರುವುದು ಭೂಮಿ; ಅದರ ಮೇಲೆ ಕಾಲಪುರುಷನ ಚಿತ್ರವಿದೆ. ಈತನ ಚಿತ್ರವನ್ನು ರಾಶಿಗಳ ಅಂಗವಿಭಾಗಕ್ಕೆ ತಕ್ಕಂತೆ ಅಳವಡಿಸಿದೆ. ಅದರ ಸುತ್ತ ಇರುವ ೧೨ ಚದುರಗಳಿಂದ ಕೂಡಿರುವ ಚಿತ್ರ ಫಲಗಳನ್ನು ತಿಳಿಯು ವುದಕ್ಕೆ ಉಪಯುಕ್ತವಾಗಿರುವಂತೆ ಗ್ರಹಗಳ ಸನ್ನಿವೇಶವನ್ನು ತಿಳಿಸುವುದಕ್ಕಾಗಿ

---

* ಗೆದ್ದ (೬೩–೭) ಇಬ್ಬರುಂ (೧೮–೧೩) ಕತ್ತರೆ (೪–೧೯) ಯಲರೆ (೬೯–೩) ಬದುಕರೆ (೭೫ ೪) ಕಡುಗುಂ (೮೧–೯) ಒವ್ಕೆಯ (೯೨–೫) ಅವಕ್ಕೆ (೨೨೭–೪).

ನಮ್ಮ ದೇಶದಲ್ಲಿ ಬರೆಯುವ ಕುಂಡಲಿಯ ಕ್ರಮವನ್ನು ಸೂಚಿಸುತ್ತದೆ. ಈ ಕುಂಡಲಿಯಲ್ಲಿರುವ ಪ್ರತಿವಿಭಾಗವೂ ಒಂದೊಂದು ರಾಶಿ; ಕುಂಡಲಿಯ ಮೇಲಿರುವ ವರ್ತುಳದಲ್ಲಿ ಬರೆದಿರುವ ಮೇಷ ವೃಷಭ ಮೊದಲಾದ ಹನ್ನೆರಡು ಚಿತ್ರಗಳಿಂದ ರಾಶಿಸ್ವರೂಪವು ತಿಳಿದುಬರುತ್ತದೆ. ಚದುರದೊಳಗೆ ಬರೆದಿರುವುದು ಗ್ರಹಗಳ ಚಿತ್ರ. ಗ್ರಹಗಳಿಗಿರುವ ರಾಶಿಗಳ ಆಧಿಪತ್ಯವನ್ನು ಸೂಚಿಸುವುದಕ್ಕಾಗಿ ರಾಶಿಗಳಲ್ಲಿ ಅಧಿಪತಿಗಳಾಗಿರುವ ಗ್ರಹಗಳ ಚಿತ್ರವನ್ನು ಕೊಟ್ಟಿದೆ.

ಈ ಗ್ರಹಗಳ ಸ್ವರೂಪವನ್ನು ವರ್ಣ ಆಕಾರ ಮೊದಲಾದವುಗಳಿಗನುಗುಣವಾಗಿ ಕೊಟ್ಟಿದೆ. ಕುಂಡಲಿಯ ಮೇಲ್ಭಾಗದ ಕೆಲವು ಕಡೆ ಮಾತ್ರ ಗ್ರಹದ ತ್ರಿಕೋಣ, ಶೂರ್ಪ, ಚದುರ ಆಕಾರಗಳನ್ನು ಗುರ್ತಿಸಿ ಅವುಗಳ ಪಕ್ಕದಲ್ಲಿ ಅಂಶಗಳನ್ನು ಸಂಖ್ಯೆಯಿಂದ ನಿರ್ದೇಶಿಸಿದೆ. ಯಾವ ರಾಶಿಯ ವಿಭಾಗದಲ್ಲಿ ಈ ನಿರ್ದೇಶವಿದೆಯೋ ಆ ರಾಶಿಯು ನಿರ್ದೇಶಿಸಿರುವ ಗ್ರಹದ ಉಚ್ಚರಾಶಿ. ಅಂಶಗಳು ಪರಮೋಚ್ಚ ಭಾಗಗಳು. ರಾಶಿಯ ಮೇಲ್ಭಾಗದ ವರ್ತುಳದಲ್ಲಿ ಆಯಾ ರಾಶಿಗೆ ಸಂಬಂಧಪಟ್ಟಂತೆ ಅಶ್ವಿನ್ಯಾದಿ ೨೭ ನಕ್ಷತ್ರಗಳ ವಿಭಾಗ ಮತ್ತು ಅವುಗಳಲ್ಲಿ ಒಂದೊಂದರಲ್ಲೂ ಇರುವ ನಕ್ಷತ್ರಗಳ ಸಂಖ್ಯೆ, ಒಟ್ಟಿನಲ್ಲಿ ಈ ನಕ್ಷತ್ರಗಳೆಲ್ಲ ಸೇರಿ ನಮ್ಮ ಕಣ್ಣಿಗೆ ಕಾಣುವ ಸ್ವರೂಪ ಇವುಗಳನ್ನು ಕೊಟ್ಟಿದೆ. ಅದರ ಮೇಲ್ಭಾಗದ ವರ್ತುಲಗಳಲ್ಲಿ ರಾಶಿಗಳ ದ್ರೇಕ್ಕಾಣ ಮತ್ತು ನವಾಂಶ ವಿಭಾಗಗಳನ್ನು ಚಿತ್ರಿಸಿದೆ. ಇದರ ಮೇಲೆ ಬಲಪಾರ್ಶ್ವದ ಮೂಲೆಯಲ್ಲಿ ಜ್ಯೋತಿಸ್ಸಿದ್ಧಾಂತ ಗ್ರಂಥಗಳಲ್ಲಿರುವಂತೆ ಗ್ರಹಗಳು ಮೇಲೆಮೇಲೆ ಇರುವ ಕ್ರಮ, ಕೊನೆಯಲ್ಲಿ ನಕ್ಷತ್ರ ಮಂಡಲವನ್ನು ಸೂಚಿಸುವುದಕ್ಕಾಗಿ ಸಪ್ತರ್ಷಿಗಳು ಇರುವ ಕ್ರಮದ ಚಿತ್ರವನ್ನೂ ಸೂಚಿಸಿದೆ. ಗ್ರಹಗಳ ಪಕ್ಕದಲ್ಲಿ ಕಣ್ಣಿನ ಆಕಾರವನ್ನು ಬರೆದು ಅದರ ಪಕ್ಕದಲ್ಲಿ ಕೊಟ್ಟಿರುವ ಸಂಖ್ಯೆ ಆಯಾ ಗ್ರಹಗಳ ದೃಷ್ಟ್ಯಂಶಗಳನ್ನು ಸೂಚಿಸುತ್ತದೆ.

ಒಟ್ಟಿನಲ್ಲಿ ಒಮ್ಮೆ ನೋಡುವುದರಿಂದಲೇ ಜ್ಯೋತಿಶ್ಶಾಸ್ತ್ರಕ್ಕೆ ಸಂಬಂಧಪಟ್ಟ ಹಲವು ಮುಖ್ಯವಾದ ಮತ್ತು ಅವಶ್ಯಕವಾದ ವಿಚಾರಗಳು ಸುಲಭವಾಗಿ ತಿಳಿಯುವಂತೆ ಈ ಚಿತ್ರವನ್ನು ಅಳವಡಿಸಲಾಗಿದೆ.

ಎಸ್. ಎನ್. ಕೃಷ್ಣಜೋಯಿಸ್.

| ಇರುವುದು | ಇರಬೇಕಾದದ್ದು | | ಪುಟ | ಪಙ್ತ |
|---|---|---|---|---|
| ತೂರ್ಯರ್ಣ | ತುರ್ಯರ್ಣ | .... | ೧೨೧ | ೭, ೨೫ |
| ಗ | ಗ್ರ | .... | ೧೩೦ | ೬ |
| . ದಶಾ | ತ್ರಿದಶಾ | .... | ೧೬೭ | ೭ |
| . ದ | ದಿದ | .... | ೧೬೭ | ೮ |
| . ದೊ | ಗದೊ | .... | ೧೬೭ | ೯ |
| ನಾಗ್ರ್ರಹ | ನಾ ಗ್ರ್ರಹ | .... | ೧೬೭ | ೧೦ |
| ವ್ರ್ಯಗ | ಮೃಗ | .... | ೧೮೪ | ೪ |
| ಸಮಸಗೇ | ಸಮಸ್ತಗೇ | .... | ೧೯೪ | ೪ |
| ಶತ್ರ | ಶತ್ರು | .... | ೧೯೪ | ೨೩ |
| ಸುಹೃತನಯು | ಸುಹೃತ್ತನಯು | .... | ೧೯೫ | ೨ |
| ಊರಿ | ಸೂರಿ | .... | ೨೧೫ | ೪ |
| ಪ್ರವಿಣ | ಪ್ರವಣ | .... | ೨೨೩ | ೧೪ |
| ಶಿಲ್ಪನಿಪುಣ | ಎಲ್ಲ ಶಿಲ್ಪಗಳಲ್ಲಿ ನಿಪುಣ | .... | ೨೨೩ | ೩೧ |
| ವಂಧ್ಯ | ವಂಧ್ಯಾ | ... | ೨೩೦ | ೫ |
| *ಅರಿಷ್ಟಯೋಗ | ಅನಿಷ್ಟಯೋಗ | .... | ೨೨೭<br>೨೪೪ | ೨<br>೧೩ |
| ಮಜ್ಜಸಖ | ಮಬ್ಜಸಖ | .... | ೨೭೬ | ೯ |
| ವ . . ಂದು | ಮಾದಂದು | . | ೨೮೨ | ೬ |
| ನೆಗಟ್ದಿರ್ಪರ್ಪ | ನೆಗಟ್ಟ ತ್ತಿರ್ಪ | .... | ೩೦೧ | ೯ |
| ಲ. ಆ. ೨ ಶ್ಲೋ ೨೩ | ಲ. ಆ. ೧ ಶ್ಲೋ ೨೩ | .... | ೩೧೧ | ೧೦ |

*ಇದರಂತೆ ೨೨೯, ೨೩೧, ೨೩೩, ೨೩೫, ೨೩೭, ೨೩೯, ೨೪೧, ೨೪೩, ೨೪೫, ಈ ಪುಟಗಳ ಮೇಲ್ಭಾಗದ ತಲೆಬರಹದಲ್ಲಿ 'ಅರಿಷ್ಟಯೋಗ ಪ್ರಕರಣಂ' ಎಂದಿರುವುದನ್ನು 'ಅನಿಷ್ಟಯೋಗ ಪ್ರಕರಣಂ' ಎಂದು ತಿದ್ದಿ ಓದಿಕೊಳ್ಳುವುದು.

॥ ಶ್ರೀಃ ॥

ಶ್ರೀಧರಾಚಾರ್ಯ ವಿರಚಿತಂ

# ಜಾತಕತಿಲಕಂ

---

## ಪ್ರಥಮಾಧಿಕಾರಂ

### ಸಂಜ್ಞಾಪ್ರಕರಣಂ

#### ಪೀಠಿಕೆ

ಶ್ರೀಮದನಂತ ಚತುಷ್ಟಯ
ಧಾಮಂ ಜಿತದುರಿತಸಮಿತಿ ನಿಶ್ಶ್ರೇಯಸಲ
ಕ್ಷ್ಮೀಮಹಿತಂ ತ್ರೈಲೋಕ್ಯ
ಸ್ವಾಮಿ ಜಿನಂ ಮಾಳ್ಕೆ ನಮಗೆ ಶಾಶ್ವತಪದಮಂ ೧

*ಶ್ರುತಮೂರ್ತಿಯಾಗಿಯುಂ ರುಚಿ
ರತನು ಕರಂ ಬಿಳಿಯಳಾಗಿಯುಂ ಚತುರವಚೋ
ನ್ವಿತೆ ಬಾಯ್ವಾಯೊಳ್ ನೆಲಸಿಯು
ಮತಿಶುಚಿ ವಾಗ್ದೇವಿ ಕೂರ್ತು ಮಾಳ್ಕೆಮಗಱಿವಂ ೨

---

॥ ಶ್ರೀಃ ॥

ವಿಜಯಮಕ್ಕೆ ಸಹಸ್ರಕಿರಣಂಗೆ

ಆವನುದಿಸಲಸ್ತಮಿಸಲ್
ದೇವತೆಗಳ ಮಕುಟರತ್ನ ಭೂಷಿತಚರಣಂ
ದೇವರೊಡೆಯನುಂ ಮಣಿವಾ
ತಾವರೆಗೆಳೆಯಂ ಬೆಳಗಲಿ ತ್ರಿಜಗಮನನಿಶಂ

ಈ ಗ್ರಂಥದ ಮೊದಲ ೧೮ ಪದ್ಯಗಳಲ್ಲಿ ಜಿನಸ್ತುತಿ ಸರಸ್ವತೀಸ್ತುತಿ ಮತ್ತು ಕವಿಕಾವ್ಯಪ್ರಾಶಸ್ತ್ಯ ವಿಚಾರಗಳಿವೆ. ೧೯ನೇ ಪದ್ಯದಿಂದ ಶಾಸ್ತ್ರ ವಿಷಯವು ಪ್ರಾರಂಭವಾಗುವುದರಿಂದ ಅಲ್ಲಿಂದ ಮುಂದಕ್ಕೆ ಸರಳಗದ್ಯದಲ್ಲಿ ಟೀಕನ್ನು ಕೊಟ್ಟಿದೆ.

---

* (ಕ) ಪ್ರತಿಯಲ್ಲಿ ೨ನೆಯ ಪದ್ಯದಿಂದ ೫ನೆಯ ಪದ್ಯ ೩ನೆಯ ಸಾಲು ಪೂರ್ತಿ ಗ್ರಂಥವಿಲ್ಲ.

ಧ್ಯಾಂತೇಂ ಜಗತ್ಪ್ರಸಿದ್ಧ ಚಿ
ರಂತನ ನೂತನ ಮಹಾಕವೀಶ್ವರಕೃತಿ ಶಾ
ಸ್ತ್ರಾಂತರ ಸ್ಮಾರತೆ ನಿಲ್ಕೆ ನಿ
ರಂತರಮಸ್ಮತ್ಪ್ರಣೀತ ಜಾತಕ¹ಕೃತಿ¹ಯೊಳ್

ಉದಧಿವೃತೋರ್ವಿಗೆ ಮುಖಮೆನಿ
ಸಿದ ಬೆಳುವಲನಾಡ್ಗೆ ತಿಲಕದಂದದ ನಱುಗುಂ
ದದ ವಿಪ್ರಕುಲೋತ್ತಮನ
ಧ್ಯುದಿತಯಶಂ ಶ್ರೀಧರಂ ವಚೋವಿಭವಧರಂ

ಅನವದ್ಯಂ ಕವಿತಾಗುಣಾರ್ಣವನಿಳಾದೇವಾನ್ವಯಾಬ್ಧ್ಯಂಬುಜಾ
ರಿನಿಭಂ ಪ್ರೌಢವಿಲಾಸಿನೀಮನಸಿಜಂ ಶ್ರೀಶೀಲಭದ್ರಂ ದ್ವಿಷ
ಜ್ಜನ*ದುರ್ಧಾರಗಜಾಂಕುಶಂ ಸುಜನರತ್ನಂ ತಾನೆನಲ್ಕೇಂ ²[ಕೃತಾ]²
ರ್ಥನೊ ಕರ್ಣಾಟಕವೀಂದ್ರ ಸದ್ಗುಣಗ³ಣಂ ಪ್ರಜ್ಞಾ³ಧರಂ ಶ್ರೀಧರಂ ೫

†ಧರಣೀಸ್ತುತಾರ್ಯಭಟನಂ
ನಿರತಿಶಯೋಜ್ಜ್ವಲಯಶಃಪ್ರ⁴ಕೋ⁴ರಕನಂ ಶ್ರೀ
ಕರಣಮೆನೆ ನೆಗೞ್ದನಂ ಕರ
ಣರತ[ನ]ಮೆಂಬುದು ಜಗಜ್ಜನಂ ಶ್ರೀಧರನಂ ೬

ಬರೆಪಂ ಚಿತ್ರಿತಚಿತ್ರದಂತೆ ಮೃದುರೇಖಾಮಂಡನಾಡಂಬರ
ಸ್ಫುರಿತಂ ಬಾಜನೆ ಪನ್ನಗಧ್ವಜಮಹೀಭೃತ್ಸೇನೆವೊಲ್ ಕರ್ಣಸೌಂ
ದರಮುದ್ಯತ್ಕವಿತಾಗುಣಂ ಗಣಿಕೆವೊಲ್ ಭಾವಾದ್ಯಲಂಕಾರ ಬಂ
ಧುರಮೆಂಬುನ್ನತಿಯಿಂ ಜಗಕ್ಕೆ ನೆಗೞ್ದಂ ವಾಕ್ಶ್ರೀಧರಂ ಶ್ರೀಧರಂ ೭

ಅಂಕದ ಕಬ್ಬಿಗರ್ ಕೃ⁻ಗಳಂ ಮೆಚ್ಚುವರ್ ಪರಿಪೂರ್ಣವರ್ಣ[ನಾ]
ಲಂಕರಣಂಗಳಿಂದಮದು ಚೋದ್ಯಮೆ ಜೋಯಿಸಗಬ್ಬ ⁵[ಮೆಚ್ಚುದೆ
ಲ್ಲಂ]⁵ ಕವಿಮಾರ್ಗದುರ್ಗಮದೞೊಳ್ ⁶ರಸ⁶ಮಂ ಪಡೆ⁷ವಲ್ಲಿ ಪೊಣ್ಬು⁷ ನೀ
ರಂ ಕಡೆವಲ್ಲಿ ಬೆಣ್ಣೆಗೊಳ[ಲ್ವ]ಂತೆವೊಲಕ್ಕುಮದೇಂ ಸುಸಾಧ್ಯಮೋ ೮

ಸ್ವರುಚಿವಿರಚನೆಯೊಳೋರೊ
ರ್ವರ್ ರಂಜಿಸುಂ ಕುಕವಿಯಾದೊಡಂ ಸಂತತಮಾ
ತ್ಮರುಚಿವ್ಯಪೇತ ಶಾಸ್ತ್ರಾ
ರ್ಥರಚನೆಯೊಳ್ ಸುಕವಿಯಲ್ಲದೊಂ ರಂಜಿಪನೇ ೯

ವಿಬುಧಕದಂಬಕಮಱಿಗುಂ
ವಿಬುಧಪರಿಶ್ರಮಮನಸುಖದಿಂದೆ ಮಗಂಬೆ
ತ್ತ ಬಲೆಯಱಿವಂದದಿಂ ಬಂ
ಜೆ ಬೇನೆಯಱಿದಪಳೆ ಕುಕವಿಯೇನಱಿದಪನೇ ೧೦

¹ ಕ್ರಿಯ(ಗ). ² ಕ್ರಿಯಾ (ಗ). ³ ಣಾ ಪಜ್ಞಾ (ಕ), ಣಾ ಸಂಜ್ಞಾ (ಗ). ⁴ ಕಾ (ಕ)
⁵ ಮಚ್ಚನೆನಂ (ಕ). ⁶ ಸರ (ಕ). ⁷ ವಲ್ಮಂದು ಪೂಣ್ದ (ಕ). *'ದುರ್ವಾರ' ಎಂದು ಕನ್ನಡ ಕವಿ ಚರಿತೆಯಲ್ಲಿದೆ. † 'ಗ' ಪ್ರತಿಯಲ್ಲಿ ೭ನೆಯ ಪದ್ಯದ ಕೊನೆಯ ಸಾಲಿನಿಂದ ೧೦ನೆಯ ಪದ್ಯ ಪೂರ್ತಿ ಗ್ರಂಥವಿಲ್ಲ.

ಶ್ರುತಿಸುಂದರಮೆನೆ ಝಟಿತಿ
ಪ್ರತೀತಕಳಮೆನೆ ಮನೋಜ್ಞಮೆನೆ ದೋಷವಿವ
ರ್ಜಿತಮೆನೆ ವಿರಚಿಸಿ ಮೆಱೆವುದು
ಕೃತಿಯಂ ಕೃತಿ[1]ಕಲಿಗೆ[1] ಶಾಸ್ತ್ರಕವಿತಾಚತುರಂ ೧೧

ಪದಪೂರಣಮನಣಂ ಪುಗಿ
ಸದೆ ಕುದಿದು ವ್ಯಥಾಕ್ಷರಂಗಳಂ ಪ್ರಾಸದೊಳಿ
ಕ್ಕದೆ ಶಾಸ್ತ್ರದರ್ಥಮಂ ಬಿಸು
ಡದೆ ಪೂಣ್ಕೆಯಿನೋದುವೇಳ್ದೊಡಾರ್ ಮೆಚ್ಚರಿದಂ ೧೨

ಜೋಯಿಸಗಬ್ಬಮಿದೆನ್ನದೆ
ಚೀಯೆನ್ನದೆ ಸಾರಮೆನ್ನರೆನ್ನರುಮದಱಿಂ
ಜೀಯೆನೆ ತಜ್ಞರ್ ವಿಬುಧಾ
ದೇಯಮಿದೆನೆ ಪೇಳ್ದು ಮೆಱೆವುದ[2]ಱಿವಂ ಮೆಱೆವೆಂ[2] ೧೩

ಸೂಚಿಸಿದೆಂ ಶಾಸ್ತ್ರಾರ್ಥಮ
[3]ನೌಚಿತ್ಯದಿ[3]ನಱಿದುಕೊಳುವುದೆನ್ನದೆ ಮುನ್ನಂ
ಗೋಚರಮಾಗಲೊಡಂ ಹೃ
ದ್ಗೋಚರಮಪ್ಪಂತಿರೋದಿ ಪೇಳ್ವುದು ತ[4]ಜ್ಞಂ[4] ೧೪

ತ್ರಿಜಗತ್ಸಾರಂ ಭಾವಿಪೊ
ಡೆ ಜೋಯಿಸಂ ಸಾರಮಲ್ಲಿ ಜಾತಕಮದು ವಿ
ಶ್ವಜನಾನಂದಿತಜೋತಿಷ
[5]ವು[5] ಜಾತಕಮೆನಿಪ್ಪ ಸೂಕ್ತಿಸಾಧಕಮದಱಿಂ ೧೫

ಮುನ್ನಾರು[ಂ] ಜಾತಕಮಂ
ಕನ್ನಡದಿಂ ವ್ಯಕ್ತಮ[6]ಗಿ[6] ಪೇಳ್ದನ್ವಿತರಿ
ಲ್ಲಿನ್ನುಂ ಪೇಳ್ವವರಿಲ್ಲು
ತ್ಪನ್ನಂ ಶ್ರೀಧರನೆ ಪೇಳ್ಗುಮೆಂದಾದರದಿಂ ೧೬

ಸಕಲಬುಧನಿವಹಮಾ ತೆಱ
ದಿ ಕೊಂಡುಕೊನೆದೊಳ್ಪುವಡೆಯೆ ನೀಂ ಪೇಳ್ವುದು ಜಾ
ತಕತಿಲಕಮನೆನೆ ಪಲರ್ಗಱಿ
ಯೆ ಕನ್ನಡದಿನೆಸೆಯೆ ಪೇೞಲುದ್ಯತನಾ[7]ದೆಂ[7] ೧೭

ಪಲವುಂ ಶಾಸ್ತ್ರಂಗಳೊಳಂ
ಪೞಿಂಕಮಂ ಬಿಸುಟು ಸಾರಮಂ ತೆಗೆದು ಬುಧಾ
ವಳಿಗೆ ತಿಳಿವಂತು ಜಾತಕ
ತಿಲಕಮನುದಿತ ಬುಧತಿಲಕಮಂ ವಿರಚಿಸುವೆಂ ೧೮

---

[1] ತತಿಗೆ (ಗ). [2] ಱಿಂದಂ ಮೆಱೆವಂ (ಗ). [3] ನೇ ಚಿತ್ರದಿ (ಕ). [4] ಜ್ಞಂ (ಕ).
[5] ವು (ಕ ಗ). [6] ಗೆ (ಕ). [7] ದಂ (ಕ ಗ).

(ಶಾಸ್ತ್ರಪ್ರಯೋಜನ)

ಭವಬದ್ಧ ಶುಭಾಶುಭ ಕ
ರ್ಮವಿಪಾಕದ ಫಲಮನಱಿಪುಗುಂ ಜ್ಯೋತಿಜ್ಞಾ
ನ[1]ವಿ[1]ದೆಂತೆನೆ ಕತ್ತಲೆಮನೆ
ಯ ವಸ್ತುವಂ ತೋರ್ಪ ಸೊಡರ ಬೆಳಗಿನ ತೆಱದಿಂ ೧೯

(ಕಾಲಪುರುಷನ ಅಂಗವಿಭಾಗ)

ಎಡೆಯುಡುಗದೆ ಕಾಲಾಂಗದೊ
ಳೆಡೆಗಳಜಾದಿಗೆ ಶಿರಂ ಮುಖಂ ತೋಳ್ ಹೃದಯಂ
ಪೊಡೆ ಕಟಿ [2]ಕಿಬ್ಬೊಡೆ ನಾಣೆಡೆ
ತೊಡೆ[2] ಮೊಣಕಾಲ್ ಜಂಘೆ ಪದವಿ[3]ವ[3]ಕ್ಕುಂ ಕ್ರಮದಿಂ ೨೦

(ರಾಶಿವರ್ಣ)

ತರದಿಂದಂ ರೋಹಿತ ಸಿತ
ಹರಿತ[ಂ] ಪಾಟ[4]ಳಿಮ ಪಾಂಡು ವೈಚಿತ್ರ್ಯ[4] ಸಿತೇ
ತರ ಕಾಂಚನ ಪಿಂಗಳ ಕ
[5]ರ್ಬುರ[5] ಬಭ್ರುಕ ಮಲಿನವರ್ಣಮಿವು ಗೃಹವರ್ಣಂ ೨೧

---

೧೯. ಜ್ಯೋತಿಜ್ಞಾನವು ಕತ್ತಲೆಮನೆಯಲ್ಲಿರುವ ವಸ್ತುವನ್ನು ತೋರಿಸುವ ದೀಪದ ಬೆಳಕಿನಂತೆ ಪೂರ್ವಜನ್ಮದಲ್ಲಿ ಮಾಡಿರುವ ಪುಣ್ಯ-ಪಾಪಕರ್ಮಗಳಿಂದ ಈ ಜನ್ಮದಲ್ಲಿ ಉಂಟಾಗುವ ಫಲವನ್ನು ತಿಳಿಸುತ್ತದೆ.

೨೦. ಕಾಲಪುರುಷನ ಅವಯವಗಳಲ್ಲಿ ಒಂದನ್ನೂ ಬಿಡದೆ ಮೇಷಾದಿ ರಾಶಿಗಳನ್ನು ಆತನ ಅಂಗಗಳನ್ನಾಗಿ ವಿಭಾಗಮಾಡಿದೆ. ಮೇಷ-ತಲೆ, ವೃಷಭ-ಮುಖ, ಮಿಥುನ-ತೋಳು, ಕರ್ಕಟಕ-ಎದೆ, ಸಿಂಹ-ಹೊಟ್ಟೆ, ಕನ್ಯಾ-ಸೊಂಟ, ತುಲಾ-ಕಿಬ್ಬೊಟ್ಟೆ, ವೃಶ್ಚಿಕ-ಗುಹ್ಯ, ಧನುಸ್ಸು-ತೊಡೆ, ಮಕರ-ಮೊಳಕಾಲು, ಕುಂಭ-ಕಣಕಾಲು, ಮೀನ-ಪಾದ; ಇವು ಕ್ರಮವಾಗಿ ಕಾಲಪುರುಷನ ಅಂಗಗಳು.

**ವಿಶೇಷವಿಚಾರ**—ಜನನಕಾಲದಲ್ಲಿ ಬಲಿಷ್ಠರಾದ ಶುಭಗ್ರಹಗಳಿರುವ ರಾಶಿಯ ಅಂಗವು ಜನಿಸಿದ ಶಿಶುವಿಗೆ ಪುಷ್ಟವಾಗಿರುತ್ತದೆ; ಕ್ರೂರಗ್ರಹಗಳಿರುವ ರಾಶಿಯ ಅಂಗವು ನ್ಯೂನವಾಗಿರುತ್ತದೆ; ಎಂದು ಈ ಅಂಗವಿಭಾಗದಿಂದ ಫಲವನ್ನು ತಿಳಿಯಬಹುದು.

೨೧. ಮೇಷ-ಕೆಂಪು, ವೃಷಭ-ಬಿಳುಪು, ಮಿಥುನ-ಗಿಳಿಹಸಿರು, ಕರ್ಕಟಕ-ಕೆಂಪುಮಿಶ್ರ ಬಿಳುಪು, ಸಿಂಹ-ಬಿಳುಪು ಕಪ್ಪುಮಿಶ್ರ (ಹೊಗೆಯ ಬಣ್ಣ), ಕನ್ಯಾ-

---

[1] ವ (ಗ). [2] ವಂ ಕಿಳ್ಬೊಡೆ ನೊಣ್ಬೊಡೆ (ಕ), ವಂ ಕೇಳ್ಬೊಡೆ ನುಣ್ಬೊಡೆ (ಗ). [3] ಯ (ಕ ಗ). [4] ಳ ಧೂಮ್ರ ಪಾಂ. ಚಿತ್ರ (ಗ). [5] ರ್ಪುರ (ಕ ಗ).

(ಪುರುಷ-ಸ್ತ್ರೀ-ಕ್ರೂರ-ಸೌಮ್ಯ ರಾಶಿಗಳು)

ಹರಿ ಮಿಥುನ ತುಲಾಜ ಧನು
ರ್ಧರ ಘಟಮಿವು ಪುರುಷರಾಶಿಗಳ್ ಕ್ರೂರಂಗಳ್
ತರುಣಿ ಮೃಗ ಕರ್ಕಟಕ ಶಾ
ಕ್ವರ ವೃಶ್ಚಿಕ ಝಷಮಿವಬಲೆಗಳ್ ಸೌಮ್ಯಂಗಳ್ ೨೨

(ಚರ-ಸ್ಥಿರ-ದ್ವಿಸ್ವಭಾವ ರಾಶಿಗಳು)

ಚರರಾಶಿ ಕುಳೀರ ತುಲಾ
ಧರ ಮೃಗ [1]ಮೇಷಂ[1] ಘಟೋಕ್ಷ ವೃಶ್ಚಿಕ ಸಿಂಹಂ
ಸ್ಥಿರರಾಶಿ ಧನು ಝಷಂ ಸುಂ
ದರಿ ಮಿಥುನಂ ದ್ವಿಸ್ವಭಾವರಾಶಿಗಳೆನಿಕುಂ ೨೩

(ರಾಶಿಗಳ ದಿಗ್ವಿಭಾಗ)

ಅಮರಾಸೆಯನಜ ಹರಿ ಧನು
ಯಮಾಸೆಯಂ ವೃಷಭ ಕನ್ಯಕಾ ಮಕರಂ ಪ
ಶ್ಚಿಮ[2]ಮಂ[2] ಮಿಥುನ ತುಳಾ ಕುಂ
ಭಮಾಳ್ಕುಮುದಗಾಸೆಯಂ ಕುಳೀರಾಳಿ ಝಷಂ ೨೪

---

ಚಿತ್ರಬಣ್ಣ (ಮಿಶ್ರಬಣ್ಣ), ತುಲಾ–ಕಪ್ಪು, ವೃಶ್ಚಿಕ–ಚಿನ್ನದ ಬಣ್ಣ, ಧನುಸ್ಸು–ಕಪಿಲ (ಸ್ವಲ್ಪಕಪ್ಪು), ಮಕರ–ಕಪಿಲ ಮಿಶ್ರವಾದ ಬಿಳುಪು, ಕುಂಭ–ಮಾಸಲು ಬಿಳುಪು, ಮೀನ–ಮೀನಿನ ಬಣ್ಣ ; ಇವು ಕ್ರಮವಾಗಿ ರಾಶಿಗಳ ಬಣ್ಣಗಳು.

ವಿ–ಇದರಿಂದ ಜಾತಕನ ಮತ್ತು ನಷ್ಟವಸ್ತುವಿನ ಬಣ್ಣವನ್ನು ತಿಳಿಯಬಹುದು.

೨೨. ಸಿಂಹ ಮಿಥುನ ತುಲಾ ಮೇಷ ಧನುಸ್ಸು ಕುಂಭ ಈ ಆರೂ ಪುರುಷರಾಶಿಗಳು ; ಇವು ಕ್ರೂರಗಳು. ಕನ್ಯಾ ಮಕರ ಕರ್ಕಟಕ ವೃಷಭ ವೃಶ್ಚಿಕ ಮೀನ ಈ ಆರೂ ಸ್ತ್ರೀರಾಶಿಗಳು ; ಇವು ಸೌಮ್ಯಗಳು.

೨೩. ಕರ್ಕಟಕ ತುಲಾ ಮಕರ ಮೇಷ ಇವು ಚರರಾಶಿಗಳು. ಕುಂಭ ವೃಷಭ ವೃಶ್ಚಿಕ ಸಿಂಹ ಇವು ಸ್ಥಿರರಾಶಿಗಳು. ಧನುಸ್ಸು ಮೀನ ಕನ್ಯಾ ಮಿಥುನ ಇವು ದ್ವಿಸ್ವಭಾವರಾಶಿಗಳು.

೨೪. ಮೇಷ ಸಿಂಹ ಧನುಸ್ಸು ಇವು ಪೂರ್ವದಿಕ್ಕಿಗೂ, ವೃಷಭ ಕನ್ಯಾ ಮಕರ ಇವು ದಕ್ಷಿಣದಿಕ್ಕಿಗೂ, ಮಿಥುನ ತುಲಾ ಕುಂಭ ಇವು ಪಶ್ಚಿಮದಿಕ್ಕಿಗೂ, ಕರ್ಕಟಕ ವೃಶ್ಚಿಕ ಮೀನ ಇವು ಉತ್ತರದಿಕ್ಕಿಗೂ ಸೇರಿರುವ ರಾಶಿಗಳು.

---

[1] ಕ್ರಿಯಕಂ (ಗ). [2] ಮಾ (ಕ), ಮಾಂ (ಗ).

(ರಾಶ್ಯಧಿಪತಿಗಳು)

ಶನಿ ಘಟ ಮೃಗಕ್ಕೆ ಗುರು ಝಷ
ಧನುಗೆ ಬುಧಂ ಮಿಥುನ ವಧುಗೆ ಶಶಿ ಕರ್ಕಿಗೆ ಭೌ
ಮನಜಾಳಿಗೆ ರವಿ ಹರಿಗುಶ
ನನುಕ್ಷತಾಳಿಗೆ ತದಂಶಕಕ್ಕಮಧೀಶರ್ ೨೫

(ನವಾಂಶಗಣನೆ)

*ಮೃಗಪತಿ ಮೇಷ ಚಾಪಧರರಾಶಿಗೆ ಮೇಷಗೃಹಾದಿ ಕನ್ಯಕಾ
ಮೃಗ ವೃಷಭಾಭಿಧಾನಥವನಕ್ಕೆ ಮೃಗಾದಿ ನೃಯುಗ್ಮ ಕುಂಭ ತೌ
ಳಿಗೆ ವಣಿಜಾದಿ ಕರ್ಕಿ ಶಫರಾಳಿಗೆ ಕರ್ಕಟಕಾದಿಯಾಗಿರಲ್
ಬಗೆದು ನಿಜಾಂಶಕಕ್ಕೆಣಿಸು ರಾಶ್ಯಧಿ[1]ಪಂ ಸಮವಾ[1] ನವಾಂಶದೊಳ್ ೨೬

---

೨೫. ಕುಂಭ–ಮಕರಗಳಿಗೆ ಶನಿ, ಮೀನ–ಧನುಸ್ಸುಗಳಿಗೆ ಗುರು, ಮಿಥುನ–ಕನ್ಯಾಗಳಿಗೆ ಬುಧ, ಕರ್ಕಟಕಕ್ಕೆ–ಚಂದ್ರ, ಮೇಷ–ವೃಶ್ಚಿಕಗಳಿಗೆ ಮಂಗಳ, ಸಿಂಹಕ್ಕೆ–ಸೂರ್ಯ, ವೃಷಭ–ತುಲಾಗಳಿಗೆ ಶುಕ್ರ ಇವರು ರಾಶ್ಯಧಿಪತಿಗಳು. ಈ ಹೆಸರಿನ ಅಂಶಗಳಿಗೂ ಈ ಗ್ರಹಗಳೇ ಅಧಿಪತಿಗಳು.

೨೬. ರಾಶಿಯ ಒಂಭತ್ತನೆಯ ಒಂದು ಭಾಗವೇ ನವಾಂಶ. ಸಿಂಹ ಮೇಷ ಧನುಸ್ಸು ಈ ರಾಶಿಗಳಿಗೆ ಮೇಷದಿಂದ, ಕನ್ಯಾ ಮಕರ ವೃಷಭ ಈ ರಾಶಿಗಳಿಗೆ ಮಕರದಿಂದ, ಮಿಥುನ ಕುಂಭ ತುಲಾ ಈ ರಾಶಿಗಳಿಗೆ ತುಲಾದಿಂದ, ಕರ್ಕಟಕ ಮೀನ ವೃಶ್ಚಿಕ ಈ ರಾಶಿಗಳಿಗೆ ಕರ್ಕಟಕದಿಂದ ಕ್ರಮವಾಗಿ ನವಾಂಶವನ್ನು ಎಣಿಸಲು ಆರಂಭಿಸಬೇಕು. ನವಾಂಶರಾಶಿಯ ಅಧಿಪತಿಯೇ ನವಾಂಶಕ್ಕೆ ಅಧಿಪತಿ.

## ನವಾಂಶ ಚಕ್ರ

| ರಾಶಿ | ೧ನೇ ನವಾಂಶ | ೨ನೇ ನವಾಂಶ | ೩ನೇ ನವಾಂಶ | ೪ನೇ ನವಾಂಶ | ೫ನೇ ನವಾಂಶ | ೬ನೇ ನವಾಂಶ | ೭ನೇ ನವಾಂಶ | ೮ನೇ ನವಾಂಶ | ೯ನೇ ನವಾಂಶ |
|---|---|---|---|---|---|---|---|---|---|
| ಮೇಷ, ಸಿಂಹ ಧನುಸ್ಸು | ಮೇಷ | ವೃಷಭ | ಮಿಥುನ | ಕರ್ಕಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನುಸ್ಸು |
| ವೃಷಭ, ಕನ್ಯಾ ಮಕರ | ಮಕರ | ಕುಂಭ | ಮೀನ | ಮೇಷ | ವೃಷಭ | ಮಿಥುನ | ಕರ್ಕಟಕ | ಸಿಂಹ | ಕನ್ಯಾ |
| ಮಿಥುನ, ತುಲಾ ಕುಂಭ | ತುಲಾ | ವೃಶ್ಚಿಕ | ಧನುಸ್ಸು | ಮಕರ | ಕುಂಭ | ಮೀನ | ಮೇಷ | ವೃಷಭ | ಮಿಥುನ |
| ಕರ್ಕಟಕ, ವೃಶ್ಚಿಕ, ಮೀನ | ಕರ್ಕಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನುಸ್ಸು | ಮಕರ | ಕುಂಭ | ಮೀನ |

* (ಕ) ಪ್ರತಿಯಲ್ಲಿ ೨೬ನೇ ಪದ್ಯವು ೨೭ನೆಯ ಪದ್ಯವಾದ ಮೇಲಿದೆ.

[1] ಪಂ ನವಮದಾ (ಕ), ಪಾಂಶವಮದಾ (ಗ).

(ದ್ವಾದಶಾಂಶ, ದ್ರೇಕ್ಕಾಣಾಧಿಪತಿಗಳು)

ಕ್ರಮದಿಂ ದ್ವಾದಶಭಾಗವೊಂದು ಗೃಹಕಕ್ಕುಂ ತದ್ಗೃಹದ್ವಾದಶಾಂ
ಶಮನಾಳ್ವರ್ ಸ್ವಗೃಹಾದಿ ರಾಶಿಪತಿಗಳ್ ದ್ರೇಕ್ಕಾಣಮುಂ ಮೂಱನಿ·
ಕ್ಕುಮಧೀಶಂ ಪ್ರಥಮಕ್ಕೆ ತತ್ಪ್ರಥಮರಾಶೀಶಂ ದ್ವಿತೀಯಕ್ಕೆ ಪಂ
ಚಮರಾಶೀಶ್ವರನಲ್ಲಿ ಮೂಱನೆಯದಕ್ಕಕ್ಕುಂ ನವರ್ಕ್ಷಾಧಿಪಂ ೨೭

(ಹೋರಾವಿಭಾಗ ಮತ್ತು ಅಧಿಪತಿಗಳು)

ಗೃಹವೆರಡು ಹೋರೆ ಸಮದಾ
ದಿಹೋರೆಗುಡುನಾಥನಿತರ ಹೋರೆಗೆ ಪಂಕೇ
ರುಹಮಿತ್ರನಸಮಗೃಹದಾ
ದಿಹೋರೆ[ಗಿನನಿತರಹೋರೆ]ಗುಡುಪತಿಯಧಿಪಂ ೨೮

---

ವಿ–ಮೇಷ ಸಿಂಹ ಧನುಸ್ಸು ಈ ರಾಶಿಗಳಲ್ಲಿ ಮಕರ ಕುಂಭ ಮೀನ ನವಾಂಶಗಳಿಲ್ಲ; ವೃಷಭ ಕನ್ಯಾ ಮಕರ ರಾಶಿಗಳಲ್ಲಿ ತುಲಾ ವೃಶ್ಚಿಕ ಧನುಸ್ಸು ಈ ನವಾಂಶಗಳಿಲ್ಲ. ಮಿಥುನ ತುಲಾ ಕುಂಭ ರಾಶಿಗಳಲ್ಲಿ ಕರ್ಕಟಕ ಸಿಂಹ ಕನ್ಯಾ ನವಾಂಶಗಳಿಲ್ಲ. ಕರ್ಕಟಕ ವೃಶ್ಚಿಕ ಮೀನರಾಶಿಗಳಲ್ಲಿ ಮೇಷ ವೃಷಭ ಮಿಥುನ ನವಾಂಶಗಳಿಲ್ಲ.

೨೭. ರಾಶಿಯ ಹನ್ನೆರಡನೆಯ ಒಂದು ಭಾಗವೇ ದ್ವಾದಶಾಂಶ. ದ್ವಾದಶಾಂಶವನ್ನು ತಮ್ಮತಮ್ಮ ರಾಶಿಯಿಂದಲೇ ಎಣಿಸಲು ಆರಂಭಿಸಬೇಕು. ದ್ವಾದಶಾಂಶ ರಾಶಿಯ ಅಧಿಪತಿಯೇ ಆ ದ್ವಾದಶಾಂಶಕ್ಕೆ ಅಧಿಪತಿ. ರಾಶಿಯ ಮೂರನೆಯ ಒಂದು ಭಾಗ ದ್ರೇಕ್ಕಾಣ. ಮೊದಲನೆಯ ದ್ರೇಕ್ಕಾಣಕ್ಕೆ ಆಯಾ ರಾಶ್ಯಧಿಪತಿ, ಎರಡನೆಯ ದ್ರೇಕ್ಕಾಣಕ್ಕೆ ಆ ರಾಶಿಯಿಂದ ಐದನೇ ರಾಶ್ಯಧಿಪತಿ, ಮೂರನೆಯ ದ್ರೇಕ್ಕಾಣಕ್ಕೆ ಆ ರಾಶಿಯಿಂದ ಒಂಭತ್ತನೇ ರಾಶ್ಯಧಿಪತಿ ಇವರು ಅಧಿಪತಿಗಳು.

**ಉದಾ**:–ದ್ವಾದಶಾಂಶಕ್ಕೆ-ಮೇಷರಾಶಿಯಲ್ಲಿ ಮೊದಲನೆಯ ದ್ವಾದಶಾಂಶ ಮೇಷ; ದ್ವಾದಶಾಂಶಾಧಿಪತಿ ಮಂಗಳ. ಕೊನೆಯ ದ್ವಾದಶಾಂಶ ಮೀನ; ಅಧಿಪತಿ–ಗುರು. ವೃಷಭರಾಶಿಯಲ್ಲಿ ಮೊದಲನೆಯ ದ್ವಾದಶಾಂಶ ವೃಷಭ; ಅಧಿಪತಿ–ಶುಕ್ರ. ಕೊನೆಯ ದ್ವಾದಶಾಂಶ–ಮೇಷ; ಅಧಿಪತಿ–ಕುಜ.

ದ್ರೇಕ್ಕಾಣಕ್ಕೆ—ಮೇಷರಾಶಿಯಲ್ಲಿ ಮೊದಲನೆಯ ದ್ರೇಕ್ಕಾಣ ಮೇಷ; ಅಧಿಪತಿ–ಅಂಗಾರಕ. ಎರಡನೆಯ ದ್ರೇಕ್ಕಾಣ ಐದನೇ ರಾಶಿ–ಸಿಂಹ; ಅಧಿಪತಿ–ಸೂರ್ಯ. ಮೂರನೆಯ ದ್ರೇಕ್ಕಾಣ ಒಂಭತ್ತನೆಯ ರಾಶಿ–ಧನುಸ್ಸು; ಅಧಿಪತಿ–ಗುರು.

೨೮. ಒಂದು ರಾಶಿಗೆ ಎರಡು ಹೋರೆ. ಸಮರಾಶಿಯ [ವೃಷಭ ಕರ್ಕಟಕ ಕನ್ಯಾ ವೃಶ್ಚಿಕ ಮಕರ ಮೀನ ಇವು ಸಮರಾಶಿಗಳು] ಮೊದಲ ಹೋರೆಗೆ ಅಧಿಪತಿ ಚಂದ್ರ. ಎರಡನೆಯ ಹೋರೆಗೆ ಅಧಿಪತಿ ಸೂರ್ಯ. ಬೆಸರಾಶಿಯ [ಮೇಷ ಮಿಥುನ ಸಿಂಹ ತುಲಾ ಧನುಸ್ಸು ಕುಂಭ ಇವು ಬೆಸರಾಶಿಗಳು] ಮೊದಲ ಹೋರೆಗೆ ಅಧಿಪತಿ ಸೂರ್ಯ; ಎರಡನೆಯ ಹೋರೆಗೆ ಅಧಿಪತಿ ಚಂದ್ರ.

(ತ್ರಿಂಶಾಂಶಾಧಿಪತಿಗಳು)

ಕುಜನೈದಂ ಶನಿಯೈದನೆಂಟನಮರೇಂದ್ರಾಮಾತ್ಯನೇಟಂ ಶಶಾಂ
ಕಜನೈದಂ ಭೃಗುನಂದನಂ ವಿಷಮದೊಳ್ ದೈತ್ಯೇಜ್ಯನೈದಂ ಹಿಮಾಂ
ಶುಜನೇಟಂ ಗುರುವೆಂಟನರ್ಕತನಯಂ ತಾನೈದನೈದಂ ಸಮಂ
ಕುಜನಾಳ್ಗುಂ ಸಮದೊಳ್ ಯಥಾಕ್ರಮದಿ ರಾಶಿತ್ರಿಂಶದಂಶಂಗಳೊಳ್ ೨೯

(ಚತುಷ್ಪದ.ಮನುಷ್ಯ.ಕೀಟ.ಜಲಚರರಾಶಿಗಳು)

ಹರಿ ವೃಷ ಮೇಷ ಚಾಪ ಮಕರಾದಿಮಭಾಗಗೃಹಂ ಚತುಷ್ಪದೋ
ತ್ಕರಮಬಳಾ ತುಳಾ ಮಿಥುನ ಮಸ್ತಕ ಹೀನಘಟಂ ಮನುಷ್ಯಮಂ
ದಿರಮನಿಮೇಷ [1][ಕರ್ಕಿ][1]ಮಕರಾಪರಭಾಗನಿಕೇತನಂ ಪಯ
ಶ್ಚರತತಿ ಕೀಟಮೆಂಬುದದು ಕರ್ಕಿ ಸರೀಸೃಪಜಾತಿ ವೃಶ್ಚಿಕಂ ೩೦

---

೨೯. ರಾಶಿಯ ಮೂವತ್ತನೆಯ ಒಂದು ಭಾಗವೇ ತ್ರಿಂಶಾಂಶ. ಬೆಸರಾಶಿಯಲ್ಲಿ ಕ್ರಮವಾಗಿ ಕುಜ ೫, ಶನಿ ೫, ಗುರು ೮, ಬುಧ ೭, ಶುಕ್ರ ೫ ಈ ತ್ರಿಂಶಾಂಶ ಭಾಗಗಳಿಗೆ ಅಧಿಪತಿಗಳು. ಸಮರಾಶಿಯಲ್ಲಿ ಕ್ರಮವಾಗಿ ಶುಕ್ರ ೫, ಬುಧ ೭, ಗುರು ೮, ಶನಿ ೫, ಕುಜ ೫ ಈ ತ್ರಿಂಶಾಂಶ ಭಾಗಗಳಿಗೆ ಅಧಿಪತಿಗಳು.

ವಿ—ಹೋರಾ ವಿಭಾಗದಲ್ಲಿ ರವಿಚಂದ್ರರಿಗೆ ಮಾತ್ರ ಆಧಿಪತ್ಯ. ತ್ರಿಂಶಾಂಶ ವಿಭಾಗದಲ್ಲಿ ಕುಜಾದಿ ಐದು ತಾರಾಗ್ರಹಗಳಿಗೆ ಮಾತ್ರ ಆಧಿಪತ್ಯ.

೩೦. ಸಿಂಹ ವೃಷಭ ಮೇಷ ಧನುಸ್ಸು (ಉತ್ತರಾರ್ಧ) ಮಕರ ಪೂರ್ವಾರ್ಧ ಇವು ಚತುಷ್ಪದರಾಶಿಗಳು. ಕನ್ಯಾ ತುಲಾ ಮಿಥುನ ಧನುಸ್ಸು (ಪೂರ್ವಾರ್ಧ) ಕುಂಭ ಇವು ನರರಾಶಿಗಳು. ಮೀನ ಕರ್ಕಟಕ ಮಕರ ಉತ್ತರಾರ್ಧ ಇವು ಜಲರಾಶಿಗಳು. ಕರ್ಕಟಕ—ಕೀಟರಾಶಿ, ವೃಶ್ಚಿಕ—ಸರೀಸೃಪರಾಶಿ.

ವಿ—ಮಸ್ತಕ ಎಂದರೆ ತಲೆ. ಧನುಸ್ಸಿನ ಪೂರ್ವಾರ್ಧವು ಮನುಷ್ಯನ ತಲೆ. ಉತ್ತರಾರ್ಧವು ಕುದುರೆಯ ಶರೀರ. ಆದುದರಿಂದಲೇ ಧನುಸ್ಸಿನ ಪೂರ್ವಾರ್ಧ ನರರಾಶಿ, ಉತ್ತರಾರ್ಧ ಚತುಷ್ಪದರಾಶಿ. ಶ್ರೀ ವರಾಹಮಿಹಿರಾಚಾರ್ಯರು ಲಘುಜಾತಕಗ್ರಂಥದಲ್ಲಿ "ಕೀಟಃ ಕರ್ಕಟರಾಶಿಃ ಸರೀಸೃಪೋ ವೃಶ್ಚಿಕಃ ಕಥಿತಃ" ಎಂದು ಹೇಳಿರುವಂತೆ ಶ್ರೀಧರಾಚಾರ್ಯರೂ "ಕೀಟಮೆಂಬುದದು ಕರ್ಕಿ ಸರೀಸೃಪಜಾತಿ ವೃಶ್ಚಿಕಂ" ಎಂದು ಹೇಳಿರುತ್ತಾರೆ. ಆದರೆ ಲಘುಜಾತಕ ಗ್ರಂಥವ್ಯಾಖ್ಯಾನಕಾರರಾದ ಭಟ್ಟೋತ್ಪಲರು "ಕೀಟೋ—ವೃಶ್ಚಿಕಃ" ಎಂದು ವ್ಯಾಖ್ಯಾನಮಾಡಿರುತ್ತಾರಲ್ಲದೆ ಇತರ ಜ್ಯೋತಿಷ ಫಲಗ್ರಂಥಗಳಲ್ಲೂ ಇದೇ ಅಭಿಪ್ರಾಯವು ಕಂಡುಬರುತ್ತದೆ.

---

[1] ಕುಂಭ (ಕ ಗ)

(ರಾಶಿಗಳ ದಿಕ್ಕು ಮತ್ತು ಕಾಲಬಲ)

ಸುರಪತಿ [1]ಕಾಷ್ಠದೊಳ್[1] ನರಗೃಹಂ ಯಮದಿಙ್ಮುಖದೊಳ್ ಚತುಷ್ಪದಂ
ವರುಣದಿಶಾಂತರಾಳದೊಳೆ ಕೀಟಗೃಹಂ ಧನದಾಸೆಯೊಳ್ ಪಯ
ಶ್ಚರಗೃಹಮಲ್ಲಿ ಕೀಟಗೃಹಮಂತದು ಸಂಜೆಗಳೊಳ್ ಚತುಷ್ಪದೋ
ತ್ಕರಮಿರುಳೊಳ್ ಮನುಷ್ಯಭವನಂ ಪಗಲೊಳ್ ಬಳವಂತಮಾವಗಂ ೩೧

---

ವರಾಹಮಿಹಿರಾಚಾರ್ಯರು ಬೃಹಜ್ಜಾತಕದಲ್ಲಿ "ಕಂಟಕ ಕೇಂದ್ರ ಚತುಷ್ಟಯ ಸಂಜ್ಞಾಃ ಸಪ್ತಮ ಲಗ್ನ ಚತುರ್ಥ ಖಭಾನಾಂ । ತೇಷು ಯಥಾಭಿಹಿತೇಷು ಬಲಾಢ್ಯಾಃ ಕೀಟನರಾಂಬುಚರಾಃ ಪಶವಶ್ಚ ॥" ಎಂದು ಮಾತ್ರ ಹೇಳಿರುವರಲ್ಲದೆ ಕೀಟರಾಶಿಯು ಯಾವುದೆನ್ನುವುದನ್ನು ಆ ಗ್ರಂಥದಲ್ಲಿ ತಿಳಿಸಿಲ್ಲ. ಲಘುಜಾತಕ ಗ್ರಂಥದಲ್ಲಿರುವಂತೆ ಕೀಟವೆಂದರೆ ಕರ್ಕಟಕರಾಶಿ ಎನ್ನುವುದೇ ಆಚಾರ್ಯರ ಅಭಿಪ್ರಾಯ. ಭಟ್ಟೋತ್ಪಲರೇ ಲಘುಜಾತಕದ ಅರಿಷ್ಟ ಪ್ರಕರಣದಲ್ಲಿ ನಾಲ್ಕನೆಯ ಶ್ಲೋಕ ವ್ಯಾಖ್ಯಾನ ಮಾಡುವಾಗ 'ಕೀಟಭೋದಯೇ' ಎನ್ನುವುದಕ್ಕೆ 'ವೃಶ್ಚಿಕ ಕರ್ಕಟಕಯೋರನ್ಯತರೇ ಲಗ್ನೇ ಚ' ಎಂದು ವ್ಯಾಖ್ಯಾನ ಮಾಡಿರುತ್ತಾರೆ; ಅಲ್ಲದೆ ಬೃಹಜ್ಜಾತಕದ ಅರಿಷ್ಟಾಧ್ಯಾಯದ ೨ನೇ ಶ್ಲೋಕದ ವ್ಯಾಖ್ಯಾನದಲ್ಲೂ "ಕೀಟಲಗ್ನೇ—ವೃಶ್ಚಿಕರಾಶಾವುದಯೇ ಕರ್ಕಟಕೇ ಚೋದಯಸ್ಥಿತೇ" ಎಂದು ವ್ಯಾಖ್ಯಾನಮಾಡಿರುತ್ತಾರೆ. ಆದಕಾರಣ ಕೀಟವೆಂದರೆ ವೃಶ್ಚಿಕ ಕರ್ಕಟಕ ರಾಶಿಗಳೆರಡಕ್ಕೂ ಸಂಜ್ಞೆ.

೩೧. ಮನುಷ್ಯರಾಶಿಗಳು ಪೂರ್ವದಿಕ್ಕಿನಲ್ಲೂ, ಚತುಷ್ಪದರಾಶಿಗಳು ದಕ್ಷಿಣದಿಕ್ಕಿನಲ್ಲೂ, ಕೀಟರಾಶಿ ಪಶ್ಚಿಮದಿಕ್ಕಿನಲ್ಲೂ, ಜಲರಾಶಿಗಳು ಉತ್ತರದಿಕ್ಕಿನಲ್ಲೂ ಬಲಿಷ್ಠಗಳು. ವೃಶ್ಚಿಕರಾಶಿಯು ಸಂಧ್ಯಾಕಾಲದಲ್ಲೂ, ಚತುಷ್ಪದರಾಶಿಗಳು ರಾತ್ರಿಯಲ್ಲೂ, ನರರಾಶಿಗಳು ಹಗಲಿನಲ್ಲೂ ಬಲಿಷ್ಠಗಳು.

ವಿ—ಪೂರ್ವದಿಕ್ಕು—ಲಗ್ನರಾಶಿ, ದಕ್ಷಿಣದಿಕ್ಕು—ಲಗ್ನದಿಂದ ನಾಲ್ಕನೇ ರಾಶಿ, ಪಶ್ಚಿಮ ದಿಕ್ಕು—ಲಗ್ನದಿಂದ ಏಳನೇ ರಾಶಿ, ಉತ್ತರದಿಕ್ಕು—ಲಗ್ನದಿಂದ ಹತ್ತನೇ ರಾಶಿ ಎಂದು ತಿಳಿಯಬೇಕು.

ಈ ಪದ್ಯದಲ್ಲಿರುವ 'ಕೀಟಗೃಹ' ಎನ್ನುವುದು ವೃಶ್ಚಿಕರಾಶಿ. ಕರ್ಕಟಕ ರಾಶಿಯು ಜಲಚರರಾಶಿಗಳಲ್ಲಿ ಸೇರಿರುವುದರಿಂದ ಅದನ್ನು ಬಿಟ್ಟು ವೃಶ್ಚಿಕ ರಾಶಿಯನ್ನು ಮಾತ್ರ ತೆಗೆದುಕೊಂಡಿದೆ.

ಜಲಚರರಾಶಿಗಳು ಯಾವ ಕಾಲದಲ್ಲಿ ಬಲಿಷ್ಠಗಳೆನ್ನುವ ವಿಚಾರ ಈ ಪದ್ಯದಲ್ಲಿಲ್ಲ. "ಜಲಚರ ರಾಶಯೋಽಪಿ ಕೀಟಗ್ರಹಣೇನ ಗೃಹ್ಯಂತೇ" ಎಂದು ಭಟ್ಟೋತ್ಪಲರು ಹೇಳಿರುವಂತೆ ಜಲಚರ ರಾಶಿಗಳೂ ಕೀಟರಾಶಿಯಂತೆ ಸಂಧ್ಯಾಕಾಲದಲ್ಲಿ ಬಲಿಷ್ಠಗಳು.

---

[1] ಕಾಷ್ಠೆಯೊಳ್ (ಕ).

(ಗ್ರಾಮ್ಯಾರಣ್ಯ ರಾಶಿವಿಭಾಗ)

ಯುವತೀ ದಂಪತಿ ತೌಳಿ ಕುಂಭಧರ ಚಾಪಾದ್ಯರ್ಧಗೇಹಂಗಳಿಂ
ಬಿ[1]ವು ದಲ[1] ಗ್ರಾಮ್ಯವರಣ್ಯಜಂ ಮಕರಪೂರ್ವಾರ್ಧಂ ಮೃಗಾಧೀಶಮುಂ
ಬಿವೆ ಚಾಪಾಪರಭಾಗ ವೃಶ್ಚಿಕ ವೃಷಾಜಂಗಳ್ ವನಗ್ರಾಮ ಸಂ
ಭವಮಕ್ಕುಂ ಮಕರಾಪರಾರ್ಧ ಝಷ ಕರ್ಕಿಕ್ಷೇತ್ರಮಂ[2]ಭ[2]ಶ್ಚರಂ ೩೨

(ದ್ವಾದಶಭಾವಗಳು)

ಕ್ರಮದಿಂ ತನು ಧನ ಸಹಜಾ
ತ ಮಿತ್ರ ಪುತ್ರಾರಿ ಯುವತಿ ನೈಧನ ಧರ್ಮೋ
ದ್ಯಮ ಲಾಭ ವ್ಯಯಮೆಂ[3]ದಿಂ[3]
ತುಮಿವಕ್ಕುಂ ಲಗ್ನಭಾವನಾಮ ಫಲಂಗಳ್ ೩೩

(ನಾಲ್ಕು ಎಂಟನೇ ಸ್ಥಾನಗಳ ಸಂಜ್ಞೆ)

ವ್ಯವಹರಿಪ ಸಂಜ್ಞೆ ಚತುರ
ಸ್ರವ[4]ದೆಂ[4]ದಷ್ಟಮ ಚತುರ್ಥಗೃಹಕೆ ಚತುರ್ಥ
ಕ್ಕೆ ವಲಂ ಮತ್ತಂ ಪಾತಾ
ಳ ವೇಶ್ಮ ಸುಖ ಹಿಬುಕ ಬಂಧುವೆಂದೈದು ಪೆಸರ್ ೩೪

---

೩೨. ಕನ್ಯಾ ಮಿಥುನ ತುಲಾ ಕುಂಭ ಧನುಸ್ಸಿನ ಪೂರ್ವಾರ್ಧ ಇವು ಗ್ರಾಮ್ಯರಾಶಿಗಳು, ಮಕರ ಪೂರ್ವಾರ್ಧ ಸಿಂಹ ಇವೆರಡು ಅರಣ್ಯರಾಶಿಗಳು, ಧನುಸ್ಸಿನ ಉತ್ತರಾರ್ಧ ವೃಶ್ಚಿಕ ವೃಷಭ ಮೇಷ ಇವು ಅರಣ್ಯ—ಗ್ರಾಮ ಇವೆರಡಕ್ಕೂ ಸಂಬಂಧಪಟ್ಟ ರಾಶಿಗಳು. ಮಕರ ಉತ್ತರಾರ್ಧ ಮೀನ ಕರ್ಕಟಕ ಇವು ಜಲಚರರಾಶಿಗಳು.

೩೩. ಲಗ್ನದಿಂದ ಕ್ರಮವಾಗಿ ತನು ಧನ ಸಹಜ (ಸಹೋದರ) ಮಿತ್ರ ಪುತ್ರ ಅರಿ(ಶತ್ರು) ಯುವತಿ(ಕಳತ್ರ) ನೈಧನ(ಮೃತ್ಯು) ಧರ್ಮ ಉದ್ಯಮ (ಉದ್ಯೋಗ) ಲಾಭ ವ್ಯಯ(ಖರ್ಚು) ಇವು ಹನ್ನೆರಡು ಭಾವಗಳ ಹೆಸರು; ಈ ವಿಚಾರಗಳ ಫಲವನ್ನು ಆಯಾ ಭಾವಗಳು ತಿಳಿಸುತ್ತವೆ.

೩೪. ಲಗ್ನದಿಂದ ನಾಲ್ಕು ಮತ್ತು ಎಂಟನೇ ರಾಶಿಗಳಿಗೆ ಚತುರಸ್ರವೆಂದು ಸಂಜ್ಞೆ. ನಾಲ್ಕನೇ ರಾಶಿಗೆ ಪಾತಾಳ ವೇಶ್ಮ ಸುಖ ಹಿಬುಕ ಬಂಧು ಎಂದು ಐದು ಹೆಸರುಗಳು.

---

[1] ಮೊದಲೊಳ್ (ಕ), ವು ಮೊದಲೊಳ್ (ಗ). [2] ತ (ಕ ಗ). [3] ದಿನಿ (ಕ). [4] ಮಂ (ಗ).

(ಮೂರು ಐದು ಏಳು ಎಂಟು ಒಂಭತ್ತು ಹನ್ನೆರಡನೇ ಸ್ಥಾನಗಳ ಸಂಜ್ಞೆ)

ನವಮಂ ಪಂಚಮ[1]ಧಂ[1] ತ್ರಿಕೋಣಮೆನೆ ಸಲ್ಗುಂ ತ್ರಿತ್ರಿಕೋಣಾಖ್ಯಮಾ
ನವಮಂ ಪಂಚಮರಾಶಿ ಬುದ್ಧಿಯೆನಿಕುಂ ದುಶ್ಚಿ[2]ಕ್ಯ[2]ಸಂಜ್ಞಂ ತೃತೀ
ಯವೆ ದಲ್ ದ್ವಾದಶರಾಶಿ ರಿಃಫಮದು ಜಾಮಿತ್ರ *ದ್ಯುನ* ದ್ಯೂ[3]ತ[3]ಮೆಂ
ಬ ವಲಂ ಸಪ್ತಮರಾಶಿ ಛಿದ್ರಮದು ಲಗ್ನಕ್ಕಷ್ಟಮಸ್ಥಾನಕಂ ೩೫

(ಕೇಂದ್ರ-ಫಣಪರ-ಆಪೋಕ್ಲೀಬ ಸಂಜ್ಞೆ)

ಉದಯ ದಶಾಸ್ತಮಯ ಚತು
ರ್ಥದೆಡೆಗೆ ಕೇಂದ್ರಂ ಚತುಷ್ಟಯಂ ಕಂಟಕಮೆಂ
ಬುದು ಸಂಜ್ಞೆ ತತ್ಪರಂ ತಾ
ನದು ಫಣಪರಮದರ ಪರಮದಾಪೋಕ್ಲೀಬಂ ೩೬

(ಉಪಚಯ-ಅಪಚಯ ರಾಶಿಗಳು)

ಉಪಚಯಭವನಂ ಮೂಱಾ
ಱು ಪತ್ತು ಪನ್ನೊಂದೆನಿಪ್ಪ ನಾ[4]ಲ್ಕು[4]ಗೃಹಂ ಮ
ತ್ತಪಚಯಭವನಂ ಪರಿಭಾ
ವಿಪೊಡುಳಿದೆಂಟುಂ ಗೃಹಂ ಗ್ರಹಕ್ಕೆ ಗೃಹಕ್ಕಂ ೩೭

---

೩೫. ಲಗ್ನದಿಂದ ಒಂಭತ್ತು ಮತ್ತು ಐದನೆಯ ರಾಶಿಗಳಿಗೆ ತ್ರಿಕೋಣ, ಒಂಭತ್ತನೇ ರಾಶಿಗೆ ತ್ರಿತ್ರಿಕೋಣ, ಐದನೇ ರಾಶಿಗೆ ಬುದ್ಧಿ, ಮೂರನೇ ರಾಶಿಗೆ ದುಶ್ಚಿಕ್ಯ, ಹನ್ನೆರಡನೇ ರಾಶಿಗೆ ರಿಃಫ, ಏಳನೇ ರಾಶಿಗೆ ಜಾಮಿತ್ರ ದ್ಯುನ ದ್ಯೂತ, ಎಂಟನೇ ಸ್ಥಾನಕ್ಕೆ ಛಿದ್ರ ಎಂದು ಸಂಜ್ಞೆ.

೩೬. ಲಗ್ನ ಹತ್ತು ಏಳು ನಾಲ್ಕು ಈ ನಾಲ್ಕು ಸ್ಥಾನಗಳಿಗೆ ಕೇಂದ್ರ ಚತುಷ್ಟಯ ಕಂಟಕ ಎಂದು ಸಂಜ್ಞೆ. ಕೇಂದ್ರದ ಮುಂದಿನ [೨, ೧೧, ೮, ೫] ನಾಲ್ಕು ಸ್ಥಾನಗಳಿಗೆ ಫಣಪರವೆಂದೂ, ಅದರ ಮುಂದಿನ [೩, ೧೨, ೯, ೬] ನಾಲ್ಕು ಸ್ಥಾನಗಳಿಗೆ ಆಪೋಕ್ಲೀಬವೆಂದೂ ಸಂಜ್ಞೆ.

೩೭. ಗ್ರಹವಿರುವ ರಾಶಿ ಅಥವಾ ಲಗ್ನದಿಂದ ಮೂರು ಆರು ಹತ್ತು ಹನ್ನೊಂದು ಈ ನಾಲ್ಕು ರಾಶಿಗಳು ಉಪಚಯರಾಶಿಗಳು. ಉಳಿದ [೧, ೨, ೪, ೫, ೭, ೮, ೯, ೧೨] ಈ ಎಂಟು ರಾಶಿಗಳು ಅಪಚಯರಾಶಿಗಳು.

---

[1] ಜಂ (ಗ). [2] ತ್ಯ (ಕ). [3] ನ (ಕ). [4] ಲ್ಕ (ಕ).
* ಛಂದಸ್ಸಿಗಾಗಿ 'ದ್ಯೂನ' ಎಂದಿರುವ ಸಂಜ್ಞೆ 'ದ್ಯುನ' ಎಂದಾಗಿದೆ.

(ವರ್ಗೋತ್ತಮಾಂಶ)

ಅಂಶಕದೊಳ್ ವರ್ಗೋತ್ತಮ
ದಂಶಕಮಕ್ಕುಂ ಸಮಸ್ತಚರರಾಶಿಗಳಾ
ದ್ಯಂಶಕಮುಂ ಸ್ಥಿರಗೃಹದ ಮ
ಧ್ಯಾಂಶಕಮುಂ ದ್ವಿಸ್ವಭಾವದಂತ್ಯಾಂಶಕಮುಂ ೩೮

(ಶೀರ್ಷೋದಯ ಪೃಷ್ಠೋದಯ ಉಭಯೋದಯ ರಾಶಿಗಳು)

ಲಲನಾ ವೃಶ್ಚಿಕ ತೌಳಿ ಕುಂಭ ಹರಿಗಳ್ ಶೀರ್ಷೋದಯಂಗಳ್ ದಿವಾ
ಬಲಿಗಳ್ ಮೇಷ ನೃಯುಗ್ಮ ಕರ್ಕಿ ಮೃಗ ಚಾಪೋಕ್ಷಾಲಯಂಗಳ್ ನಿಶಾ
ಬಲಿಗಳ್ ಭಾವಿಪೊಡಲ್ಲಿಯುಂ [1]ವಿಮಿಥುನಂ ತಾನಾಗೆ ಪೃಷ್ಠೋದಯಂ
ಗಳುಮಿನ್ನೊಂದುಭಯೋದಯಂ ಝಷಗೃಹಂ ಬಲ್ಲಿತ್ತಹಃಕಾಲದೊಳ್ ೩೯

೩೮. ಚರರಾಶಿ (ಮೇಷ ಕರ್ಕಟಕ ತುಲಾ ಮಕರ)ಗಳ ಮೊದಲನೆಯ ನವಾಂಶ, ಸ್ಥಿರರಾಶಿ (ವೃಷಭ ಸಿಂಹ ವೃಶ್ಚಿಕ ಕುಂಭ)ಗಳ ಐದನೆಯ ನವಾಂಶ, ದ್ವಿಸ್ವಭಾವರಾಶಿ (ಮಿಥುನ ಕನ್ಯಾ ಧನುಸ್ಸು ಮೀನ)ಗಳ ಒಂಭತ್ತನೆಯ ನವಾಂಶ ಇವು ವರ್ಗೋತ್ತಮಾಂಶಗಳು.

ವಿ—ಮೇಷಾದಿ ರಾಶಿಗಳಿಗೆ ಕ್ರಮವಾಗಿ ಮೇಷಾದಿ ನವಾಂಶಗಳೇ ವರ್ಗೋತ್ತಮಾಂಶಗಳು. ಮೇಷರಾಶಿಗೆ ಮೇಷನವಾಂಶ ವರ್ಗೋತ್ತಮಾಂಶ. ವೃಷಭರಾಶಿಗೆ ವೃಷಭನವಾಂಶ; ಇದೇ ರೀತಿ ಉಳಿದ ರಾಶಿಗಳಿಗೂ ವರ್ಗೋತ್ತಮಾಂಶಗಳನ್ನು ತಿಳಿಯಬೇಕು.

೩೯. ಕನ್ಯಾ ವೃಶ್ಚಿಕ ತುಲಾ ಕುಂಭ ಸಿಂಹ ಇವು ಶೀರ್ಷೋದಯ ರಾಶಿಗಳು; ಹಗಲಿನಲ್ಲಿ ಬಲಿಷ್ಠಗಳು. ಮೇಷ ಮಿಥುನ ಕರ್ಕಟಕ ಮಕರ ಧನುಸ್ಸು ವೃಷಭ ಈ ರಾಶಿಗಳು ರಾತ್ರಿಯಲ್ಲಿ ಬಲಿಷ್ಠಗಳು. ರಾತ್ರಿಬಲಿಷ್ಠ ರಾಶಿಗಳಲ್ಲಿ ಮಿಥುನವನ್ನು ಬಿಟ್ಟು ಉಳಿದುವು ಪೃಷ್ಠೋದಯರಾಶಿಗಳು. ಮೀನವು ಉಭಯೋದಯರಾಶಿ; ಇದು ಹಗಲಿನಲ್ಲಿ ಬಲಿಷ್ಠ.

ವಿ—೩೧ನೇ ಪದ್ಯದಲ್ಲಿ ರಾಶಿಗಳ ಕಾಲಬಲ (ಹಗಲು ರಾತ್ರಿಬಲ) ವಿಚಾರವಿದೆ. ಪುನಃ ಈ ಪದ್ಯದಲ್ಲೂ ಕಾಲ(ದಿನರಾತ್ರಿ)ಬಲವಿಚಾರವಿದೆ. ೩೧ನೇ ಪದ್ಯದಲ್ಲಿ ತಿಳಿಸಿರುವ ಕಾಲಬಲಕ್ಕೂ ಈ ಪದ್ಯದಲ್ಲಿ ತಿಳಿಸಿರುವ ಕಾಲಬಲಕ್ಕೂ ಸ್ವಲ್ಪ ವ್ಯತ್ಯಾಸವು ಕಂಡುಬರುತ್ತದೆ. ಅಲ್ಲದೆ ಒಂದು ವಿಚಾರವನ್ನು ಎರಡುಕಡೆ ಹೇಳುವ ಆವಶ್ಯಕತೆಯೂ ಇಲ್ಲ. ಆದುದರಿಂದ ಈ ಪದ್ಯದಲ್ಲಿ ತಿಳಿಸಿರುವುದು ಕಾಲಬಲವಲ್ಲ. ರಾಶಿಗಳ ಹಗಲು ರಾತ್ರಿ ಸಂಜ್ಞಾವಿಭಾಗ. "ಸಮಿಥುನಾಃ ಪೃಷ್ಠೋದಯಾಶ್ಚೈಂದವಾಃ ಸೌರಾಃ ಶೇಷಗೃಹಾಃ ಕ್ರಮೇಣ ಕಥಿತಾ ರಾತ್ರಿದ್ಯುಸಂಜ್ಞಾಃ" ಎಂದು ಫಲದೀಪಿಕಾಗ್ರಂಥದಲ್ಲಿರುವಂತೆ ಸಿಂಹ ಕನ್ಯಾ

[1] ನೃ (ಕ ಗ).

(ಉಚ್ಚ ರಾಶಿಗಳು)

ದಿನ[1]ಪಂ[1]ಗೆ ಮೇಷಮಿನನಂ
ದನಂಗೆ ತೊಲೆ ಗುರುಗೆ ಕರ್ಕಿ ಶುಕ್ರಂಗೆ ಝಷಂ
ಕನಕಂಗೆ ಮೃಗಂ ಮೃಗಲಾಂ
ಛನಂಗೆ ವೃಷಭಂ ಬುಧಂಗೆ ಕನ್ನೆ ನಿಜೋಚ್ಚಂ ೪೦

(ಪರಮೋಚ್ಚ ಭಾಗಗಳು)

ದಿನಪಂ ಪತ್ತಱೊಳುರ್ವರಾತನಯನಿಪ್ಪತ್ತೆಂಟಱೊಳ್ ಭಾನುನಂ
ದನನಿಪ್ಪತ್ತಱೊಳೈದಱೊಳ್ ಗುರು ಶಶಾಂಕಂ ಮೂಱಱೊಳ್ ಶೀತರು
ಕ್ತನುಜಾತಂ ಪದಿನೈದಱೊಳ್ ಭೃಗುಜನಿಪ್ಪತ್ತೇೞಱೊಳ್ ನಿಂದೊಡ
ಲ್ಲಿ ನಿಜೋಚ್ಚಾಲಯಭಾಗದಲ್ಲಿ ಪರಮೋಚ್ಚಸ್ಥಾಯಿ ತಾನಾ ಗ್ರಹಂ ೪೧

(ನೀಚ-ಮೂಲತ್ರಿಕೋಣ ರಾಶಿಗಳು)

ದಿನಪಾದಿಗಳುಚ್ಚಕ್ಕೇ
ೞನೆಯ ಗೃಹಂ ನೀಚಮವರ್ಗೆ ಹರಿ ವೃಷಮಜಮಂ
ಗನೆ ಧನು ತೊಲೆ ಕುಂಭಮಿವಿಂ
ತಿನಿತುಂ ಮೂಲತ್ರಿಕೋಣಮಕ್ಕುಂ ಕ್ರಮದಿಂ ೪೨

---

ತುಲಾ ವೃಶ್ಚಿಕ ಕುಂಭ ಮೀನ ಇವು ಹಗಲುರಾಶಿಗಳು, ಉಳಿದುವು ರಾತ್ರಿ ರಾಶಿಗಳು. ಹಗಲುರಾಶಿಗಳು ಸೂರ್ಯರಾಶಿಗಳು, ರಾತ್ರಿರಾಶಿಗಳು ಚಂದ್ರ ರಾಶಿಗಳು. ಆದುದರಿಂದ ಈ ಪದ್ಯದಲ್ಲಿ ಸೂರ್ಯ–ಚಂದ್ರರ ರಾಶಿವಿಭಾಗವನ್ನು ಹೇಳಿದೆ ಎಂದು ತಿಳಿಯಬೇಕು. ಮಿಥುನ ಶೀರ್ಷೋದಯರಾಶಿ.

೪೦. ಸೂರ್ಯನಿಗೆ–ಮೇಷ, ಶನಿಗೆ–ತುಲಾ, ಗುರುವಿಗೆ–ಕರ್ಕಟಕ, ಶುಕ್ರನಿಗೆ–ಮೀನ, ಮಂಗಳನಿಗೆ–ಮಕರ, ಚಂದ್ರನಿಗೆ–ವೃಷಭ, ಬುಧನಿಗೆ–ಕನ್ಯಾ ಇವು ಉಚ್ಚರಾಶಿಗಳು.

೪೧. ಸೂರ್ಯನಿಗೆ ಮೇಷದಲ್ಲಿ ೧೦ನೇ ಅಂಶ, ಮಂಗಳನಿಗೆ ಮಕರದಲ್ಲಿ ೨೮ನೇ ಅಂಶ, ಶನಿಗೆ ತುಲಾದಲ್ಲಿ ೨೦ನೇ ಅಂಶ, ಗುರುವಿಗೆ ಕರ್ಕಟಕದಲ್ಲಿ ೫ನೇ ಅಂಶ, ಚಂದ್ರನಿಗೆ ವೃಷಭದಲ್ಲಿ ೩ನೇ ಅಂಶ, ಬುಧನಿಗೆ ಕನ್ಯಾದಲ್ಲಿ ೧೫ನೇ ಅಂಶ, ಶುಕ್ರನಿಗೆ ೨೭ನೇ ಅಂಶ, ಇವು ಗ್ರಹಗಳಿಗೆ ಉಚ್ಚರಾಶಿಯಲ್ಲಿ ಪರಮೋಚ್ಚ ಭಾಗಗಳು. ಈ ಅಂಶಗಳಲ್ಲಿ ಗ್ರಹವಿದ್ದರೆ ಪರಮೋಚ್ಚ ಭಾಗದಲ್ಲಿ ಗ್ರಹವಿದೆ ಎಂದು ತಿಳಿಯಬೇಕು.

೪೨. ಸೂರ್ಯಾದಿ ಗ್ರಹಗಳ ಉಚ್ಚರಾಶಿಗೆ ಏಳನೆಯದು ಆಯಾ ಗ್ರಹಗಳಿಗೆ ನೀಚರಾಶಿ. ಸಿಂಹ ವೃಷಭ ಮೇಷ ಕನ್ಯಾ ಧನುಸ್ಸು ತುಲಾ ಕುಂಭ ಇವು ಕ್ರಮವಾಗಿ ಸೂರ್ಯಾದಿಗ್ರಹಗಳಿಗೆ ಮೂಲತ್ರಿಕೋಣರಾಶಿಗಳು.

---

[1] ಪತಿ (ಕ).

(ಗ್ರಹಗಳ ದೃಷ್ಟಿ)

ಸಮನಿಸುಗುಂ ತೃತೀಯ ದಶಮಂಗಳನೀಕ್ಷಿಸೆ ಪಾದದೃಷ್ಟಿ ಪಂ
ಚಮ ನವಮರ್ಕ್ಷಮಂ ಗ್ರಹಮುಮಂ ಗ್ರಹವೀಕ್ಷಿಪೊಡರ್ಧದೃಷ್ಟಿಯ
ಷ್ಟಮುಮುಮಂನಾ ಚತುರ್ಥಮುಮನೀಕ್ಷಿಸೆ ಪಾದವಿಹೀನದೃಷ್ಟಿ ಸ ೪೩
ಪ್ತಮಮನ[1]ವೇ[1]ಕ್ಷಿಸಲ್ ಸಕಲದೃಷ್ಟಿ ತದೀಕ್ಷಣದೊಳ್ ಸಮಂ ಫಲಂ

(ಶನಿ ಗುರು ಕುಜರಿಗೆ ವಿಶೇಷ ದೃಷ್ಟಿ)

ರವಿಪುತ್ರಂ ತ್ರಿದಶಸ್ಥನೀಕ್ಷಿಸುವೊಡರ್ಧಂ ದೃಷ್ಟಿ ದೇವಾರ್ಚಿತಂ
ನವ ಪಂಚಾಳಯಸಂಸ್ಥನೀಕ್ಷಿಪೊಡೆ ಪಾದೋನಕ್ರಮಂ ದೃಷ್ಟಿ ನೋ
ಡುವೊಡಾರಂ ಚತುರಸ್ರಗಂ ಸಕಳಮಕ್ಕುಂ ದೃಷ್ಟಿ ಶೇಷಗ್ರಹ ೪೪
ಕ್ಕೆ ವಿಶೇಷೇಕ್ಷಣವಿಲ್ಲ ಪೂರ್ವಗದಿತಾಳೋಕಕ್ರಮಂ ಕೂಡುಗುಂ

---

೪೩. ಗ್ರಹಗಳು ತಾವಿರುವ ಸ್ಥಾನದಿಂದ ಮೂರು ಹತ್ತನೇ ಸ್ಥಾನಗಳನ್ನೂ, ಅಲ್ಲಿರುವ ಗ್ರಹಗಳನ್ನೂ ಕಾಲುದೃಷ್ಟಿಯಿಂದ; ಐದು ಒಂಭತ್ತನೇ ಸ್ಥಾನಗಳನ್ನೂ, ಅಲ್ಲಿರುವ ಗ್ರಹಗಳನ್ನೂ ಅರ್ಧದೃಷ್ಟಿಯಿಂದ ; ನಾಲ್ಕು ಎಂಟನೇ ಸ್ಥಾನಗಳನ್ನೂ, ಅಲ್ಲಿರುವ ಗ್ರಹಗಳನ್ನೂ ಮುಕ್ಕಾಲುದೃಷ್ಟಿಯಿಂದ; ಏಳನೇ ಸ್ಥಾನವನ್ನೂ ಅಲ್ಲಿರುವ ಗ್ರಹಗಳನ್ನೂ ಪೂರ್ಣದೃಷ್ಟಿಯಿಂದ ನೋಡುತ್ತಾರೆ ಮತ್ತು ದೃಷ್ಟಿಗೆ ಸಮನಾದ ಫಲವನ್ನೂ ಕೊಡುತ್ತಾರೆ.

೪೪. ಶನಿಯು ತಾನಿರುವ ಸ್ಥಾನದಿಂದ ಮೂರು ಹತ್ತನೇ ಸ್ಥಾನ ಮತ್ತು ಅಲ್ಲಿರುವ ಗ್ರಹಗಳನ್ನೂ, ಗುರುವು ಐದು ಒಂಭತ್ತನೇ ಸ್ಥಾನ ಮತ್ತು ಅಲ್ಲಿರುವ ಗ್ರಹಗಳನ್ನೂ, ಕುಜನು ನಾಲ್ಕು ಎಂಟನೇ ಸ್ಥಾನ ಮತ್ತು ಅಲ್ಲಿರುವ ಗ್ರಹಗಳನ್ನೂ ಪೂರ್ಣದೃಷ್ಟಿಯಿಂದ ನೋಡುತ್ತಾರೆ. ಇದು ಗ್ರಹಗಳ ವಿಶೇಷ ದೃಷ್ಟಿ. ಸೂರ್ಯ ಚಂದ್ರ ಬುಧ ಶುಕ್ರರಿಗೆ ವಿಶೇಷ ದೃಷ್ಟಿ ಇಲ್ಲ. ಮೇಲಿನ ಪದ್ಯದಲ್ಲಿ ತಿಳಿಸಿರುವುದೇ ಆ ಗ್ರಹಗಳಿಗೆ ದೃಷ್ಟಿ.

ವಿ—ಶನಿಗೆ ೩-೧೦ರಲ್ಲಿ ಅರ್ಧದೃಷ್ಟಿ; ಗುರುವಿಗೆ ೫-೯ರಲ್ಲಿ ಮುಕ್ಕಾಲು ದೃಷ್ಟಿ; ಕುಜನಿಗೆ ೪-೮ರಲ್ಲಿ ಪೂರ್ಣದೃಷ್ಟಿ; ಎಂದು ಪದ್ಯದಲ್ಲಿ ಹೇಳಿರುವ ಈ ಅಭಿಪ್ರಾಯವು ಬಹುಸಮ್ಮತವಲ್ಲ.

---

1 ಛೀ (ಕ).

(ಷಡ್ವರ್ಗ)

*ಭವನಂ ದ್ವಾದಶಭಾಗಂ
ನವಾಂಶಕಂ ತ್ರಿಂಶದಂಶ  ಹೋರಾ ದ್ರೇಕ್ಕಾ
ಣವೆನಿ[1]ಪ್ಪಿ[1]ನಿತುಂ ಷಡ್ವ
ರ್ಗವೆಂಬ ಪೆಸರಿಂ ಪ್ರವರ್ತಿಕುಂ ಬುಧಮಿತ್ರಾ ೪೫

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ ಸರಸಪ್ರಸನ್ನ ವಚೋಲಕ್ಷ್ಮೀಧರಂ ಗದ್ಯಪದ್ಯವಿದ್ಯಾಧರಂ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ಸಂಜ್ಞಾಪ್ರಕರಣವರ್ಣನಂ ಪ್ರಥಮಾಧಿಕಾರಂ

---

೪೫. ಲಗ್ನ ಹೋರೆ ದ್ರೇಕ್ಕಾಣ ನವಾಂಶ ದ್ವಾದಶಾಂಶ ತ್ರಿಂಶಾಂಶ ಈ ಆರೂ ಷಡ್ವರ್ಗಗಳು.

---

* ಪ್ರತಿಯಲ್ಲಿ ೪೫ನೇ ಪದ್ಯ ೨೫ನೇ ಪದ್ಯವಾದ ಮೇಲಿದೆ.   [1] ಪ್ಪ (ಗ).

# ದ್ವಿತೀಯಾಧಿಕಾರಂ

## ಬಲಾಬಲ ಪ್ರಕರಣಂ

(ದಿಗಧಿಪತಿಗಳು)

ಸುರಪತಿ ಶಿಖಿ ಯಮ ನೈರುತಿ
ವರುಣ ಮರುದ್ಧನದ ಪುರಹರಾಶಾಪತಿಗಳ್
ತದಿಂ ಭಾಸ್ಕರ[1]ಭೃಗು ಭೌ
ಮ[1]ರಾಹು ಮಂದೇಂದು ಚಂದ್ರನಂದನ ಗುರುಗಳ್ ೧

(ಶುಭಪಾಪ ಗ್ರಹಗಳು)

ಭೃಗುಸುತ ಗುರು ಬುಧ ಪೂರ್ಣೇಂ
ದುಗಳ್ ಶುಭಗ್ರಹ[2]ಮಿ[2]ನಾರ್ಕಿ ವಕ್ರ ಕ್ಷೀಣೇಂ
ದುಗಳಶುಭಗ್ರಹಮಾ ಕ್ರೂ
ರಗಣದೊಳೊಂದಿದೊಡೆ ಸೋಮಸುತನುಂ ಕ್ರೂರಂ ೨

(ಪುರುಷ.ಸ್ತ್ರೀ.ನಪುಂಸಕಾಧಿಪತಿಗಳು)

ದಿನಪತಿ ವಾಕ್ಪತಿ ವಸುಧಾ
ತನಯರ್ ಪುರುಷಾಧಿಪರ್ ಸುಧಾಕರ ಭೃಗುನಂ
ದನರಂಗನಾಧಿಪರ್ ಶಶಿ
ಜನುಮರ್ಕಜನುಂ ನಪುಂಸಕಾಧಿಪರೆನಿಕುಂ ೩

---

೧. ಪೂರ್ವಕ್ಕೆ ಸೂರ್ಯ, ಆಗ್ನೇಯಕ್ಕೆ ಶುಕ್ರ, ದಕ್ಷಿಣಕ್ಕೆ ಅಂಗಾರಕ, ನೈಋತ್ಯಕ್ಕೆ ರಾಹು, ಪಶ್ಚಿಮಕ್ಕೆ ಶನಿ, ವಾಯುವ್ಯಕ್ಕೆ ಚಂದ್ರ, ಉತ್ತರಕ್ಕೆ ಬುಧ, ಈಶಾನ್ಯಕ್ಕೆ ಗುರು ಇವರು ದಿಗಧಿಪತಿಗಳು.

೨. ಶುಕ್ರ ಗುರು ಬುಧ ಪೂರ್ಣಚಂದ್ರರು ಶುಭರು. ಸೂರ್ಯ, ಶನಿ ಅಂಗಾರಕ ಕ್ಷೀಣಚಂದ್ರರು ಕ್ರೂರರು. ಕ್ರೂರಗ್ರಹದೊಡನೆ ಬುಧನಿದ್ದರೆ ಆತನೂ ಕ್ರೂರಿ.

ವಿ–ಶುಕ್ಲಪಕ್ಷದ ಅಷ್ಟಮಿಯಿಂದ ಕೃಷ್ಣಪಕ್ಷದ ಅಷ್ಟಮಿಯವರೆಗೆ ಪೂರ್ಣಚಂದ್ರ. ಕೃಷ್ಣಪಕ್ಷದ ಅಷ್ಟಮಿಯಿಂದ ಶುಕ್ಲಪಕ್ಷದ ಅಷ್ಟಮಿಯವರೆಗೆ ಕ್ಷೀಣಚಂದ್ರ.

೩. ಸೂರ್ಯ ಗುರು ಕುಜರು ಪುರುಷರಿಗೆ ಅಧಿಪರು ; ಚಂದ್ರಶುಕ್ರರು ಸ್ತ್ರೀಯರಿಗೆ ಅಧಿಪರು ; ಬುಧ ಶನಿಗಳು ನಪುಂಸಕರಿಗೆ ಅಧಿಪತಿಗಳು.

---

[1] ಭೌಮಭೃಗು (ಕ ಗ). [2] ಯಿ (ಕ), ದಿ (ಗ).

(ವೇದಾಧಿಪತಿಗಳು)

ಪತಿ ಋಗ್ವೇದಕ್ಕೆ ಬೃಹ
ಸ್ಪತಿ ದಾನವಪೂಜಿತಂ ಯಜುರ್ವೇದಕ್ಕಾ
ಕ್ಷಿತಿಸೂನು ಸಾಮವೇದ
ಕ್ಕೆ ತುಷಾರಾಂಶುಜನಥರ್ವವೇದಕ್ಕರ್ಕ್ಕಂ ೪

(ವರ್ಣಾಧಿಪತಿಗಳು)

ಸಿತವಾಕ್ಪತಿಗಳಿಳಾಮರ
ಪತಿಗಳ್ ಕ್ಷತ್ರಾ[1]ಧಿಪರ್ ಕುಜಾರ್ಕರ್ ದೋಷಾ
ಪತಿ ವೈಶ್ಯಸ್ವಾಮಿ ನಿಶಾ
ಪತಿಜಂ ಶೂದ್ರಪತಿ ಸಂಕರಾಧಿಪನಸಿತಂ ೫

(ಸ್ಥಾನಬಲ)

*ಸುಹೃದಾಲಯದೊಳ್. ಮೇಣ್ ನಿಜ
ಗೃಹದೊಳ್ ತನ್ನುಚ್ಚದೊಳ್ ಸ್ವಕೀಯಾಂಶಕದೊಳ್
ಗ್ರಹಮಿರೆ ಮೇಣ್ ತದುಪಗತ
ಗ್ರಹ[ಕಂ ಶುಭ]ದೃಷ್ಟಿ ಕೂಡೆ ಮೇಣ್ ಬಲವಂತಂ ೬

ರಾತ್ರೀಶ ಭೃಗುಜರಬಳಾ
ಕ್ಷೇತ್ರಂಗಳೊಳಿರೆ ಬುಧಾ[2]ರ್ಕಿ[2] ಮಿತ್ರ ಧರಿತ್ರೀ
ಪುತ್ರಾಂಗಿರಸರ್ ಪುರುಷ
ಕ್ಷೇತ್ರಂಗಳೊಳಿರೆ ಬಲಾನ್ವಿತರ್ ನಿರುಪಹತರ್ ೭

---

೪. ಋಗ್ವೇದಕ್ಕೆ ಗುರು, ಯಜುರ್ವೇದಕ್ಕೆ ಶುಕ್ರ, ಸಾಮವೇದಕ್ಕೆ ಅಂಗಾರಕ ಅಥರ್ವವೇದಕ್ಕೆ ಬುಧ ಇವರು ಅಧಿಪತಿಗಳು.

೫. ಶುಕ್ರ ಗುರು–ಬ್ರಾಹ್ಮಣ, ಕುಜ ಸೂರ್ಯ–ಕ್ಷತ್ರಿಯ, ಚಂದ್ರ–ವೈಶ್ಯ, ಬುಧ–ಶೂದ್ರ, ಶನಿ–ಸಂಕರ ಈ ವರ್ಣಗಳಿಗೆ ಅಧಿಪತಿಗಳು.

೬. ಮಿತ್ರಕ್ಷೇತ್ರ ಸ್ವಕ್ಷೇತ್ರ ಉಚ್ಚಕ್ಷೇತ್ರ ಸ್ವನವಾಂಶಗಳಲ್ಲಿ ಗ್ರಹವಿದ್ದರೆ ಮತ್ತು ಈ ಕ್ಷೇತ್ರಗಳಲ್ಲಿರುವ ಗ್ರಹವನ್ನು ಶುಭಗ್ರಹ ನೋಡಿದರೆ ಆ ಗ್ರಹ ಬಲಿಷ್ಠ.

೭. ಉಪಹತರಲ್ಲದ ಚಂದ್ರ ಶುಕ್ರರು ಸ್ತ್ರೀ ಕ್ಷೇತ್ರಗಳಲ್ಲಿ, ಬುಧ ಶನಿ ಸೂರ್ಯ ಕುಜ ಗುರುಗಳು ಪುರುಷ ಕ್ಷೇತ್ರಗಳಲ್ಲಿ ಇರುವಾಗ ಬಲಿಷ್ಠರು.

ವಿ–ಮೇಷ ಮಿಥುನ ಸಿಂಹ ತುಲಾ ಧನುಸ್ಸು ಕುಂಭ ಇವು ಪುರುಷ ಕ್ಷೇತ್ರಗಳು. ಉಳಿದುವು ಸ್ತ್ರೀಕ್ಷೇತ್ರಗಳು.

ಗ್ರಹಣಪೀಡಿತ ಸೂರ್ಯಚಂದ್ರರು ಮತ್ತು ಯುದ್ಧದಲ್ಲಿ ಪರಾಜಿತರಾದ ಕುಜ ಬುಧ ಗುರು ಶುಕ್ರ ಶನಿಗಳು ಉಪಹತರು.

---

[1] ತ್ರಿಯಾ (ಕ). [2] ರ್ಕ (ಗ). * 'ಕ' ಪ್ರತಿಯಲ್ಲಿ ೬ನೇ ಪದ್ಯದಿಂದ ೧೧ನೇ ಪದ್ಯ ೩ನೇ ಸಾಲು ಪೂರ್ತಿ ಗ್ರಂಥವಿಲ್ಲ.

(ರಾಶಿಬಲ)
*ಒಡನಿರೆ ಗೃಹಪತಿ ಮೇಣ್ ಕಾ
ಣ್ಬೊಡೆ ಮೇಣಾ ರಾಶಿಯಂ ಬುಧಾಂಗಿರಸರ್ ಕಾ
ಣ್ಬೊಡೆ ಬಲವಂತಂ ತದ್ಗೃಹ
ಮೊಡನನ್ಯರ್ ಕೂಡದಿರ್ದೊಡಂ ಕಾಣದೊಡಂ ೮

(ದಿಗ್ಬಲ)
ಶಕ್ರಾಶೆಯೊಳಿಂದುಜನುಂ
ಶಕ್ರೇಜ್ಯನುಮಂತಕಾಶೆಯೊಳ್ ಭಾಸ್ಕರನುಂ
ವಕ್ರನುಮಸಿತಂ ಪಡುವಲು
ಶುಕ್ರೇಂದುಗಳುತ್ತರಾಶೆಯೊಳ್ ಬಲವಂತರ್ ೯

(ಚೇಷ್ಟಾಬಲ)
ಉದಗಯನದೊಳಿರೆ ರಜನಿಕ
ರ ದಿವಾಕರರಿಬ್ಬರುಂ ಬಲಾನ್ವಿತರ್ ವ
ಕ್ರದೊಳಿರೆ ಪರಾಭವಂ ಬಾ
ರದೆ ಬೆಳಗುತ್ತಿರ್ದೊಡುಳಿದವರ್ ಬಲವಂತರ್ ೧೦

---

೮. ರಾಶಿಯಲ್ಲಿ ಅದರ ಅಧಿಪತಿ ಇದ್ದರೆ, ಅಧಿಪತಿ ತನ್ನ ರಾಶಿಯನ್ನು ನೋಡಿದರೆ, ಬುಧ ಗುರುಗಳು ಆ ರಾಶಿಯಲ್ಲಿದ್ದರೆ ಅಥವಾ ನೋಡಿದರೆ, ಆ ರಾಶಿ ಬಲಿಷ್ಠ. ಬುಧ ಗುರುಗಳನ್ನು ಬಿಟ್ಟು ಉಳಿದ ಗ್ರಹಗಳು ಆ ರಾಶಿಯಲ್ಲಿರಲೂ ಕೂಡದು, ರಾಶಿಯನ್ನು ನೋಡಲೂ ಬಾರದು.

೯. ಬುಧ ಗುರು–ಪೂರ್ವ, ಸೂರ್ಯ ಮಂಗಳ–ದಕ್ಷಿಣ, ಶನಿ–ಪಶ್ಚಿಮ, ಶುಕ್ರ ಚಂದ್ರ–ಉತ್ತರ ಈ ದಿಕ್ಕುಗಳಲ್ಲಿ ಬಲಿಷ್ಠರು.

ವಿ–ಪೂರ್ವ–ಲಗ್ನ, ದಕ್ಷಿಣ–ಚತುರ್ಥ, ಪಶ್ಚಿಮ–ಸಪ್ತಮ, ಉತ್ತರ–ದಶಮ ಕ್ಷೇತ್ರಗಳು.

೧೦. ಚಂದ್ರ ಸೂರ್ಯರಿಬ್ಬರು ಉತ್ತರಾಯಣದಲ್ಲಿ, ಉಳಿದ ಅಂಗಾರಕಾದಿ ಐದು ಗ್ರಹಗಳು ವಕ್ರರಾದಾಗ, ಯುದ್ಧದಲ್ಲಿ ಪರಾಜಯ ಹೊಂದದೆ ಪ್ರಕಾಶಿಸುವಾಗ ಬಲಿಷ್ಠರು.

ವಿ–ಮೇಷರಾಶಿ ಮೊದಲುಮಾಡಿ ತುಲಾರಾಶಿವರೆಗಿನ ಆರು ರಾಶಿಗಳಲ್ಲಿ ಸೂರ್ಯನು ಸಂಚರಿಸುವುದು ಉತ್ತರಾಯಣ. ವಕ್ರಗತಿ ಎಂದರೆ ಹಿಂದಕ್ಕೆ ಹೋಗುವುದು. ಏಳುಗ್ರಹಗಳಲ್ಲಿ ಕುಜಾದಿ ಐದು ತಾರಾಗ್ರಹಗಳಿಗೆ ಮಾತ್ರ ವಕ್ರಗತಿ ಇದೆ.

ಉದಾ.–ಅಶ್ವಿನಿ ೨ನೇ ಪಾದದಲ್ಲಿರುವ ಗ್ರಹ ಅಶ್ವಿನಿ ೧ನೇ ಪಾದ ಅನಂತರ ರೇವತಿ ೪ನೇ ಪಾದಕ್ಕೆ ಬಂದರೆ ಆಗ ಆ ಗ್ರಹ ವಕ್ರವಾಗಿದೆ ಎಂದು ತಿಳಿಯಬೇಕು.

ಆಕಾಶದಲ್ಲಿ ಎರಡು ತಾರಾಗ್ರಹಗಳು ದಕ್ಷಿಣೋತ್ತರ ಒಂದೇ ರೇಖೆಯಲ್ಲಿದ್ದು ಅಂತರ ಕಡಿಮೆಯಾಗಿದ್ದಾಗ ಆ ಗ್ರಹಗಳಿಗೆ ಪರಸ್ಪರ ಯುದ್ಧವಾಗುತ್ತದೆ. ಸಾಮಾನ್ಯವಾಗಿ ಇದರಲ್ಲಿ ಉತ್ತರದಲ್ಲಿದ್ದು ಕಾಂತಿಯಿಂದ ಕೂಡಿರುವುದು ಜಯ ಪಡೆದ ಗ್ರಹ. ಕಾಂತಿ ಕಡಮೆಯಾಗಿ ದಕ್ಷಿಣದಲ್ಲಿರುವುದು ಸೋತಗ್ರಹ.

---

* (ಗ) ಪ್ರತಿಯಲ್ಲಿ ೮ನೇ ಪದ್ಯವಾದಮೇಲೆ ೭ನೇ ಪದ್ಯವಿದೆ.

(ಕಾಲಬಲ)

ಪಗಲಂಭೋರುಹಮಿತ್ರ ದೇವಗುರು ದೈತ್ಯಾಮಾತ್ಯರೆಂದಿಂತಿವರ್
ಪಗಲುಂ ಮತ್ತಿರುಳುಂ ಶಶಾಂಕಜನಿರುಳ್ ಮಂದಾವನೀನಂದನೇಂ
ದುಗಳಾತ್ಮೀಯ ದಿನಂಗಳೊಳ್ ದಿವಸನಾಥಾದಿ ಗ್ರಹಶ್ರೇಣಿ ಸೌ
ಮ್ಯಗಣಂ ಜೊನ್ನದೊಳನ್ಯರುಂ ಬಹುಳದೊಳ್ ನಿರ್ವ್ಯಾಜದಿಂ ಬಲ್ಲಿದರ್ ೧೧

(ನೈಸರ್ಗಿಕಬಲ)

ಶನಿಯಿಂದಂ ಮಹಿಜಾತನಾ ಮಹಿಜನಿಂದಂ ಸೌಮ್ಯನಾ ಸೋಮನಂ
ದನನಿಂದಂ ಗುರುವಾ ಸುರೇಂದ್ರಗುರುವಿಂದಂ ಶುಕ್ರನಾ ಶುಕ್ರನಿಂ
ವನಜಾತಾಹಿತನಾ ವನೇಜರಿಪುವಿಂ ಪಂಕೇಜಮಿತ್ರಂ ಬಲಾ
ಢ್ಯನೆನಿಕ್ಕುಂ ಕ್ರಮದಿಂದಮಿಾ ಗ್ರಹಬಲಂ ನೈಸರ್ಗಿಕಂ ನಾಮದಿಂ ೧೨

ಪ್ರಬಲಮೆನಿಕುಂ ಗ್ರಹಂ ಸ್ಥಾ
ನಬಲಂ ಚೇಷ್ಟಾಬಲಂ ನಿಸರ್ಗಬಲಂ [1]ಕಾ
ಲಬಲಂ ದಿಶಾಬಲಂ ದೃ
ಷ್ಟಿ[1]ಬಲಮೆನಿಪ್ಪಾಱು ಬಲಮುಮಂ ಪಡೆದಾಗಳ್ ೧೩

---

೧೧. ಸೂರ್ಯ ಗುರು ಶುಕ್ರರು ಹಗಲಿನಲ್ಲಿ, ಬುಧನು ಸರ್ವದಾ [ಹಗಲು-ರಾತ್ರಿ] ಶನಿ ಕುಜ ಚಂದ್ರರು ರಾತ್ರಿಯಲ್ಲಿ ಬಲಿಷ್ಠರು. ಸೂರ್ಯಾದಿಗ್ರಹಗಳು ತಮ್ಮ ತಮ್ಮ ವಾರಗಳಲ್ಲಿ ಬಲಯುತರು. ಶುಭಗ್ರಹಗಳು ಶುಕ್ಲಪಕ್ಷದಲ್ಲೂ, ಕ್ರೂರಗ್ರಹಗಳು ಕೃಷ್ಣಪಕ್ಷದಲ್ಲೂ ಬಲಿಷ್ಠರು.

ವಿ–ದಿನದಂತೆ ತನ್ನ ವರ್ಷ ಮಾಸ ಕಾಲ ಲಗ್ನಗಳಲ್ಲಿ ಗ್ರಹವು ಬಲಿಷ್ಠವಾಗಿರುತ್ತದೆ.

೧೨. ಶನಿಗಿಂತ ಮಂಗಳ, ಮಂಗಳನಿಗಿಂತ ಬುಧ, ಬುಧನಿಗಿಂತ ಗುರು, ಗುರುವಿಗಿಂತ ಶುಕ್ರ, ಶುಕ್ರನಿಗಿಂತ ಚಂದ್ರ, ಚಂದ್ರನಿಗಿಂತ ಸೂರ್ಯ ಈ ಕ್ರಮದಲ್ಲಿ ಗ್ರಹಗಳು ಉತ್ತರೋತ್ತರ ಸ್ವಾಭಾವಿಕವಾಗಿ ಬಲಿಷ್ಠರು.

ವಿ–ಗ್ರಹಗಳ ಷಡ್ಬಲನಿರ್ಣಯದಲ್ಲಿ ನೈಸರ್ಗಿಕ ಬಲವನ್ನು ಬಿಟ್ಟು ಉಳಿದ ಐದು ಬಲಗಳು ಪರಸ್ಪರ ಸಮವಾದಾಗ ಈ ನಿಸರ್ಗಬಲದಿಂದ ಅಧಿಕಬಲಿಷ್ಠ ಗ್ರಹವನ್ನು ತಿಳಿಯಬೇಕು.

೧೩. ಸ್ಥಾನ ಚೇಷ್ಟಾ ನಿಸರ್ಗ ಕಾಲ ದಿಕ್ಕು ದೃಷ್ಟಿ ಈ ಆರು ಬಲಗಳಿಂದ ಕೂಡಿದಾಗ ಗ್ರಹವು ಪೂರ್ಣಬಲದಿಂದಿರುತ್ತದೆ.

---

[1] ಕಾಲಬಲಂ ದಿಶಾಬಲಂ ಎರಿಯು (ಕ) ದೃಷ್ಟಿಬಲಂ ಕಾಲ್ಯುದಯಬಲಂ ಎರಿಯು (ಗ).

(ನಿಸರ್ಗಮಿತ್ರರು)

ದಿನನಾಥಂಗೆ ಹಿಮಾಂಶು ಭೌಮ ಗುರುಗಳ್ ಸೋಮಂಗೆ ಸೂರ್ಯೇಂದುಜರ್
ಕನಕಂಗಿಂದ್ವಿನಮಂತ್ರಿಗಳ್ ಶಶಿಸುತಂಗರ್ಕೋಶನರ್ ಮಂತ್ರಿ[1]ಗಿಂ[1]
ದ್ವಿನಭೌ[2]ಮರ್[2] ಭೃಗುಜಂಗೆ ಸೌಮ್ಯ ರವಿಜರ್ ಮಂದಂಗೆ ಶುಕ್ರೇಂದುನಂ
ದನರಾರಯ್ಯೆ ನಿಸರ್ಗಮಿತ್ರರೆನಿಕುಂ ಸಮ್ಯಕ್ತ್ವರತ್ನಾಕರಾ ೧೪

(ಉದಾಸೀನರು)

ರವಿಗಿಂದೂದ್ಭವನಿಂದುವಿಂಗೆ ರವಿಜಾಂಗಾರಾಂಗಿರಃಪುತ್ರ ಭಾ
ರ್ಗವರಾರಂಗೆ ಸಿತಾರ್ಕಜರ್ ವಿಧುಸುತಂಗಂಗಾರ [3]ಸೌ[3]ರ್ಯಾಂಗಿರರ್
ದಿವಿಜೇಜ್ಯಂಗೆ ಶನೈಶ್ಚರಂ ಭೃಗುಸುತಂಗಿಂದ್ರೇಜ್ಯ ಧಾತ್ರೀತನೂ
ಭವರಬ್ಜಪ್ರಿಯಸೂನುಗಾಂಗಿರನುದಾಸೀನಂ ಗ್ರಹಾನೀಕದೊಳ್ ೧೫

(ನಿಸರ್ಗಶತ್ರುಗಳು)

ದಿವಸಕರಂಗೆ ಭಾರ್ಗವ ದಿನೇಶಸುತರ್ ವಿಧುವಿಂಗೆ ವೈರಿಯಿ
ಲ್ಲವನಿಸುತಂಗೆ ಚಂದ್ರಸುತನಿಂದುಸುತಂಗಮೃತಾಂಶು ಮಂತ್ರಿಗೈಂ
ದವ ಭೃಗುನಂದನರ್ ಭೃಗುಸುತಂಗೆ ರವೀಂದುಗಳರ್ಕನಂದನಂ
ಗವನಿತನೂಜ ಸೋಮ ಸರಸೀಜಸಖರ್ ಪಗೆವರ್ ನಿರಂತರಂ ೧೬

(ತತ್ಕಾಲಮಿತ್ರ ಶತ್ರುಗಳು)

ಸಹಜಾಯ ವ್ಯಯ ಧನ ದಶ
ಸುಹೃದ್ಗೃಹಸ್ಥಾಯಿಯಾಗೆ ತತ್ಕಾಲದೊಳಾ
ಗ್ರಹಮಂತದು ತಾತ್ಕಾಲಿಕ
ಸುಹೃದ್ಗ್ರಹಂ ಪರಯುತಂ ದ್ವಿಷದ್ಗ್ರಹಮೆನಿಕುಂ ೧೭

---

೧೪. ಸೂರ್ಯನಿಗೆ–ಚಂದ್ರ ಮಂಗಳ ಗುರು; ಚಂದ್ರನಿಗೆ–ಸೂರ್ಯ ಬುಧ; ಮಂಗಳನಿಗೆ–ಚಂದ್ರ ಸೂರ್ಯ ಗುರು; ಬುಧನಿಗೆ–ಸೂರ್ಯ ಶುಕ್ರ; ಗುರುವಿಗೆ–ಚಂದ್ರ ಸೂರ್ಯ ಮಂಗಳ; ಶುಕ್ರನಿಗೆ–ಬುಧ ಶನಿ; ಶನಿಗೆ–ಶುಕ್ರ ಬುಧ ಇವರು ಸಹಜಮಿತ್ರರು.

೧೫. ಸೂರ್ಯನಿಗೆ–ಬುಧ; ಚಂದ್ರನಿಗೆ–ಶನಿ ಮಂಗಳ ಗುರು ಶುಕ್ರ; ಮಂಗಳನಿಗೆ–ಶುಕ್ರ ಶನಿ; ಬುಧನಿಗೆ–ಮಂಗಳ ಶನಿ ಗುರು; ಗುರುವಿಗೆ–ಶನಿ; ಶುಕ್ರನಿಗೆ–ಗುರು ಕುಜ; ಶನಿಗೆ–ಗುರು ಇವರು ಉದಾಸೀನರು.

೧೬. ಸೂರ್ಯನಿಗೆ–ಶುಕ್ರ ಶನಿ; ಮಂಗಳನಿಗೆ–ಬುಧ; ಬುಧನಿಗೆ–ಚಂದ್ರ; ಗುರುವಿಗೆ–ಬುಧ ಶುಕ್ರ; ಶುಕ್ರನಿಗೆ–ಸೂರ್ಯ ಚಂದ್ರ; ಶನಿಗೆ–ಮಂಗಳ ಚಂದ್ರ ಸೂರ್ಯ ಇವರು ಸಹಜಶತ್ರುಗಳು. ಚಂದ್ರನಿಗೆ ಶತ್ರುವಿಲ್ಲ.

೧೭. ಇಷ್ಟಕಾಲ (ತತ್ಕಾಲ)ದಲ್ಲಿ ಗ್ರಹವಿರುವ ಸ್ಥಾನದಿಂದ ಮೂರು ಹನ್ನೊಂದು ಹನ್ನೆರಡು ಎರಡು ಹತ್ತು ನಾಲ್ಕು ಈ ಸ್ಥಾನಗಳಲ್ಲಿರುವ ಗ್ರಹ ತತ್ಕಾಲಮಿತ್ರ. ಉಳಿದ ಸ್ಥಾನಗಳಲ್ಲಿರುವ ಗ್ರಹ ತತ್ಕಾಲಶತ್ರು.

---

[1] ಗಂ (ಕ) [2] ಮಾಂ (ಕ) [3] ಸೂ (ಕ ಗ).

(ಅತಿಮಿತ್ರ ಮೊದಲಾದುವು)

ಆ ನಿಸರ್ಗಮಿತ್ರಗ್ರಹಂ ತತ್ಕಾಲಮಿತ್ರನಾದಂದತಿಮಿತ್ರ[1]ನು[1]ದಾ
ಸೀನನುಂ ಮಿತ್ರನಕ್ಕುಂ* ಶತ್ರು[2]ವೆ ತಾ[2]ನುದಾಸೀನನಕ್ಕುಂ ತತ್ಕಾಲಶತ್ರು
ಸ್ಥಾನದೊಳ್ ನೆಲಸಿದ ಶತ್ರು ತಾನತಿಶತ್ರುವು[ವಿ ವನ]ಕ್ಕುಂ ಮಿತ್ರನುದಾ
ಸೀನನಕ್ಕುಮುದಾಸೀನಂ ಶತ್ರುವಕ್ಕುಂ* ಕವಿರಾಜ[ನಿವಹ] ಬಾಂಧವಾ ೧೮

(ಗ್ರಹಸ್ವರೂಪ)

ತನುಕೇಶಂ ಮಧುಪಿಂಗಾ
ಕ್ಷನಸ್ಥಿಸಾರಂ ಸಪಿತ್ತದೇಹಂ [3]ಚತುರ
ಸ್ರ[3]ನಭೀತಂ ಸಮನೆಲೆ ಪೃಥು
ತನು ರಕ್ತಶ್ಯಾಮನೆನಿಸುಗುಂ ದಿನನಾಥಂ ೧೯

ಮೃದುವಾಕ್ಯನಸ್ರಕ್ಸಾರಂ
ಸುದೃಷ್ಟಿ ಮೇಧಾವಿ ನಿಡಿಯನನಿಲಕಫಾತ್ಮಂ
ಸದಯಂ [4]ಚೊ[4]ಚ್ಚನೆಮ್ಮೆ ಬ
ಟ್ಟದನತಿಚಪಳಂ ಸ[5]ಖ[5]ಪ್ರಿಯಂ. ಸಸಿಯೆನಿಕುಂ ೨೦

---

೧೮. ನಿಸರ್ಗಮಿತ್ರಗ್ರಹ ತತ್ಕಾಲಮಿತ್ರನಾದರೆ ಅತಿಮಿತ್ರ. ಉದಾಸೀನಗ್ರಹ ತತ್ಕಾಲಮಿತ್ರನಾದರೆ ಮಿತ್ರ. ನಿಸರ್ಗಮಿತ್ರಗ್ರಹ ತತ್ಕಾಲಶತ್ರುವಾದರೆ ಉದಾಸೀನ. ಉದಾಸೀನಗ್ರಹ ತತ್ಕಾಲಶತ್ರುವಾದರೆ ಶತ್ರು. ನಿಸರ್ಗಶತ್ರುಗ್ರಹ ತತ್ಕಾಲಶತ್ರುವಾದರೆ ಅತಿಶತ್ರು.

ಉದಾ—ಸೂರ್ಯನಿಗೆ ದ್ವಿತೀಯದಲ್ಲಿ ಗುರುವಿದ್ದರೆ ನಿಸರ್ಗ ಮತ್ತು ತತ್ಕಾಲಮಿತ್ರನಾಗುವುದರಿಂದ ಗುರು ಸೂರ್ಯನಿಗೆ ಅತಿಮಿತ್ರ. ಸೂರ್ಯನಿಗೆ ದ್ವಿತೀಯದಲ್ಲಿ ಬುಧನಿದ್ದರೆ ಉದಾಸೀನ ಮತ್ತು ತತ್ಕಾಲಮಿತ್ರನಾಗುವುದರಿಂದ ಬುಧ ಸೂರ್ಯನಿಗೆ ಮಿತ್ರ. ಸೂರ್ಯನಿಗೆ ಏಳನೇ ಸ್ಥಾನದಲ್ಲಿರುವ ಮಂಗಳ ನಿಸರ್ಗ ಮಿತ್ರ ಮತ್ತು ತತ್ಕಾಲಶತ್ರುವಾಗುವುದರಿಂದ ಮಂಗಳ ಸೂರ್ಯನಿಗೆ ಉದಾಸೀನ. ಗುರುವಿಗೆ ಎಂಟನೇ ಸ್ಥಾನದಲ್ಲಿರುವ ಶನಿ ಉದಾಸೀನ ಮತ್ತು ತತ್ಕಾಲಶತ್ರುವಾಗುವುದರಿಂದ ಶನಿ ಗುರುವಿಗೆ ಶತ್ರು. ಸೂರ್ಯನಿಗೆ ಏಳನೇ ಸ್ಥಾನದಲ್ಲಿರುವ ಶನಿ ನಿಸರ್ಗ ಮತ್ತು ತತ್ಕಾಲಶತ್ರುವಾಗುವುದರಿಂದ ಶನಿ ಸೂರ್ಯನಿಗೆ ಅತಿಶತ್ರು.

೧೯. ಸೂರ್ಯನಿಗೆ—ಕೂದಲು ವಿರಳ, ಕೆಂಪು ಹಳದಿ ಮಿಶ್ರಬಣ್ಣದ ಕಣ್ಣು, ಬಲವಾದ ಮೂಳೆ, ಪಿತ್ತಶರೀರ, ಚಚ್ಚೌಕದ ಆಕಾರ, ಹೆದರಿಕೆಯಿಲ್ಲ, ಹೆಚ್ಚು ಎತ್ತರವಲ್ಲದ ಸಮನಾದ ಕೆಂಪು ಕಪ್ಪು ಮಿಶ್ರಬಣ್ಣದ ಸ್ಥೂಲದೇಹ.

೨೦. ಚಂದ್ರ—ಮೃದುಭಾಷಿ, ರಕ್ತಪುಷ್ಟ, ನೋಡಲು ಸುಂದರ, ಮೇಧಾವಿ, ಸ್ನೇಹಪರ, ದಯಾವಂತ, ಎತ್ತರವಾದ ಕಫ ವಾತಗಳಿಂದ ಕೂಡಿದ ಗುಂಡುಶರೀರ, ಬಿಳುಪುಬಣ್ಣ ಮತ್ತು ಚಪಲಸ್ವಭಾವವುಳ್ಳವ.

---

* 'ಕ' ಪ್ರತಿಯಲ್ಲಿ ಈ ಪದ್ಯಭಾಗವಿಲ್ಲ. [1] ನಕ್ಕುಂ (ಕ ಗ) [2] ವಾಗಿರ್ದನ (ಗ) [3] ತನುಂ ಚತುರ (ಕ ಗ) [4] ಕೆ (ಕ ಗ) [5] ಖ (ಕ ಗ).

ತರಳಂ ಕುಬ್ಜಂ ಚಪಳಂ
ಸರಕ್ತಗೌರರುಚಿ [1]ಪೈ[1]ತ್ತಿಕಂ ಪಿಂಗಾಕ್ಷಂ
ತರುಣಾಂಗಂ ಹಿಂಸಾತ
ತ್ಪರಶೀಲಂ ಮಜ್ಜಸಾರನೆನಿಸುಗುಮಾರಂ ೨೧

ಸಮುದಿತ ಸಿರಾಂಗನತಿಹೃ
ಷ್ಟಮನಂ ನಿಪುಣಂ ಪ್ರಿಯಂವದಂ ತ್ವಕ್ಸಾರಂ
ಸಮದೋಷತ್ರಿತಯಂ ಮ
ಧ್ಯಮರೂಪಂ ಸೋಮಸೂನು ದೂರ್ವಾಶ್ಯಾಮಂ ೨೨

ಗೌರಚ್ಛಾಯಂ ಸ್ಥೂಲಶ
ರೀರಂ ಮೃದುಲೋಚನಂ ಕಫಾತ್ಮಂ ದೀರ್ಘಾ
ಕಾರಂ ಸುಬುದ್ಧಿ ಮೇದ
ಸ್ಸಾರಂ ನಸುಕೆಂಚತಲೆಯನಕ್ಕುಂ ಜೀವಂ ೨೩

ಪವನಕಫಪ್ರಕೃತಿ ಸುಮಧು
ರವಾಣಿ ಕಾಂತಂ ಪ್ರಕೃಷ್ಟಪರ್ವಂ ಶ್ಯಾಮ
ಚ್ಛವಿ ಕರಿದ[2]ಪ್ಪ[2] ಕುರುಳ್ದಲೆ
ಯುವನತಿಸುಖಿ ಶುಕ್ಲಸಾರನಕ್ಕುಂ ಶುಕ್ರಂ ೨೪

---

೨೧. ಅಂಗಾರಕ—ತರಳ, ಕುಳ್ಳ, ಚಪಲಸ್ವಭಾವದವ, ಕೆಂಪು ಬಿಳುಪು ಮಿಶ್ರಬಣ್ಣ, ಪಿತ್ತಪ್ರಕೃತಿ, ಕಂದುಬಣ್ಣದ ಕಣ್ಣು, ಯೌವನದ ಶರೀರ, ಮತ್ತೊಬ್ಬರಿಗ ಹಿಂಸೆಕೊಡುವ ಸ್ವಭಾವ ಮತ್ತು ಮಜ್ಜಾಧಾತು ಅಧಿಕವಾಗಿ ಉಳ್ಳವ.

೨೨. ಬುಧ—ಮಾಂಸಪುಷ್ಟಿ ಇಲ್ಲದವ (ನರಗಳೇ ಎದ್ದು ಕಾಣುವ ಶರೀರವುಳ್ಳವ), ಸಂತುಷ್ಟ, ಕಾರ್ಯನಿಪುಣ, ಪ್ರಿಯವಾದಿ, ದಪ್ಪಚರ್ಮ, ಸಮತ್ರಿದೋಷ (ವಾತ ಪಿತ್ತ ಶ್ಲೇಷ್ಮ), ಮಧ್ಯಮ ಆಕಾರ ಮತ್ತು ಕಪ್ಪುಮಿಶ್ರ ಗರಿಕೆ ಹಸಿರುಬಣ್ಣವುಳ್ಳವ.

೨೩. ಗುರು—ಬುದ್ಧಿಶಾಲಿ, ಬಿಳುಪುಬಣ್ಣದ ಸ್ಥೂಲ ಮತ್ತು ಎತ್ತರವಾದ ಕೊಬ್ಬಿದ ಕಫಶರೀರ, ಕೋಮಲದೃಷ್ಟಿ, ಮತ್ತು ಸ್ವಲ್ಪ ಕೆಂಚು ಕೂದಲುಳ್ಳವ.

೨೪. ಶುಕ್ರ—ಮಧುರಭಾಷಿ, ವಾತ ಕಫ ಪ್ರಕೃತಿ, ಸುಂದರರೂಪು, ವಿರಳವಾದ ಗಿಣ್ಣು, ಸ್ವಲ್ಪ ಕಪ್ಪುಬಣ್ಣದ ಶರೀರ, ಕಪ್ಪು ಗುಂಗುರು ಕೂದಲು, ಅಧಿಕಸೌಖ್ಯ ಮತ್ತು ವೀರ್ಯವುಳ್ಳವ.

---

[1] ವ್ಯಪ್ಯೆ (ಕ ಗ) [2] ಪ್ಪ (ಕ).

ಅಸಿ[1]ಯಂ[1] ಕಡುನಿಡಿಯಂ ಸ್ನಾ
ಯುಸಾರನನಿಲಾತಿರಿಕ್ತನಲಸುಂಗಾಬಿಂ
ಪಿಸುಣಂ ಪಿಂಗಳಲೋಚನ
ನಸಿತಂ ಸ್ಥೂಲನಖದಂತರೋಮಂ ರವಿಜಂ ೨೫

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹಷಟ್ಪದಾಯಮಾನಂ ಸರಸಪ್ರಸನ್ನ
ವಚೋಲಕ್ಷ್ಮೀಧರಂ ಗದ್ಯಪದ್ಯವಿದ್ಯಾಧರಂ ಶ್ರೀಧರಾಚಾರ್ಯ ಪ್ರಣೀತಮಪ್ಪ
ಜಾತಕತಿಲಕದೊಳ್ ಬಲಾಬಲಪ್ರಕರಣಂ ದ್ವಿತೀಯಾಧಿಕಾರಂ

---

೨೫. ಶನಿ—ಸೋಮಾರಿ, ಚಾಡಿಕೋರ, ಕೃಶವೂ ಎತ್ತರವೂ ಮಾಂಸಪುಷ್ಟವೂ ಕಪ್ಪೂ ಆದ ವಾತಾಧಿಕ ಶರೀರ, ಕಂದುಹಳದಿ ಬಣ್ಣದ ಕಣ್ಣು, ದಪ್ಪನಾದ ಉಗುರು ಹಲ್ಲು ಮತ್ತು ರೋಮಗಳನ್ನುಳ್ಳವ.

ವಿ—ಜನನಕಾಲದಲ್ಲಿ ಬಲಿಷ್ಠರಾದ ಗ್ರಹಗಳಿಂದ ಜಾತಕನ ಸ್ವರೂಪವನ್ನು ತಿಳಿಯಲು ಈ ಗ್ರಹಸ್ವರೂಪಗಳು ಉಪಯೋಗವಾಗುತ್ತವೆ.

---

[1] ತಂ (ಕ ಗ).

# ತೃತೀಯಾಧಿಕಾರಂ

---

## ಗರ್ಭಾಧಾನ ಪ್ರಕರಣಂ

(ಆಧಾನ ವಿಚಾರ)

ರಮಣೀಸಂಗಮಮಾಗೆ ಸಂಭವಿಪ ಗರ್ಭಾಧಾನ ಲಗ್ನಕ್ಕೆ ಸ
ಪ್ತಮಮಪ್ಪಾಲಯದೊಂದು ಶೀಲದವೋಲಕ್ಕುಂ ತತ್ಪ್ರಸಂಗಂ ವಿಲ
ಗ್ನಮನಾಳೋಕಿಸೆ ಸದ್ಗ್ರಹಂ ನೆಲಸೆ ಮೇಣ್ ಕೂಟಂ ಸರಾಗಂ ವಿರಾ
ಗಮದಂ ವೀಕ್ಷಿಸೆ ಕೂಡೆ ಮೇಣ್ ತದಿತ[1]ರರ್ ಸಮ್ಮಿ[1]ಶ್ರದಿಂ ಮಿಶ್ರಕಂ ೧

---

೧. ಗರ್ಭಾಧಾನ ಲಗ್ನಕ್ಕೆ ಏಳನೇ ರಾಶಿಯ ಸ್ವಭಾವದಂತೆ ಆಧಾನ ಪ್ರಸಂಗವು ನಡೆಯುತ್ತದೆ. ಶುಭಗ್ರಹ ಲಗ್ನವನ್ನು ನೋಡಿದರೆ ಅಥವಾ ಲಗ್ನದಲ್ಲಿದ್ದರೆ ಪ್ರೀತಿಯಿಂದಲೂ, ಅಶುಭಗ್ರಹ ಲಗ್ನವನ್ನು ನೋಡಿದರೆ ಅಥವಾ ಲಗ್ನದಲ್ಲಿದ್ದರೆ ಇಚ್ಛೆಯಿಲ್ಲದೆಯೂ, ಶುಭ ಮತ್ತು ಅಶುಭಗ್ರಹಗಳು ಲಗ್ನವನ್ನು ನೋಡಿದರೆ ಅಥವಾ ಲಗ್ನದಲ್ಲಿದ್ದರೆ ಔದಾಸೀನ್ಯದಿಂದಲೂ ಆಧಾನಪ್ರಸಂಗವು ನಡೆಯುತ್ತದೆ.

ವಿ–ಆಧಾನ ಲಗ್ನಕ್ಕೆ ಸಪ್ತಮರಾಶಿಯು ಯಾವ ಪ್ರಾಣಿ ಆಗುವುದೋ ಆ ಪ್ರಾಣಿಯ ಕ್ರಮದಂತೆ ಆಧಾನವು ನಡೆಯುತ್ತದೆ.

ಬೃಹಜ್ಜಾತಕದಲ್ಲಿ—"ಅಸದ್ಗ್ರಹಾಲೋಕಿತಸಂಯುತೇಽಸ್ತೇ ಸರೋಷ ಇಷ್ಟೈಃ ಸವಿಲಾಸಹಾಸಃ" ಎಂದು ಲಗ್ನಕ್ಕೆ ಪ್ರತಿಯಾಗಿ ಸಪ್ತಮ ಸ್ಥಾನವನ್ನು ಹೇಳಿದೆ. ಇದರಂತೆಯೇ ಇತರ ಜ್ಯೋತಿಷ ಗ್ರಂಥಗಳಲ್ಲಿದೆ. ಇದು ಪ್ರಕೃತ ಗ್ರಂಥಕ್ಕೆ ವಿರುದ್ಧವಾಗಿ ಕಂಡುಬರುತ್ತದೆ. ಇಲ್ಲಿ "ವಿಲಗ್ನಮನಾಳೋಕಿಸೆ ಸದ್ಗ್ರಹಂ" ಎಂದರೆ ವಿಶೇಷದೃಷ್ಟಿಯನ್ನು ಬಿಟ್ಟು ಸಪ್ತಮದೃಷ್ಟಿಯನ್ನು ಮಾತ್ರ ತೆಗೆದುಕೊಳ್ಳುವುದರಿಂದ, ಲಗ್ನಕ್ಕೆ ಪೂರ್ಣದೃಷ್ಟಿ ಬರಬೇಕಾದರೆ ಸಪ್ತಮಕ್ಷೇತ್ರ ಸ್ಥಿತಿಯೂ, ಲಗ್ನದಲ್ಲಿದ್ದರೆ ಸಪ್ತಮಕ್ಕೆ ಪೂರ್ಣದೃಷ್ಟಿಯೂ ಇರುವ ಕಾರಣ ವಿರೋಧವಿಲ್ಲ.

---

[1] ರರ್ಥಂ ಮಿ (ಕ) ರರ್ತಂ ಮಿ (ಗ).

(ದೀಪಜ್ಞಾನ)

ರವಿಪುತ್ರಾಂಶದೊಳಕ್ಕೆ ಮೇಣ್ ಹಿಬುಕದೊಳ್ ಮೇಣ್ ವಾಶ್ಚರಾಂಶಂಗಳೊಳ್
ರವಿಪುತ್ರಾನ್ವಿತನಾಗಿ ಮೇಣಿರೆ ಶಶಾಂಕಂ ದೀಪಮಿಲ್ಲೆಂಗೆ ತ
ದ್ಭವನಾಭ್ಯಂತರದೊಳ್ ತದನ್ಯಗತಿಯಿಂದಂ ದೀಪಮುಂಟೆಂಗೆ ನೋ
ಡುವಡಾಧಾನವಿಲಗ್ನ ತಜ್ಜನನಲಗ್ನ ಪ್ರಶ್ನಲಗ್ನಂಗಳೊಳ್ ೨

(ಗರ್ಭಸ್ವರೂಪ ಮತ್ತು ಮಾಸಾಧಿಪತಿಗಳು)

ವನಿತೆಗೆ ಗರ್ಭವಾಗೆ ಮೊದಲೊಳ್ ಕಲಲಂ ಸಿತನಿಂದೆವೊಂದುಗುಂ
ಘನಮವನೀಜನಿಂದವಯವಂ ದಿವಿಜಾರ್ಚಿತನಿಂದವಸ್ಥಿಗಳ್
ದಿನಕರನಿಂ ತ್ವಚಂ ಹಿಮಗುವಿಂ ನವಿರರ್ಕತನೂಜನಿಂದೆ ಚೇ
ತನಮುಡುನಾಥ[1]ಜಾತನಿನಧೀಶರಿವರ್ ಕ್ರಮದೇೞು[1] ತಿಂಗಳ್ಗಂ ೩

---

೨. ಆಧಾನ ಅಥವಾ ಜನನ ಅಥವಾ ಪ್ರಶ್ನಕಾಲದಲ್ಲಿ ಶನಿಯು ನವಾಂಶ [ಮಕರ-ಕುಂಭ]ದಲ್ಲಿ ಅಥವಾ ಲಗ್ನಕ್ಕೆ ಚತುರ್ಥಸ್ಥಾನದಲ್ಲಿ ಅಥವಾ ಜಲಚರ ನವಾಂಶ [ಕರ್ಕಟಕ-ಮೀನ]ಗಳಲ್ಲಿ ಅಥವಾ ಶನಿಯೊಡನೆ ಚಂದ್ರನಿದ್ದರೆ ಆ ಮನೆಯೊಳಗೆ ದೀಪವಿಲ್ಲವೆಂದೂ, ಅನ್ಯಥಾ ದೀಪವಿದೆಯೆಂದೂ ಹೇಳುವುದು.

ವಿ–ಈ ನಾಲ್ಕು ಯೋಗಗಳಲ್ಲೂ ಚಂದ್ರನು ಸೂರ್ಯನ ಕೂಡ ಇದ್ದರೆ ಆ ಕಾಲದಲ್ಲಿ ಕತ್ತಲೆಯಿರುವುದಿಲ್ಲ.

೩. ಸ್ತ್ರೀ ಗರ್ಭಿಣಿಯಾಗಲು ಮೊದಲ ತಿಂಗಳಿನಲ್ಲಿ ಶುಕ್ರಶೋಣಿತಮಿಶ್ರ ರೂಪವು ಶುಕ್ರನಿಂದ ಆಕೆಯ ಗರ್ಭದಲ್ಲಿ ಕೂಡುತ್ತದೆ. ಆ ಗರ್ಭವು ಎರಡನೇ ತಿಂಗಳಿನಲ್ಲಿ ಘನೀಭಾವವನ್ನು ಅಂಗಾರಕನಿಂದ, ಮೂರನೆಯ ತಿಂಗಳಿನಲ್ಲಿ ಅವಯವವನ್ನು ಗುರುವಿನಿಂದ, ನಾಲ್ಕನೇ ತಿಂಗಳಿನಲ್ಲಿ ಮೂಳೆಗಳನ್ನು ಸೂರ್ಯನಿಂದ, ಐದನೇ ತಿಂಗಳಿನಲ್ಲಿ ಚರ್ಮವನ್ನು ಚಂದ್ರನಿಂದ, ಆರನೇ ತಿಂಗಳಿನಲ್ಲಿ ರೋಮಗಳನ್ನು ಶನಿಯಿಂದ, ಏಳನೇ ತಿಂಗಳಿನಲ್ಲಿ ಚೇತನವನ್ನು ಬುಧನಿಂದ ಪಡೆಯುತ್ತದೆ. ಕ್ರಮವಾಗಿ ಈ ಏಳು ತಿಂಗಳಿಗೆ ಆಯಾ ತಿಂಗಳಿನ ರೂಪೋತ್ಪಾದಕ ಗ್ರಹವೇ ಅಧಿಪತಿ.

ವಿ–ಯವನಾಚಾರ್ಯರ ಮತದಂತೆ ಮೊದಲನೆಯ ತಿಂಗಳಿಗೆ ಮಂಗಳ, ಎರಡನೆಯ ತಿಂಗಳಿಗೆ ಶುಕ್ರ ಇವರು ಅಧಿಪತಿಗಳು.

---

[1] ಜಾತನಿನಧೀಶರಿವರೇಳು (ಕ) ನನಿಧಿಶರೀರೇಳು (ಗ).

(೮-೯-೧೦ನೇ ಮಾಸಾಧಿಪತಿಗಳು ಮತ್ತು ಮಾಸಾಧಿಪ ಪ್ರಯೋಜನ)

ಬಿರೆ ಮಾಸಾಷ್ಟಕಮ[1]ಲ್ಲಿ ತಾಯುಣಿಸನುಣ್ಗುಂ ಗರ್ಭಲಗ್ನೇಶನೀ
ಶ್ವರನಕ್ಕುಂ ಪತಿ ಶೀತರೋಚಿ ನವಮಕ್ಕುದ್ವೇಗಮಕ್ಕುಂ ದಿವಾ
ಕರನೀಶಂ ದಶಮಾಸದೊಳ್ ಜನಿಯಿಕುಂ ಮಾಸಾಧಿಪರ್ ಕಾಂತಿಗೆ
[2]ಟ್ಟರೆ[2] ಗರ್ಭಕ್ಕತಿಪೀಡೆ ಸೋಲ್ತೊಡಟ್ಟಗುಂ ನಿಲ್ಕುಂ ನಿರಾಬಾಧೆಯಿಂ ೪

(ಆಧಾನ ಲಗ್ನದಿಂದ ಶುಭಾಶುಭ ಫಲ)

ರವಿಯಿಂದೇೞಱೊಳಾರ ಸೌರರಿರೆ ಕುತ್ತಂ ತಂದೆಗಂತಾದೊಡಿಂ
ದುವಿನಿಂ ತಾಯ್ಗೆ ಕುಜಾರ್ಕಿಮಧ್ಯದೊಳಿನಂ ಕೂಡಿರ್ದೊಡಂ ತಂದೆಗಿಂ
ದುವೆ ಮತ್ತಲ್ಲಿರೆ ತಾಯ್ಗೆ ಮೃತ್ಯು ಜನಕಂಗಾರ್ಕ್ಯಾರ[3]ಱೊಳ್[3] ನೋೞ್ಪ ಭಾ
ನುವನೊರ್ವಂ ನೆರೆದಿರ್ಪೊಡೊರ್ವನುಡುಪಂಗಂತಾಗೆ ತಾಯ್ಗಂ ಲಯಂ ೫

೪. ಗರ್ಭವು ಎಂಟನೆಯ ತಿಂಗಳಿನಲ್ಲಿ ತಾಯಿಯ ಆಹಾರವನ್ನು ತಿನ್ನುತ್ತದೆ. ಆಧಾನಲಗ್ನಾಧಿಪತಿ ಈ ತಿಂಗಳಿನ ಒಡೆಯ. ಒಂಬತ್ತನೆಯ ತಿಂಗಳಿನ ಅಧಿಪತಿ ಚಂದ್ರ. ಈ ತಿಂಗಳಿನಲ್ಲಿ ಪ್ರಸವೋದ್ವೇಗವುಂಟಾಗುತ್ತದೆ. ಹತ್ತನೆಯ ತಿಂಗಳಿನ ಅಧಿಪತಿ ಸೂರ್ಯ. ಈ ತಿಂಗಳಿನಲ್ಲಿ ಶಿಶು ಜನಿಸುತ್ತದೆ. ಮಾಸಾಧಿಪತಿಗಳು ಕಾಂತಿಹೀನರಾದರೆ ಗರ್ಭಕ್ಕೆ ತೊಂದರೆ. ಯುದ್ಧದಲ್ಲಿ ಸೋತರೆ ಗರ್ಭನಾಶ. ನಿರ್ಮಲರಾಗಿದ್ದರೆ ಗರ್ಭವು ನಿಲ್ಲುತ್ತದೆ.

ವಿ–ಕುಜ ಬುಧ ಗುರು ಶುಕ್ರ ಶನಿಗಳು ಅಸ್ತರಾದಾಗ (ಸೂರ್ಯನೊಡನೆ ಇದ್ದಾಗ) ಮತ್ತು ಯುದ್ಧದಲ್ಲಿ ಪರಾಜಿತರಾದಾಗ ಕಾಂತಿಹೀನರಾಗುತ್ತಾರೆ. ಗ್ರಹಣಕಾಲದಲ್ಲಿ ಮತ್ತು ಕ್ಷೀಣನಾದಾಗ ಚಂದ್ರನೂ, ಗ್ರಹಣಕಾಲದಲ್ಲಿ ಸೂರ್ಯನೂ ಕಾಂತಿಹೀನರಾಗುತ್ತಾರೆ.

೫. ಆಧಾನ ಅಥವಾ ಪ್ರಶ್ನಕಾಲದಲ್ಲಿ ಅಂಗಾರಕ ಶನಿಗಳು ಸೂರ್ಯನಿಂದ ಏಳನೇ ಸ್ಥಾನದಲ್ಲಿದ್ದರೆ ತಂದೆಗೆ, ಚಂದ್ರನಿಂದ ಏಳನೇ ಸ್ಥಾನದಲ್ಲಿದ್ದರೆ ತಾಯಿಗೆ ರೋಗಪ್ರದರಾಗುತ್ತಾರೆ. ಅಂಗಾರಕ ಶನಿಗಳ ಮಧ್ಯದಲ್ಲಿ ಸೂರ್ಯನಿದ್ದರೆ [ಸೂರ್ಯನಿಗೆ ಹನ್ನೆರಡನೇ ಸ್ಥಾನದಲ್ಲಿ ಒಬ್ಬನೂ, ಎರಡನೇ ಸ್ಥಾನದಲ್ಲಿ ಇನ್ನೊಬ್ಬನೂ ಇದ್ದರೆ] ತಂದೆಗೆ, ಚಂದ್ರನಿದ್ದರೆ ತಾಯಿಗೆ, ಸೂರ್ಯನೊಡನೆ ಶನ್ಯಂಗಾರಕರಲ್ಲಿ ಒಬ್ಬನಿದ್ದು ಮತ್ತೊಬ್ಬ ಸೂರ್ಯನನ್ನು ನೋಡಿದರೆ ತಂದೆಗೆ, ಚಂದ್ರನಿಗೆ ಈ ರೀತಿಯಾದರೆ [ಚಂದ್ರನೊಡನೆ ಶನ್ಯಂಗಾರಕರಲ್ಲಿ ಒಬ್ಬನಿದ್ದು ಇನ್ನೊಂದು ಗ್ರಹ ಚಂದ್ರನನ್ನು ನೋಡಿದರೆ] ತಾಯಿಗೆ ಮೃತ್ಯುವುಂಟಾಗುತ್ತದೆ.

ವಿ–ಅಂಗಾರಕನು ಮಾಸಾಧಿಪತಿಯಾಗಿರುವಾಗ ಆತನಿಂದುಂಟಾಗುವ ಫಲವೂ, ಶನಿಯ ಮಾಸದಲ್ಲಿ ಆತನಿಂದುಂಟಾಗುವ ಫಲವೂ ಆಗುತ್ತದೆ.

[1] ದ (ಗ) [2] ಟ್ಟೊಡೆ (ಕ ಗ) [3] ಕಂ (ಕ ಗ).

(ತಂದೆ ತಾಯಿ ಚಿಕ್ಕಪ್ಪ ಚಿಕ್ಕಮ್ಮ [ತಾಯಿಯ ತಂಗಿ] ಈ ಕಾರಕಗ್ರಹಗಳು)

ಪಗಲೊಳ್ ತಂದೆ ದಿವಾಕರಂ ಜನನಿ ಶುಕ್ರಂ ರಾತ್ರಿಯೊಳ್ ತಂದೆ ತೀ
ಕ್ಷ್ಣಗುಜಂ ಮಾತೃ ಸುಧಾಮರೀಚಿ ಕಿಱಿಯಯ್ಯಂ ಸೂರ್ಯಪುತ್ರಂ ಪಗಲ್
ಮೃಗಲಕ್ಷ್ಮಂ ಕಿಱಿಯಬ್ಬೆ ಮತ್ತೆ ಕಿಱಿಯಯ್ಯಂ ಭಾಸ್ಕರಂ ರಾತ್ರಿಯೊಳ್
ಭೃಗುಪುತ್ರಂ ಕಿಱಿಯಬ್ಬೆಯೆಂದಱಿಗೆ ಶಿಷ್ಟಾರಿಷ್ಟ ಸಂಪ್ರಾಪ್ತಿಯಂ　　೬

(ಕಾರಕ ಗ್ರಹಫಲ)

ಪಗಲಿನ ಲಗ್ನಮಕ್ಕಿರುಳಲಗ್ನದೊಳೋಜಗೃಹಸ್ಥನಾಗೆ ತಂ
ದೆಗೆ ಜನಕಗ್ರಹಂ ನೆಲಸೆ ಯುಗ್ಮದೊಳಾ ಜನನೀಗ್ರಹಂ ಸ್ವಮಾ
ತೃಗೆ ಜನಕಾನುಜಂಗೆ ಕಿರಿಯಬ್ಬೆಗೆ ತತ್ಕ್ರಮದಿಂದಮೊಳ್ಪು ಕೂ
ಡುಗುಮದು ವೈಪರೀತ್ಯಮೆನೆ ಬಂದೊಡರಿಷ್ಟಮನುಂಟುಮಾಡುಗುಂ　　೭

---

೬. ಹಗಲಿನಲ್ಲಿ ತಂದೆಗೆ ಸೂರ್ಯ ತಾಯಿಗೆ ಶುಕ್ರ, ರಾತ್ರಿಯಲ್ಲಿ ತಂದೆಗೆ ಶನಿ ತಾಯಿಗೆ ಚಂದ್ರ, ಹಗಲಿನಲ್ಲಿ ಚಿಕ್ಕಪ್ಪನಿಗೆ ಶನಿ ಚಿಕ್ಕಮ್ಮನಿಗೆ ಚಂದ್ರ, ರಾತ್ರಿಯಲ್ಲಿ ಚಿಕ್ಕಪ್ಪನಿಗೆ ಸೂರ್ಯ ಶುಕ್ರ ಚಿಕ್ಕಮ್ಮನಿಗೆ ಕಾರಕ ಗ್ರಹಗಳು ಎಂದು ತಿಳಿದುಕೊಳ್ಳುವುದು. ಈ ಕಾರಕಗ್ರಹಗಳಿಂದ ಅವರವರ ಶುಭಾಶುಭ ಫಲಗಳನ್ನು ತಿಳಿಯಬಹುದು.

೭. ಹಗಲಿನ ಲಗ್ನವಾಗಲೀ ರಾತ್ರಿಲಗ್ನವಾಗಲೀ ಓಜರಾಶಿಯಲ್ಲಿ ಪಿತೃಕಾರಕಗ್ರಹವಿದ್ದರೆ ತಂದೆಗೆ, ಯುಗ್ಮರಾಶಿಯಲ್ಲಿ ಮಾತೃಕಾರಕಗ್ರಹವಿದ್ದರೆ ತನ್ನ ತಾಯಿಗೆ, ಕ್ರಮವಾಗಿ ಚಿಕ್ಕಪ್ಪ ಮತ್ತು ಚಿಕ್ಕಮ್ಮನಿಗೆ ಶುಭಫಲವುಂಟಾಗುತ್ತದೆ. ಇದಕ್ಕೆ ವಿಪರೀತವಾದರೆ ಗ್ರಹ ಅವರಿಗೆ ಅಶುಭಫಲವನ್ನುಂಟು ಮಾಡುತ್ತದೆ.

ವಿ—ಸಿಂಹ ತುಲಾ ಕುಂಭ ಓಜ ಹಗಲಿನ ರಾಶಿಗಳು. ಮೇಷ ಮಿಥುನ ಧನುಸ್ಸು ಓಜ ರಾತ್ರಿರಾಶಿಗಳು. ಕನ್ಯಾ ವೃಶ್ಚಿಕ ಮೀನ ದಿವಾಯುಗ್ಮ ರಾಶಿಗಳು. ವೃಷಭ ಕರ್ಕಟಕ ಮಕರ ರಾತ್ರಿಯುಗ್ಮರಾಶಿಗಳು.

ಹಗಲು ಜನನವಾದಾಗ ಓಜ ದಿವಾರಾಶಿಗಳಲ್ಲಿ ಸೂರ್ಯನಿದ್ದರೆ ತಂದೆಗೆ, ಶನಿಯಿದ್ದರೆ ಚಿಕ್ಕಪ್ಪನಿಗೆ, ದಿವಾಯುಗ್ಮರಾಶಿಗಳಲ್ಲಿ ಶುಕ್ರನಿದ್ದರೆ ತಾಯಿಗೆ, ಚಂದ್ರನಿದ್ದರೆ ಚಿಕ್ಕಮ್ಮನಿಗೆ ಶುಭಫಲವುಂಟಾಗುತ್ತದೆ.

ರಾತ್ರಿ ಜನನವಾದಾಗ ಓಜ ರಾತ್ರಿರಾಶಿಗಳಲ್ಲಿ ಶನಿಯಿದ್ದರೆ ತಂದೆಗೆ, ಸೂರ್ಯನಿದ್ದರೆ ಚಿಕ್ಕಪ್ಪನಿಗೆ, ರಾತ್ರಿ ಯುಗ್ಮರಾಶಿಗಳಲ್ಲಿ ಚಂದ್ರನಿದ್ದರೆ ತಾಯಿಗೆ, ಶುಕ್ರನಿದ್ದರೆ ಚಿಕ್ಕಮ್ಮನಿಗೆ ಶುಭಫಲವುಂಟಾಗುತ್ತದೆ.

ಸಾರಾವಳೀ ಗ್ರಂಥದಲ್ಲಿ "ಲಗ್ನಾದ್ವಿಷಮರ್ಕ್ಷಗತಃ" ಎಂದಿರುವುದರಿಂದ, ಆ ಗ್ರಂಥದ ಅಭಿಪ್ರಾಯದಂತೆ "ಓಜಗೃಹಸ್ಥನಾಗೆ" ಎಂದರೆ ಲಗ್ನದಿಂದ ಓಜ ರಾಶಿಯಲ್ಲಿದ್ದರೆ ಎಂದು ಅರ್ಥವಾಗುತ್ತದೆ.

(ಗರ್ಭಸಂಭವಜ್ಞಾನ)

ಭೃಗುಸೂರ್ಯರ್ ನಿಲೆ ಭರ್ತೃಜನ್ಮಭವನಕ್ಕಾಧಾನಲಗ್ನಕ್ಕೆ ಮೇಣ್
ಸ್ವಗೃಹಾಂಶೋಪಚಯರ್ಕ್ಷದೊಳ್ ಬಳಯುತರ[1] ಮೇಣ್ ತದ್ವಧೂಜನ್ಮರಾ
ಶಿಗೆ ಮೇಣ್ ಲಗ್ನಗೃಹಕ್ಕೆ ಚಂದ್ರಧರಣೀಜಾತರ್ ಬಲಾನ್ವೀತರಾ
ತ್ಮಗೃಹಾಂಶೋಪಚಯಸ್ಥರಾಗೆ ದೊರೆಕೊಳ್ಗುಂ ಗರ್ಭಮವ್ಯಾಜದಿಂ ೮

ಅಮರಾಧೀಶ್ವರವಂದಿತಂ ಬಳಸಮೇತಂ ಲಗ್ನದೊಳ್ ಲಗ್ನಪಂ
ಚಮದೊಳ್ ಮೇಣ್ ನವಮರ್ಕ್ಷದೊಳ್ ನೆಲಸೆ ಮೇಣಂಗಾರ ಸೌರಾರ್ಕ ಚಂ
ದ್ರಮರಾತ್ಮೀಯ ನವಾಂಶದೊಳ್ ನೆಲಸೆ ಗರ್ಭಂ ನಿಲ್ಗುಮಿನ್ನಲ್ಲಿ ವಂ
ಧ್ಯಮನುಷ್ಯಾಳಿಗೆ ಮಾಳ್ಕುಮಾ ಮಿಥುನಭಾವಂ ನಂದನಾಭಾವಮಂ ೯

---

೮. ಬಲಿಷ್ಠರಾದ ಶುಕ್ರಸೂರ್ಯರು ಪುರುಷನ (ಪತಿಯ) ಜನ್ಮಲಗ್ನ ಅಥವಾ ರಾಶಿ ಅಥವಾ ಆಧಾನಲಗ್ನಕ್ಕೆ ಉಪಚಯರಾಶಿಗಳಲ್ಲಿ, ಅಥವಾ ಸ್ವಕ್ಷೇತ್ರದಲ್ಲಿ ಅಥವಾ ಸ್ವನವಾಂಶದಲ್ಲಿದ್ದರೆ, ಬಲಿಷ್ಠರಾದ ಚಂದ್ರಕುಜರು ಹೆಂಗಸಿನ(ಪತ್ನಿಯ) ಜನ್ಮರಾಶಿಗೆ ಅಥವಾ ಲಗ್ನಕ್ಕೆ ಉಪಚಯ ಅಥವಾ ಸ್ವಕ್ಷೇತ್ರ ಅಥವಾ ಸ್ವನವಾಂಶದಲ್ಲಿದ್ದರೆ ನಿಶ್ಚಯವಾಗಿಯೂ ಗರ್ಭೋತ್ಪತ್ತಿಯಾಗುತ್ತದೆ.

ವಿ—ಆಧಾನಲಗ್ನಕ್ಕೆ ಉಪಚಯದಲ್ಲಿರಬೇಕೆಂದು ಇತರ ಜ್ಯೌತಿಷ ಗ್ರಂಥಗಳಲ್ಲಿಲ್ಲ.

೯. ಗುರು ಬಲಿಷ್ಠನಾಗಿ ಆಧಾನಲಗ್ನ ಅಥವಾ ಲಗ್ನದಿಂದ ಪಂಚಮ ಅಥವಾ ನವಮರಾಶಿಯಲ್ಲಿ (ಸ್ಥಾನದಲ್ಲಿ)ದ್ದರೆ, ಅಥವಾ ಅಂಗಾರಕ ಶನಿ ಸೂರ್ಯಚಂದ್ರರು ತಮ್ಮ ತಮ್ಮ ನವಾಂಶಗಳಲ್ಲಿದ್ದರೆ ಗರ್ಭೋತ್ಪತ್ತಿಯಾಗುತ್ತದೆ. ಈ ಗರ್ಭಸಂಭವಯೋಗಗಳಿರುವ ಕಾಲದಲ್ಲಿ ಆಧಾನ ಮಾಡಿದರೂ ಬಂಜೆಯರಿಗೆ ಮಕ್ಕಳು ಹುಟ್ಟುವುದಿಲ್ಲ. [ಈ ಯೋಗಗಳು ಬಂಜೆಯರಿಗೆ ನಿಷ್ಫಲಗಳು]

ವಿ—೮ನೇ ಪದ್ಯದಲ್ಲಿ ಹೇಳಿರುವ ಅಭಿಪ್ರಾಯವೇ ಈ ಪದ್ಯದಲ್ಲೂ ಪುನಃ ಉಕ್ತವಾಗಿದೆ.

ಬೃಹಜ್ಜಾತಕದಲ್ಲಿ "ರವೀಂದು ಶುಕ್ರಾವನಿಜೈಃ ಸ್ವಭಾಗಗೈಃ" ಎಂದಿರುವಂತೆ, ಈ ಗ್ರಂಥದಲ್ಲೂ "ಮೇಣಂಗಾರ ಶುಕ್ರಾರ್ಕಚಂದ್ರಮರಾತ್ಮೀಯ ನವಾಂಶದೊಳ್ ನೆಲಸೆ" ಎಂದು ಸೌರನಿಗೆ ಬದಲು ಶುಕ್ರನನ್ನು ಸೇರಿಸಿಕೊಳ್ಳುವುದು ಇತರ ಜ್ಯೌತಿಷ ಗ್ರಂಥಗಳಿಗನುಗುಣವಾಗಿರುತ್ತದೆ.

---

[1] ತಂ (ಕ ಗ).

(ಪುರುಷ ಸ್ತ್ರೀ ಜನ್ಮಜ್ಞಾನ)

ಗುರು ಲಗ್ನ ದಿವಾಕರ ಹಿಮ
ಕರರಸಮಗ್ರಹಾಸಮಾಂಶಕಂಗಳೊಳೊಡಗೂ
ಡಿರೆ ಪುಂಜನ್ಮಂ ಸಮಮಂ
ದಿರದ ಸಮಾಂಶಕದೊಳಿರೆ ವಧೂಟೀಜನ್ಮಂ ೧೦

ಜನ್ಮಕ್ಕಾಧಾನಕ್ಕಿನ
ಜನ್ಮಂ ವಿಷಮಸ್ಥನಾಗೆ ಸಮನಿಸುಗುಂ ಪುಂ
ಜನ್ಮಂ ನಿಲೆ ಸಮದೊಳ್ ಸ್ತ್ರೀ
ಜನ್ಮಮದೆಂಬುದು ಬಲಾಬಲಪ್ರಬಲತೆಯಿಂ ೧೧

ಅಸಮಾಲಯದೊಳ್ ನಿಲೆ ಸೂ
ರ್ಯ ಸುರೇಜ್ಯರ್ ಬಳಯುತರ್ ನರಂ ಪುಟ್ಟುಗುಮಾ
ರ ಸಿತೇಂದುಗಳತಿಬಳರಾ
ಗಿ ಸಮದೊಳಿರೆ ರಮಣಿ ಪುಟ್ಟುಗುಂ ಬುಧಮಿತ್ರಾ ೧೨

(ಯಮಳ ಗರ್ಭಸಂಭವ ಯೋಗ)

ಬಿಸಜಾತಪ್ರಿಯ ಮಂತ್ರಿಗಳ್ ಬಳಯುತರ್ ಮಧ್ಯಂಗಳೊಳ್ ನಿಂದೊಡಿಂ
ದುಸುತಂ ವೀಕ್ಷಿಸೆ ಕೂಡುಗುಂ ಯಮಳಪುಂಜನ್ಮಂ ಬಟಿಕ್ಕಲ್ಲಿ ಸೋ
ಮಸಿತಾರರ್ ನಿಲೆ ಚಾಂದ್ರಿ ನೋಡೆ ಯಮಳಸ್ತ್ರೀಜನ್ಮಮಲ್ಲಿರ್ದು ವೀ
ಕ್ಷಿಸೆ ತತ್ಪಂಚಕಮಂ ಬುಧಂ ಯಮಳಪುಂಸ್ತ್ರೀಜನ್ಮಮೇಂ ಸಂದೆಯಿಂ ೧೩

---

೧೦. ಆಧಾನ ಅಥವಾ ಜನನಕಾಲದಲ್ಲಿ ಗುರು (ಆಧಾನ ಅಥವಾ ಜನನ)ಲಗ್ನ ಸೂರ್ಯಚಂದ್ರರಿರುವ ರಾಶಿ ಅಥವಾ ನವಾಂಶ ಬೆಸನಾದರೆ ಪುರುಷ ಜನನವೂ ಸಮನಾದರೆ ಸ್ತ್ರೀ ಜನನವೂ ಆಗುತ್ತದೆ.

೧೧. ಜನ್ಮ ಅಥವಾ ಆಧಾನಲಗ್ನಕ್ಕೆ ಶನಿಯು ವಿಷಮಸ್ಥಾನದಲ್ಲಿದ್ದರೆ ಗಂಡು ಜನನವೆಂದೂ, ಸಮಸ್ಥಾನದಲ್ಲಿದ್ದರೆ ಹೆಣ್ಣು ಜನನವೆಂದೂ ಬಲಾಬಲ ಪ್ರಾಬಲ್ಯದಿಂದ ತಿಳಿದು ಹೇಳುವುದು.

೧೨. ವಿಷಮ ರಾಶಿಯಲ್ಲಿ ಬಲಿಷ್ಠರಾದ ಸೂರ್ಯಗುರುಗಳಿದ್ದರೆ ಗಂಡು ಹುಟ್ಟುತ್ತದೆ. ಅಂಗಾರಕ ಶುಕ್ರ ಚಂದ್ರರು ಅತಿಬಲಿಷ್ಠರಾಗಿ ಯುಗ್ಮರಾಶಿಯಲ್ಲಿದ್ದರೆ ಹೆಣ್ಣು ಹುಟ್ಟುತ್ತದೆ.

೧೩. ಆಧಾನ ಅಥವಾ ಜನನಕಾಲದಲ್ಲಿ ಸೂರ್ಯಗುರುಗಳು ಬಲಿಷ್ಠರಾಗಿ ದ್ವಿಸ್ವಭಾವರಾಶಿಗಳಲ್ಲಿದ್ದು ಬುಧನು ಅವರನ್ನು ನೋಡಿದರೆ ಅವಳಿ ಗಂಡುಮಕ್ಕಳು ಹುಟ್ಟುತ್ತವೆ. ದ್ವಿಸ್ವಭಾವರಾಶಿಗಳಲ್ಲೇ ಬಲಿಷ್ಠರಾದ ಚಂದ್ರ ಶುಕ್ರಮಂಗಳರಿದ್ದು ಬುಧನು ಅವರನ್ನು ನೋಡಿದರೆ ಅವಳಿ ಹೆಣ್ಣುಮಕ್ಕಳು ಹುಟ್ಟುತ್ತವೆ. ಈ ಐದು ಗ್ರಹಗಳೂ ದ್ವಿಸ್ವಭಾವ ರಾಶಿಗಳಲ್ಲೇ ಇದ್ದು ಬುಧನು ಅವರನ್ನು ನೋಡಿದರೆ ಅವಳಿ ಗಂಡು ಹೆಣ್ಣು ಹುಟ್ಟುತ್ತವೆ.

(ಗರ್ಭತ್ರಯ ಸಂಭವಯೋಗ)

ವನಜಾತಾಹಿತಸೂನು ದಂಪತಿನವಾಂಶಸ್ಥಾಯಿ ಪುಂದ್ವ್ಯಂಗರಾ
ಶಿ ನವಾಂಶೋಪಗತಾಖಿಳಗ್ರಹ ವಿಲಗ್ನಕ್ಷೇತ್ರಮಂ ವೀಕ್ಷಿಸಲ್
ಜನಿಯಿಕ್ಕುಂ ಪುರುಷತ್ರಯಂ ಬುಧನೆ ಮತ್ತಂ ನೋಡೆ ಕಾಂತಾದ್ವಿದೇ
ಹ ನವಾಂಶೋಪಗತ ಗ್ರಹೋದಯಮುಮಂ ಪೆಣ್ಣೊಂದೆರಟ್ಗಂಡುಗಳ್ ೧೪

---

ವಿ–ಮಿಥುನ ಧನುಸ್ಸು ದ್ವಿಸ್ವಭಾವ ಪುರುಷರಾಶಿಗಳು, ಕನ್ಯಾ ಮೀನ ದ್ವಿಸ್ವಭಾವ ಸ್ತ್ರೀರಾಶಿಗಳು.

ಧನುಸ್ಸು ಮಿಥುನರಾಶಿಗಳು ಅಥವಾ ಈ ನವಾಂಶಗಳಲ್ಲಿ ಸೂರ್ಯ ಗುರುಗಳಿದ್ದು ಬುಧನು ಇವರನ್ನು ನೋಡಿದರೆ ಅವಳಿ ಗಂಡುಮಕ್ಕಳ ಜನನವಾಗುತ್ತದೆ. ಕನ್ಯಾ ಮೀನರಾಶಿಗಳು ಅಥವಾ ಈ ನವಾಂಶಗಳಲ್ಲಿ ಚಂದ್ರ ಕುಜ ಶುಕ್ರರಿದ್ದು ಬುಧನು ಇವರನ್ನು ನೋಡಿದರೆ ಅವಳಿ ಹೆಣ್ಣುಮಕ್ಕಳ ಜನನವಾಗುತ್ತದೆ. ಈ ಐದು ಗ್ರಹಗಳೂ ದ್ವಿಸ್ವಭಾವರಾಶಿ ಅಥವಾ ಅಂಶದಲ್ಲಿದ್ದು ಇವರನ್ನು ಬುಧನು ನೋಡಿದರೆ ಯಮಳ ಪ್ರಸವದಲ್ಲಿ ಒಂದು ಗಂಡೂ ಒಂದು ಹೆಣ್ಣೂ ಹುಟ್ಟುತ್ತದೆ.

೧೪. ಬುಧನು ಮಿಥುನನವಾಂಶದಲ್ಲಿದ್ದು ಪುರುಷ ದ್ವಿಸ್ವಭಾವರಾಶಿ ಅಥವಾ ನವಾಂಶದಲ್ಲಿರುವ [ಧನುಸ್ಸು ಮಿಥುನ ರಾಶಿಗಳು ಅಥವಾ ಅಂಶಗಳು] ಎಲ್ಲ ಗ್ರಹಗಳನ್ನೂ ಲಗ್ನವನ್ನೂ ನೋಡಿದರೆ ಮೂರು ಗಂಡುಮಕ್ಕಳು ಹುಟ್ಟುತ್ತವೆ. ಬುಧನೇ ಸ್ತ್ರೀ ದ್ವಿಸ್ವಭಾವರಾಶಿ ಅಥವಾ ಅಂಶದಲ್ಲಿರುವ [ಕನ್ಯಾ ಮೀನ ರಾಶಿಗಳು ಅಥವಾ ಅಂಶಗಳು] ಎಲ್ಲ ಗ್ರಹಗಳನ್ನೂ ಲಗ್ನವನ್ನೂ ನೋಡಿದರೆ ಒಂದು ಹೆಣ್ಣು, ಎರಡು ಗಂಡುಮಕ್ಕಳೂ ಹುಟ್ಟುತ್ತವೆ.

ವಿ–ಎಲ್ಲ ಗ್ರಹಗಳೆಂದರೆ ಬುಧನನ್ನು ಬಿಟ್ಟು ಉಳಿದೆಲ್ಲಾ ಗ್ರಹಗಳೆಂದರ್ಥ.

ಧನುಸ್ಸು ಮಿಥುನ ಈ ಎರಡುರಾಶಿಗಳಲ್ಲೊಂದು ಆಧಾನ ಅಥವಾ ಜನನಲಗ್ನವಾಗಿದ್ದು, ಮಿಥುನ ನವಾಂಶದಲ್ಲಿರುವ ಬುಧನು ಧನುಸ್ಸು ಮಿಥುನ ಈ ರಾಶಿ ಅಥವಾ ಅಂಶಗಳಲ್ಲಿರುವ ಉಳಿದೆಲ್ಲ ಗ್ರಹಗಳನ್ನೂ ಲಗ್ನವನ್ನೂ ನೋಡಿದರೆ ಮೂರು ಗಂಡುಮಕ್ಕಳು ಹುಟ್ಟುತ್ತವೆ.

ಕನ್ಯಾ ಮೀನ ಈ ಎರಡು ರಾಶಿಗಳಲ್ಲೊಂದು ಆಧಾನ ಅಥವಾ ಜನನ ಲಗ್ನವಾಗಿದ್ದು, ಮಿಥುನ ನವಾಂಶದಲ್ಲಿರುವ ಬುಧನು ಕನ್ಯಾ ಮೀನ ಈ ರಾಶಿ ಅಥವಾ ಅಂಶಗಳಲ್ಲಿರುವ ಉಳಿದೆಲ್ಲ ಗ್ರಹಗಳನ್ನೂ ಲಗ್ನವನ್ನೂ ನೋಡಿದರೆ ಒಂದು ಗಂಡು ಮತ್ತು ಎರಡು ಹೆಣ್ಣುಮಕ್ಕಳು ಹುಟ್ಟುತ್ತವೆ.

ಶತಪತ್ರಾರಿಜನಂಗನಾಂಶಕಗತಂ ಸ್ತ್ರೀ ದ್ವಿಸ್ವಭಾವಾಂಶಕ
ಸ್ಥಿತ ಸರ್ವಗ್ರಹ ಲಗ್ನಮೆಂಬವನೆ ನೋಡಲ್ ಪುಟ್ಟುಗುಂ ಕನ್ಯಕಾ
ತ್ರಿತಯಂ ತದ್ವನಿತಾಂಶಕಸ್ಥಿತಬುಧಂ ಪುಂದ್ವಿಸ್ವಭಾವಾಂಶಕ
ಸ್ಥಿತಸರ್ವಗ್ರಹ ಲಗ್ನವೀಕ್ಷಕನೆನಲ್ ಗಂಡೊಂದೆರಡ್ಪೆಣ್ಣುಗಳ್ ೧೫

(ಮೂರಕ್ಕಿಂತ ಅಧಿಕ ಗರ್ಭಸಂಭವಯೋಗ)

ನವಮ ನವಾಂಶಕಂ ಹರಿಯ ಲಗ್ನದೊಳಾಗೆ ಧನುರ್ಧರಾಂಶಕಂ
ಸವನಿಸೆ ಬಂದ ರಾಶಿಗಳೊಳೊಂದಿದೊಡಾ ಸಕಳಗ್ರಹಂಗಳ್ಬೆಂ
ದವ ದಿವಸಾಧಿನಾಥಸುತರೀಕ್ಷಿಸುವಂದು ನಿಷೇಕಲಗ್ನಮಂ
ಯುವತಿಯ ಗರ್ಭದೊಳ್ ಪಲರುಮೊರ್ಮೆಯೆ ಪುಟ್ಟುವರೇಕಕಾಲದೊಳ್ ೧೬

(ಮೂರು ಮತ್ತು ಹನ್ನೆರಡು ವರ್ಷಗಳವರೆಗೆ ಗರ್ಭಧಾರಣಯೋಗ)

ಮೊದಲಾಧಾನ ವಿಲಗ್ನದೊಳ್ ಮೃಗ ಘಟಾಂಶಂ ಕೂಡೆ ಮಂದಂ ತದ
ಸ್ತದೊಳೊಂದಿರ್ದೊಡೆ ಪುಟ್ಟುಗುಂ ಬಸುಱೊಳಿರ್ದುಂ ಮೂಱು ವ[ರ್ಷ]ಕ್ಕೆ ಲ
ಗ್ನದೊಳೊಂದಿರ್ದೊಡೆ ಕರ್ಕಟಾಂಶಮುದಯಾಸ್ತಸ್ಥಾನದೊಳ್ ಚಂದ್ರನೊಂ
ದಿದೊಡಂ ದ್ವಾದಶವತ್ಸರಕ್ಕೆ ಮನುಜಂ ಗರ್ಭಸ್ಥಿತಂ ಪುಟ್ಟುಗುಂ ೧೭

---

೧೫. ಬುಧನು ಕನ್ಯಾನವಾಂಶದಲ್ಲಿದ್ದು ಸ್ತ್ರೀದ್ವಿಸ್ವಭಾವರಾಶಿ ಅಥವಾ ಅಂಶದಲ್ಲಿರುವ ಎಲ್ಲಾ ಗ್ರಹಗಳನ್ನೂ ಲಗ್ನವನ್ನೂ ನೋಡಿದರೆ ಮೂರುಹೆಣ್ಣು ಮಕ್ಕಳು ಹುಟ್ಟುತ್ತವೆ. ಇದೇ ಕನ್ಯಾನವಾಂಶದಲ್ಲಿರುವ ಬುಧನು ಪುರುಷ ದ್ವಿಸ್ವಭಾವರಾಶಿ ಅಥವಾ ಅಂಶದಲ್ಲಿರುವ ಎಲ್ಲಾ ಗ್ರಹಗಳನ್ನೂ ಲಗ್ನವನ್ನೂ ನೋಡಿದರೆ ಒಂದು ಗಂಡು ಮತ್ತು ಎರಡು ಹೆಣ್ಣುಮಕ್ಕಳು ಹುಟ್ಟುತ್ತವೆ.

೧೬. ನಿಷೇಕವು ಧನುರ್ಲಗ್ನದ ಒಂಬತ್ತನೇ ಅಂಶದಲ್ಲಾಗಿ ಎಲ್ಲಾ ಗ್ರಹಗಳೂ ಯಾವ ರಾಶಿಗಳಲ್ಲಾಗಲೀ ಧನುರ್ನವಾಂಶದಲ್ಲಿದ್ದು ಬಲಿಷ್ಠರಾದ ಬುಧ ಶನಿಗಳು ಲಗ್ನವನ್ನು ನೋಡಿದರೆ, ಗರ್ಭದಲ್ಲಿ ಒಂದೇಕಾಲದಲ್ಲಿ ಅನೇಕ (ಮೂರಕ್ಕಿಂತ ಅಧಿಕಸಂಖ್ಯೆಯಲ್ಲಿ) ಗರ್ಭಪಿಂಡೋತ್ಪತ್ತಿಯಾಗುತ್ತದೆ.

ವಿ—ಹರಿಯ ಲಗ್ನವೆಂದರೆ ಧನುರ್ಲಗ್ನ, ಧನುರ್ಲಗ್ನದ ಒಂಬತ್ತನೆಯ ಅಂಶ ಧನುರ್ನವಾಂಶವೇ ಆಗುತ್ತದೆ. ವೃಷಭ ಕನ್ಯಾ ಮಕರ ಈ ಮೂರು ರಾಶಿಗಳಲ್ಲಿ ಧನುರ್ನವಾಂಶವಿಲ್ಲ.

೧೭. ಆಧಾನಲಗ್ನದಲ್ಲಿ ಮಕರ-ಕುಂಭ ನವಾಂಶವಾಗಿದ್ದು, ಲಗ್ನಕ್ಕೆ ಏಳನೇ ಸ್ಥಾನದಲ್ಲಿ ಶನಿಯಿದ್ದರೆ ಗರ್ಭೋತ್ಪತ್ತಿಯಾಗಿ ಮೂರುವರ್ಷದ ಮೇಲೂ, ಕರ್ಕಟಕ ನವಾಂಶವಾಗಿದ್ದು ಲಗ್ನಕ್ಕೆ ಏಳನೇ ಸ್ಥಾನದಲ್ಲಿ ಚಂದ್ರನಿದ್ದರೆ ಹನ್ನೆರಡು ವರ್ಷಗಳಾದ ಮೇಲೂ ಮಗುವು ಹುಟ್ಟುತ್ತವೆ

(ಪ್ರಸವದಿನ ಜ್ಞಾನ)

ವಿದಿತಂ ಕಾಂತೆಗೆ ಪೊಟ್ಟು ತೀವಿದುದು ಪೇಟನ್ನಾವುದಕ್ಕಂ ಪ್ರಸೂ
[1]ತಿ[1]ದಿನಂ ತಾನೆನೆ ಚಂದ್ರನಾವ ಗೃಹದೊಳ್ ತತ್ಕಾಲದೊಳ್ ನಿಂದನಾ
ಸದನದ್ವಾದಶಭಾಗ[2]ಮೆಂತ[2]ನಿತು ಸಲ್ಗುಂ ಮುಂತೆ ತತ್ಸಂಖ್ಯೆಗೇ
ಹದಿನತ್ತಿರ್ ನಿರೆ ಚಂದ್ರಮಂ ಪ್ರಸವಕಾಲಂ ಕಾಂತೆಗಂತಾ ದಿನಂ ೧೮

(ಪ್ರಸವಕಾಲ ಜ್ಞಾನ)

ವನಿತೆಗೆ ಪೊಟ್ಟು ತೀವಿದುದು ತತ್ಪ್ರಸ[3]ವಾಹ[3]ದೊಳಾವ ಪೊಟ್ಟು ಪೇ
ಟೆನೆ ದಿನರಾತ್ರಿಸಂಜ್ಞೆಯುದಯಂ ಬರೆ ಬಂದ ವಿಲಗ್ನದಲ್ಲಿ ತಾ
ನೆನಿತನೆ ಸಲ್ಗು [4]ಮನ್ನನಿತೆ[4] ನಾಡಿಕೆ ಜನ್ಮಘಟೀಪ್ರಮಾಣಮಾ
ದಿನ ರಜನೀ ಪ್ರಮಾಣದನುಪಾತನದಿಂ ನಿಜಲಗ್ನ ಸಂಜ್ಞೆಯೊಳ್ ೧೯

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ ಸರಸಪ್ರಸನ್ನ ವಚೋಲಕ್ಷ್ಮೀಧರಂ ಗದ್ಯಪದ್ಯ ವಿದ್ಯಾಧರಂ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ಗರ್ಭಾಧಾನಪ್ರಕರಣವರ್ಣನಂ ತೃತೀಯಾಧಿಕಾರಂ

---

೧೮. ಕಾಂತೆಗೆ ಪ್ರಸವಕಾಲ ಸಮೀಪಿಸಿದೆ. ಇನ್ನು ಎಷ್ಟು ದಿವಸಗಳಲ್ಲಿ ಪ್ರಸವವಾಗುತ್ತದೆ? ಎಂದು ಪ್ರಶ್ನಿಸಿದರೆ ಆ ಕಾಲದಲ್ಲಿ ಚಂದ್ರನು ಎಷ್ಟನೇ ದ್ವಾದಶಾಂಶದಲ್ಲಿರುವನೋ ಆ ದ್ವಾದಶಾಂಶರಾಶಿಯಿಂದ ಮುಂದೆ ಅಷ್ಟನೇ ರಾಶಿಗೆ ಚಂದ್ರನು ಬಂದಾಗ ಆಕೆಗೆ ಪ್ರಸವಕಾಲವೆಂದು ತಿಳಿಯುವುದು.

ವಿ—ದ್ವಾದಶಾಂಶರಾಶಿಯು ಮೇಷದಿಂದ ಗಣನೆಮಾಡಿದರೆ ಎಷ್ಟನೆಯದಾಗುವುದೋ ಆ ಸಂಖ್ಯೆಯನ್ನು ತೆಗೆದುಕೊಳ್ಳಬೇಕೆಂದು ಕೆಲವರ ಅಭಿಪ್ರಾಯ.

೧೯. ಸ್ತ್ರೀ ಪೂರ್ಣಗರ್ಭಿಣಿ; ಪ್ರಸವದಿನದಲ್ಲಿ ಎಷ್ಟು ಹೊತ್ತಿಗೆ ಜನನವಾಗುತ್ತದೆ? ಎಂದು ಪ್ರಶ್ನಿಸಿದರೆ ಆಧಾನ ಅಥವಾ ಪ್ರಶ್ನಲಗ್ನವು ದಿವಾ ರಾತ್ರಿ ಸಂಜ್ಞಾರಾಶಿಯಲ್ಲಿ ಯಾವುದೋ ಆ ಕಾಲದ ಪ್ರಮಾಣವನ್ನು ತಿಳಿದು, ಅದರಿಂದ ಲಗ್ನದಲ್ಲಿ ಗತಪ್ರಮಾಣಕ್ಕೆ ಅನುಪಾತ ಮಾಡಿ ಬರುವ ಘಳಿಗೆಯಲ್ಲಿ ರಾಶಿ ಸಂಜ್ಞೆಯರಿತು ಹಗಲು ಅಥವಾ ರಾತ್ರಿಯಲ್ಲಿ ಜನನವಾಗುವುದೆಂದು ತಿಳಿಸುವುದು.

ವಿ—ಆಧಾನ ಅಥವಾ ಪ್ರಶ್ನಕಾಲದ ಚಂದ್ರಸ್ಫುಟದಿಂದ ಪ್ರಸವನಕ್ಷತ್ರವನ್ನೂ ತಿಳಿಯಬಹುದು.

ಉದಾ—ಆಧಾನ ಅಥವಾ ಪ್ರಶ್ನಕಾಲದ ಲಗ್ನಸ್ಫುಟ ರಾಶ್ಯಾದಿ, ರಾಶಿ ೧ ಭಾಗ ೧೪ ಕಲೆ ೩೦ ವಿಕಲೆ ೦; ಚಂದ್ರಸ್ಫುಟ ರಾಶ್ಯಾದಿ ರಾ ೩ ಭಾ ೧೧ ಕ ೨೦ ವಿಕ ೦. ಒಂದುರಾಶಿಗೆ ೩೦ ಅಂಶಗಳು. ಇದರ $\frac{೧}{೧೨}$ಭಾಗ ಒಂದು ದ್ವಾದಶಾಂಶಪ್ರಮಾಣ=$\frac{೩೦}{೧೨}$=೨$\frac{೧}{೨}$ ಅಂಶ.

---

[1] ತ (ಕ ಗ) [2] ಮಂತ (ಕ ಗ) [3] ಕಾಲ (ಕ) [4] ಮೆಂತನಿತೆ (ಕ).

ಪ್ರಕೃತೋದಾಹರಣೆಯಲ್ಲಿ ಚಂದ್ರನು ಕರ್ಕಾಟಕರಾಶಿಯಲ್ಲಿ ೧೨ನೇ ಅಂಶದಲ್ಲಿರುವುದರಿಂದ ೫ನೇ ದ್ವಾದಶಾಂಶದಲ್ಲಿದ್ದಂತಾಯಿತು. ಕರ್ಕಾಟಕರಾಶಿಯಲ್ಲಿ ೫ನೆಯದು ವೃಶ್ಚಿಕದ್ವಾದಶಾಂಶ. ಚಂದ್ರನು ಪ್ರಸವಕಾಲದಲ್ಲ (ಹತ್ತನೇ ತಿಂಗಳಿನಲ್ಲಿ) ವೃಶ್ಚಿಕದಿಂದ ೫ನೆಯ ಮೀನರಾಶಿಗೆ ಬಂದಾಗ ಪ್ರಸವವಾಗುತ್ತದೆ.

ಮತಾಂತರ—ದ್ವಾದಶಾಂಶರಾಶಿಯು ಮೇಷ ಮೊದಲು ಲೆಕ್ಕಮಾಡಿದರೆ ಎಂಟನೆಯ ರಾಶಿಯಾಗುತ್ತದೆ. ಕರ್ಕಾಟಕದಿಂದ ೮ನೆಯದು ಕುಂಭರಾಶಿ. ಹತ್ತನೇ ತಿಂಗಳಿನಲ್ಲಿ ಚಂದ್ರ ಕುಂಭರಾಶಿಯಲ್ಲಿರುವಾಗ ಪ್ರಸವವಾಗುತ್ತದೆ.

ನಕ್ಷತ್ರಜ್ಞಾನ—ಚಂದ್ರನು ಕರ್ಕಾಟಕರಾಶಿಯಲ್ಲಿ ೫ನೆಯ ದ್ವಾದಶಾಂಶದಲ್ಲಿ ೧ ಅಂಶ ೨೦ನೆಯ ಕಲೆಯಲ್ಲಿರುವನು. ದ್ವಾದಶಾಂಶವನ್ನೇ ರಾಶಿಯೆಂದು ಭಾವಿಸಿ ದ್ವಾದಶಾಂಶದಲ್ಲಿ ಕಳೆದಿರುವ ಪ್ರಮಾಣಕ್ಕೆ ಅನುಪಾತಮಾಡಿ ನಕ್ಷತ್ರವನ್ನು ತಿಳಿಯಬೇಕು.

ದ್ವಾದಶಾಂಶಪ್ರಮಾಣ ೧೫೦ ಕಲೆಗಳಿಗೆ ರಾಶಿಪ್ರಮಾಣ ೩೦ ಅಂಶಗಳು ಸಮವೆಂದು ಭಾವಿಸಿದರೆ ದ್ವಾದಶಾಂಶಗತಪ್ರಮಾಣ ೮೦ ಕಲೆಗಳಿಗೆ

$$\frac{\text{೩೦} \times \text{೮೦}}{\text{೧೫೦}} = \text{೧೬ ಅಂಶಗಳು.}$$

ಪ್ರಸವಕಾಲದಲ್ಲಿ ಚಂದ್ರನು ಮೀನರಾಶಿಯಲ್ಲಿರುವುದರಿಂದ ಆ ಕಾಲದ ಚಂದ್ರಸ್ಫುಟ=೧೧–೧೬–೦–೦ (ರಾಶ್ಯಾದಿ). ಮೀನರಾಶಿ ಪೂರ್ವಾಭಾದ್ರ ನಾಲ್ಕನೇ ಪಾದದಿಂದ ಆರಂಭವಾಗುತ್ತದೆ. ಒಂದು ನಕ್ಷತ್ರಪಾದ ಪ್ರಮಾಣ ೩ ಅಂಶ ೨೦ ಕಲೆ; ೧೩ ಅಂಶ ೨೦ ಕಲೆಗಳಿಗೆ ನಾಲ್ಕು ಪಾದಗಳು ಕಳೆಯುತ್ತವೆ; ಅಂದರೆ ಉತ್ತರಾಭಾದ್ರನಕ್ಷತ್ರದಲ್ಲಿ ೩ ಪಾದಗಳು ಕಳೆಯುತ್ತವೆ. ಆದುದರಿಂದ ಮೀನರಾಶಿಯಲ್ಲಿ ೧೬ನೇ ಅಂಶ ಉತ್ತರಾಭಾದ್ರನಕ್ಷತ್ರ ೪ನೇ ಪಾದವಾಗುತ್ತದೆ. ಅಂದರೆ ಉತ್ತರಾಭಾದ್ರ ನಕ್ಷತ್ರ ೪ನೇ ಪಾದದಲ್ಲಿ ಜನನವಾಗುತ್ತದೆ. ಪ್ರಸವಕಾಲಜ್ಞಾನ—ಲಗ್ನಸ್ಫುಟ ರಾಶ್ಯಾದಿ ೧–೧೪–೩೦ (ವೃಷಭ ಲಗ್ನ ವೃಷಭನವಾಂಶ). ಲಗ್ನ ರಾತ್ರಿಸಂಜ್ಞಾರಾಶಿಯಾದುದರಿಂದ ರಾತ್ರಿ ಪ್ರಸವವಾಗುತ್ತದೆ. ರಾತ್ರಿಸಂಜ್ಞಾ ಲಗ್ನವಾಗಿರುವುದರಿಂದ ಪ್ರಶ್ನ ಅಥವಾ ಆಧಾನದಿವಸದ ರಾತ್ರಿ ಪ್ರಮಾಣ ೨೮ ಘಳಿಗೆ ೩೦ ವಿಘಳಿಗೆ.

$$\text{ಜನನಕಾಲ} = \frac{\text{ರಾತ್ರಿಪ್ರಮಾಣ} \times \text{ಲಗ್ನಗತ}}{\text{೩೦}} = \frac{\text{೨೮}\frac{\text{೧}}{\text{೨}} \times \text{೧೪}\frac{\text{೧}}{\text{೨}}}{\text{೩೦}} = \frac{\text{೫೭} \times \text{೨೯}}{\text{೨} \times \text{೩೦} \times \text{೨}}$$

$$= \frac{\text{೫೫೧}}{\text{೪೦}} = \text{೧೩}\,\frac{\text{೩೧}}{\text{೪೦}} \times \text{೬೦} = \frac{\text{೯೩}}{\text{೨}} = \text{೪೬}\frac{\text{೧}}{\text{೨}}.$$

ಹತ್ತನೇ ತಿಂಗಳಿನಲ್ಲಿ ಚಂದ್ರನು ಉತ್ತರಾಭಾದ್ರನಕ್ಷತ್ರ ೪ನೇ ಪಾದದಲ್ಲಿರುವಾಗ ರಾತ್ರಿ ೧೩ ಘಳಿಗೆ ೪೬½ ವಿಘಳಿಗೆಗೆ ಪ್ರಸವವಾಗುತ್ತದೆ.

# ಚತುರ್ಥಾಧಿಕಾರಂ

## ಜನ್ಮಪ್ರಕರಣಂ

(ಗ್ರಹಗಳಿಗೆ ಸಾತ್ವಿಕ ರಾಜಸ ತಾಮಸ ಗುಣವಿಭಾಗ)

ದಿವಿಜೇಜ್ಯನುಮುಡುಪತಿಯುಂ
ರವಿಯುಂ ಸತ್ವಗ್ರಹಂ ಶಶಾಂಕಜನುಂ ಭಾ
ರ್ಗವನುಂ ರಜೋಗ್ರಹಂ [1]ಭಾ[1]
ನವನುಂ [2]ಮಾಹೇಯನುಂ[2] ತಮೋಗ್ರಹಮೆನಿಪರ್ ೧

(ಶಿಶುವಿನ ಗುಣ ಬಣ್ಣ ಮತ್ತು ಆಕಾರ)

ದಿನಪಂ ಸತ್ವರಜಸ್ತಮೋಗ್ರಹದ ರಾಶಿತ್ರಿಂಶದಂಶಂಗಳೊಳ್
ಜನನ ಪ್ರಸ್ತುತಕಾಲದೊಳ್ ನೆಲಸೆ ಸಾಗುರ್ಣಂ ತದ್ಗುಣಂ ಮೇಣ್ ವಿಲ
ಗ್ನ ನವಾಂಶಾಧಿಪ ಮೂರ್ತಿಯಕ್ಕೆ ಬಳಸಂಯುಕ್ತ ಗ್ರಹಾಕಾರಮ
ಕ್ಕೆ ನರಂಗಕ್ಕುಮನೇಕಜಾತಿ ಕುಲ ದೇಶೋದ್ಭೂತ ಭೇದಂಗಳಿಂ ೨

(ಜನನಕಾಲದಲ್ಲಿ ತಂದೆಯ ಸಾನ್ನಿಧ್ಯ ವಿಚಾರ)

*ಉದಯಮನುಡುಪತಿ ಮೇಣ್ ಕಾ
ಣದೊಡಿಂದುಜ ಭೃಗುಜ ಮಧ್ಯದೊಳ್ ಶಶಿ ಮೇಣ
ಸ್ತದೊಳಾರಂ ಮೇಣ್ ಶನಿ ಲ
ಗ್ನದೊಳಿರೆ ಮೇಣ್ ತಂದೆಯಿಲ್ಲ ಪುಟ್ಟುವ ಪದದೊಳ್ ೩

---

೧. ಗುರು ಚಂದ್ರ ಸೂರ್ಯರು ಸಾತ್ವಿಕ ಗ್ರಹಗಳು. ಬುಧ ಶುಕ್ರರು ರಾಜಸ ಗ್ರಹಗಳು. ಶನಿ ಕುಜರು ತಾಮಸ ಗ್ರಹಗಳು.

೨. ಸೂರ್ಯನು ಸಾತ್ವಿಕ ರಾಜಸ ತಾಮಸ ಗ್ರಹಗಳ ಮಧ್ಯೆ ಯಾವ ಗ್ರಹದ ತ್ರಿಂಶಾಂಶದಲ್ಲಿ ಪ್ರಸವ ಅಥವಾ ನಿಷೇಕ ಕಾಲದಲ್ಲಿರುವನೋ ಆ ಗ್ರಹದ ಸ್ವಭಾವ ಮಗುವಿಗಿರುತ್ತದೆ; ಮತ್ತು ಲಗ್ನ ಅಥವಾ ನವಾಂಶಾಧಿಪತಿಯ ಆಕಾರ ಅಥವಾ ಆ ಕಾಲದಲ್ಲಿ ಬಲಿಷ್ಠವಾಗಿರುವ ಗ್ರಹದ ಸ್ವರೂಪವು ಜಾತಿ ಕುಲ ದೇಶ ಭೇದಗಳಿಗೆ ತಕ್ಕಂತೆ ಆ ಮಗುವಿಗೆ ಉಂಟಾಗುತ್ತದೆ.

೩. ಲಗ್ನವನ್ನು ಚಂದ್ರ ನೋಡದಿದ್ದರೆ ಅಥವಾ ಬುಧ ಶುಕ್ರರ ಮಧ್ಯದಲ್ಲಿ ಚಂದ್ರನಿದ್ದರೆ ಅಥವಾ ಲಗ್ನಕ್ಕೆ ಸಪ್ತಮ ಸ್ಥಾನದಲ್ಲಿ ಅಂಗಾರಕನಿದ್ದರೆ ಅಥವಾ ಶನಿ ಲಗ್ನದಲ್ಲಿದ್ದರೆ ಮಗು ಹುಟ್ಟುವ ಕಾಲದಲ್ಲಿ ತಂದೆ ಆ ಸ್ಥಳದಲ್ಲಿರುವುದಿಲ್ಲ.

---

[1] ದಾ (ಕ ಗ) [2] ಧರಣಿಜನು ಶನಿ (ಗ) * 'ಕ' ಪ್ರತಿಯಲ್ಲಿ ೩, ೪, ೫ನೆಯ ಪದ್ಯಗಳಿಲ್ಲ.

(ಜನನಕಾಲದಲ್ಲಿ ತಂದೆಯ ಸ್ವದೇಶ ಪರದೇಶಸ್ಥಿತಿ ವಿಚಾರ)

ಸರಸಿಜಬಾಂಧವಂ ದಶಮದಿಂ ಕೆಳಗಾಜನನೋದಯಂಬರಂ
ಚರಭವನಂಗಳೊಳ್ ನಿಲೆ ವಿದೇಶಗತಂ ಸ್ಥಿರಮಂದಿರಸ್ಥನಾ
ಗಿರೆ ಗೃಹಮಧ್ಯದೊಳ್ ನೆಲೆಯೊಳಿರ್ಪನವಂ ದ್ವಿಶರೀರಸಂಸ್ಥನಾ
ಗಿರೆ ಜನಕಂ ಪಥಾಂತರದೊಳಿರ್ಪನವಂ ಗೃಹಬಾಹ್ಯದೇಶದೊಳ್ ೪

(ಜಾತಕನ ತಂದೆಗೆ ಬಂಧನಯೋಗ)

ರವಿಯಿಂ ಪಂಚಮ ಸಪ್ತಮ
[ನವ]ಮವೆನಿಪ್ಪುಗ್ರ ಗೃಹದೊಳುಗ್ರದ್ವಿತಯಂ
ಸವನಿಸಿ ಬಂದೆಡೆಯೊಳ್ ಲ
ಗ್ನ ವಶದೆ ಬಂಧನಮನೆಯ್ದುಗುಂ ತಜ್ಜನಕಂ ೫

---

೪. ಜನನಕಾಲದಲ್ಲಿ ಸೂರ್ಯನು ದಶಮಸ್ಥಾನದಿಂದ ಹಿಂದಕ್ಕೆ ಜನನ ಲಗ್ನದವರೆಗೂ ಚರರಾಶಿಗಳಲ್ಲಿದ್ದರೆ ತಂದೆ ವಿದೇಶದಲ್ಲಿರುತ್ತಾನೆ. ಸ್ಥಿರ ರಾಶಿಯಲ್ಲಿದ್ದರೆ ಮನೆಯಲ್ಲೇ ಇರುತ್ತಾನೆ. ದ್ವಿಸ್ವಭಾವರಾಶಿಯಲ್ಲಿದ್ದರೆ ತನ್ನ ದೇಶದಿಂದ ಹೊರಗೆ ಮಧ್ಯಮಾರ್ಗದಲ್ಲಿರುತ್ತಾನೆ.

ವಿ–ಈ ಯೋಗಗಳಲ್ಲಿ ಲಗ್ನವನ್ನು ಚಂದ್ರ ನೋಡಕೂಡದು.

ಭಟ್ಟೋತ್ಪಲರು ಬೃಹಜ್ಜಾತಕದ ವ್ಯಾಖ್ಯಾನದಲ್ಲಿ, ಸೂರ್ಯನು ಲಗ್ನ ದಿಂದ ೧೧, ೧೨, ೮, ೯ನೇ ಸ್ಥಾನಗಳಲ್ಲಿ ಚರರಾಶಿಯಲ್ಲಿದ್ದರೆ ತಂದೆ ಜನನ ಕಾಲದಲ್ಲಿ ವಿದೇಶದಲ್ಲಿರುವನೆಂದು ಹೇಳಿರುವರು. ಕಲ್ಯಾಣವರ್ಮನು ತನ್ನ ಸಾರಾವಳೀ ಗ್ರಂಥದಲ್ಲಿ ೮, ೯ನೇ ಸ್ಥಾನಗಳನ್ನು ಮಾತ್ರ ಹೇಳಿರುತ್ತಾನೆ.

೫. ಸೂರ್ಯನಿಂದ ಐದು ಏಳು ಮತ್ತು ಒಂಬತ್ತನೇ ಸ್ಥಾನಗಳು ಪಾಪಗ್ರಹರಾಶಿಯಾಗಿ ಅದರಲ್ಲಿ ಅಂಗಾರಕ ಶನಿಗಳಿದ್ದರೆ ಲಗ್ನಾನುಗುಣ ವಾಗಿ ತಂದೆ ಬಂಧನಕ್ಕೊಳಗಾಗುತ್ತಾನೆ.

ವಿ–ಮೇಷ ಸಿಂಹ ವೃಶ್ಚಿಕ ಮಕರ ಕುಂಭ ಕ್ಷೀಣಚಂದ್ರನಾದಾಗ ಕರ್ಕಟಕ, ಬುಧನು ಪಾಪಗ್ರಹದೊಡನಿದ್ದರೆ ಮಿಥುನ ಕನ್ಯಾಗಳು ಪಾಪಗ್ರಹ ರಾಶಿಗಳು.

ಇಲ್ಲಿ ಲಗ್ನವೆಂದರೆ ಸೂರ್ಯನಿರುವ ರಾಶಿ ಎಂದು ಅರ್ಥಮಾಡಬೇಕು.

ಹಗಲಿನಲ್ಲಿ ಸೂರ್ಯ ಪಿತೃಕಾರಕ ಗ್ರಹವಾಗಿರುವುದರಿಂದ ಸೂರ್ಯ ನಿಂದಲೂ, ರಾತ್ರಿ ಶನಿ ಪಿತೃಕಾರಕ ಗ್ರಹವಾಗಿರುವುದರಿಂದ ಶನಿಯಿಂದಲೂ ನೋಡುವುದು ಯುಕ್ತಿಯುಕ್ತವಾಗಿದೆ.

'ಲಗ್ನಾನುಗುಣವಾಗಿ' ಎಂದರೆ ಲಗ್ನ ಚರರಾಶಿಯಾದರೆ ಪರದೇಶದಲ್ಲೂ, ಸ್ಥಿರರಾಶಿಯಾದರೆ ಸ್ವದೇಶದಲ್ಲೂ ದ್ವಿಸ್ವಭಾವರಾಶಿಯಾದರೆ ಮಧ್ಯಮಾರ್ಗ ದಲ್ಲೂ ಬಂಧನಕ್ಕೊಳಗಾಗುತ್ತಾನೆ ಎಂದು ಅಭಿಪ್ರಾಯ.

(ಜಾರಜಾತಯೋಗ)

ಹೋರೇಶನನಕ್ಕಿನ[1]ಯುತ[1]
ತಾರೇಶನನಕ್ಕೆ ಗುರು ನಿರೀಕ್ಷಿಸದೊಡೆ ಮೇಣ್
ಕ್ರೂರಗ್ರಹದೊಡನಿರೆ ಶಶಿ
[2]ಸೂ[2]ರರ್ ಮೇಣ್ ಜಾರಜಾತನಕ್ಕುಂ ಜಾತಂ ೬

(ಜಾರಜಾತಯೋಗ ಭಂಗ)

ಸುರಸಚಿವತ್ರಿಂಶಾಂಶದೊ
ಳಿರೆ ಚಂದ್ರಂ ಮಂತ್ರಿ ನೋಡೆ ಮೇಣ್ ಕೇಂದ್ರದೊಳೊಂ
ದಿರೆ ತಾರಾಧಿಪನೀಕ್ಷಿಸೆ
ಗುರು ತದ್ಯೋಗತ್ರಯಕ್ಕೆ ಭಂಗಂ ಬರ್ಕುಂ ೭

ಹಿಮಧಾಮಮಂ ನಿಲೆ ಜೀವವರ್ಜಿತ ಪರತ್ರಿಂಶಾಂಶದೊಳ್ ನೋಡದಂ
ದಮರಾಧೀಶ್ವರಮಂತ್ರಿ ಮೇಣ್ ನಿಲೆ ಶಶಾಂಕಂ ಕೇಂದ್ರದೊಳ್ ಕಾಣದಂ
ದಘರೇಜ್ಯಂ ಪರಜಾತನಾತನಬಳಂ ತಚ್ಚಂದ್ರನಂ ನೋಡೆ ಜಾ
ತಮನುಷ್ಯಂ ಪರಜಾತನೆಂದು ನುಡಿವರ್ ಶುದ್ಧಾತ್ಮನಾ ಮಾನವಂ ೮

---

೬. ಜನನಕಾಲದಲ್ಲಿ ಲಗ್ನಾಧಿಪತಿಯನ್ನಾಗಲೀ ಸೂರ್ಯನೊಡನಿರುವ ಚಂದ್ರನನ್ನಾಗಲೀ ಗುರು ನೋಡದಿದ್ದರೆ ಅಥವಾ ಕ್ರೂರ (ಕುಜ ಶನಿ) ಗ್ರಹದೊಡನೆ ಚಂದ್ರ ಸೂರ್ಯರಿದ್ದರೆ ಹುಟ್ಟಿದವ ಜಾರಜಾತ.

ವಿ–ಲಗ್ನ ಮತ್ತು ಚಂದ್ರನನ್ನು ಗುರು ನೋಡದಿದ್ದರೆ ಪರಜಾತನೆಂದು ಇತರ ಜ್ಯೌತಿಷ ಗ್ರಂಥಗಳಲ್ಲಿದೆ. ಈ ಯೋಗದಲ್ಲಿ ಲಗ್ನಾಧಿಪತಿಯನ್ನು ವರಾಹಮಿಹಿರಾಚಾರ್ಯರು ತೆಗೆದುಕೊಂಡಿಲ್ಲ. ಲಗ್ನವಾಗಲೀ ಚಂದ್ರನಾಗಲೀ ಗುರುವಿನ ಷಡ್ವರ್ಗದಲ್ಲಿದ್ದರೆ ಈ ಯೋಗಫಲವಿಲ್ಲ.

೭. ಗುರುತ್ರಿಂಶಾಂಶದಲ್ಲಿ ಚಂದ್ರನಿದ್ದು ಗುರು ನೋಡಿದರೆ ಅಥವಾ ಕೇಂದ್ರದಲ್ಲಿ ಚಂದ್ರನಿದ್ದು ಗುರು ನೋಡಿದರೆ ಮೇಲೆ ತಿಳಿಸಿದ ಮೂರು ಜಾರಜಾತ ಯೋಗಗಳಿಗೂ ಭಂಗ ಬರುತ್ತದೆ.

ವಿ–ಸ್ತ್ರೀಜಾತಕಾಧ್ಯಾಯದಲ್ಲಿ ತ್ರಿಂಶಾಂಶಫಲವನ್ನು ಹೇಳುವಾಗ ಚಂದ್ರ ಗುರುತ್ರಿಂಶಾಂಶದಲ್ಲಿದ್ದರೆ ಶುಭಫಲ ಉಕ್ತವಾಗಿದೆ.

ಈ ಜಾರಜಾತ ಯೋಗಭಂಗ ಬೃಹಜ್ಜಾತಕ ಲಘುಜಾತಕಗಳಲ್ಲಿಲ್ಲ.

೮. ಚಂದ್ರನು ಗುರುವನ್ನು ಬಿಟ್ಟು ಉಳಿದ ಗ್ರಹಗಳ (ಕುಜ ಶನಿ ಬುಧ ಶುಕ್ರರ) ತ್ರಿಂಶಾಂಶದಲ್ಲಿದ್ದು ಗುರು ನೋಡದಿದ್ದರೆ ಅಥವಾ ಚಂದ್ರನು ಕೇಂದ್ರದಲ್ಲಿದ್ದು ಗುರು ನೋಡದಿದ್ದರೆ ಹುಟ್ಟಿದವ ಅನ್ಯಜಾತ. ಬಲಿಷ್ಠನಲ್ಲದ ಗುರು ಆ ಚಂದ್ರನನ್ನು ನೋಡಿದರೆ ಹುಟ್ಟಿದವನನ್ನು ಪರಜಾತನೆಂದು ಹೇಳುತ್ತಾರೆ; ಆದರೆ ಆ ಮಾನವ ಶುದ್ಧಾತ್ಮ.

---

1 ಸುತ (ಕ ಗ) 2 ಶೌ (ಕ) ಸೌ (ಗ).

ಗುರು[1]ಶಶಿ[1]ರವಿಗಳ್ ನೀಚದೊ
ಳಿರೆ ಲಗ್ನದೊಳಿರೆ ಶನೈಶ್ಚರಂ ಮೇಣ್ ದೋಷಾ
ಕರಲಗ್ನ[2]ಸಿತ[2][ರ]ನೀಕ್ಷಿಸ
ದಿರೆ ಸೌಮ್ಯರ್ ಜಾರಜಾತನಾತನ [3]ಸುತನುಂ[3] ೯

(ಹೆರಿಗೆಮನೆಯ ಬಾಗಿಲು ಮತ್ತು ದೀಪ)

ಬಲವದ್ವ್ಯೋಮಚರಂ ಚತುಷ್ಟಯದೊಳಿರ್ದಂದಾ ಗೃಹಾಶಾಮುಖಂ
ನಿಳಯದ್ವಾರಮದಲ್ಲದಾಗಳುದಯಾಂಶದ್ವಾರಮಕ್ಕುಂ ಸೊದರ್
ಚಳರಾಶ್ಯಾದಿಗಳೊಳ್ ದಿನೇಶನಿರೆ ತದ್ರೂಪಂ ಶಶಾಂಕೋಪಮಂ
ನೆಲಸಿರ್ದೆಣ್ಣೆ ವಿಲಗ್ನಮೆಂತನಿತೆ ಸಲ್ಗುಂ ಬತ್ತಿಯುಂ ತತ್ಸಮಂ ೧೦

---

ವಿ–ಗುರುತ್ರಿಂಶಾಂಶದಲ್ಲಿರುವ ಅಥವಾ ಕೇಂದ್ರದಲ್ಲಿರುವ ಚಂದ್ರನನ್ನು ಷಡ್ಬಲಯುತನಾದ ಗುರು ನೋಡಿದರೆ ಆ ಜಾತಕನು ಪರಜಾತನಲ್ಲ. ಗುರು ಬಲಿಷ್ಠನಲ್ಲದಿದ್ದರೆ ಆತನನ್ನು ಪರಜಾತನೆಂದು ಹೇಳುತ್ತಾರೆ. ಆದರೆ ಆತ ಶುದ್ಧಾತ್ಮ. ಒಟ್ಟಿನಲ್ಲಿ ಚಂದ್ರನಿಗೆ ಗುರುದೃಷ್ಟಿ ಮುಖ್ಯವಾಗಿರಬೇಕು.

೯. ಗುರು ಚಂದ್ರ ಸೂರ್ಯರು ನೀಚಕ್ಷೇತ್ರದಲ್ಲಿದ್ದರೆ ಅಥವಾ ಶನಿ ಲಗ್ನದಲ್ಲಿದ್ದರೆ ಅಥವಾ ಚಂದ್ರ ಲಗ್ನ ಶುಕ್ರರನ್ನು ಶುಭಗ್ರಹಗಳು ನೋಡದಿದ್ದರೆ ಆತನ ಮಗನೂ ಜಾರಜಾತನಾಗುತ್ತಾನೆ.

೧೦. ಬಲಿಷ್ಠಗ್ರಹ ಕೇಂದ್ರದಲ್ಲಿದ್ದಾಗ ಆ ಗ್ರಹದ ದಿಕ್ಕಿಗೆದುರಾಗಿ ಹೆರಿಗೆ ಮನೆಯ ಬಾಗಿಲಿರುತ್ತದೆ. ಕೇಂದ್ರದಲ್ಲಿ ಗ್ರಹವಿಲ್ಲದಿದ್ದರೆ ಲಗ್ನಾಂಶ ರಾಶಿಯ ದಿಕ್ಕಿನಲ್ಲಿರುತ್ತದೆ. ಚರಾದಿರಾಶಿಗಳಲ್ಲಿ ಸೂರ್ಯನಿರುವ ರಾಶಿಯಂತೆ ದೀಪವಿರುತ್ತದೆ. ಚಂದ್ರನಂತೆ ದೀಪದಲ್ಲಿರುವ ಎಣ್ಣೆಯೂ ಜನನಲಗ್ನದಲ್ಲಿ ಉಳಿದಿರುವ ಭಾಗದಷ್ಟೇ ಬತ್ತಿಯೂ ಇರುತ್ತದೆ.

ವಿ–ಕೇಂದ್ರದಲ್ಲಿ ಹೆಚ್ಚು ಗ್ರಹಗಳಿದ್ದಾಗ ಅತಿ ಬಲಿಷ್ಠಗ್ರಹದ ದಿಕ್ಕನ್ನು ತೆಗೆದುಕೊಳ್ಳಬೇಕು. ಗ್ರಹಗಳ ದಿಗ್ವಿಭಾಗ ೨ನೇ ಅಧಿಕಾರದ ೧ನೇ ಪದ್ಯದಲ್ಲಿವೆ.

ಹೆರಿಗೆ ಕಾಲದಲ್ಲಿ ಸೂರ್ಯ ಚರರಾಶಿಯಲ್ಲಿದ್ದರೆ ದೀಪ ಚಲಿಸುತ್ತಲೂ, ಸ್ಥಿರರಾಶಿಯಲ್ಲಿದ್ದರೆ ಒಂದೇ ಜಾಗದಲ್ಲಿ ಸ್ಥಿರವಾಗಿಯೂ, ದ್ವಿಸ್ವಭಾವರಾಶಿಯಲ್ಲಿದ್ದರೆ ಗಮನ ಸ್ಥಿತಿಗಳಿಂದ ಕೂಡಿಯೂ ಇರುತ್ತದೆ.

'ಲಗ್ನಾಂಶ'ವೆಂದರೆ ಲಗ್ನದಲ್ಲಿ ಯಾವ ದ್ವಾದಶಾಂಶವಾಗುವುದೋ ಆ ದ್ವಾದಶಾಂಶ ರಾಶಿಯ ದಿಕ್ಕನ್ನು ತೆಗೆದುಕೊಳ್ಳಬೇಕು. ಲಘುಜಾತಕ ಬೃಹಜ್ಜಾತಕಗಳಲ್ಲಿ ಲಗ್ನರಾಶಿಯ ದಿಕ್ಕನ್ನೇ ತೆಗೆದುಕೊಂಡಿವೆ.

ಚಂದ್ರ ರಾಶ್ಯಾರಂಭದಲ್ಲಿದ್ದರೆ ದೀಪದಲ್ಲಿ ಎಣ್ಣೆ ಪೂರ್ತಿ ಇದೆಯೆಂದೂ, ರಾಶಿಮಧ್ಯದಲ್ಲಿದ್ದರೆ ಅರ್ಧ ಎಣ್ಣೆ ಇದೆಯೆಂದೂ, ಕೊನೆಯಲ್ಲಿದ್ದರೆ ಎಣ್ಣೆ ಅತ್ಯಲ್ಪವೆಂದೂ ತಿಳಿಯುವುದು.

---

[1] ಶನಿ (ಗ) [2] ಸ್ಥಿತ (ಕ ಗ) [3] ಸುತಂ (ಕ).

ಬಲವತ್ಸೂರನನೀಕ್ಷಿಸೆ
ಬಲಾನ್ವಿತರ್ ಪಲವು ಸೊಡರ್ಗಳಕ್ಕುಂ ಮನೆಯೊಳ್
ಜಲಜಸಖನಂ ನಿರೀಕ್ಷಿಸೆ
ಬಲಹೀನರ್ ಕೊಳ್ಳಿವೆಳಗಿನೊಳ್ ಪೆಱುಗುಮವಳ್ ೧೧

(ಹೆರಿಗೆಮನೆಯ ಸ್ಥಿತಿ)

ಅದೃಢಂ ಮಾರ್ತಂಡನಿಂ ನಿಪ್ಪೊಸತು ಹಿಮಗುವಿಂ ಬೆಂದುದಂಗಾರನಿಂ ಚಿ
ತ್ರದ ಮಾಟಂ ಸೌಮ್ಯನಿಂ ಬಲ್ಲಿತು ಸುರಗುರುವಿಂ ಸುಂದರಂ ಶುಕ್ರನಿಂ ತ
ಗ್ಗಿದುದಕ್ಕುಂ ಮಂದನಿಂ ಮಂದಿರಮತಿಬಳರಾದಂದವರ್ ತದ್ಗೃಹಾಧ್ಯ
ರ್ಣದ ಗೇಹಕ್ಕಾಕ್ರಮಂ ತದ್ಗೃಹಮಕುಳಮ ತನ್ಮಂದಿರಸ್ವಾಮಿಗಕ್ಕುಂ ೧೨

ಲಗ್ನಾರಂಭದಲ್ಲಿ ಪ್ರಸವಿಸಿದರೆ ಬತ್ತಿ ಹೊಸದೆಂದೂ, ಮಧ್ಯದಲ್ಲಾದರೆ ಅರ್ಧ ಉರಿದಿದೆಯೆಂದೂ, ಕೊನೆಯಲ್ಲಾದರೆ ಸ್ವಲ್ಪಮಾತ್ರ ಉಳಿದಿದೆಯೆಂದೂ ತಿಳಿಯುವುದು. ಲಗ್ನದ ಬಣ್ಣವೇ ಬತ್ತಿಯ ಬಣ್ಣ.

೧೧. ಬಲಿಷ್ಠನಾದ ಸೂರ್ಯನನ್ನು ಬಲಿಷ್ಠಗ್ರಹಗಳು ನೋಡಿದರೆ ಹಲವು ದೀಪಗಳು ಆ ಹೆರಿಗೆಮನೆಯಲ್ಲಿರುತ್ತವೆ. ಚಂದ್ರನನ್ನು ಬಲಹೀನಗ್ರಹಗಳು ನೋಡಿದರೆ ಕೊಳ್ಳಿಯ ಬೆಳಕಿನಲ್ಲಿ ಹೆರಿಗೆಯಾಗುತ್ತದೆ.

ವಿ–ಬಲಿಷ್ಠನಾದ ಸೂರ್ಯನನ್ನು ಅಂಗಾರಕ ನೋಡಿದರೆ ಹೆರಿಗೆಮನೆಯಲ್ಲಿ ಹಲವು ದೀಪಗಳಿರುತ್ತವೆಂದು ಸಾರಾವಳೀ ಗ್ರಂಥದಲ್ಲಿದೆ.

೧೨. ಹೆರಿಗೆಮನೆ ಸೂರ್ಯನಿಂದ ಅಸ್ಥಿರವೂ, ಚಂದ್ರನಿಂದ ಹೊಸದೂ, ಅಂಗಾರಕನಿಂದ ಸುಟ್ಟದ್ದೂ, ಬುಧನಿಂದ ಚಿತ್ರಿತವೂ, ಗುರುವಿನಿಂದ ದೃಢವೂ, ಶುಕ್ರನಿಂದ ಸುಂದರವೂ, ಶನಿಯಿಂದ ತಗ್ಗಾದುದೂ ಎಂದು ಜನನಕಾಲದಲ್ಲಿ ಬಲಿಷ್ಠಗ್ರಹದಿಂದ ತಿಳಿದುಬರುತ್ತದೆ. ಆ ಗೃಹಸಮೀಪದ ಮನೆಯ ಸ್ಥಿತಿ ಆಯಾ ದಿಕ್ಕಿನ ರಾಶಿಗಳಲ್ಲಿರುವ ಗ್ರಹಗಳಿಗೆ ತಿಳಿಸಿರುವಂತಿರುತ್ತದೆ.

ವಿ–ಅತಿಬಲಿಷ್ಠಗ್ರಹವಿರುವ ರಾಶಿಯಿಂದ ಮುಂದಿನ ಮೂರುರಾಶಿಗಳಲ್ಲಿರುವ ಬಲಿಷ್ಠಗ್ರಹಗಳಿಂದ ಹೆರಿಗೆಮನೆಗೆ ಪೂರ್ವದಲ್ಲಿರುವ ಮನೆಯ ಸ್ಥಿತಿಯನ್ನೂ, ಅಲ್ಲಿಂದ ಮುಂದೆ ಕ್ರಮವಾಗಿ ಮೂರು ಮೂರು ರಾಶಿಗಳಿಗೆ ದಕ್ಷಿಣ ಪಶ್ಚಿಮ ಮತ್ತು ಉತ್ತರ ದಿಕ್ಕಿನಲ್ಲಿರುವ ಮನೆಯ ಸ್ಥಿತಿಯನ್ನೂ ಇದೇ ರೀತಿ ತಿಳಿದುಕೊಳ್ಳಬೇಕು.

ಉದಾ–ಜನನಕಾಲದಲ್ಲಿ ಸೂರ್ಯ ಬಲಿಷ್ಠನಾಗಿ ಮೇಷರಾಶಿಯಲ್ಲೂ ಗುರು ಉಳಿದೆಲ್ಲ ಗ್ರಹಗಳಿಗಿಂತ ಬಲಿಷ್ಠನಾಗಿದ್ದು ಕರ್ಕಟಕರಾಶಿಯಲ್ಲೂ ತುಲಾ ರಾಶಿಯಲ್ಲಿ ಶನಿ ಬಲಿಷ್ಠನಾಗಿಯೂ ಇರುವರು. ಈ ಉದಾಹೃತ ಜಾತಕನು ಹುಟ್ಟಿದ ಮನೆ ದೃಢವಾಗಿಲ್ಲ. ಈ ಮನೆಯ ಬಲಗಡೆ ದೃಢವಾದ ಮನೆಯೂ ಹಿಂದುಗಡೆ ಎತ್ತರವಲ್ಲದ ಮನೆಯೂ ಇದೆ.

(ಅರಸ ಮೊದಲಾದ ಕಾರಕರು)

ಅರಸರ್ ಚಂದ್ರಾದಿತ್ಯರ್
ಧರಣಿಸುತಂ ದಂಡನಾಯಕಂ ಕುವರಂ ಶೀ
ತರುಚಿಸುತಂ ಪೆರ್ಗಡೆಗಳ್
ಗುರುಭಾರ್ಗವರರ್ಕಸೂನು ಭೃತ್ಯನೆನಿಕ್ಕುಂ ೧೩

(ಹೆರಿಗೆ ಮನೆಯ ಅಂತಸ್ತು)

ದಿವಿಜೇಂದ್ರಾರ್ಚಿತನುಚ್ಚಗಂ ದಶಮದೊಳ್ ನಿಂದಂದೆರಟ್ಮೂಱು ನಾ
ಲ್ಕು ವಲಂ ಭೂಮಿಕೆಯಕ್ಕುಮುಚ್ಚವಶದಿಂ ಗೇಹಕ್ಕೆ ಮತ್ತಂ ಧನು
ರ್ಭವನಾಂತಸ್ಥಿತನಾಗೆ ತದ್ಗುರು ಬಲೋಪೇತಂ ನಿಕೇತಂ *ತ್ರಿಶಾ
ಲವೆನಿಕ್ಕುಂ ದ್ವಿಶರೀರರಾಶಿಯೊಳಿರಲ್ಕಕ್ಕುಂ ದ್ವಿಶಾಲಾಲಯಂ ೧೪

---

ಅತಿಬಲಿಷ್ಠನಾದ ಗ್ರಹವಿರುವ ರಾಶಿಯಲ್ಲೇ ಬಲಿಷ್ಠನಾದ ಸೂರ್ಯ ನಿದ್ದರೆ ದೇವರಮನೆ ಹತ್ತಿರದಲ್ಲಿ, ಚಂದ್ರನಿದ್ದರೆ ಸ್ನಾನದ ಮನೆಯಲ್ಲಿ, ಅಂಗಾರಕ ನಿದ್ದರೆ ಅಡಿಗೆಮನೆಯಲ್ಲಿ, ಬುಧನಿದ್ದರೆ ಮಲಗುವ ಮನೆಯಲ್ಲಿ, ಗುರುವಿದ್ದರ ಉಗ್ರಾಣದಲ್ಲಿ, ಶುಕ್ರನಿದ್ದರೆ ಆಟದ ಮನೆ, ಶನಿಯಿದ್ದರೆ ದನದಕೊಟ್ಟಿಗೆ ಅಥವಾ ಕಸವಿರುವ ಜಾಗದಲ್ಲಿ ಜನನವಾಗುತ್ತದೆ.

೧೩. ಚಂದ್ರಸೂರ್ಯರು ಅರಸರು, ಕುಜ ದಂಡನಾಯಕ, ಯುವರಾಜ ಬುಧ, ಮಂತ್ರಿಗಳು ಗುರು ಶುಕ್ರರು, ಶನಿ ಸೇವಕ.

ವಿ—ಲಘುಜಾತಕ ಬೃಹಜ್ಜಾತಕಗಳಲ್ಲಿ ಈ ವಿಚಾರ ೨ನೇ ಅಧ್ಯಾಯದಲ್ಲಿದೆ. ಹೆರಿಗೆಮನೆಯ ಅಕ್ಕಪಕ್ಕದ ಮನೆಗಳು ಯಾರಿಗೆ ಸೇರಿದ್ದು ಎನ್ನುವುದನ್ನು ತಿಳಿಯಬಹುದೆಂದು ಸೂಚಿಸುವುದಕ್ಕಾಗಿ ಶ್ರೀಧರನು ಇದನ್ನು ಈ ಪ್ರಕರಣದಲ್ಲಿ ಸೇರಿಸಿರಬಹುದು.

೧೪. ಜನನಕಾಲದಲ್ಲಿ ಗುರು ಉಚ್ಚಕ್ಷೇತ್ರದಲ್ಲಿ ದಶಮಸ್ಥಾನದಲ್ಲಿದ್ದರೆ ಎರಡು ಮೂರು ನಾಲ್ಕು ಅಂತಸ್ತುಗಳು ಉಚ್ಚವಶದಿಂದ ಆ ಹೆರಿಗೆಯ ಮನೆಗಿರುತ್ತದೆ. ಧನುಸ್ಸಿನಲ್ಲಿ ದಶಮಸ್ಥಾನದಲ್ಲಿ ಬಲಿಷ್ಠನಾದ ಗುರುವಿದ್ದರೆ ಆ ಮನೆ ಮೂರು ಅಂತಸ್ತಿನದೂ ದ್ವಿಸ್ವಭಾವರಾಶಿ (ಮಿಥುನ ಕನ್ಯಾ ಮೀನ) ಗಳಲ್ಲಿ ದಶಮಕ್ಷೇತ್ರದಲ್ಲಿದ್ದರೆ ಎರಡು ಅಂತಸ್ತಿನದೂ ಆಗಿರುತ್ತದೆ.

ವಿ—ಗುರುವಿಗೆ ಕರ್ಕಟಕ ಉಚ್ಚರಾಶಿ; ಅದರಲ್ಲಿ ೫ನೇ ಅಂಶ ಪರಮೋಚ್ಚ ಭಾಗ. ಪ್ರಸವ ತುಲಾಲಗ್ನದಲ್ಲಾಗಿ ಬಲಿಷ್ಠನಾದ ಗುರು ಪರಮೋಚ್ಚಭಾಗ ದಲ್ಲಿದ್ದರೆ ಹೆರಿಗೆಯ ಮನೆ ನಾಲ್ಕು ಅಂತಸ್ತಿನದೂ, ಅದೇ ಲಗ್ನವಾಗಿ ಗುರು ಕರ್ಕಟಕರಾಶಿಯಲ್ಲಿ ೫ ಅಂಶಗಳೊಳಗಿದ್ದರೆ ಮನೆ ಮೂರು ಅಂತಸ್ತಿನದೂ, ತುಲಾಲಗ್ನವೇ ಆಗಿ ಗುರು ಕರ್ಕಟಕರಾಶಿಯಲ್ಲೇ ೬ನೇ ಅಂಶದಿಂದ ಮುಂದೆ ಇದ್ದರೆ ಎರಡಂತಸ್ತಿನದೂ ಆಗಿರುತ್ತದೆ. ಜನನಲಗ್ನ ಮೀನವಾಗಿ ಬಲಿಷ್ಠನಾದ

---

* 'ವಿಶಾಲ' ಎಂದು ಲಘುಜಾತಕದಲ್ಲಿದೆ.

(ಹೆರಿಗೆಮನೆಯಲ್ಲಿರುವ ದ್ರವ್ಯ)

ರವಿಯಿಂದಂ ಕಿಸು ಚಂದ್ರನಿಂ ಮಣಿ ಧರಿತ್ರೀಪುತ್ರನಿಂ ಹೇಮಮಪ್ಪೊಂ
ದವನಿಂದಂ ತ್ರಪು ಕಾಂಸ್ಯವರ್ಗಮಮರೇಂದ್ರಾಮಾತ್ಯನಿಂ ಬೆಳ್ಳಿ ಭಾ
ರ್ಗವನಿಂ ಮುತ್ತಿನಸೂನುವಿಂ ಸಮನಿಕುಂ ಕಬ್ಬೊನ್ ಬಲಂಬೆತ್ತೊಡಾ
ದಿವಿಜೇಜ್ಯಂ ಸ್ವಗೃಹಂಗಳೊಳ್ ನಿಲೆ ಸುವರ್ಣಂ ಪೂರ್ಣಮಾ ಗೇಹದೊಳ್ ೧೫

(ಹೆರಿಗೆಯ ಮಂಚದ ಸ್ಥಿತಿ)

ಬರೆ[1]ದು[1] ರಾಶಿಚಕ್ರಮನಲ್ಲಿ ಲಗ್ನಕ್ಕೆ ಷಟ್ ತ್ರಿ ನವ ದ್ವಾದಶಾಲಯಂ[2]ಗಳ್[2]
ಹೊರಸಿಂಗವು ನಾಲ್ಕುಕಾಲ್ಗಳೆಡೆಯ ರಾಶಿ[3]ಗಳ್ಗಿ[3]ಕ್ಕೆಗಳ್ [4]ಲಗ್ನಂ ತಲೆಯೆನಿಕ್ಕುಂ[4]
ಇರೆ ಶುಭಗ್ರಹಮಾ ಮರಂ ಲೇಸಕ್ಕುಂ ದ್ವಿಶರೀರಂ ಬರೆ ನಳಿದಿಕ್ಕುಂ ಕ್ರೂರ
ರಿರೆ ತದುಪಘಾತಮಕ್ಕುಂ [5]ಸ್ವಕ್ಷ[5]ತ್ರಿಕೋಣೋಚ್ಚ[6]ದೊಳಿರ್ದೊಡೆ[6] ಪರಿಹರಿಕುಂ ೧೬

---

ಗುರು ಧನುಸ್ಸಿನಲ್ಲಿದ್ದರೆ ಮೂರಂತಸ್ತಿನ ಮನೆಯಲ್ಲೂ, ಮಿಥುನರಾಶಿ ಲಗ್ನವಾಗಿ ಗುರು ಮೀನದಲ್ಲಿದ್ದರೆ ಅಥವಾ ಕನ್ಯಾಲಗ್ನದಲ್ಲಿ ಪ್ರಸವವಾಗಿ ಬಲಿಷ್ಠನಾದ ಗುರು ಮಿಥುನರಾಶಿಯಲ್ಲಿದ್ದರೆ ಅಥವಾ ಧನುರ್ಲಗ್ನದಲ್ಲಿ ಜನನವಾಗಿ ಬಲಿಷ್ಠನಾದ ಗುರು ಕನ್ಯಾರಾಶಿಯಲ್ಲಿದ್ದರೆ ಎರಡಂತಸ್ತಿನ ಮನೆಯಲ್ಲೂ ಪ್ರಸವವಾಗಿರುತ್ತದೆ.

೧೫. ಸೂರ್ಯನಿಂದ ತಾಮ್ರ, ಚಂದ್ರನಿಂದ ರತ್ನ, ಅಂಗಾರಕನಿಂದ ಚಿನ್ನ, ಬುಧನಿಂದ ಸೀಸ ಮತ್ತು ಕಂಚು, ಗುರುವಿಂದ ಬೆಳ್ಳಿ, ಶುಕ್ರನಿಂದ ಮುತ್ತು, ಶನಿಯಿಂದ ಕಬ್ಬಿಣ ; ಇದರಿಂದ ಹೆರಿಗೆಮನೆಯಲ್ಲಿರುವ ದ್ರವ್ಯ ತಿಳಿದು ಬರುತ್ತದೆ. ಗುರು ಬಲಿಷ್ಠನಾಗಿ ಸ್ವಕ್ಷೇತ್ರದಲ್ಲಿದ್ದರೆ ಚಿನ್ನ ಆ ಮನೆಯಲ್ಲಿ ತುಂಬಿರುತ್ತದೆ.

ವಿ–ಜನನಕಾಲದಲ್ಲಿ ಎಲ್ಲಾ ಗ್ರಹಗಳಿಗಿಂತ ಸೂರ್ಯ ಬಲಿಷ್ಠನಾಗಿದ್ದರೆ ತಾಮ್ರ, ಚಂದ್ರ ಬಲಿಷ್ಠನಾಗಿದ್ದರೆ ರತ್ನ, ಅಂಗಾರಕ ಬಲಿಷ್ಠನಾಗಿದ್ದರೆ ಚಿನ್ನ, ಬುಧ ಬಲಿಷ್ಠನಾಗಿದ್ದರೆ ಸೀಸ ಮತ್ತು ಕಂಚು, ಗುರು ಬಲಿಷ್ಠನಾಗಿದ್ದರೆ ಬೆಳ್ಳಿ, ಶುಕ್ರ ಬಲಿಷ್ಠನಾಗಿದ್ದರೆ ಮುತ್ತು, ಶನಿ ಬಲಿಷ್ಠನಾಗಿದ್ದರೆ ಕಬ್ಬಿಣ ಇವು ಹೆರಿಗೆ ಮನೆಯಲ್ಲಿ ಇರುತ್ತವೆಂದು ತಿಳಿದುಬರುತ್ತದೆ.

೧೬. ಜನನಕಾಲದ ರಾಶಿಕುಂಡಲಿಯಲ್ಲಿ ಲಗ್ನದಿಂದ ೬, ೩, ೯, ೧೨ನೆಯ ರಾಶಿಗಳು ಮಂಚದ ನಾಲ್ಕು ಕಾಲುಗಳು, ಪಕ್ಕದ ರಾಶಿಗಳಿಗೆ ಉಳಿದ ಭಾಗಗಳು, ಲಗ್ನ ತಲೆ. ಶುಭಗ್ರಹವಿರುವ ಭಾಗದ ಮರ ದೃಢವಾಗಿರುತ್ತದೆ. ದ್ವಿಸ್ವಭಾವ ರಾಶಿಯಿರುವ ಮಂಚದ ಭಾಗ ಬಗ್ಗಿರುತ್ತದೆ. ಕ್ರೂರಗ್ರಹಗಳಿದ್ದರೆ ಆ ಭಾಗಕ್ಕೆ ಉಪಘಾತವಾಗಿರುತ್ತದೆ. ಸ್ವಕ್ಷೇತ್ರ ತ್ರಿಕೋಣ ಉಚ್ಚರಾಶಿಗಳಲ್ಲಿ ಅಶುಭಗ್ರಹವಿದ್ದರೆ ಇದನ್ನು ಪರಿಹರಿಸುತ್ತಾನೆ. (ಅಂದರೆ ಉಪಘಾತವಿರುವುದಿಲ್ಲ).

---

[1] ದಿಡು (ಗ) [2] ಗಳೊಳ್ (ಕ) [3] ಗಳೆ (ಕ ಗ) [4] ಲಗ್ನದತ್ತರೆ ತಲೆಯೊನಿಕುಂ (ಕ) ಲಗ್ನ ದತ್ತರೆಯೆನಿಕ್ಕುಂ (ಗ) [5] ವೃತ್ತ (ಕ ಗ) [6] ದೊಳ್ ಶುಭವಿರ್ದೊಡೆ (ಕ ಗ).

(ಹೆರಿಗೆಕೋಣೆಯಲ್ಲಿ ಮಂಚದ ಸನ್ನಿವೇಶ)

ಉದಯಮಜಾಳಿ ತೌಳಿ ಘಟ ಕರ್ಕಟಕಾಲಯಮಾಗೆ ಮೂಡಲ
ದುರ್ದು ಹೊರಸೆಂದು ಪೇಳ ಮೃಗ ಸಿಂಹ ನಿಕೇತನಮಾಗೆ ತೆಂಕಲ
ದುರ್ದು ವೃಷಮಾಗೆ ಪಶ್ಚಿಮದೊಳಿರ್ದುದು ದಂಪತಿ ಮೀನ ಚಾಪಧ
ತ್ರ್ಯಾದತಿಗಳಾಗೆಯಿಂ ಬಡಗಲಿರ್ದುದು ಸೂತಿಕೆಯಿರ್ದ ಗೇಹದೊಳ್ ೧೭

ವಿ–ಲಗ್ನರಾಶಿಯ ದಿಕ್ಕಿನಲ್ಲಿ ತಲೆ, ೧೨–೩ನೇ ರಾಶಿಗಳು ಮಂಚದ ಮುಂದಿನ ಎರಡು ಕಾಲುಗಳು. ಅದರಲ್ಲಿ ೩ನೇ ರಾಶಿ ಬಲಗಾಲು, ೧೨ನೆಯದು ಎಡಗಾಲು. ೬–೯ನೇ ರಾಶಿಗಳು ಮಂಚದ ಹಿಂದಿನ ಕಾಲುಗಳು. ಅದರಲ್ಲಿ ೬ನೆಯದು ಬಲಗಾಲು, ೯ನೆಯದು ಎಡಗಾಲು. ಲಗ್ನ ಮತ್ತು ೨ನೇ ರಾಶಿ ತಲೆ. ೪–೫ನೇ ರಾಶಿಗಳು ಬಲಪಾರ್ಶ್ವ. ೭–೮ನೇ ರಾಶಿಗಳು ಕಾಲಿನ ಭಾಗ. ೧೦–೧೧ನೇ ರಾಶಿಗಳು ಎಡಪಾರ್ಶ್ವ. ಹೊರಸು–ಹಗ್ಗದ ಮಂಚ.

ದಿಗ್ವಿಭಾಗ—ಮೇಷ ವೃಷಭ–ಪೂರ್ವ ; ಮಿಥುನ–ಆಗ್ನೇಯ ; ಕರ್ಕಟಕ ಸಿಂಹ–ದಕ್ಷಿಣ ; ಕನ್ಯಾ–ನೈಋತ್ಯ ; ತುಲಾ ವೃಶ್ಚಿಕ–ಪಶ್ಚಿಮ ; ಧನುಸ್ಸು–ವಾಯವ್ಯ ; ಮಕರ ಕುಂಭ–ಉತ್ತರ ; ಮೀನ–ಈಶಾನ್ಯ.

ಉದಾ–ವೃಷಭಲಗ್ನದಲ್ಲಿ ಜನನವಾದಾಗ ಪೂರ್ವದಿಕ್ಕಿಗೆ ತಲೆ ; ಮೇಷಕರ್ಕಟಕರಾಶಿಗಳು ಮಂಚದ ಮುಂದಿನ ಕಾಲುಗಳು ; ಹಿಂದಿನ ಕಾಲುಗಳು ತುಲಾ ಮಕರ ರಾಶಿಗಳು ; ವೃಷಭ ಮಿಥುನ ತಲೆಯ ಪಾರ್ಶ್ವ ; ವೃಶ್ಚಿಕ ಧನುಸ್ಸು ಕಾಲಿನಪಾರ್ಶ್ವ ; ಸಿಂಹ ಕನ್ಯಾ ಬಲಭಾಗ ; ಕುಂಭ ಮೀನ ಎಡಭಾಗ.

ಜನನಕಾಲದಲ್ಲಿ ಬಲಿಷ್ಠನಾದ ಕುಜ ಕನ್ಯಾರಾಶಿಯಲ್ಲೂ ಸೂರ್ಯ ಸಿಂಹ ರಾಶಿಯಲ್ಲೂ ಇರುವರು. ಕನ್ಯಾರಾಶಿ ಮಂಚದ ಬಲಪಾರ್ಶ್ವವಾಗುತ್ತದೆ. ಆದುದರಿಂದ ಮಂಚದ ಬಲಪಾರ್ಶ್ವದಲ್ಲಿ ಬೆಂಕಿಯಿಂದ ಸುಟ್ಟ ಮರವಿದೆ.

ಕಾಲಿನ ಕಡೆಯ ಮಂಚದ ಎಡಪಾರ್ಶ್ವದ ರಾಶಿ ಧನುಸ್ಸು. ಇದು ದ್ವಿಸ್ವಭಾವರಾಶಿಯಾಗಿರುವುದರಿಂದ ಆ ಭಾಗ ಸ್ವಲ್ಪ ಬಗ್ಗಿರುತ್ತದೆ. ಪಾಪಗ್ರಹವಾದ ಸೂರ್ಯ ಸಿಂಹದಲ್ಲಿದ್ದರೂ ಆ ರಾಶಿ ಅವನಿಗೆ ಸ್ವಕ್ಷೇತ್ರವಾಗಿರುವುದರಿಂದ ಮಂಚದ ಬಲಭಾಗ ಉಪಘಾತವಿಲ್ಲದೆ ಚೆನ್ನಾಗಿರುತ್ತದೆ.

೧೭. ಲಗ್ನವು ಮೇಷ ವೃಶ್ಚಿಕ ತುಲಾ ಕುಂಭ ಕರ್ಕಟಕರಾಶಿಗಳಾದರೆ ಹೆರಿಗೆಕೋಣೆಯಲ್ಲಿ ಮಂಚ ಪೂರ್ವದಲ್ಲಿರುತ್ತದೆ. ಮಕರ ಸಿಂಹರಾಶಿಗಳಾದರೆ ದಕ್ಷಿಣದಲ್ಲಿರುತ್ತದೆ, ವೃಷಭರಾಶಿಯಾದರೆ ಪಶ್ಚಿಮದಲ್ಲಿರುತ್ತದೆ. ಮಿಥುನ ಮೀನ ಧನುಸ್ಸು ಕನ್ಯಾರಾಶಿಗಳಾದರೆ ಉತ್ತರದಲ್ಲಿರುತ್ತದೆ.

(ಹೆರಿಗೆಕಾಲದಲ್ಲಿದ್ದವರ ಸಂಖ್ಯೆ)

ಹಿಮಕರನಿಂ ವಿಲಗ್ನದೆಡೆಯೊಳ್ ನಿಲೆ ತದ್ಗ್ರಹಸಂಖ್ಯೆಯಿಂ ಗೃಹ
ಪ್ರಮದೆಯರೆಂಗೆ ಚಕ್ರದುದಯಾರ್ಧದೊಳಿರ್ದನಿಬರ್ ಗೃಹಾಂತರ
ಪ್ರಮದೆಯರೆಂಗೆ ಚಕ್ರದಪರಾರ್ಧದೊಳಿರ್ದನಿಬರ್ ಗೃಹಸ್ಥಿತ
ಪ್ರಮದೆಯರ್ಕೆಂಗೆ ಮೇಣ್ ದ್ವಿಜನಮೆಂದಱಿಗಾ ಗೃಹಚಾರದುಕ್ತಿಯೊಳ್ ೧೮

---

೧೮. ಜನನಲಗ್ನ ಚಂದ್ರನಿರುವ ರಾಶಿಗಳ ಮಧ್ಯೆ ಇರುವ ಗ್ರಹ ಸಂಖ್ಯೆಯಷ್ಟು ಹೆಂಗಸರು ಪ್ರಸವವೇಳೆಯಲ್ಲಿದ್ದರೆಂದು ಹೇಳಬೇಕು. ಇದರಲ್ಲಿ ದೃಶ್ಯಚಕ್ರಾರ್ಧದಲ್ಲಿರುವ ಗ್ರಹಸಂಖ್ಯೆಯಷ್ಟು ಮಂದಿ ಹೆರಿಗೆಕೋಣೆಯ ಹೊರಗಡೆ ಇರುವ ಹೆಂಗಸರೆಂಧು ಹೇಳಬೇಕು. ರಾಶಿಚಕ್ರದ ಅದೃಶ್ಯಾರ್ಧದಲ್ಲಿರುವಷ್ಟು ಮಂದಿ ಹೆರಿಗೆಕೋಣೆಯೊಳಗೆ ಇರುವ ಹೆಂಗಸರೆಂದು ಹೇಳಬೇಕು ; ಮತ್ತು ಇದಕ್ಕೆ ಎರಡರಷ್ಟು ಜನ ಎನ್ನುವುದನ್ನು ಗ್ರಹಚಾರವಶದಿಂದ ತಿಳಿಯುವುದು.

ವಿ—ದೃಶ್ಯಚಕ್ರಾರ್ಧ—ಲಗ್ನರಾಶಿಯಲ್ಲಿ ಕಳೆದಿರುವ ಭಾಗ, ೧೨, ೧೧, ೧೦, ೯, ೮ನೇ ರಾಶಿಗಳು, ೭ನೇ ರಾಶಿಯ ಕೊನೆಯಲ್ಲಿ ಲಗ್ನದಲ್ಲಿ ಕಳೆದಿರುವಷ್ಟು ಭಾಗ.

ಅದೃಶ್ಯಚಕ್ರಾರ್ಧ—ಲಗ್ನದಲ್ಲಿ ಉಳಿದಿರುವ ಭಾಗ, ೨, ೩, ೪, ೫, ೬ನೇ ರಾಶಿಗಳು, ೭ನೇ ರಾಶಿಯ ಆರಂಭದಲ್ಲಿ ಲಗ್ನದಲ್ಲಿ ಉಳಿದಿರುವಷ್ಟು ಭಾಗ.

ಗ್ರಹ ಸ್ವಕ್ಷೇತ್ರ ಅಥವಾ ಉಚ್ಚಕ್ಷೇತ್ರದಲ್ಲಿದ್ದರೆ ಎರಡರಷ್ಟು ಜನ ಇರುತ್ತಾರೆ ; ಕೆಲವರು ಲಗ್ನಚಂದ್ರರ ಮಧ್ಯೆ ದೃಶ್ಯಚಕ್ರಾರ್ಧದಲ್ಲಿರುವ ಗ್ರಹಸಂಖ್ಯೆಯಷ್ಟು ಮಂದಿ ಹೆರಿಗೆಯ ಕೋಣೆಯಲ್ಲಿರುವವರೆಂದೂ, ಅದೃಶ್ಯ ಚಕ್ರಾರ್ಧದಲ್ಲಿರುವ ಗ್ರಹಸಂಖ್ಯೆಯಷ್ಟು ಮಂದಿ ಕೋಣೆಯ ಹೊರಗಡೆ ಇರುವವರೆಂದೂ ಹೇಳುತ್ತಾರೆ. ಚಂದ್ರನು ಲಗ್ನದಲ್ಲೇ ಇದ್ದರೆ ಸೂಲಗಿತ್ತಿಯರು ಮೂರು ಮಂದಿ ಇರುತ್ತಾರೆ.

ಉದಾ—

| | | | |
|---|---|---|---|
| ಶುಕ್ರ | ರವಿ | ಕುಜ ಬುಧ | ಚಂದ್ರ |
| | ಲಗ್ನ ಕುಂಡಲಿ | | ಗುರು |
| | | | |
| | | ಶನಿ | ಲಗ್ನ |

(ಹೆರಿಗೆಯ ಸ್ಥಳ)

ನರಲಗ್ನಮನೀಕ್ಷಿಸೆ ರವಿ
ಸುರ ನೃಪ ಗೋಗ್ರೃಹದೊಳಗ್ನಿಹೋತ್ರಾಲಯದೊಳ್
ಗುರು ವೀಕ್ಷಿಸೆ ಶಿಲ್ಪಗೃಹಾಂ
ತರದೊಳ್ ವೀಕ್ಷಿಸೆ ಬುಧಂ ನರಂ ಜನಿಯಿಸುಗುಂ ೧೯

(ನೀರಿನ ಹತ್ತಿರ ಹೆರಿಗೆ)

ಇರೆ ಜಲಲಗ್ನದೊಳಸಿತಂ
ಖರಕಿರಣಂ ನೋಡೆ ನದಿಯ ತಡಿಯೊಳ್ ದೋಷಾ
ಕರನೀಕ್ಷಿಸೆ ಮಣಲೊಳ್ ಶೀ
ತರುಕ್ಸುತಂ ನೋಡಲುದಕದೊಳ್ ಪೆಱುಗುಮವಳ್ ೨೦

---

ಈ ಜಾತಕದಲ್ಲಿ ಲಗ್ನ ಚಂದ್ರರ ಮಧ್ಯೆ ಐದು ಗ್ರಹಗಳಿವೆ. ಇದರಲ್ಲಿ ಎರಡುಗ್ರಹ (ಶುಕ್ರ ಶನಿ) ಗಳು ಅದೃಶ್ಯಚಕ್ರಾರ್ಧದಲ್ಲೂ, ಮೂರುಗ್ರಹ (ಕುಜ ಬುಧ ರವಿ)ಗಳು ದೃಶ್ಯಚಕ್ರಾರ್ಧದಲ್ಲೂ ಇವೆ.

ದೃಶ್ಯಚಕ್ರಾರ್ಧದಲ್ಲಿ ಮೂರುಗ್ರಹಗಳಿರುವುದರಿಂದ ಹೆರಿಗೆಕಾಲದಲ್ಲಿ ಕೋಣೆ ಹೊರಗಡೆ ಮೂರುಮಂದಿಯೂ, ಅದೃಶ್ಯಚಕ್ರಾರ್ಧದಲ್ಲಿರುವ ಎರಡು ಗ್ರಹಗಳೂ ಉಚ್ಚಕ್ಷೇತ್ರದಲ್ಲಿರುವುದರಿಂದ ೨×೨=೪ ಮಂದಿ ಕೋಣೆಯೊಳಗೂ ಹೀಗೆ ಒಟ್ಟು ೭ ಮಂದಿ ಇದ್ದರೆಂದು ತಿಳಿದುಬರುತ್ತದೆ.

೧೯. ನರಲಗ್ನವನ್ನು ಸೂರ್ಯ ನೋಡಿದರೆ ದೇವರಮನೆ ರಾಜಗೃಹ ದನದಕೊಟ್ಟಿಗೆ ಇವುಗಳೊಂದರಲ್ಲಿ, ಗುರು ನೋಡಿದರೆ ಅಗ್ನಿಹೋತ್ರಗೃಹದಲ್ಲಿ, ಬುಧ ನೋಡಿದರೆ ಶಿಲ್ಪಗೃಹದೊಳಗೆ ಮಗು ಹುಟ್ಟುತ್ತದೆ.

ವಿ–ಮಿಥುನ ಕನ್ಯಾ ತುಲಾ ಧನುಸ್ಸಿನಪೂರ್ವಾರ್ಧ ಕುಂಭ ಇವು ನರರಾಶಿಗಳು. ಈ ರಾಶಿಗಳಲ್ಲೊಂದು ಲಗ್ನವಾದರೆ ನರಲಗ್ನವೆನಿಸಿ ಕೊಳ್ಳುತ್ತದೆ.

೨೦. ಜಲಲಗ್ನದಲ್ಲಿ ಶನಿ ಇರಲು ಸೂರ್ಯ ಆತನನ್ನು ನೋಡಿದರೆ ನದಿಯ ದಡದಲ್ಲಿ, ಚಂದ್ರ ನೋಡಿದರೆ ಮರಳಿನಲ್ಲಿ, ಬುಧ ನೋಡಿದರೆ ನೀರಿನಲ್ಲಿ ಪ್ರಸವಿಸುತ್ತಾಳೆ.

ವಿ–ಜಲಲಗ್ನದಲ್ಲಿರುವ ಶನಿಯನ್ನು ಸೂರ್ಯ ನೋಡಿದರೆ ದೇವರ ಮನೆ ಹತ್ತಿರದಲ್ಲೂ, ಬುಧ ನೋಡಿದರೆ ಮಲಗುವ ಕೋಣೆಯಲ್ಲೂ ಹೆರಿಗೆ ಆಗುತ್ತದೆ ಎಂದು ವರಾಹಮಿಹಿರಾಚಾರ್ಯರು ಹೇಳಿರುತ್ತಾರೆ.

(ಸೆರೆಮನೆಯಲ್ಲಿ ಹೆರಿಗೆ)

ಅಸದಾಳೋಕಿತ ಮಾರ್ತಂ
ಡಸುತಂ ಕೂಡಿರೆ ವಿಲಗ್ನಗತ ಭವನದೊಳ
ಕ್ಕೆ ಸುಧಾಮರೀಚಿ ಮೇಣಾ
ಪ್ರಸೂತಿಯಕ್ಕುಂ ವಧೂಟಿ ಕಾರಾಗೃಹದೊಳ್ ೨೧

(ನಿರ್ಜನಸ್ಥಾನದಲ್ಲಿ ಹೆರಿಗೆ)

ಇರೆ ನೀಚಗೃಹದಿ ಸೌಮ್ಯರ್
ಮರವೊದರೊಳ್ ಸಾಲಮೂಲದೊಳ್ ಜನನಂ ಮೇ
ಣಿರೆ ಚಂದ್ರಂ ಲಗ್ನದೊಳ
ನ್ಯರವೇಕ್ಷಿ[1]ಸ[1]ದಂದು ನಿರ್ಜನಸ್ಥಾನಕದೊಳ್ ೨೨

(ಕತ್ತಲಲ್ಲಿ ಹೆರಿಗೆ)

ಇರೆ ನೀಚಾಂಶಕದೊಳ್ ಹಿಮಾಂಶು ಮೃಗ ಕುಂಭಕ್ಷೇತ್ರದೊಳ್ ನೋಡೆ ಭಾ
ಸ್ಕರಿ ಮೇಣ್ [2]ವಾ[2]ಶ್ವರ ಲಗ್ನಮಪ್ಪ ಗೃಹದೊಳ್ [3]ಚಂದ್ರಂ ನಿಲಲ್ ಕೂಡೆ ಭಾ
ಸ್ಕರಿ ಜನ್ಮಂ ತಮದೊಳ್ ತುಷಾರರುಚಿ ಜಾಮಿತ್ರ[4]ಸ್ಥನಾದಂದು ಭಾ
ಸ್ಕರ[1]ಪುತ್ರಂ ಬಗೆದೀಕ್ಷಿಪಂದು ನೆಲದೊಳ್ ತದ್ಬಾಲಕಂ ಪುಟ್ಟುಗುಂ ೨೩

---

೨೧. ಅಶುಭಗ್ರಹದಿಂದ ನೋಡಲ್ಪಟ್ಟ ಶನಿಯು ಲಗ್ನಕ್ಕೆ ಹನ್ನೆರಡನೆಯ (ಸ್ಥಾನ) ಮನೆಯಲ್ಲಿ ಅಥವಾ ಚಂದ್ರನಿಗೆ ಹನ್ನೆರಡನೆಯ ಮನೆಯಲ್ಲಿದ್ದರೆ ಸೆರೆ ಮನೆಯಲ್ಲಿ ಹೆಂಗಸು ಪ್ರಸವಿಸುತ್ತಾಳೆ.

೨೨. ನೀಚ ಕ್ಷೇತ್ರದಲ್ಲಿ ಸೌಮ್ಯಗ್ರಹಗಳಿದ್ದರೆ ಮರದ ಬುಡ ಅಥವಾ ಪ್ರಾಕಾರದ (ಕೋಟೆ) ಮೂಲದಲ್ಲಿ ಜನನವಾಗುತ್ತದೆ ಮತ್ತು ಚಂದ್ರ ಲಗ್ನ ದಲ್ಲಿದ್ದು ಉಳಿದ ಗ್ರಹಗಳು ನೋಡದಿದ್ದರೆ ಜನಸಂಚಾರವಿಲ್ಲದ ಸ್ಥಳದಲ್ಲಿ ಪ್ರಸವವಾಗುತ್ತದೆ.

ವಿ–ಸೌಮ್ಯಗ್ರಹಗಳು—ಅಶುಭಗ್ರಹದೊಡನಿರದ ಬುಧ ಗುರು ಶುಕ್ರ ಕ್ಷೀಣನಲ್ಲದ ಚಂದ್ರ. ನೀಚಕ್ಷೇತ್ರಗಳು—ಬುಧನಿಗೆ ಮೀನ, ಗುರುವಿಗೆ ಮಕರ, ಶುಕ್ರನಿಗೆ ಕನ್ಯಾ, ಚಂದ್ರನಿಗೆ ವೃಶ್ಚಿಕ.

೨೩. ನೀಚಾಂಶದಲ್ಲಿ (ವೃಶ್ಚಿಕನವಾಂಶದಲ್ಲಿ) ಚಂದ್ರನಿದ್ದರೆ, ಮಕರ ಅಥವಾ ಕುಂಭರಾಶಿಯಲ್ಲಿ ಚಂದ್ರನಿದ್ದರೆ, ಚಂದ್ರನನ್ನು ಶನಿ ನೋಡಿದರೆ, ಕರ್ಕಟಕ ಅಥವಾ ಮೀನರಾಶಿಯಲ್ಲಿ ಚಂದ್ರನಿದ್ದರೆ, ಚಂದ್ರ ಶನಿಯೊಡನಿದ್ದರೆ, ಕತ್ತಲೆಯಲ್ಲಿ ಹೆರಿಗೆಯಾಗುತ್ತದೆ. ಚಂದ್ರ ಏಳನೆಯ ಸ್ಥಾನದಲ್ಲಿದ್ದಾಗ ಶನಿ ಚಂದ್ರನನ್ನು ನೋಡಿದಾಗ ನೆಲದ ಮೇಲೆ ಆ ಶಿಶು ಹುಟ್ಟುತ್ತದೆ.

ವಿ–ಬೃಹಜ್ಜಾತಕದಲ್ಲಿ "ನೀಚಸಂಸ್ಥೈಶ್ಚ ಭೂಮೌ" ಅಂದರೆ 'ಮೂರು ಅಥವಾ ಅದಕ್ಕಿಂತ ಹೆಚ್ಚು ಗ್ರಹಗಳು ನೀಚಕ್ಷೇತ್ರದಲ್ಲಿದ್ದರೆ ನೆಲದಮೇಲೆ ಹೆರಿಗೆ

---

[1] ಸಿ (ಕ ಗ) [2] ಪೂ (ಗ) [3] ಚಂದ್ರಾನಿಲಂ ನೋ (ಕ ಗ) [4] ಸ್ಥಾನದಂದು ಸೂರ್ಯನ (ಕ ಗ).

(ಹೊಂಡ, ಶ್ಮಶಾನದಲ್ಲಿ ಜನನ)

ಅಸಿತಂ ವೃಶ್ಚಿಕ ಕರ್ಕಿಲಗ್ನಗೃಹದೊಳ್ ನಿಂದಂದು ಚಂದ್ರಂ ನಿರೀ
ಕ್ಷಿಸೆ ಜನ್ಮಂ ಕುಟಿಯೊಳ್ ನೃಲಗ್ನಮನದಂ ಚಂದ್ರಾಸುರೇ[1]ಜ್ಯರ[1] ನಿರೀ
ಕ್ಷಿಸೆ ಜನ್ಮಂ [2]ರು[2]ಚಿರೋರ್ವಿಯೊಳ್ ನರವಿಲಗ್ನಕ್ಷೇತ್ರಮಂ ಭೌಮನೀ
ಕ್ಷಿಸೆ ಜನ್ಮಂ ಪಿಟಿರ್ತೇಂ ಪರೇತವನದೊಳ್ ತದ್ಬಾಲಕಂಗೊಂದುಗಂ ೨೪

(ದೋಣಿಯಲ್ಲಿ ಜನನ)

ವನಜರಿಪು[3]ವಸ್ತ್ರ[3]ದೊಳ್ ಪೂ
ರ್ಣನಾಗಿ ಪೋಣ್ ಕರ್ಕಿಯೊಳ್ ಸಿತಾಂಗಿರಸರ್ ನಾ
ಲ್ಕನೆಯೊಳ್ ಜಲಲಗ್ನದೊಳಿಂ
ದುನಂದನಂ ನಿಲೆ [4]ಬಹಿತ್ರ[4]ದೊಳ್ ಜನಿಯಿಸುಗುಂ ೨೫

---

ಯಾಗುತ್ತದೆ' ಎಂದಿದೆ. ಚಂದ್ರ ನೀಚದಲ್ಲಾಗಲೀ ಲಗ್ನದಲ್ಲಾಗಲೀ ಸುಖಸ್ಥಾನದಲ್ಲಾಗಲೀ ಇದ್ದರೆ ನೆಲದಮೇಲೆ ಪ್ರಸವವಾಗುತ್ತದೆಂದು ["ನೀಚಸ್ಥೇ ಭೂಶಯನಂ ಚಂದ್ರೇಽಪ್ಯಥವಾ ಸುಖೇ ವಿಲಗ್ನೇ ವಾ"] ಸಾರಾವಳೀ ಗ್ರಂಥದಲ್ಲಿದೆ.

ಕತ್ತಲೆಯಲ್ಲಿ ಹೆರಿಗೆಯಾಗುವ ಮೇಲೆ ತಿಳಿಸಿರುವ ಐದು ಯೋಗಗಳಲ್ಲೂ ಸೂರ್ಯ ಚಂದ್ರನನ್ನು ನೋಡಿದರೆ ಕತ್ತಲೆಯಿರುವುದಿಲ್ಲ.

ಚಂದ್ರ ಏಳನೆಯ ಸ್ಥಾನದಲ್ಲಿದ್ದಾಗ ನೆಲದಮೇಲೆ ಹೆರಿಗೆಯಾಗುವುದೆಂದು ಶ್ರೀಧರನು ಹೇಳಿರುವ ಯೋಗ ಇತರ ಜ್ಯೋತಿಷ ಗ್ರಂಥಗಳಲ್ಲಿ ಕಂಡುಬರುವುದಿಲ್ಲ.

೨೪. ಶನಿ ವೃಶ್ಚಿಕ ಅಥವಾ ಕರ್ಕಟಕ ಲಗ್ನದಲ್ಲಿದ್ದು ಚಂದ್ರ ನೋಡಿದರೆ ಜನನ ಹೊಂಡದಲ್ಲಿ, ನರರಾಶಿ ಲಗ್ನವಾಗಿ ಅದನ್ನು ಚಂದ್ರ ಶುಕ್ರರು ನೋಡಿದರೆ ಜನನ ರಮ್ಯವಾದ ಭೂಮಿಯಲ್ಲಿ, ನರರಾಶಿ ಲಗ್ನವನ್ನು ಅಂಗಾರಕ ನೋಡಿದರೆ ಸುಡುಗಾಡಿನಲ್ಲಿ ಆ ಬಾಲಕನಿಗೆ ಜನ್ಮವಾಗುತ್ತದೆ.

೨೫. ಪೂರ್ಣಚಂದ್ರ ಏಳನೇ ಸ್ಥಾನದಲ್ಲಿ ಕರ್ಕಟಕ ರಾಶಿಯಲ್ಲೂ, ಶುಕ್ರ ಗುರುಗಳು ನಾಲ್ಕನೆಯ ಸ್ಥಾನದಲ್ಲೂ ಮತ್ತು ಜಲಲಗ್ನದಲ್ಲಿ ಬುಧನೂ ಇರಲು ದೋಣಿಯಲ್ಲಿ ಮಗು ಹುಟ್ಟುತ್ತದೆ.

ವಿ–ಮಕರ ಲಗ್ನ (ಉತ್ತರಾರ್ಧ)ದಲ್ಲಿ ಜನನವಾಗಿ ಲಗ್ನದಲ್ಲಿ ಸೂರ್ಯ ಬುಧರೂ ಮೇಷದಲ್ಲಿ ಗುರು ಶುಕ್ರರೂ ಕರ್ಕಟಕದಲ್ಲಿ ಚಂದ್ರನೂ ಇದ್ದರೆ ದೋಣಿಯಲ್ಲಿ ಹೆರಿಗೆಯಾಗಿದೆ ಎಂದು ತಿಳಿಯಬೇಕು.

ಜಲರಾಶಿಗಳು—ಕರ್ಕಟಕ ಮಕರಉತ್ತರಾರ್ಧ ಮೀನ.

ಚಂದ್ರನು ಪೂರ್ಣನಾಗಿ ಕರ್ಕಟಕರಾಶಿಯಲ್ಲೂ, ಬುಧನು ಲಗ್ನದಲ್ಲೂ ಶುಭ ಗ್ರಹವು ಚತುರ್ಥದಲ್ಲೂ ಇದ್ದರೆ ಒಂದು ಯೋಗ. ಲಗ್ನವು ಜಲರಾಶಿಯಾಗಿ ಏಳನೇ ಸ್ಥಾನದಲ್ಲಿ ಚಂದ್ರನಿದ್ದರೆ ಇನ್ನೊಂದು ಯೋಗ.

---

[1] ಜ್ಯಂ (ಕ ಗ) [2] ಶು (ಕ ಗ) [3] ವಂಶ್ಯ (ಕ ಗ) [4] ಭಮಿತ್ರ (ಗ).

(ನೀರಿನ ಮಧ್ಯದಲ್ಲಿ ಪ್ರಸವ)

ಜಲಚರ ಭವನೋದಯಮಂ
ಜಲಗ್ರಹಗ[1]ತ ಪೂರ್ಣ[1]ಚಂದ್ರಮಂ ನೋಡ್ಪೊಡೆ ಪೇಳ್
ನಿರೆ ದಶಮದೊಳಮೃತಕರಂ
ಜಲಮಧ್ಯದೊಳಾಕೆ ಬೆಸಲೆಯಕ್ಕುಮವೋಘಂ ೨೬.

(ಜನನಸ್ಥಳ)

ಚರಲಗ್ನಮದಡವಿಯೊಳಾ
ಸ್ಥಿರಲಗ್ನಂ ಕೂಡೆ ಮನೆಯೊಳುಭಯನಿವಾಸಾಂ
ತರದೊಳ್ ತದ್ಗೇಹಾಂಶಂ
ಬರೆ ಜನನಂ ಕೊಡುಗುಂ ಸ್ವಕೀಯೋದಯದೊಳ್ ೨೭.

---

ಹೀಗೆ ಈ ಎರಡು ಯೋಗಗಳಲ್ಲೂ ದೋಣಿಯಲ್ಲಿ ಪ್ರಸವವಾಗುತ್ತದೆ ಎಂದು ಬೃಹಜ್ಜಾತಕದಲ್ಲಿದೆ.

ಶ್ರೀಧರನ ಅಭಿಪ್ರಾಯದಂತೆ ಚಂದ್ರ ಪೂರ್ಣನಾಗಬೇಕಾದರೆ ಸೂರ್ಯನಿಗೆ ಏಳನೇಕಡೆ ಇರಬೇಕು. ಆದುದರಿಂದ ಪೂರ್ಣಚಂದ್ರ ಕರ್ಕಟಕದಲ್ಲಿರುವಾಗ ಸೂರ್ಯ ಮಕರರಾಶಿಯಲ್ಲಿರುತ್ತಾನೆ. ಚಂದ್ರ ಸಪ್ತಮಸ್ಥಾನದಲ್ಲಿರಬೇಕಾದರೆ ಮಕರವೇ ಲಗ್ನವಾಗಬೇಕು. ಜಲಲಗ್ನವಾಗಬೇಕಾದರೆ ಮಕರರಾಶಿಯಲ್ಲಿ ಉತ್ತರಾರ್ಧ ಲಗ್ನವಾಗಬೇಕು. ಒಟ್ಟಿನಲ್ಲಿ ಮಕರರಾಶಿಯ ಉತ್ತರಾರ್ಧ ಲಗ್ನವಾಗಿ ಲಗ್ನದಲ್ಲೇ ರವಿ ಬುಧರು ಇದ್ದು ಚತುರ್ಥದಲ್ಲಿ ಅಂದರೆ ಮೇಷರಾಶಿಯಲ್ಲಿ ಗುರು ಶುಕ್ರರಿದ್ದರೆ ಆಗ ದೋಣಿಯಲ್ಲಿ ಪ್ರಸವವಾಗುತ್ತದೆ. ಪ್ರಕೃತ ಸೂರ್ಯ ಲಗ್ನದಲ್ಲಿದ್ದು ನಾಲ್ಕರಲ್ಲಿ ಶುಕ್ರನಿರುವಂತೆ ಯೋಗವು ತಿಳಿಸುತ್ತದೆ. ಆದರೆ ಸೂರ್ಯನಿಂದ ನಾಲ್ಕನೇ ಸ್ಥಾನದಲ್ಲಿ ಶುಕ್ರನಿರುವುದು ಅಸಂಭವ. ಆದಕಾರಣ ನಾಲ್ಕರಲ್ಲಿ ಗುರುವನ್ನು ಮಾತ್ರ ತೆಗೆದುಕೊಳ್ಳಬೇಕೆಂದು ಕೆಲವರ ಅಭಿಪ್ರಾಯ. ಪೂರ್ವಶಾಸ್ತ್ರಾನುಸಾರಿಯಾಗಿರುವುದರಿಂದ ಕಾಲಾಂತರದಲ್ಲಿ ಶುಕ್ರನಿಗೆ ಸೂರ್ಯನಿಂದ ಚತುರ್ಥರಾಶಿಸ್ಥಿತಿ ಉಂಟಾಗಬಹುದಾದಕಾರಣ ಶುಕ್ರನ ಚತುರ್ಥಸ್ಥಿತಿಯನ್ನೂ ತೆಗೆದುಕೊಳ್ಳಬೇಕೆಂದು ಮತ್ತೆ ಕೆಲವರ ಅಭಿಪ್ರಾಯ.

೨೬. ಜಲಚರರಾಶಿಲಗ್ನವನ್ನು ಜಲರಾಶಿಯಲ್ಲಿರುವ ಪೂರ್ಣಚಂದ್ರ ನೋಡಿದರೆ ಅಥವಾ ಹತ್ತನೆಯ ಸ್ಥಾನದಲ್ಲಿ ಚಂದ್ರನಿದ್ದರೆ ನೀರಿನ ಮಧ್ಯದಲ್ಲಿ ಪ್ರಸವವಾಗುತ್ತದೆ.

ವಿ—ಜಲರಾಶಿ ಲಗ್ನವಾಗಿ ದಶಮ ಚತುರ್ಥ ಅಥವಾ ಲಗ್ನದಲ್ಲಿ ಚಂದ್ರನಿದ್ದರೆ ನೀರಿನ ಮಧ್ಯದಲ್ಲಿ ಹೆರಿಗೆಯಾಗುತ್ತದೆಂದು ಬೃಹಜ್ಜಾತಕದಲ್ಲಿದೆ.

೨೭. ಚರಲಗ್ನವಾದರೆ ಕಾಡಿನಲ್ಲಿ, ಸ್ಥಿರಲಗ್ನವಾದರೆ ಮನೆಯಲ್ಲಿ, ದ್ವಿಸ್ವಭಾವ ಲಗ್ನದಲ್ಲಿ ಅದೇ ಅಂಶ ಬಂದರೆ ಜನನ ತನ್ನ ಮನೆಯಲ್ಲೂ ಆಗುತ್ತದೆ.

---

[1] ತ ಸೂರ್ಯ (ಕ ಗ).

(ತಂದೆ ಅಥವಾ ತಾಯಿಯ ಮನೆಯಲ್ಲಿ ಹೆರಿಗೆ)

ಪಿತೃ ಜನನೀ ಗೃಹದೊಳ್ ಬಳ
ಯುತಮಪ್ಪಾಲಯದೊಳಬಲೆ ಪೆಱುಗುಂ ದೋಷಾ
ಪತಿ ಪಾಪಗ್ರಹಯುತನೆನೆ
ಚತುರ್ಥ ಮಂದಿರದೊಳಾಕೆಗಕ್ಕುಂ ಕ್ಲೇಶಂ ೨೮

(ಜನ್ಮಭೂಮಿ)

ಉದಯದೊಳಂ ತತ್ಪ್ರಸ್ತಾ
ವದೊಳುದಯಿಸಿದೊಂದು ತನ್ನವಾಂಶಕದೊಳಮಾ
ವುದು ಬಲಸಮೇತಮಾ ಭವ
ನದಂಶಕಂ ಬಂದ ಭೂಮಿಯೊಳ್ ಜನಿಯಿಸುಗುಂ ೨೯

(ಜನನವಿಧಾನ)

ಉದಯಿಸುಗುಂ ಶೀರ್ಷೋದಯ
ದುದಯಂ ಬರೆ ಶೀರ್ಷದಿಂದೆ ಪೃಷ್ಠೋದಯಮ
ಪ್ಪುದಯಂ ಬರೆ ಪದದಿಂ ಕೆಲ
ದುದಯದೆ ಪಾರ್ಶ್ವದೊಳೆ ಮನುಜನುದಯಂಗೆಯ್ಗುಂ ೩೦

---

ಲಗ್ನ ಅಥವಾ ನವಾಂಶ ಚರರಾಶಿಯಾದರೆ ರಾಶಿರೂಪ ಪ್ರಾಣಿ ಸಂಚರಿಸುವ ಮಾರ್ಗದಲ್ಲೂ, ಸ್ಥಿರವಾದರೆ ಆ ಪ್ರಾಣಿಯ ಗೃಹದ ಹತ್ತಿರದಲ್ಲೂ ದ್ವಿಸ್ವಭಾವ ರಾಶಿಯಲ್ಲಿ ವರ್ಗೋತ್ತಮಾಂಶವಾದರೆ ತನ್ನ ಮನೆಯಲ್ಲೂ ಜನನ ವಾಗುತ್ತದೆ.

೨೮. ತಂದೆ ತಾಯಿ ಕಾರಕಗ್ರಹದಲ್ಲಿ ಬಲಿಷ್ಠನಾದವನ ಮನೆಯಲ್ಲಿ ಸ್ತ್ರೀಯು ಪ್ರಸವಿಸುತ್ತಾಳೆ. ಚಂದ್ರ ಪಾಪಗ್ರಹದೊಡನೆ ನಾಲ್ಕನೇ ಸ್ಥಾನದಲ್ಲಿದ್ದರೆ ಆಕೆಗೆ ತೊಂದರೆಯುಂಟಾಗುತ್ತದೆ.

ವಿ–ಹಗಲಿನಲ್ಲಿ ಜನನವಾದಾಗ ಸೂರ್ಯ ಪಿತೃಕಾರಕ, ಚಂದ್ರ ಮಾತೃ ಕಾರಕ. ರಾತ್ರಿಜನನದಲ್ಲಿ ಶನಿ ಪಿತೃಕಾರಕ, ಶುಕ್ರ ಮಾತೃಕಾರಕ.

೨೯. ಜನನ ಲಗ್ನ, ಆ ಲಗ್ನದಲ್ಲಿ ಉದಿತವಾದ ನವಾಂಶ ಇವೆರಡರಲ್ಲಿ ಯಾವುದು ಬಲಿಷ್ಠವೋ ಆ ರಾಶಿಯ ಸ್ವರೂಪದ ಪ್ರಾಣಿ ಸಂಚರಿಸುವ ಭೂಮಿಯಲ್ಲಿ ಮಗು ಹುಟ್ಟುತ್ತದೆ.

೩೦. ಶೀರ್ಷೋದಯರಾಶಿ ಲಗ್ನವಾದರೆ ತಲೆಯಿಂದ, ಪೃಷ್ಠೋದಯ ರಾಶಿ ಲಗ್ನವಾದರೆ ಕಾಲಿಂದ, ಪಾರ್ಶ್ವೋದಯ [ಉಭಯೋದಯ] ರಾಶಿ ಲಗ್ನವಾದರೆ ಪಾರ್ಶ್ವದಿಂದಲೂ ಮನುಷ್ಯನು ಹುಟ್ಟುತ್ತಾನೆ.

ವಿ–ಪೃಷ್ಠೋದಯರಾಶಿಗಳು—ಮೇಷ ವೃಷಭ ಕರ್ಕಟಕ ಧನುಸ್ಸು ಮಕರ. ಶೀರ್ಷೋದಯರಾಶಿಗಳು—ಮಿಥುನ ಸಿಂಹ ಕನ್ಯಾ ತುಲಾ ವೃಶ್ಚಿಕ ಕುಂಭ. ಉಭಯೋದಯರಾಶಿ—ಮೀನ.

(ನಾಳವೇಷ್ಟನಯೋಗ)

ಅವನಿಜನರ್ಕಸುತಂ ಸಿಂ
ಹ ವೃ[1]ಷಾಜೋ[1]ದಯದೊಳೇಕಲಗ್ನಸ್ಥಿತ[2]ನಾ[2]
ಗೆ ವಿಲಗ್ನಗೃಹನವಾಂಶಕ
ದವಯುವದೊಳ್ ಸುತ್ತಿಸುಗೆ ಕರುಳ್ತೊಡಕಕ್ಕಂ ೩೧

(ತಾಯಿಯೊಡನೆ ಕೂಸಿನ ಮರಣ)

ಉದಯಗತೇಂದುವಿನಿರ್ವ
ಕ್ಕದೊಳುಗ್ರಂ ನೆಲಸೆ ಲಗ್ನಹಿಮಕರರಿರ್ವ
ಕ್ಕದೊಳುಗ್ರಂ ಪೋಣಾ ಸೌ
ಮ್ಯದೃಷ್ಟಿ ಕೂಡ[3]ದೊಡೆ ಕೂಸು ತಾಯ್ವೆರಸಟಿಗುಂ ೩೨

(ತಾಯಿ ಬಿಸುಡಿದರೂ ಚಿರಾಯುವಾದ ಶಿಶು)

ಅಸಿತಾಂಗಾರಕರಿಂ ಪಂ
ಚ ಸಪ್ತ ನವಮಂಗಳೊಳ್ ಶಶಾಂಕಂ ನಿರೆ ತಾಯ್
ಬಿಸುಡುಗುಮರ್ಭಕನಂ ವೀ
ಕ್ಷಿಸೆ ಶಶಿ[4]ಯಂ[4] ಗುರು ಚಿರಾಯುವುಂ ಸುಖಿಯುಮವಂ ೩೩

---

೩೧. ಮಂಗಳ ಅಥವಾ ಶನಿ ಸಿಂಹ ವೃಷಭ ಮೇಷ ಲಗ್ನಗಳೊಂದರಲ್ಲಿದ್ದರೆ ಲಗ್ನನವಾಂಶ ರಾಶಿಯ ಅವಯುವದಲ್ಲಿ ನಾಳವು ಸುತ್ತಿಕೊಂಡಿರುತ್ತದೆ.

ವಿ–ರಾಶಿಯ ಅವಯುವವಿಭಾಗ ಸಂಜ್ಞಾಪ್ರಕರಣ ೨ಂನೇ ಪದ್ಯದಲ್ಲಿದೆ.

ಉದಾ–ಮೇಷಲಗ್ನ ಮಿಥುನನವಾಂಶದಲ್ಲಿ ಜನನ. ಲಗ್ನದಲ್ಲೇ ಅಂಗಾರಕನಿರುವನು. ಮಿಥುನರಾಶಿಯು ಕಾಲಪುರುಷನ ತೋಳು. ಆದಕಾರಣ ತೋಳಿಗೆ ನಾಳವು ಸಿಕ್ಕಿಕೊಂಡಿರುತ್ತದೆ ಎಂದು ತಿಳಿದುಬರುತ್ತದೆ.

೩೨. ಲಗ್ನದಲ್ಲಿರುವ ಚಂದ್ರನ ಎರಡು ಪಕ್ಕಗಳಲ್ಲೂ ಕ್ರೂರಗ್ರಹವಿದ್ದರೆ ಅಥವಾ ಲಗ್ನ ಚಂದ್ರರ ಎರಡು ಪಕ್ಕಗಳಲ್ಲೂ ಕ್ರೂರಗ್ರಹವಿದ್ದು ಶುಭಗ್ರಹದೃಷ್ಟಿ ಇಲ್ಲದಿದ್ದರೆ ಮಗು ತಾಯಿಯೊಡನೆ ಸಾಯುತ್ತದೆ.

ವಿ–ಪಾಪಗ್ರಹಗಳ ಮಧ್ಯದಲ್ಲಿರುವ ಚಂದ್ರ ಲಗ್ನದಲ್ಲಿರುವಾಗ ಏಳು ಅಥವಾ ಎಂಟನೇ ಸ್ಥಾನದಲ್ಲಿ ಕ್ರೂರಗ್ರಹವಿದ್ದು ಬಲಿಷ್ಠನಾದ ಶುಭಗ್ರಹ ಚಂದ್ರನನ್ನು ನೋಡದಿದ್ದರೆ ತಾಯಿಯೊಡನೆ ಕೂಸು ಸಾಯುತ್ತದೆ; ಎಂದು ಬೃಹಜ್ಜಾತಕದಲ್ಲಿದೆ.

ಚಂದ್ರನನ್ನು ಶುಭಗ್ರಹನೋಡಿದರೆ ತಾಯಿಗೆ ಮರಣವಿಲ್ಲ. ಹುಟ್ಟಿದ ಮಗು ಮಾತ್ರ ಸಾಯುತ್ತದೆ.

೩೩. ಶನಿ ಕುಜರಿಂದ ಐದು ಏಳು ಒಂಬತ್ತನೆಯ ಸ್ಥಾನಗಳಲ್ಲಿ ಚಂದ್ರನಿದ್ದರೆ ತಾಯಿ ಮಗುವನ್ನು ಬಿಸಾಡುವಳು. ಚಂದ್ರನನ್ನು ಗುರು ನೋಡಿದರೆ ಆ ಮಗು ಚಿರಾಯುವೂ ಸುಖಿಯೂ ಆಗುತ್ತದೆ.

---

[1] ಷಾಂಗೋ (ಕ) ಷಾದ್ಯು (ಗ) [2] ರಾ (ಕ ಗ) [3] ಡ (ಕ ಗ) [4] ಯುಂ (ಕ ಗ).

(ತಾಯಿಯಿಂದ ಬಿಡಲ್ಪಟ್ಟು ಸಾಯುವ ಶಿಶು)

ಅಶುಭೇಕ್ಷಣಮುದಯಸ್ಥಿತ
ಶಶಿ ಕೂಡಿರೆ ಭೌಮನೇಟಬಿಯೊಳ್ ನಿಲೆ ಪೋಣ್ ಕೂ
ಡೆ ಶನೈಶ್ಚರನಿರಲೇಕಾ
ದಶದೊಳ್ ತಾಯ್ ಬಿಸುಟ ಕೂಸು ಬಿಸುಡುಗುಮಸುವಂ ೩೪

ಶಶಧರನುದಯದೊಳಿರೆ ನೋ
ಡೆ ಶುಭಗ್ರಹಮವಱ ಜಾತಿಯವರ್ಗಳ ದೆಸೆಗಾ
ಶಿಶು ಸಾರ್ಗುಂ ಶಶಿಯಂ ನೋ
ಡೆ ಶುಭೇತರರನ್ಯರತ್ತ ಸಾರ್ದೊಡೆ ಸಾಯ್ಗುಂ ೩೫

---

ವಿ—ಈ ಯೋಗಕ್ಕೆ ಮೂಲವಾದ ಬೃಹಜ್ಜಾತಕದ ಸಂಸ್ಕೃತ ಶ್ಲೋಕದಲ್ಲಿ ಕಂಡುಬರುವ ಪಾಠವ್ಯತ್ಯಾಸದಿಂದ ಯೋಗವೂ ಬೇರೆ ಕ್ರಮದಲ್ಲಿದೆ. "ಆರಾರ್ಕಜ-ಯೋಸ್ತ್ರಿಕೋಣಗೇ ಚಂದ್ರೇಽಸ್ತೇ ಚ ವಿಸೃಜ್ಯತೇಽಂಬಯಾ" ಎಂದು ಬೃಹಜ್ಜಾತಕದಲ್ಲಿದೆ. ಇಲ್ಲಿ "ಚಂದ್ರೇಽಸ್ತೇ ಚ" ಎನ್ನುವುದಕ್ಕೆ ಬದಲಾಗಿ "ಚಂದ್ರೇಽ-ರ್ಕೇ ಚ" ಎಂದು ಪಾಠಾಂತರವಿದೆ. ಇದರಂತೆ ಶನಿಕುಜರಿಗೆ ತ್ರಿಕೋಣದಲ್ಲಿ ಸೂರ್ಯಚಂದ್ರರಿದ್ದರೆ, ತಾಯಿ ಮಗುವನ್ನು ಬಿಸಾಡುತ್ತಾಳೆ.

"ಚಂದ್ರೇಽಸ್ತೇ"—ಚಂದ್ರ ಅಸ್ತನಾದರೆ ಅಂದರೆ ಸೂರ್ಯನೊಡನಿದ್ದರೆ ಎಂದು ಅರ್ಥವಾಗುತ್ತದೆ. ಇದು ಕೆಲವರ ಅಭಿಪ್ರಾಯ.

೩೪. ಪಾಪಗ್ರಹದೃಷ್ಟಿ ಲಗ್ನದಲ್ಲಿರುವ ಚಂದ್ರನಿಗಿದ್ದು ಅಂಗಾರಕ ಏಳನೇ ಸ್ಥಾನದಲ್ಲಿದ್ದರೆ ಅಥವಾ ಶನಿಯೊಡನೆ ಅಂಗಾರಕ ಹನ್ನೊಂದನೆಯ ಸ್ಥಾನದಲ್ಲಿದ್ದರೆ ತಾಯಿ ಬಿಸುಟ ಕೂಸು ಸಾಯುತ್ತದೆ.

ವಿ—ಹಿಂದಿನ ಪದ್ಯದಲ್ಲಿ ಹೇಳಿರುವಂತೆ ಈ ಪದ್ಯದಲ್ಲಿ ಹೇಳಿರುವ ಯೋಗದಲ್ಲೂ ಗುರುದೃಷ್ಟಿ ಚಂದ್ರನಿಗಿದ್ದರೆ ತಾಯಿಯಿಂದ ಬಿಡಲ್ಪಟ್ಟರೂ ಮಗು ಇನ್ನೊಬ್ಬರಿಗೆ ಸಿಕ್ಕಿ ಸುಖವಾಗಿರುತ್ತದೆ; ಸಾಯುವುದಿಲ್ಲ.

೩೫. ಚಂದ್ರ ಲಗ್ನದಲ್ಲಿದ್ದು ಶುಭಗ್ರಹ ನೋಡಲು, ಆ ನೋಡುವ ಗ್ರಹದ ಜಾತಿಯವರಿಗೆ ಮಗುವು ಸೇರುತ್ತದೆ. ಚಂದ್ರನನ್ನು ಪಾಪಗ್ರಹಗಳು ನೋಡಿದರೆ ಮತ್ತೊಬ್ಬರಲ್ಲಿಗೆ ಹೋದರೆ ಮಗು ಸಾಯುತ್ತದೆ.

ವಿ—ಚಂದ್ರನನ್ನು ಗುರು ನೋಡಿದರೆ ಮಗು ಚಿರಾಯುವಾಗಿರುತ್ತದೆ.

'ನೋಡೆ ಶುಭಗ್ರಹಂ' ಎಂದರೆ ಗುರು ನೋಡಲು ಎಂದು ಅರ್ಥ ಮಾಡಬೇಕು. ಬುಧ ಶುಕ್ರರು ಶುಭಗ್ರಹಗಳಾದರೂ ಅವರ ದೃಷ್ಟಿಯಿಂದ ಈ ಯೋಗಕ್ಕೆ ಪರಿಹಾರವಿಲ್ಲ. "ವೀಕ್ಷಿಸೆ ಶಶಿಯಂ ಗುರು ಚಿರಾಯುವುಂ ಸುಖಿಯುಮವಂ" ಎಂದು ೩೩ನೇ ಪದ್ಯದಲ್ಲಿ ಹೇಳಿರುವುದರಿಂದ ಶುಭಗ್ರಹದೃಷ್ಟಿಯೆಂದರೆ ಗುರುದೃಷ್ಟಿಯನ್ನು ಮಾತ್ರ ತೆಗೆದುಕೊಳ್ಳಬೇಕೆಂದು ತಿಳಿಯಬರುತ್ತದೆ.

(ಅಧಿಕಾಂಗ ಯೋಗ)

ನವಮದೊಳಕ್ಕೈದಱೊಳ್ಬೆಂ
ದವನಿರೆ [1]ಶೇಷ [1]ಗ್ರಹಂಗಳುಳಿದೆಡೆಯೊಳ್ ವೀ
ರ್ಯವಿಹೀನರಾಗಿ ನಿಲೆ ಮಾ
ನವಂಗೆ ಕರ ಚರಣ ದಶನವಿಮ್ಮಡಿಯಕ್ಕುಂ ೩೬

(ಹೀನಾಂಗ ಯೋಗ)

ಉದ[2]ಯದ ನವ ಪಂಚ ತ್ರ್ಯಂ
ಶ[2]ದೊಳಿರೆ ತರದಿಂ[3]ದಸದ್ಗ್ರಹಂಗಳ್ ತಲೆಯಿ
ಲ್ಲದ ಕಾಲಿಲ್ಲದ ಕೈಯಿ
ಲ್ಲದೆ ನರನಾಶ್ಚರ್ಯಮಪ್ಪಿನಂ ಜನಿಯಿಸುಗುಂ ೩೭

---

೩೬. ಒಂಬತ್ತನೆಯ ಸ್ಥಾನದಲ್ಲಾಗಲೀ ಐದನೆಯ ಸ್ಥಾನದಲ್ಲಾಗಲೀ ಬುಧನಿದ್ದು ಮಿಕ್ಕ ಗ್ರಹಗಳು ಉಳಿದ ಸ್ಥಾನಗಳಲ್ಲಿ ಬಲಹೀನರಾಗಿದ್ದರೆ ಹುಟ್ಟಿದ ಮಾನವನಿಗೆ ಕೈ ಕಾಲು ದಶನ (ಮುಖ) ಇವು ಇಮ್ಮಡಿಯಾಗಿರುತ್ತವೆ.

ವಿ—ಈ ಯೋಗವನ್ನು ವರಾಹಮಿಹಿರಾಚಾರ್ಯರು ನಿಷೇಕಾಧ್ಯಾಯದಲ್ಲಿ ಹೇಳಿರುತ್ತಾರೆ.

೩೭. ಲಗ್ನ ಒಂಬತ್ತು ಐದನೇ ದ್ರೇಕ್ಕಾಣದಲ್ಲಿ ಪಾಪಗ್ರಹಗಳಿದ್ದರೆ ಕ್ರಮವಾಗಿ ತಲೆಯಿಲ್ಲದೆ ಕಾಲಿಲ್ಲದೆ ಕೈಯಿಲ್ಲದೆ ಮಗುವು ನೋಡಲು ಆಶ್ಚರ್ಯಕರವಾಗಿ ಹುಟ್ಟುತ್ತದೆ.

ವಿ—ಜನನ ಕಾಲದ ಲಗ್ನದಲ್ಲಿ ಯಾವ ದ್ರೇಕ್ಕಾಣ ಉದಿಸಿದೆಯೋ ಅದರಲ್ಲಿ ಅಂಗಾರಕನಿದ್ದು ಶನಿ ಚಂದ್ರ ಸೂರ್ಯರು ಆತನನ್ನು ನೋಡಿದರೆ ತಲೆಯಿಲ್ಲದ (ರುಂಡವಿಲ್ಲದ) ಮಗು ಹುಟ್ಟುತ್ತದೆ. ಐದನೇ ರಾಶಿಯಲ್ಲಿ ಉದಿಸಿರುವ ದ್ರೇಕ್ಕಾಣದಲ್ಲಿ ಅಂಗಾರಕನಿದ್ದು ಶನಿ ಚಂದ್ರ ಸೂರ್ಯರು ಅವನನ್ನು ನೋಡಿದರೆ ಕಾಲಿಲ್ಲದ ಮಗು ಹುಟ್ಟುತ್ತದೆ. ಒಂಬತ್ತನೆಯ ರಾಶಿಯ ಉದಿತದ್ರೇಕ್ಕಾಣದಲ್ಲಿ ಅಂಗಾರಕನಿದ್ದು ಶನಿ ಚಂದ್ರ ಸೂರ್ಯರು ಆತನನ್ನು ನೋಡಿದರೆ ಕೈಯಿಲ್ಲದ ಮಗು ಹುಟ್ಟುತ್ತದೆ ಎಂದು ಭಟ್ಟೋತ್ಪಲರು ಬೃಹಜ್ಜಾತಕ ವ್ಯಾಖ್ಯಾನದಲ್ಲಿ ಅಭಿಪ್ರಾಯಪಟ್ಟಿರುತ್ತಾರೆ.

ಮತಾಂತರ—ಉದಯದ್ರೇಕ್ಕಾಣವೆಂದರೆ ಲಗ್ನರಾಶಿಯಲ್ಲಿ ಮೊದಲ ದ್ರೇಕ್ಕಾಣ; ಪಂಚಮದ್ರೇಕ್ಕಾಣವೆಂದರೆ ಲಗ್ನರಾಶಿಯಲ್ಲಿ ಎರಡನೆಯ ದ್ರೇಕ್ಕಾಣ; ನವಮದ್ರೇಕ್ಕಾಣವೆಂದರೆ ಲಗ್ನರಾಶಿಯಲ್ಲಿ ಮೂರನೆಯ ದ್ರೇಕ್ಕಾಣ.

---

[1] ನೋಡೆ ಶುಭ (ಗ) [2] ಯ ನವ ಪಂಚ ತ್ರಿಂಶಕ (ಗ) [3] ದ (ಕ ಗ).

ರವಿಚಂದ್ರರ್ ನಿರೆ ಸಿಂಹಲಗ್ನದೊಳಿಳಾಜಾತಾರ್ಕ[1]ಜರ್[1] ನೋಡೆ ನೇ
ತ್ರವಿಹೀನಂ ನರನಾ ವಿಲಗ್ನಮ[2]ನಸತ್ಸೌಮ್ಯ[2]ಗ್ರಹಶ್ರೇಣಿ ನೋ
ಡುವೊಡಂ ಬುದ್ಬುದನೇತ್ರನಂತೆರಡುಮಂ ಸೌಮ್ಯಗ್ರಹಂ [3]ತಾನೆ[3] ನೋ
ಡುವೊಡಲ್ಪಂ ಫಲಮಕ್ಕುಮಾ ದುರಿತಮಂ ನಿಶ್ಶೇಷವಾರ್ [4]ನಂ[4]ದಿಪರ್ ೩೮

(ಮೂಗ ಮತ್ತು ತೊದಳ ಯೋಗ)

ಭವನಾಂತದೊಳು[5]ಗ್ರರ್[5] ನೆಲ
ಸೆ ವೃಷಭದೊಳ್ ಚಂದ್ರನೊಂದಿ ನಿರೆ ಮೂಗನೆನಿ
ಕ್ಕುವ[6]ನಂತಾ ಶಶಿಯಂ[6] ನೋ
ಡುವೊಡೆ ಶುಭಪ್ರಕರಮಾತನೆನಿಕುಂ ತೊದಳಂ ೩೯

---

೩೮. ಜನನ ಅಥವಾ ಆಧಾನ ಕಾಲದಲ್ಲಿ ಸೂರ್ಯಚಂದ್ರರು ಸಿಂಹ ಲಗ್ನದಲ್ಲಿದ್ದು ಅಂಗಾರಕ ಶನಿಗಳು ನೋಡಲು ಹುಟ್ಟಿದ ಮನುಷ್ಯನಿಗೆ ಕಣ್ಣಿರುವುದಿಲ್ಲ. ಆ ಲಗ್ನವನ್ನೇ ಶುಭಾಶುಭಗ್ರಹಗಳು ನೋಡಿದರೆ ಹೂಗಣ್ಣನಾಗುತ್ತಾನೆ. ಶುಭಗ್ರಹ ಮಾತ್ರ ನೋಡಿದರೆ ಯೋಗಫಲ ಕಡಿಮೆಯಾಗುತ್ತದೆ. ಆ ಪಾಪಫಲವನ್ನು ನಿಶ್ಶೇಷವಾಗಿ ಯಾರು ತಾನೆ ಕುಂದಿಸಬಲ್ಲರು?

ವಿ—ಸೂರ್ಯ ಸಿಂಹಲಗ್ನದಲ್ಲಿದ್ದು ಅಂಗಾರಕ ಶನಿಗಳು ನೋಡಿದರೆ ಬಲಗಣ್ಣೂ, ಚಂದ್ರ ಸಿಂಹಲಗ್ನದಲ್ಲಿದ್ದು ಅಂಗಾರಕ ಶನಿಗಳು ನೋಡಿದರೆ ಎಡಗಣ್ಣೂ ಕಾಣುವುದಿಲ್ಲ; ಇದರಂತೆಯೇ ಬುದ್ಬುದಾಕ್ಷ ಯೋಗದಲ್ಲೂ ಯಾವುದು ಹೂಗಣ್ಣೆನ್ನುವುದನ್ನು ತಿಳಿಯಬಹುದು.

೩೯. ರಾಶಿಯ ಕೊನೆಯಲ್ಲಿ ಪಾಪಗ್ರಹಗಳಿದ್ದು ವೃಷಭರಾಶಿಯಲ್ಲಿ ಚಂದ್ರನಿದ್ದಾಗ ಹುಟ್ಟಿದವ ಮೂಗನಾಗುತ್ತಾನೆ. ಆ ಚಂದ್ರನನ್ನು ಶುಭಗ್ರಹಗಳು ನೋಡಿದರೆ ಆತ ತೊದಲನಾಗುತ್ತಾನೆ.

ವಿ—"ಭವನಾಂತದೊಳ್" ಎಂದರೆ ಪ್ರತಿರಾಶಿಯ ಕೊನೆ ಎಂದು ಅರ್ಥವಾಗುತ್ತದೆ. ಆದರೂ ಇಲ್ಲಿ ಕರ್ಕಾಟಕ ವೃಶ್ಚಿಕ ಮೀನ ಈ ಮೂರು ರಾಶಿಗಳ ಅಂತ್ಯಭಾಗದಲ್ಲಿ ಎಂದು ಅರ್ಥ ಮಾಡುವುದು ಇತರಗ್ರಂಥ ಸಮ್ಮತವಾಗಿದೆ. ಈ ಯೋಗವು ಕೃತ್ತಿಕ ೨, ೩, ೪ನೇ ಪಾದಗಳು, ರೋಹಿಣಿ, ಮೃಗಶಿರ ೧, ೨ನೇ ಪಾದಗಳು ಈ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ.

---

[1] ಜಾ (ಕ ಗ) [2] ಸದ್ವ್ಯೋಮ (ಕ ಗ) [3] ತಾವೆ (ಕ ಗ) [4] ವಾಂ (ಕ ಗ) [5] ಗ್ರ (ಕ) ಗ್ರಹಾ (ಗ) [6] ದಂ ಶಶಿ (ಕ ಗ).

(ಹುಟ್ಟುವಾಗಲೇ ಹಲ್ಲಿರುವುದು ಮತ್ತು ವಾಮನ ಯೋಗ)

*ಹಿಮಾಂಶುಜ ನವಾಂಶದೊಳ್ ವೃಷಭ ಕನ್ಯಕಾ ರಾಶಿ[1]ಯೊಳ್[1]
ಯ[2]ಮಾರ[2]ರಿರೆ ಕೂಸು ಪಲ್ವೆರಸು ಪುಟ್ಟುಗುಂ ಮೇಣ್ [3]ಗೃಹಾಂ
ತಿಮಾಂಶಮದುಮಾಗೆ ತಜ್ಜನನಲಗ್ನಮುಂ ನಕ್ರಮುಂ[3]
ಹಿಮಾಂಶು ರವಿ ಮಂದರೀಕ್ಷಿಪೊಡೆ ವಾಮನಂ [ತಾಂ] ನರಂ ೪೦

(ಕುಬ್ಜ ಹೆಳವ ಕಿವುಡು ಯೋಗ)

ಶಶಲಕ್ಷ್ಮಂ ನಿಲೆ ಕರ್ಕಿಲಗ್ನಗೃಹದೊಳ್ ಭೌಮಾರ್ಕಜರ್ ನೋಡೆ ಕು
ಬ್ಜಶರೀರಂ ಬರೆ [4]ಮೀನಗೇಹ[4]ಮುದಯಂ ನೋಟ್ಪಂದದಂ ಮಂದ ವ
ಕ್ರ ಶಶಾಂಕರ್ ಪೆಳವಂ ಗೃಹಾಂತದೊಳಿರಲ್ ಪಾಪಾನ್ವಿತಂ ಶೀತರೋ
ಚಿ ಶುಭಾಳೋಕನಮಿಲ್ಲದಂದು ಕಿವುಡಂ ತಾನಕ್ಕುಮಾ ಮಾನವಂ ೪೧

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ ಸರಸಪ್ರಸನ್ನ
ವಚೋಲಕ್ಷ್ಮೀಧರಂ ಗದ್ಯಪದ್ಯ ವಿದ್ಯಾಧರಂ ಶ್ರೀಧರಾಚಾರ್ಯ ಪ್ರಣೀತಮಪ್ಪ
ಜಾತಕತಿಲಕದೊಳ್ ಜನ್ಮಪ್ರಕರಣ ವರ್ಣನಂ ಚತುರ್ಥಾಧಿಕಾರಂ

---

೪೦. ಜನನ ಅಥವಾ ಆಧಾನ ಕಾಲದಲ್ಲಿ ಬುಧ ನವಾಂಶದಲ್ಲಿ ಅಥವಾ ವೃಷಭ ಕನ್ಯಾರಾಶಿಗಳಲ್ಲಿ ಶನಿ ಕುಜರಿದ್ದರೆ ಮಗುವಿಗೆ ಹುಟ್ಟುವಾಗಲೇ ಹಲ್ಲಿರುತ್ತದೆ; ಮತ್ತು ರಾಶಿಯ ಕೊನೆಯ ನವಾಂಶವಾಗಿ ಜನ್ಮಲಗ್ನ ಮಕರವಾದಾಗ ಚಂದ್ರ ಸೂರ್ಯ ಶನಿಗಳು ನೋಡಿದರೆ ಆ ನರ ವಾಮನನಾಗುತ್ತಾನೆ.

ವಿ– ಬುಧನವಾಂಶ–ಮಿಥುನ ಕನ್ಯಾ ನವಾಂಶಗಳು. ಮಕರಲಗ್ನ ಕನ್ಯಾ ನವಾಂಶದಲ್ಲಿ ಜನನವಾಗಿ ಚಂದ್ರ ಸೂರ್ಯ ಶನಿಗಳು ಲಗ್ನವನ್ನು ನೋಡಿದರೆ ಹುಟ್ಟಿದವನು ಕುಳ್ಳ.

೪೧. ಚಂದ್ರ ಕರ್ಕಟಕ ಲಗ್ನದಲ್ಲಿದ್ದು ಅಂಗಾರಕ ಶನಿಗಳು ನೋಡಿದರೆ ಕುಬ್ಜಶರೀರನೂ, ಮೀನಲಗ್ನವಾಗಿ ಅದನ್ನು ಶನಿ ಕುಜ ಚಂದ್ರರು ನೋಡಿದರೆ ಹೆಳವನೂ, ರಾಶಿಯ ಕೊನೆಯ ನವಾಂಶದಲ್ಲಿ ಪಾಪಗ್ರಹದೊಡನೆ ಚಂದ್ರನಿದ್ದು ಶುಭಗ್ರಹದೃಷ್ಟಿಯಿಲ್ಲದಿದ್ದರೆ ಕಿವುಡನೂ ಆಗುತ್ತಾನೆ.

---

* (ಕ ಗ) ಈ ಎರಡು ಪ್ರತಿಗಳಲ್ಲೂ 'ಅಕ್ಕರ' ಎಂದಿದೆ. ಆದರೆ ಇದು ಅಕ್ಕರ ವೃತ್ತ ಲಕ್ಷಣಕ್ಕೆ ಸರಿಹೋಗುವುದಿಲ್ಲ. 'ಪೃಥ್ವೀ' ವೃತ್ತದ ಲಕ್ಷಣಕ್ಕೆ ಸರಿಹೋಗುವುದರಿಂದ ಅದಕ್ಕನುಗುಣವಾಗಿ ಬಿಟ್ಟಿರಬಹುದಾದ ಅಕ್ಷರಗಳನ್ನು ಸೇರಿಸಿದೆ.

[1] ಯಾಗೆ (ಕ ಗ) [2] ವಾಂಗ (ಕ ಗ). [3] ಗೃಹವಾಂಶವಾಗೆ ತಜ್ಜನನ ಲಗ್ನಮಂ (ಕ ಗ)
[4] ಹೀನ ದೇಹ (ಕ ಗ).

# ಪಂಚಮಾಧಿಕಾರಂ

## ವಿಯೋನಿಜನ್ಮ ಪ್ರಕರಣಂ

ರವಿಜಂ ಮೇಣ್ ಬುಧನಕ್ಕೆ ಕೇಂದ್ರಗೃಹದೊಳ್ ನಿಂದಂದು ಮೇಣ್ ಪ್ರಶ್ನಲ
ಗ್ನವನಾಳೋಕಿಸೆ ಸದ್ಗ್ರ[1]ಹರ[1] ವಿಬಳ[2]ರುಗ್ರರ್[2] ಬಾಲ್ಯರಾದಂದು ತ
ದ್ಭವನ ದ್ವಾದಶಭಾಗದೊಳ್ ನೆಲಸೆ ನಿಂದಂದಿಂದು ತದ್ಭಾವದಂ
ದವೆ ತಜ್ಜಾತ ಚತುಷ್ಪದಂಗಳವು ತಿರ್ಯಗ್ಜಾತಿ ಸಂಜ್ಞೋದಯಂ ೧

---

೧. ಪ್ರಶ್ನಕಾಲದಲ್ಲಿ ಶನಿ ಅಥವಾ ಬುಧ ಕೇಂದ್ರರಾಶಿಯಲ್ಲಿದ್ದಾಗ ಅಥವಾ ಪ್ರಶ್ನಲಗ್ನವನ್ನು ನೋಡಿದಾಗ, ಶುಭಗ್ರಹಗಳು ದುರ್ಬಲರಾಗಿ ಕ್ರೂರಗ್ರಹಗಳು ಬಲಿಷ್ಠರಾಗಿದ್ದು ತಿರ್ಯಗ್ಜಾತಿ ಸಂಜ್ಞಾರಾಶಿಯ ದ್ವಾದಶಾಂಶದಲ್ಲಿ ಚಂದ್ರನಿದ್ದರೆ ಆ ರಾಶಿಸ್ವರೂಪಕ್ಕೆ ತಕ್ಕ ಮನುಷ್ಯೇತರ ಪ್ರಾಣಿ ಹುಟ್ಟುತ್ತದೆ.

ವಿ—ವಿಯೋನಿ ಜನ್ಮ—ವಿವಿಧಯೋನಿಗಳಲ್ಲಿ ಹುಟ್ಟುವುದು, ಅಂದರೆ ಪಕ್ಷಿ ಮೃಗ ಕುದುರೆ ಎಮ್ಮೆ ಎತ್ತು ನಾಯಿ ಮೊದಲಾದ ಮನುಷ್ಯೇತರ ಪ್ರಾಣಿಗಳ ಜನ್ಮ ಎಂದರ್ಥ. ಈ ಪದ್ಯದಲ್ಲಿ ವಿಯೋನಿಜನ್ಮವನ್ನು ತಿಳಿಸುವ ಎರಡು ಯೋಗಗಳಿವೆ.

(೧) ಶನಿ ಅಥವಾ ಬುಧ ಪ್ರಶ್ನಲಗ್ನದಿಂದ ೧, ೪, ೭, ೧೦ನೇ ಸ್ಥಾನಗಳಲ್ಲಿದ್ದು ಶುಭಗ್ರಹಗಳು ಷಡ್ಬಲರಹಿತರಾಗಿ ಕ್ರೂರಗ್ರಹಗಳು ಬಲಿಷ್ಠರಾಗಿದ್ದಾಗ ಚಂದ್ರ ಮೇಷ ವೃಷಭ ಕರ್ಕಟಕ ಸಿಂಹ ವೃಶ್ಚಿಕ ಧನುಸ್ಸಿನ ಉತ್ತರಾರ್ಧ ಮಕರ ಮೀನ ಈ ದ್ವಾದಶಾಂಶಗಳಲ್ಲಿದ್ದರೆ, ದ್ವಾದಶಾಂಶರಾಶಿಗೆ ಸಮಾನವಾದ ಪ್ರಾಣಿ ಹುಟ್ಟುತ್ತದೆ.

(೨) ಪಾಪಗ್ರಹಗಳು ಬಲಿಷ್ಠರಾಗಿ ಶುಭಗ್ರಹಗಳು ದುರ್ಬಲರಾಗಿದ್ದಾಗ ಚಂದ್ರ ವಿಯೋನಿಸಂಜ್ಞಾದ್ವಾದಶಾಂಶದಲ್ಲಿದ್ದು ಲಗ್ನವನ್ನು ಬುಧ ಶನಿಗಳು ನೋಡಿದರೆ, ಚಂದ್ರನಿರುವ ದ್ವಾದಶಾಂಶರಾಶಿಗೆ ಸಮಾನವಾದ ಪ್ರಾಣಿ ಹುಟ್ಟುತ್ತದೆ.

ಈ ಎರಡನೆಯ ಯೋಗದಲ್ಲಿ ಸಪ್ತಮದೃಷ್ಟಿಯನ್ನು ತೆಗೆದುಕೊಂಡರೆ ಸಪ್ತಮಕೇಂದ್ರದಲ್ಲಿ ಗ್ರಹವಿರುವುದರಿಂದ ಮೊದಲನೆಯ ಯೋಗದ ಒಂದು ಭೇದವೇ ಆಗುವ ಕಾರಣ ಸಪ್ತಮದೃಷ್ಟಿಯನ್ನು ಬಿಟ್ಟು ಉಳಿದ ದೃಷ್ಟಿಗಳನ್ನು ತೆಗೆದುಕೊಳ್ಳಬೇಕೆಂದು ತಿಳಿದುಬರುತ್ತದೆ.

### ಪ್ರಾಣಿಗಳ ವಿವರ

| | | |
|---|---|---|
| ಮೇಷ ರಾಶಿ | .... | ಕುರಿ ಮೇಕೆ ಮೊದಲಾದುವು |
| ವೃಷಭ ,, | .... | ಎತ್ತು ಎಮ್ಮೆ ,, |
| ಕರ್ಕಟಕ ,, | .... | ಏಡಿ ಆಮೆ ,, |
| ಸಿಂಹ ,, | .... | ಹುಲಿ ಸಿಂಹ ನಾಯಿ ನರಿ ಬೆಕ್ಕು |
| ವೃಶ್ಚಿಕ ,, | .... | ಹಾವು ಚೇಳು ಮೊದಲಾದುವು |
| ಧನುಸ್ಸು ,, | .... | ಕುದುರೆ ಕತ್ತೆ ,, |
| ಮಕರ (ಮೊದಲನೆ ಅರ್ಧ) | .... | ಜಿಂಕೆ |
| ,, (ಎರಡನೆ ಅರ್ಧ) | .... | ಕತ್ತೆ ಮೊಸಳೆ |
| ಮೀನ | .... | ಮೀನು |

---

[1] ಷಂ (ಕ ಗ) [2] ರ' ಗುರು (ಕ) ರುಗ್ರಂ (ಗ).

ಅಶುಭಗ್ರಹ[1]ರಾತ್ಮ[1]ದ್ವಾ
ದಶಭಾಗದೊಳತಿಬಳಾಢ್ಯರಾಗಿರೆ ಬಳಹೀ
ನಶುಭಗ್ರಹ[2]ರನ್ಯ[2] ದ್ವಾ
ದಶಭಾಗದೊಳಿರೆ ವಿಯೋನಿಜನ್ಮಂ ಲಗ್ನಂ ೨

(ಅಂಗವಿಭಾಗ)

ತಲೆ ಮೇಷಂ ವಕ್ತ್ರಮುಂ ಕಂಠಮುಮೆನಿಪೆರಡುಂ ಸ್ಥಾನಮುಕ್ಷಂ ನೃಯುಗ್ಮಂ
ಚಲನಾಂಶಂ ಕರ್ಕಿ ಪೃಷ್ಠಂ ರದನಿರಿಪುವುರಂ ಕನ್ಯಕಾರಾಶಿ ಪಾರ್ಶ್ವಂ
ತೊರೆ ಕುಕ್ಷಿಸ್ಥಾನಕಂ ವೃಶ್ಚಿಕವಸತಿ ಗುದಂ ಮೇಹನಂ ಚಾಪ ಸಂಧ್ರೂ
ನಿಳಯಂ ಮುಷ್ಕಂ ಮೃಗಾಖ್ಯಂ ಕಟಿ ಘಟವುರು ಮೀನೋದಯಂ ಬಾಲಮಕ್ಕುಂ ೩

(ಪಶುವರ್ಣ)

ದೆಸಗೊಂಡ ಲಗ್ನದೊಳ್ ವ
ರ್ತಿಸುವ ನವಾಂಶದೊಳಮುದಯದೊಳ್ [3]ನಿಂದ[3] ನಿರೀ
ಕ್ಷಿಸುವ ಗ್ರಹದೊಳಮತಿವೀ
ರ್ಯ ಸಹಿತಮಪ್ಪುದಱ ವರ್ಣಮದು ಪಶುವರ್ಣಂ ೪

---

೨. ಅಶುಭಗ್ರಹಗಳು ತಮ್ಮ ದ್ವಾದಶಾಂಶದಲ್ಲೇ ಅತಿಬಲಿಷ್ಠರಾಗಿರಲು ದುರ್ಬಲ ಶುಭಗ್ರಹಗಳು ಇತರಗ್ರಹಗಳ ದ್ವಾದಶಾಂಶದಲ್ಲಿದ್ದು ಪ್ರಶ್ನಲಗ್ನ ವಿಯೋನಿಸಂಜ್ಞಾರಾಶಿಯಾದರೆ ವಿಯೋನಿಜನ್ಮವು.

ವಿ—ಈ ಯೋಗದಲ್ಲೂ ಚಂದ್ರನಿರುವ ದ್ವಾದಶಾಂಶರಾಶಿಗೆ ಸಮಾನ ವಾದ ಪ್ರಾಣಿ ಹುಟ್ಟಿದೆ ಎಂದು ತಿಳಿಯಬೇಕು.

೩. ತಲೆ—ಮೇಷ, ಮುಖ ಮತ್ತು ಕತ್ತು ಇವೆರಡು ಅಂಗಗಳು ವೃಷಭ, ಮಿಥುನ—ಮುಂಗಾಲು ಮತ್ತು ಹೆಗಲು, ಕರ್ಕಟಕ—ಬೆನ್ನು, ಸಿಂಹ—ಎದೆ, ಕನ್ಯಾ ರಾಶಿ—ಎರಡು ಪಕ್ಕೆಗಳು, ತುಲಾ—ಹೊಟ್ಟೆ, ವೃಶ್ಚಿಕ—ಗುದ ಮತ್ತು ಯೋನಿ, ದನುಸ್ಸು—ಹಿಂಭಾಗದ ಕಾಲು, ಮಕರ—ವೃಷಣ, ಕುಂಭ—ಕಟಿ, ಮೀನರಾಶಿ—ಬಾಲ. ಈ ಕ್ರಮದಲ್ಲಿ ರಾಶಿಗಳಿಗೆ ಚತುಷ್ಪಾದ ಪ್ರಾಣಿಯ ಅಂಗಗಳನ್ನು ವಿಭಾಗಿಸಿದೆ.

ವಿ—ಪಕ್ಷಿಗಳಿಗೆ ಮುಂಗಾಲಿನ ಸ್ಥಾನದಲ್ಲಿ ರೆಕ್ಕೆಗಳೆಂದು ತಿಳಿಯಬೇಕು. ಇತರ ಜಂತುಗಳಿಗೆ ಅವುಗಳ ಆಕಾರಕ್ಕೆ ತಕ್ಕಂತೆ ರಾಶಿಗಳ ಅಂಗವಿಭಾಗಗಳನ್ನು ಊಹಿಸಿಕೊಳ್ಳಬೇಕು.

೪. ಪ್ರಶ್ನಲಗ್ನದಲ್ಲಿ (ಉದಿಸಿ)ರುವ ನವಾಂಶ, ಲಗ್ನದಲ್ಲಿರುವ ಗ್ರಹ, ಲಗ್ನವನ್ನು ನೋಡುವ ಗ್ರಹ ಇವುಗಳಲ್ಲಿ ಹೆಚ್ಚು ಬಲಿಷ್ಠವಾದುದರ ಬಣ್ಣವೇ ಪಶುವಿನ ಬಣ್ಣ.

ವಿ—ರಾಶಿಗಳ ಬಣ್ಣ ಅಧ್ಯಾಯ ೧ ಪದ್ಯ ೨೧ ರಲ್ಲೂ ಗ್ರಹಗಳ ಬಣ್ಣ ಅಧ್ಯಾಯ ೨ ಪದ್ಯ ೧೯—೨೫ ರಲ್ಲೂ ಇದೆ.

---

[1] ಮಾತ್ಮ (ಕ ಗ) [2] ಮನುಜ (ಕ) ಮನ್ಯ (ಗ) [3] ನಿಂದು (ಕ ಗ).

ಆ ಲಗ್ನಮನೆನಿತು ಗ್ರಹ
ಮಾರೋ[1]ಕಿಪು[1]ವನಿತೆ ಮೆಯ್ಯೊ[2]ಳೀ[2]ಡಕ್ಕುಂ ದ್ಯೂ
ನಾಲಯಗತಮೆನಿತು ಗ್ರಹ
ಮಾ ರೆಕ್ಕದ[3]ರೇ[3]ಡು ಬೆನ್ನಲಾ ಪಶುಗಕ್ಕುಂ　　೫

(ಪಕ್ಷಿಜನ್ಮ ಜ್ಞಾನ)

ದೊರೆಕೊಂಡಂದು ವಿಲಗ್ನದೊಳ್ ಬುಧನವಾಂಶಂ ಮೇಣ್ ಖಗತ್ರ್ಯಂಶಕಂ
ಚರರಾಶ್ಯಂಶಕಮಲ್ಲಿ ಕೂಡಿರೆ ಬಲಾನ್ವಿತಗ್ರಹಂ ನೋಡೆ ಭಾ
[4]ಸ್ಕರಿ[4] ಮೇಣ್ ಕೂಡಿರೆ ಪುಟ್ಟುಗುಂ ಸ್ಥಳಖಗಂ ಮೇಣಲ್ಲಿ ಶೀತಾಂಶು ಕೂ
ಡಿರೆ ಮೇಣ್ ವೀಕ್ಷಿಸೆ ನಿಶ್ಚಯಂ ಜಲಖಗಂ ತಲ್ಲಗ್ನದೊಳ್ ಪುಟ್ಟುಗುಂ　　೬

---

೫. ಆ ಪ್ರಶ್ನಲಗ್ನವನ್ನು ಎಷ್ಟು ಗ್ರಹ ನೋಡುವುದೋ ಅಷ್ಟೇವಿಧ ಬಣ್ಣ ಮೈಯಲ್ಲಿರುತ್ತದೆ. (ಲಗ್ನದಿಂದ) ಏಳನೆಯ ಮನೆಯಲ್ಲಿ ಎಷ್ಟು ಗ್ರಹಗಳಿರುವುವೋ ಅಷ್ಟುವಿಧ ಬಣ್ಣದ ಗುರುತು ಆ ಪ್ರಾಣಿಯ ಬೆನ್ನಿನ ಮೇಲಿರುತ್ತದೆ.

ವಿ–ಗ್ರಹ ಅಂಗವಿಭಾಗದಲ್ಲಿ ಎಲ್ಲಿರುವುದೋ ಆ ಅವಯವದ ಬಣ್ಣಗ್ರಹದ ಬಣ್ಣದಂತಿರುತ್ತದೆ.

೬. ಪ್ರಶ್ನಲಗ್ನದಲ್ಲಿ ಬುಧನ ನವಾಂಶ ಅಥವಾ ಪಕ್ಷಿದ್ರೇಕ್ಕಾಣ ಅಥವಾ ಚರನವಾಂಶ ಉದಿಸಿ ಅಲ್ಲಿ ಬಲಿಷ್ಠಗ್ರಹವಿದ್ದು ಶನಿ ನೋಡಿದರೆ ಅಥವಾ ಅಲ್ಲೇ ಇದ್ದರೆ ಸ್ಥಲಪಕ್ಷಿ ಹುಟ್ಟುತ್ತದೆ; ಅಥವಾ ಅಲ್ಲಿ ಚಂದ್ರನಿದ್ದರೆ ಅಥವಾ ನೋಡಿದರೆ ನಿಶ್ಚಯವಾಗಿ ಜಲಪಕ್ಷಿ ಆ ಲಗ್ನದಲ್ಲಿ ಹುಟ್ಟುತ್ತದೆ.

ವಿ—ಬುಧನವಾಂಶ–ಮಿಥುನ ಕನ್ಯಾನವಾಂಶಗಳು. ಪಕ್ಷಿದ್ರೇಕ್ಕಾಣ– ಮಿಥುನರಾಶಿಯಲ್ಲಿ ಎರಡನೆಯ ದ್ರೇಕ್ಕಾಣ, ಸಿಂಹರಾಶಿಯಲ್ಲಿ ಮೊದಲ ದ್ರೇಕ್ಕಾಣ, ತುಲಾರಾಶಿಯಲ್ಲಿ ಎರಡನೆಯ ದ್ರೇಕ್ಕಾಣ, ಕುಂಭ ರಾಶಿಯಲ್ಲಿ ಮೊದಲ ದ್ರೇಕ್ಕಾಣ.

ಪ್ರಶ್ನಲಗ್ನದಲ್ಲಿ ಮಿಥುನ ಅಥವಾ ಕನ್ಯಾನವಾಂಶ ಉದಿಸಿ ಅಲ್ಲಿ ಬಲಿಷ್ಠ ಗ್ರಹವಿದ್ದು ಶನಿ ನೋಡಿದರೆ ಅಥವಾ ಅಲ್ಲೇ ಇದ್ದರೆ ಸ್ಥಲಪಕ್ಷಿ ಜನನ; ಚಂದ್ರ ನೋಡಿದರೆ ಅಥವಾ ಅಲ್ಲೇ ಇದ್ದರೆ ಜಲಪಕ್ಷಿ ಜನನ.

ಪ್ರಶ್ನಲಗ್ನದಲ್ಲಿ ಚರನವಾಂಶ ಉದಿಸಿ ಅಲ್ಲಿ ಬಲಿಷ್ಠಗ್ರಹವಿದ್ದು ಶನಿ ನೋಡಿದರೆ ಅಥವಾ ಆ ಅಂಶದಲ್ಲೇ ಇದ್ದರೆ ಸ್ಥಲಪಕ್ಷಿ ಜನನ; ಚಂದ್ರ ನೋಡಿದರೆ ಅಥವಾ ಅಲ್ಲೇ ಇದ್ದರೆ ಜಲಪಕ್ಷಿ ಜನನ.

ಪ್ರಶ್ನಲಗ್ನದಲ್ಲಿ ಪಕ್ಷಿದ್ರೇಕ್ಕಾಣ ಉದಿಸಿ ಅಲ್ಲಿ ಬಲಿಷ್ಠಗ್ರಹವಿದ್ದು ಶನಿ ನೋಡಿದರೆ ಅಥವಾ ಆ ಅಂಶದಲ್ಲಿದ್ದರೆ ಸ್ಥಲಪಕ್ಷಿ ಜನನ; ಚಂದ್ರ ನೋಡಿದರೆ ಅಥವಾ ಅಲ್ಲೇ ಇದ್ದರೆ ಜಲಪಕ್ಷಿ ಜನನ.

---

[1] ಸು (ಕ ಗ)　[2] ಳರ (ಗ)　[3] ದರ (ಗ)　[4] ಸ್ಕರ (ಕ ಗ).

ಅಶುಭಗ್ರಹ[1]ರಾತ್ಮ[1]ದ್ವಾ
ದಶಭಾಗದೊಳತಿಬಳಾಢ್ಯರಾಗಿರೆ ಬಳಹೀ
ನಶುಭಗ್ರಹ[2]ರನ್ಯ[2] ದ್ವಾ
ದಶಭಾಗದೊಳಿರೆ ವಿಯೋನಿಜನ್ಮಂ ಲಗ್ನಂ ೨

(ಅಂಗವಿಭಾಗ)

ತಲೆ ಮೇಷಂ ವಕ್ತ್ರಮುಂ ಕಂಠಮುಮೆನಿಪೆರಡುಂ ಸ್ಥಾನಮುಕ್ಷಂ ನೃಯುಗ್ಮಂ
ಚಲನಾಂಶಂ ಕರ್ಕಿ ಪೃಷ್ಠಂ ರದನಿರಿಪುವುರಂ ಕನ್ಯಕಾರಾಶಿ ಪಾರ್ಶ್ವಂ
ತೊರೆ ಕುಕ್ಷಿಸ್ಥಾನಕಂ ವೃಶ್ಚಿಕವಸತಿ ಗುದಂ ಮೇಹನಂ ಚಾಪ ಸಂಧ್ರೂ
ನಿಳಯಂ ಮುಷ್ಕಂ ಮೃಗಾಖ್ಯಂ ಕಟಿ ಘಟವುರು ಮೀನೋದಯಂ ಬಾಲಮಕ್ಕುಂ ೩

(ಪಶುವರ್ಣ)

ದೆಸಗೊಂಡ ಲಗ್ನದೊಳ್ ವ
ರ್ತಿಸುವ ನವಾಂಶದೊಳಮುದಯದೊಳ್ [3]ನಿಂದ[3] ನಿರೀ
ಕ್ಷಿಸುವ ಗ್ರಹದೊಳಮತಿವೀ
ರ್ಯ ಸಹಿತಮಪ್ಪುದಱ ವರ್ಣಮದು ಪಶುವರ್ಣಂ ೪

---

೨. ಅಶುಭಗ್ರಹಗಳು ತಮ್ಮ ದ್ವಾದಶಾಂಶದಲ್ಲೇ ಅತಿಬಲಿಷ್ಠರಾಗಿರಲು ದುರ್ಬಲ ಶುಭಗ್ರಹಗಳು ಇತರಗ್ರಹಗಳ ದ್ವಾದಶಾಂಶದಲ್ಲಿದ್ದು ಪ್ರಶ್ನಲಗ್ನ ವಿಯೋನಿಸಂಜ್ಞಾರಾಶಿಯಾದರೆ ವಿಯೋನಿಜನ್ಮವು.

ವಿ—ಈ ಯೋಗದಲ್ಲೂ ಚಂದ್ರನಿರುವ ದ್ವಾದಶಾಂಶರಾಶಿಗೆ ಸಮಾನವಾದ ಪ್ರಾಣಿ ಹುಟ್ಟಿದೆ ಎಂದು ತಿಳಿಯಬೇಕು.

೩. ತಲೆ—ಮೇಷ, ಮುಖ ಮತ್ತು ಕತ್ತು ಇವೆರಡು ಅಂಗಗಳು ವೃಷಭ, ಮಿಥುನ—ಮುಂಗಾಲು ಮತ್ತು ಹೆಗಲು, ಕರ್ಕಟಕ—ಬೆನ್ನು, ಸಿಂಹ—ಎದೆ, ಕನ್ಯಾರಾಶಿ—ಎರಡು ಪಕ್ಕೆಗಳು, ತುಲಾ—ಹೊಟ್ಟೆ, ವೃಶ್ಚಿಕ—ಗುದ ಮತ್ತು ಯೋನಿ, ದನುಸ್ಸು—ಹಿಂಭಾಗದ ಕಾಲು, ಮಕರ—ವೃಷಣ, ಕುಂಭ—ಕಟಿ, ಮೀನರಾಶಿ—ಬಾಲ. ಈ ಕ್ರಮದಲ್ಲಿ ರಾಶಿಗಳಿಗೆ ಚತುಷ್ಪಾದ ಪ್ರಾಣಿಯ ಅಂಗಗಳನ್ನು ವಿಭಾಗಿಸಿದೆ.

ವಿ—ಪಕ್ಷಿಗಳಿಗೆ ಮುಂಗಾಲಿನ ಸ್ಥಾನದಲ್ಲಿ ರೆಕ್ಕೆಗಳೆಂದು ತಿಳಿಯಬೇಕು. ಇತರ ಜಂತುಗಳಿಗೆ ಅವುಗಳ ಆಕಾರಕ್ಕೆ ತಕ್ಕಂತೆ ರಾಶಿಗಳ ಅಂಗವಿಭಾಗಗಳನ್ನು ಊಹಿಸಿಕೊಳ್ಳಬೇಕು.

೪. ಪ್ರಶ್ನಲಗ್ನದಲ್ಲಿ (ಉದಿಸಿ)ರುವ ನವಾಂಶ, ಲಗ್ನದಲ್ಲಿರುವ ಗ್ರಹ, ಲಗ್ನವನ್ನು ನೋಡುವ ಗ್ರಹ ಇವುಗಳಲ್ಲಿ ಹೆಚ್ಚು ಬಲಿಷ್ಠವಾದುದರ ಬಣ್ಣವೇ ಪಶುವಿನ ಬಣ್ಣ.

ವಿ—ರಾಶಿಗಳ ಬಣ್ಣ ಅಧ್ಯಾಯ ೧ ಪದ್ಯ ೨೧ ರಲ್ಲೂ ಗ್ರಹಗಳ ಬಣ್ಣ ಅಧ್ಯಾಯ ೨ ಪದ್ಯ ೧೯—೨೫ ರಲ್ಲೂ ಇದೆ.

---

[1] ಮಾತ್ಮ (ಕ ಗ) [2] ಮನುಜ (ಕ) ಮನ್ಯ (ಗ) [3] ನಿಂದು (ಕ ಗ).

ಆ ಲಗ್ನಮನೆನಿತು ಗ್ರಹ
ಮಾರೋಕಿ[1]ಪು[1]ವನಿತೆ ಮೆಯ್ಯೊ[2]ಳ್ಳೇ[2]ಡಕ್ಕುಂ ದ್ಯೂ
ನಾಲಯಗತಮೆನಿತು ಗ್ರಹ
ಮಾ ರೆಕ್ಕದ[3]ರೇ[3]ಡು ಬೆನ್ನಲಾ ಪಶುಗಕ್ಕುಂ ೫

(ಪಕ್ಷಿಜನ್ಮ ಜ್ಞಾನ)

ದೊರೆಕೊಂಡಂದು ವಿಲಗ್ನದೊಳ್ ಬುಧನವಾಂಶಂ ಮೇಣ್ ಖಗತ್ರ್ಯಂಶಕಂ
ಚರರಾಶ್ಯಂಶಕಮಲ್ಲಿ ಕೂಡಿರೆ ಬಲಾನ್ವೀತಗ್ರಹಂ ನೋಡೆ ಭಾ
[4]ಸ್ಕರಿ[4] ಮೇಣ್ ಕೂಡಿರೆ ಪುಟ್ಟುಗುಂ ಸ್ಥಳಖಗಂ ಮೇಣಲ್ಲಿ ಶೀತಾಂಶು ಕೂ
ಡಿರೆ ಮೇಣ್ ವೀಕ್ಷಿಸೆ ನಿಶ್ಚಯಂ ಜಲಖಗಂ ತಲ್ಲಗ್ನದೊಳ್ ಪುಟ್ಟುಗುಂ ೬

---

೫. ಆ ಪ್ರಶ್ನಲಗ್ನವನ್ನು ಎಷ್ಟು ಗ್ರಹ ನೋಡುವುದೋ ಅಷ್ಟೇವಿಧ ಬಣ್ಣ ಮೈಯಲ್ಲಿರುತ್ತದೆ. (ಲಗ್ನದಿಂದ) ಏಳನೆಯ ಮನೆಯಲ್ಲಿ ಎಷ್ಟು ಗ್ರಹಗಳಿರುವುವೋ ಅಷ್ಟುವಿಧ ಬಣ್ಣದ ಗುರುತು ಆ ಪ್ರಾಣಿಯ ಬೆನ್ನಿನ ಮೇಲಿರುತ್ತದೆ.

ವಿ–ಗ್ರಹ ಅಂಗವಿಭಾಗದಲ್ಲಿ ಎಲ್ಲಿರುವುದೋ ಆ ಅವಯವದ ಬಣ್ಣಗ್ರಹದ ಬಣ್ಣದಂತಿರುತ್ತದೆ.

೬. ಪ್ರಶ್ನಲಗ್ನದಲ್ಲಿ ಬುಧನ ನವಾಂಶ ಅಥವಾ ಪಕ್ಷಿದ್ರೇಕ್ಕಾಣ ಅಥವಾ ಚರನವಾಂಶ ಉದಿಸಿ ಅಲ್ಲಿ ಬಲಿಷ್ಠಗ್ರಹವಿದ್ದು ಶನಿ ನೋಡಿದರೆ ಅಥವಾ ಅಲ್ಲೇ ಇದ್ದರೆ ಸ್ಥಲಪಕ್ಷಿ ಹುಟ್ಟುತ್ತದೆ; ಅಥವಾ ಅಲ್ಲಿ ಚಂದ್ರನಿದ್ದರೆ ಅಥವಾ ನೋಡಿದರೆ ನಿಶ್ಚಯವಾಗಿ ಜಲಪಕ್ಷಿ ಆ ಲಗ್ನದಲ್ಲಿ ಹುಟ್ಟುತ್ತದೆ.

ವಿ—ಬುಧನವಾಂಶ–ಮಿಥುನ ಕನ್ಯಾನವಾಂಶಗಳು. ಪಕ್ಷಿದ್ರೇಕ್ಕಾಣ—ಮಿಥುನರಾಶಿಯಲ್ಲಿ ಎರಡನೆಯ ದ್ರೇಕ್ಕಾಣ, ಸಿಂಹರಾಶಿಯಲ್ಲಿ ಮೊದಲ ದ್ರೇಕ್ಕಾಣ, ತುಲಾರಾಶಿಯಲ್ಲಿ ಎರಡನೆಯ ದ್ರೇಕ್ಕಾಣ, ಕುಂಭ ರಾಶಿಯಲ್ಲಿ ಮೊದಲ ದ್ರೇಕ್ಕಾಣ.

ಪ್ರಶ್ನಲಗ್ನದಲ್ಲಿ ಮಿಥುನ ಅಥವಾ ಕನ್ಯಾನವಾಂಶ ಉದಿಸಿ ಅಲ್ಲಿ ಬಲಿಷ್ಠ ಗ್ರಹವಿದ್ದು ಶನಿ ನೋಡಿದರೆ ಅಥವಾ ಅಲ್ಲೇ ಇದ್ದರೆ ಸ್ಥಲಪಕ್ಷಿ ಜನನ; ಚಂದ್ರ ನೋಡಿದರೆ ಅಥವಾ ಅಲ್ಲೇ ಇದ್ದರೆ ಜಲಪಕ್ಷಿ ಜನನ.

ಪ್ರಶ್ನಲಗ್ನದಲ್ಲಿ ಚರನವಾಂಶ ಉದಿಸಿ ಅಲ್ಲಿ ಬಲಿಷ್ಠಗ್ರಹವಿದ್ದು ಶನಿ ನೋಡಿದರೆ ಅಥವಾ ಆ ಅಂಶದಲ್ಲೇ ಇದ್ದರೆ ಸ್ಥಲಪಕ್ಷಿ ಜನನ; ಚಂದ್ರ ನೋಡಿದರೆ ಅಥವಾ ಅಲ್ಲೇ ಇದ್ದರೆ ಜಲಪಕ್ಷಿ ಜನನ.

ಪ್ರಶ್ನಲಗ್ನದಲ್ಲಿ ಪಕ್ಷಿದ್ರೇಕ್ಕಾಣ ಉದಿಸಿ ಅಲ್ಲಿ ಬಲಿಷ್ಠಗ್ರಹವಿದ್ದು ಶನಿ ನೋಡಿದರೆ ಅಥವಾ ಆ ಅಂಶದಲ್ಲಿದ್ದರೆ ಸ್ಥಲಪಕ್ಷಿ ಜನನ; ಚಂದ್ರ ನೋಡಿದರೆ ಅಥವಾ ಅಲ್ಲೇ ಇದ್ದರೆ ಜಲಪಕ್ಷಿ ಜನನ.

---

[1] ಸು (ಕ ಗ) [2] ಳರ (ಗ) [3] ದರ (ಗ) [4] ಸ್ಕರ (ಕ ಗ).

(ವೃಕ್ಷ ಜನ್ಮಜ್ಞಾನ)

ಬಳಹೀನನಾದ ಶಶಿಯುಂ
ಬಳ[1]ಹೀನ ಗುರು ರವಿ ಲಗ್ನಮುಂ ತರು[1]ಜನ್ಮ
ಸ್ಥಳರಾಶ್ಯಂಶಕಮಾಗಲ್
ಸ್ಥಳತರು ಜಳಭಾಂಶಮಾಗೆ ಜಳತರುವೊಗೆಗುಂ ೭

ಸ್ಥಳರಾಶಿಯ[2]ನಾಥಂ[2] ನಿಲೆ
ವಿಲಗ್ನದಿಂದೆನಿತಱೆಡೆಯೊ[3]ಳ[3]ನಿತೆ ದಲಕ್ಕುಂ
ಸ್ಥಳಭೂರುಹಮಾ ಹೋರೆಗೆ
ಜಲಗೃಹಪತಿ ನೆಲಸೆ ಜಲಕುಜಂ ಜನಿಯಿಸುಗುಂ ೮

(ವೃಕ್ಷ ಸ್ವರೂಪ)

ಶುಭರಾಶಿಯೊಳಶುಭಂ ನಿಲೆ
[4]ಕು[4]ಭೂಮಿಯಕ್ಕುಂ ಮರಂ ಮನೋಹರಮಕ್ಕುಂ
ಶುಭಮಶುಭ[ದ][5]ಗೃ[5]ಹದೊಳ್ ನಿಲೆ
ಸುಭೂಮಿಯಕ್ಕುಂ [6]ಮರಮದು ಪೊಲ್ಲದೆನಿಕ್ಕುಂ[6] ೯

---

೭. ಪ್ರಶ್ನಕಾಲದಲ್ಲಿ ಬಲಹೀನನಾದ ಚಂದ್ರನೂ ಬಲಹೀನವಾದ ಗುರು ಸೂರ್ಯ ಲಗ್ನಗಳೂ ಆಗಿದ್ದರೆ ವೃಕ್ಷಜನ್ಮವೆಂದೂ ಪ್ರಶ್ನಲಗ್ನದಲ್ಲಿ ಸ್ಥಳರಾಶ್ಯಂಶ ಉದಿಸಿದ್ದರೆ ಸ್ಥಳವೃಕ್ಷ, ಜಲರಾಶ್ಯಂಶವಾದರೆ ಜಲವೃಕ್ಷ ಹುಟ್ಟುತ್ತದೆಂದೂ ತಿಳಿಯಬೇಕು.

ವಿ–ಕರ್ಕಟಕ ಮಕರಉತ್ತರಾರ್ಧ ಮೀನ ಈ ರಾಶಿಗಳು ಜಲರಾಶಿಗಳು ಉಳಿದವು ಸ್ಥಳರಾಶಿಗಳು.

೮. ಸ್ಥಳರಾಶಿಯ ಅಧಿಪತಿ ಪ್ರಶ್ನಲಗ್ನದಿಂದ ಎಷ್ಟನೇ ಸ್ಥಾನದಲ್ಲಿರುವನೋ ಅಷ್ಟು ಸ್ಥಳವೃಕ್ಷಗಳು ಹುಟ್ಟುತ್ತವೆ. ಆ ಲಗ್ನಕ್ಕೆ ಜಲರಾಶಿಯ ಅಧಿಪತಿ ಎಷ್ಟನೇ ಸ್ಥಾನದಲ್ಲಿರುವನೋ ಅಷ್ಟು ಜಲವೃಕ್ಷಗಳು ಹುಟ್ಟುತ್ತವೆ.

೯. ಪ್ರಶ್ನಕಾಲದಲ್ಲಿ ಶುಭಗ್ರಹದ ರಾಶಿಯಲ್ಲಿ (ಸ್ಥಳ ಜಲ ನವಾಂಶಾಧಿಪತಿಯಾದ) ಅಶುಭಗ್ರಹವಿದ್ದರೆ ಕೆಟ್ಟಭೂಮಿ, ಮರ ಮನೋಹರವಾಗಿರುತ್ತದೆ. ಸ್ಥಳ ಜಲನವಾಂಶಾಧಿಪತಿಯಾದ ಶುಭಗ್ರಹ ಅಶುಭಗ್ರಹದ ರಾಶಿಯಲ್ಲಿದ್ದರೆ ಒಳ್ಳೆಯಭೂಮಿ, ಮರ ಕೆಟ್ಟದ್ದಾಗಿರುತ್ತದೆ.

ವಿ–ಪ್ರಶ್ನಕಾಲದಲ್ಲಿ ಸ್ಥಳ ಜಲ ನವಾಂಶಾಧಿಪತಿಯಾದ ಶುಭಗ್ರಹ ಶುಭಗ್ರಹರಾಶಿಯಲ್ಲಿದ್ದರೆ ಭೂಮಿಯು ಉತ್ತಮವಾಗಿರುವುದಲ್ಲದೆ ಮರವೂ ಮನೋಹರವಾಗಿರುತ್ತದೆ. ಸ್ಥಳಜಲನವಾಂಶಾಧಿಪತಿ ಅಶುಭಗ್ರಹವಾಗಿದ್ದು ಅಶುಭಗ್ರಹರಾಶಿಯಲ್ಲಿದ್ದರೆ ಭೂಮಿ ಕೆಟ್ಟದ್ದಾಗಿರುವುದಲ್ಲದೆ ಮರವೂ ಕೆಟ್ಟದ್ದಾಗಿರುತ್ತದೆ.

---

[1] ಧೇದುರ್ರುಪುಂ ವಿಲಗ್ನಮಂತದು (ಕ ಗ) [2] ಯೊಳಾರಂ (ಕ ಗ) [3] ಳೆ (ಕ ಗ) [4] ಸು (ಕ ಗ) [5] ಗ್ರ (ಕ) [6] ಮರಂ ಪೊಲ್ಲೆನಿಕುಂ (ಕ ಗ).

(ವೃಕ್ಷ ಸಂಖ್ಯೆ)

ತನು[1]ತುಲ್ಯಾಂ[1]ಶಕದಿಂ ಗ್ರಹ
ಮೆನಿತನೆಯಂಶಕದೊಳಿರ್ದು[2]ದೆನಿತೆ ದಲಕ್ಕುಂ
ಜನಿತ ಕುಜಾವಳಿ ತಲ್ಲ
ಗ್ನನವಾಂಶಕದುದಯಮೆಂತುಟಂತುಟೆ ಮರನುಂ ೧೦

(ಗ್ರಹಗಳಿಂದ ವೃಕ್ಷ ವಿಶೇಷ ಜ್ಞಾನ)

ಅರವಿಂದಪ್ರಿಯನಿಂದೆ ಕೆಚ್ಚು ಶಶಿಯಿಂ ಸ್ನಿಗ್ಧಂ ಸದುಗ್ಧದ್ರುಮಂ
ಧರಣೀನಂದನನಿಂ ಸಕಂಟಕ ಕಟುತ್ವಂ ಸೌಮ್ಯನಿಂ ನಿಷ್ಫಲಂ
ಗುರುವಿಂದಂ ಸಫಲಂ ಭೃಗುಪ್ರಭವನಿಂ ಪುಷ್ಪಾನ್ವಿತಂ ಸೌರಿಯಿಂ
[3]ಪರುಷಂ ತತ್ತರುವಿಂಗೆ ಪೂರ್ವಗದಿತ ಸ್ಥಾನಸ್ಥರಾದಂದವರ್ ೧೧

---

೧೦. ತನ್ನ ನವಾಂಶದಿಂದ ಸ್ಥಳಜಲಾಂಶಾಧಿಪ ಗ್ರಹ ಎಷ್ಟನೆಯ ಪರ ನವಾಂಶದಲ್ಲಿರುವುದೋ ಅಷ್ಟೇ ಆಗುತ್ತದೆ ತನ್ನ ಜಾತಿಯ ಹುಟ್ಟಿದ ಮರಗಳ ಸಂಖ್ಯೆ. ಆ ಲಗ್ನದಲ್ಲಿ ಉದಿತನವಾಂಶ ಎಷ್ಟನೆಯದೋ ಅಷ್ಟೇ ಆಗುತ್ತದೆ ನವಾಂಶ ಜಾತಿಯ ಮರಗಳ ಸಂಖ್ಯೆ.

೧೧. ಸೂರ್ಯನಿಂದ ಕೆಚ್ಚುಮರ, ಚಂದ್ರನಿಂದ ಸ್ನೇಹ (ಎಣ್ಣೆ) ಮತ್ತು ಹಾಲಿನಿಂದ ಕೂಡಿದ ಮರ, ಅಂಗಾರಕನಿಂದ ಮುಳ್ಳು ಮತ್ತು ಕಾರ ದಿಂದ ಕೂಡಿದ ಮರ, ಬುಧನಿಂದ ಬಂಜೆ ಮರ, ಗುರುವಿಂದ ಫಲವುಳ್ಳ ಮರ, ಶುಕ್ರನಿಂದ ಹೂವಿನಿಂದ ಕೂಡಿದ ಮರ, ಶನಿಯಿಂದ ಪರುಷವಾದ (ನೋಡಲು ಮನೋಹರವಲ್ಲದ) ಕ್ರೂರವಾದ ಮರ. ಹಿಂದೆ ಹೇಳಿರುವ ಸ್ಥಾನದಲ್ಲಿದ್ದಾಗ ಗ್ರಹಗಳು ತಮಗೆ ಉಕ್ತವಾಗಿರುವ ಗುಣಗಳನ್ನು ಆ ಮರಗಳಿಗೆ ಕೊಡುತ್ತವೆ.

ವಿ—ಈ ಪದ್ಯದಲ್ಲಿ ಗ್ರಹಗಳಿಗೆ ವೃಕ್ಷಕಾರಕವನ್ನು ಹೇಳಿರುತ್ತದೆ. ಇದರಿಂದ ಜಾತಕನಿಗೆ ಯಾವ ವಿಧವಾದ ಮರದಿಂದ ಅನುಕೂಲವೆನ್ನುವ ವಿಚಾರವನ್ನು ತಿಳಿಯಬಹುದು.

---

[1] ತುಳಯಾಂ (ಕ ಗ) [2] ವ (ಕ ಗ) [3] ಪ (ಕ ಗ).

(ವಿಯೋನಿಗಳ ಆಯುಸ್ಸು)

ಸಕಲ ಚತುಷ್ಪದ ಪಕ್ಷಿ
ಪ್ರಕರಕ್ಕಂ ಭೂಜರಾಜಿಗಂ ಮಾನವ ಜಾ
ತಕಫಲಮೆಂದಂತುಟೆ ತ
ತ್ಪ್ರಕಟಾಯು ಪ್ರಮಿತಮಿಂತಿದಾಯುರ್ಜ್ಞಾನಂ ೧೨

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ ಸರಸಪ್ರಸನ್ನ ವಚೋಲಕ್ಷ್ಮೀಧರಂ ಗದ್ಯಪದ್ಯ ವಿದ್ಯಾಧರಂ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ವಿಯೋನಿಜನ್ಮ ಪ್ರಕರಣ ವರ್ಣನಂ ಪಂಚಮಾಧಿಕಾರಂ

---

೧೨. ಎಲ್ಲ ಚತುಷ್ಪದ ಪ್ರಾಣಿಗಳು ಮತ್ತು ಹಕ್ಕಿಗಳ ಸಮೂಹಕ್ಕೂ ಮರಗಳ ಗುಂಪಿಗೂ ಮನುಷ್ಯಜಾತಕ ಫಲದಲ್ಲಿ ಹೇಳಿರುವಷ್ಟೇ ಅವುಗಳ ಆಯುಸ್ಸಿನ ಲೆಕ್ಕ. ಇದೇ ವಿಯೋನಿಗಳ ಆಯುಸ್ಸಿನ ಗಣನೆಯ ಕ್ರಮ.

ವಿ—ಮನುಷ್ಯಜಾತಕದಲ್ಲಿರುವ ಗ್ರಹಸ್ಥಿತಿಯಿಂದ ಆಯುಸ್ಸಿಗೆ ದ್ವಿಗುಣ ತ್ರಿಗುಣಗಳನ್ನು ಆಯುರ್ದಾಯ ಪ್ರಕರಣದಲ್ಲಿ ಹೇಳಿರುವಂತೆ ವಿಯೋನಿಗಳ ಆಯುಸ್ಸನ್ನು ಗಣಿಸುವಾಗಲೂ ಅದೇ ಗ್ರಹಸ್ಥಿತಿಯಿಂದ ದ್ವಿಗುಣ ತ್ರಿಗುಣಮಾಡಿ ಆಯುರ್ದಾಯವನ್ನು ತಿಳಿಯಬೇಕು.

---

# ಷಷ್ಠಾಧಿಕಾರಂ

---

## ಅರಿಷ್ಟಯೋಗ ಪ್ರಕರಣಂ

(ಸದ್ಯೋಮರಣಯೋಗ)

ಶಶಿ ಷಷ್ಠಾಷ್ಟಮ ಗತನಾ
ಗೆ ಶುಭೇತರ ದೃಷ್ಟಿ ಕೂಡೆ ಸದ್ಯೋಮರಣಂ
ಶಿಶುಗೆಂಟು ವರ್ಷದಿಂ ನೋ
ಡೆ ಶುಭಗ್ರಹಮರ್ಧದಿಂ ತದುಭಯೇಕ್ಷಣದೊಳ್ ೧

ಕ್ರೂರರ್ ನಿಲೆ [1]ಲಗ್ನಾಸ್ತಾ[1]
ಗಾರಂಗಳೊಳೊಂದಿ ನಿಲೆ ಸುಧಾಸಂಭೂತಂ
ಕ್ರೂರರೊಳೀಕ್ಷಿಸದಂದ
ಕ್ರೂರರ್ ತದ್ಬಾಲಕಂಗ ಸದ್ಯೋಮರಣಂ ೨

---

೧. ಜನನಕಾಲದಲ್ಲಿ ಚಂದ್ರ ಆರು ಅಥವಾ ಎಂಟನೇ ಸ್ಥಾನದಲ್ಲಿದ್ದು ಪಾಪಗ್ರಹಗಳು ಆತನನ್ನು ನೋಡಿದರೆ ಮಗುವಿಗೆ ಹುಟ್ಟಿದ ಕೂಡಲೆ ಸಾವು; ಶುಭಗ್ರಹ ನೋಡಿದರೆ ಎಂಟುವರ್ಷಗಳ ಮೇಲೆ ಸಾವು; ಶುಭಾಶುಭಗ್ರಹಗಳ ದೃಷ್ಟಿಯಿಂದ ಅದರಲ್ಲಿ ಅರ್ಧ ಅಂದರೆ ನಾಲ್ಕುವರ್ಷಗಳ ಮೇಲೆ ಸಾವು.

ವಿ–ಜನನಕಾಲದಲ್ಲಿ ಷಷ್ಠ ಅಥವಾ ಅಷ್ಟಮ ಭಾವದಲ್ಲಿ ಚಂದ್ರನಿದ್ದು ಶುಭಗ್ರಹಗಳ ದೃಷ್ಟಿಯಿಲ್ಲದೆ ಪಾಪಗ್ರಹಗಳು ಮಾತ್ರ ಅವನನ್ನು ನೋಡಿದರೆ ಹುಟ್ಟಿದ ಕೂಡಲೇ ಮಗು ಸಾಯುತ್ತದೆ.

ಜನನಕಾಲದಲ್ಲಿ ಷಷ್ಠ ಅಥವಾ ಅಷ್ಟಮಭಾವದಲ್ಲಿ ಚಂದ್ರನಿದ್ದು ಪಾಪಗ್ರಹಗಳು ನೋಡದೆ ಶುಭಗ್ರಹಗಳು ಮಾತ್ರ ಆತನನ್ನು ನೋಡಿದರೆ ಎಂಟು ವರ್ಷಗಳ ಮೇಲೆ ಮಗು ಸಾಯುತ್ತದೆ. ಜನನಕಾಲದಲ್ಲಿ ಷಷ್ಠ ಅಥವಾ ಅಷ್ಟಮ ಭಾವದಲ್ಲಿ ಚಂದ್ರನಿದ್ದು ಶುಭ ಮತ್ತು ಅಶುಭಗ್ರಹಗಳು ಆತನನ್ನು ನೋಡಿದರೆ ನಾಲ್ಕು ವರ್ಷಗಳ ಮೇಲೆ ಮಗು ಸಾಯುತ್ತದೆ. ಷಷ್ಠ ಅಥವಾ ಅಷ್ಟಮ ಭಾವ ದಲ್ಲಿ ಚಂದ್ರನಿದ್ದು ಆತನನ್ನು ಯಾವ ಗ್ರಹವೂ ನೋಡದಿದ್ದರೆ ಈ ಅರಿಷ್ಟವಿಲ್ಲ.

೨. ಕ್ರೂರಗ್ರಹಗಳು ಲಗ್ನ ಮತ್ತು ಸಪ್ತಮ ಸ್ಥಾನಗಳಲ್ಲಿರುವಾಗ ಮತ್ತು ಕ್ರೂರಗ್ರಹದೊಡನೆ ಚಂದ್ರನಿದ್ದು ಶುಭಗ್ರಹಗಳು ಆತನನ್ನು ನೋಡದಿದ್ದರೆ ಹುಟ್ಟಿದ ಶಿಶುವಿಗೆ ಕೂಡಲೇ ಮರಣ.

ವಿ–ಲಗ್ನದಲ್ಲಿ ಸಪ್ತಮದಲ್ಲಿ ಮತ್ತು ಚಂದ್ರನೊಡನೆ ಪಾಪಗ್ರಹವಿದ್ದು ಚಂದ್ರನಿಗೆ ಶುಭಗ್ರಹದೃಷ್ಟಿ ಇಲ್ಲದಿದ್ದರೆ ಹುಟ್ಟಿದ ಕೂಡಲೆ ಮಗು ಸಾಯುತ್ತದೆ.

---

[1] ಲಗ್ನಸ್ಥಾ (ಕ ಗ).

ತಾಮರಸಪ್ರಿಯ ರವಿಸುತ
ಸೋ[1]ಮರ[1] ಮೃತ್ಯುವಿನೊಳಕ್ಕೆ ಷಷ್ಠದೊಳಿರೆ ಸ
ದ್ಯೋಮರಣಂ ಶಿಶುವಿಂಗೆ ಸ
ಮಾ ಮಧ್ಯದೊಳಕ್ಕೆ ಮರಣಮೆಂಬರ್ ಕೆಲಬರ್ ೩

ಎರ[2]ಡಶು[2]ಭಗ್ರಹಮುದಯದೊ
ಳಿರೆ ಸೌಮ್ಯರ್ ನೋಡದಂದು ಮೇಣ್ ಕುಜಯಮ ಮಂ
ದಿರಮೆನಿಪ ಪತ್ತಱೊಳ್ ರವಿ
ಯಿರೆ ಪಾಪಾಳೋಕಮಾಗೆ ಸದ್ಯೋಮರಣಂ ೪

ಶಶಲಕ್ಷ್ಮಂ ಕ್ಷೀಣಂ ದ್ವಾ
ದಶದೊಳ್ ನಿರೆ ಜನ್ಮಲಗ್ನದೊಳ್ ನಿಧನದೊಳ
ಕ್ಕಶುಭರಿರೆ ಕೇಂದ್ರದಿಂ ತೊಲ
ಗೆ ಶುಭಗ್ರಹಮಂದೆ ಸಾಯ್ಗುಮಾ ಪುಟ್ಟಿದವಂ ೫

---

೩. ಜನನಕಾಲದಲ್ಲಿ ಸೂರ್ಯ ಶನಿ ಚಂದ್ರರು ಎಂಟನೇ ಸ್ಥಾನದಲ್ಲಾಗಲೀ ಆರನೆಯ ಸ್ಥಾನದಲ್ಲಾಗಲೀ ಇದ್ದರೆ ಶಿಶುವಿಗೆ ಹುಟ್ಟಿದಕೂಡಲೇ ಮರಣ. ವರ್ಷಮಧ್ಯದಲ್ಲಿ ಮರಣವೆಂದು ಕೆಲವರು ಹೇಳುತ್ತಾರೆ.

ವಿ–ಹಿಂದಿನ ಪದ್ಯದಲ್ಲಿ ತಿಳಿಸಿರುವಂತೆ ಈ ಯೋಗದಲ್ಲೂ ಶುಭಗ್ರಹ ದೃಷ್ಟಿ ಚಂದ್ರನಿಗೆ ಇರಕೂಡದು.

೪. ಜನನಕಾಲದಲ್ಲಿ ಎರಡು ಅಶುಭಗ್ರಹಗಳು ಲಗ್ನದಲ್ಲಿದ್ದು ಶುಭಗ್ರಹಗಳು ಅವರನ್ನು ನೋಡದಿದ್ದರೆ ಅಥವಾ ಅಂಗಾರಕ ಶನಿ ಇವರ ರಾಶಿ ಹತ್ತನೆಯ ಸ್ಥಾನವಾಗಿ ಅಲ್ಲಿ ಸೂರ್ಯನಿದ್ದು ಅಶುಭಗ್ರಹ ನೋಡಿದರೆ ಶಿಶುವಿಗೆ ಸದ್ಯೋಮರಣ.

ವಿ–ಈ ಪದ್ಯದಲ್ಲಿ ಎರಡು ಯೋಗಗಳನ್ನು ಹೇಳಿದೆ. (೧) ಅಶುಭಗ್ರಹಗಳೆರಡು ಲಗ್ನದಲ್ಲಿದ್ದು ಶುಭಗ್ರಹಗಳು ನೋಡದಿರುವುದು. (೨) ಮೇಷ ವೃಶ್ಚಿಕ ಮಕರ ಕುಂಭರಾಶಿಗಳಲ್ಲೊಂದು ಹತ್ತನೆಯ ಸ್ಥಾನವಾಗಿ ಅಲ್ಲಿ ಸೂರ್ಯನಿದ್ದು ಪಾಪಗ್ರಹ ನೋಡುವುದು.

ಈ ಎರಡು ಯೋಗಗಳಲ್ಲೂ ಹುಟ್ಟಿದ ಮಗು ಕೂಡಲೇ ಸಾಯುತ್ತದೆ.

೫. ಕ್ಷೀಣಚಂದ್ರ ಹನ್ನೆರಡನೆಯ ಸ್ಥಾನದಲ್ಲಿರಲು ಜನ್ಮಲಗ್ನ ಅಥವಾ ಅಷ್ಟಮಸ್ಥಾನದಲ್ಲಾಗಲೀ ಅಶುಭಗ್ರಹಗಳಿದ್ದು ಕೇಂದ್ರದಲ್ಲಿ ಶುಭಗ್ರಹವಿಲ್ಲದಿದ್ದಾಗ ಹುಟ್ಟಿದ ಮಗು ಆಗಲೇ ಸಾಯುತ್ತದೆ.

ವಿ–ಕ್ಷೀಣಚಂದ್ರ–ಕೃಷ್ಣಾಷ್ಟಮಿಯಿಂದ ಶುಕ್ಲಾಷ್ಟಮಿವರೆಗಿನ ಚಂದ್ರ;
ಕೇಂದ್ರ—ಲಗ್ನ ನಾಲ್ಕು ಏಳು ಹತ್ತು ಈ ನಾಲ್ಕು ಸ್ಥಾನಗಳು.

---

[1] ಮಾಂ (ಕ ಗ) [2] ಡು ಶು (ಕ ಗ).

ನವ ಪಂಚಮದೊಳ್ ಕಂಟಕ
ಭವನದೊಳಶುಭಗ್ರಹಂಗಳಿರೆ ಸೌಮ್ಯರ್ ವ್ಯೈ
ರಿ ವಿನಾಶ ವ್ಯಯದೊಳ್ ನಿಲೆ
ರವಿಯುದಯದೊಳಾಗೆ ಶಿಶುಗೆ ಸದ್ಯೋಮರಣಂ ೬

ಭವನಾಂತದೊಳ್ ಸುಧಾಸಂ
ಭವನಿರೆ ಕಾಣದಿರೆ ಸೌಮ್ಯರಿರೆ ಪಾಪಗಣಂ
ನವ ಪಂಚಮದೊಳ್ ಪುಟ್ಟಿದ
ಕುವರಂ ಜೋಕೋರನಂತೆ ಪಲದಿವಸಮಿರಂ ೭

ತಾರೇಶಂ ಕ್ಷೀಣಕರಂ
ಕ್ರೂರಗ್ರಹದೊಡನೆ ಕೂಡೆ ನೋಡುವೊಡವನಂ
ತಾ ರಾಹು ಕೆಲವು ದಿವಸದೊ
ಳಾರುಂ ಕಾಯಲ್ಕೆ ನೆಱೆಯರಾ ಬಾಲಕನಂ ೮

ಉದಯಿಸೆ ಮುಂ ಕೇತು ವಿಲ
ಗ್ನದೊಳುಲ್ಕಾಪಾತ ಪವನನಿರ್ಘಾತಂ ಕೂ
ಡಿದೊಡೊಂದಿ ಬಂದೊಡಂ ರೌ
ದ್ರ ದಂದಶೂಕರ ಮುಹೂರ್ತಮಾಗಡೆ ಸಾಯ್ಗುಂ ೯

---

೬. ಅಶುಭಗ್ರಹಗಳು ಒಂಬತ್ತು ಐದು ಮತ್ತು ಕೇಂದ್ರಸ್ಥಾನಗಳಲ್ಲಿದ್ದು ಶುಭಗ್ರಹಗಳು ಆರು ಎಂಟು ಹನ್ನೆರಡನೇ ಸ್ಥಾನಗಳಲ್ಲೂ ಸೂರ್ಯ ಲಗ್ನದಲ್ಲೂ ಇರುವಾಗ ಹುಟ್ಟಿದ ಮಗುವಿಗೆ ಕೂಡಲೇ ಮರಣ.

೭. ರಾಶಿಯ ಕೊನೆಯ ನವಾಂಶದಲ್ಲಿ ಚಂದ್ರನಿದ್ದು ಶುಭಗ್ರಹಗಳು ಅವನನ್ನು ನೋಡದೆ ಪಾಪಗ್ರಹಗಳು ಒಂಬತ್ತು ಐದನೇ ಸ್ಥಾನಗಳಲ್ಲಿರುವಾಗ ಹುಟ್ಟಿದ ಮಗು ಜೋಕುಮಾರನಂತೆ ಬಹಳದಿನ ಇರುವುದಿಲ್ಲ.

೮. ಕ್ಷೀಣಚಂದ್ರ ಕ್ರೂರಗ್ರಹದೊಡನೆ ಇರುವಾಗ ಅವನನ್ನು ರಾಹು ನೋಡಲು ಹುಟ್ಟಿದ ಕೆಲವುದಿವಸಗಳಲ್ಲಿಯೇ ಯಾರೂ ಆ ಮಗುವನ್ನು ಕಾಯಲು ಸಮರ್ಥರಾಗುವುದಿಲ್ಲ.

ವಿ–ಕ್ರೂರಗ್ರಹನೊಡನಿರುವ ಕ್ಷೀಣಚಂದ್ರನನ್ನು ರಾಹು ನೋಡಿದರೆ ಹುಟ್ಟಿದ ಕೆಲವುದಿವಸಗಳಲ್ಲೇ ಮಗು ಸಾಯುತ್ತದೆ.

೯. ಕೇತು ಮೊದಲು ಉದಯಿಸಿ ಜನ್ಮಲಗ್ನದಲ್ಲಿ ಉಲ್ಕಾಪಾತ ಪವನ–ನಿರ್ಘಾತ ಕೂಡಿಬಂದಾಗ ರೌದ್ರ ಅಥವಾ ಸಾರ್ಪಮುಹೂರ್ತವಾದರೆ ಹುಟ್ಟಿದ ಕೂಡಲೇ ಮಗು ಸಾಯುತ್ತದೆ.

ವಿ–ಸೂರ್ಯ ಉದಯಿಸಿದ ಮೇಲೆ ನಾಲ್ಕು ಘಳಿಗೆಯೊಳಗೆ (೧ ಘಂ. ೩೬ ನಿ.) ಜನನವಾಗಿ ಆ ಕಾಲದಲ್ಲಿ ಕೇತೂದಯ ಉಲ್ಕಾಪಾತ ಮೊದಲಾದ ಅನಿಷ್ಟಸೂಚಕ ಉತ್ಪಾತಗಳು ಕಂಡುಬಂದರೆ ಹುಟ್ಟಿದ ಕೂಡಲೇ ಮಗು ಸಾಯುತ್ತದೆ.

(ಹುಟ್ಟಿದ ಒಂದು ತಿಂಗಳ ಮೇಲೆ ಮರಣಯೋಗ)

ನಿರತಿಶಯ ರಾಜಯೋಗಂ
ಬರೆ ಹೀನಕುಲೋದ್ಭವಂಗೆ ಬರ್ಕುಂ ಸದ್ಯೋ
ಮರಣಂ ಕೇತು ವಿಲಗ್ನದೊ
ಳಿರೆ ಪುಟ್ಟಿದ ಮನುಜನೊಂದು[1] ತಿಂಗಳು ಬಾಳ್ಗುಂ ೧೦

---

ಮುಹೂರ್ತವೆಂದರೆ ಎರಡು ಘಳಿಗೆ ಕಾಲ (೪೮ ನಿಮಿಷಗಳು). ಒಂದು ದಿನಕ್ಕೆ ೩೦ ಮುಹೂರ್ತಗಳು. ಇದರಲ್ಲಿ ೧೫ ಹಗಲು ಮುಹೂರ್ತಗಳು, ೧೫ ರಾತ್ರಿ ಮುಹೂರ್ತಗಳು. ಈ ಮುಹೂರ್ತಗಳನ್ನು ಪುರಾಣದಲ್ಲಿ "ರೌದ್ರ ಶ್ವೇತ" ಇವೇ ಮೊದಲಾದ ಹೆಸರುಗಳಿಂದ ಕರೆದಿದ್ದಾರೆ. ಇವು ಪುರಾಣೋಕ್ತ ಮುಹೂರ್ತಗಳು ; ಜ್ಯೌತಿಷ ಶಾಸ್ತ್ರದಲ್ಲಿ ನಕ್ಷತ್ರಗಳ ಹೆಸರಿನಿಂದ ಈ ಮುಹೂರ್ತಗಳನ್ನು ಕರೆದಿರುವುದರಿಂದ ನಾಕ್ಷತ್ರಮುಹೂರ್ತಗಳೆಂಬ ಹೆಸರೂ ಇವುಗಳಿಗುಂಟು. ಕಾಲ ಒಂದೇ ಆದರೂ ಹೆಸರು ಮಾತ್ರ ವ್ಯತ್ಯಾಸ. ನಾಕ್ಷತ್ರ ಮುಹೂರ್ತ ಗಣನೆಯಂತೆ ದಿನದ ಮೊದಲ ಮುಹೂರ್ತ 'ಆದ್ರ್ರಾ' (ರುದ್ರ) ಎರಡನೆಯ ಮುಹೂರ್ತ 'ಉರಗ' (ಸರ್ಪ) ಆದುದರಿಂದ 'ರುದ್ರ ಸಾರ್ಪ' ಮುಹೂರ್ತಗಳೆಂದರೆ ಸೂರ್ಯನು ಉದಯಿಸಿದ ಮೇಲೆ ೪ ಘಳಿಗೆ ಕಾಲ ಎಂದು ಅರ್ಥವಾಗುತ್ತದೆ. ಬೆಂಕಿ ಇಲ್ಲದ ಕಡೆ ಬೆಂಕಿಯಿರುವಂತೆ (ಮಿನುಗು ಹುಳು, ಮಣಿ ರತ್ನಾದಿಗಳನ್ನು ಬಿಟ್ಟು ಉಳಿದಕಡೆ) ಕಾಣುವುದೇ ಕೇತು. ದಿವ್ಯ ಆಂತರಿಕ್ಷ ಭೌಮ ಎಂದು ಕೇತು ಮೂರುವಿಧ. ನಕ್ಷತ್ರಗಳ ಮಧ್ಯದಲ್ಲಿ ಕಂಡುಬರುವ ಕೇತು ದಿವ್ಯಕೇತು. ಧ್ವಜ ಮೊದಲಾದ ಆಕಾರದಲ್ಲಿ ಬೆಂಕಿ ಕಾಣುವುದು ಆಂತರಿಕ್ಷಕೇತು. ಭೂಮಿಯಲ್ಲಿ ಕಂಡುಬರುವ ಕೇತುವೇ ಭೌಮಕೇತು. ಜನನಕಾಲದಲ್ಲಿ ಈ ಕೇತುಗಳು ಕಂಡುಬಂದರೆ ಹುಟ್ಟಿದ ಕೂಡಲೆ ಮಗು ಸಾಯುತ್ತದೆ. ಉಲ್ಕಾಪಾತವೆಂದರೆ ಬೆಂಕಿಮಳೆ. ನಿರ್ಘಾತವೆಂದರೆ ಗಾಳಿ ಪರಸ್ಪರ ಹೊಡೆತದಿಂದ ಶಬ್ದ ಮಾಡುತ್ತಾ ಆಕಾಶದಿಂದ ಭೂಮಿಗೆ ಬೀಳು ವಂತಾಗುವುದು.

೧೦. ಅತಿಶಯವಾದ ರಾಜಯೋಗ ಹೀನಕುಲದಲ್ಲಿ ಹುಟ್ಟಿದವನಿಗಿದ್ದರೆ ಹುಟ್ಟಿದಕೂಡಲೆ ಸಾವು ಬರುತ್ತದೆ. ಕೇತು ಉದಯಿಸಿರುವ ರಾಶಿಯಲ್ಲಿ ಹುಟ್ಟಿದ ಮಗು ಒಂದುತಿಂಗಳು ಜೀವಿಸುತ್ತದೆ.

ವಿ–ಕೇತು ಉದಯಿಸಿರುವ ರಾಶಿಯಲ್ಲಿ (ಲಗ್ನದಲ್ಲಿ) ಹುಟ್ಟಿದ ಮಗು ಎರಡುತಿಂಗಳು ಕಾಲ ಜೀವಿಸುತ್ತದೆಂದು ಸಾರಾವಳೀ ಗ್ರಂಥದಲ್ಲಿದೆ.

---

[1] ದೆ (ಶ).

ಹೋರಾಧಿಪನಿರ್ದ[1]ಸ್ತಾ[1]
ಗಾರದೊಳಭಿಭೂತಮಾಗೆ ಮೇಣಲ್ಲದೊಡಾ
ಹೋರೇಶನಿ[2]ರ್ದು ನಿಧನಾ[2]
ಗಾರದೊಳಭಿಭೂತಮಾಗೆ ಮಾಸದೆ ಮರಣಂ ೧೧

ಇರೆ ಷಷ್ಠಾಷ್ಟಮದೊಳ್ ಶುಭಗ್ರಹಮದಂ ವಕ್ರಸ್ಥಿತರ್ ತತ[3]ಶುಭೇ
ತರ[3]ರಾಳೋಕಿಸೆ ಕಾಣದಿರ್ದೊಡದನಾ ಸೌಮ್ಯಗ್ರಹಂ ಮೇಣ್ ಶುಭೇ
ತರರ[4]ಸ್ತಾಲಯ[4]ಸಂಸ್ಥ ಲಗ್ನಪತಿಯಂ [5]ಗೆದ್ದಿ[5]ರ್ದೊಡಂ ಮಾಸದಿಂ
ಮರಣಂ ಲಗ್ನಭವಂಗೆ ಸಂಭವಿಸುಗುಂ ಧಾತ್ರೋದ್ಭವಂ ಕಾ[6]ವ್ದೊ[6]ಡಂ ೧೨

---

೧೧. ಲಗ್ನಾಧಿಪತಿ ಏಳನೇ ಸ್ಥಾನದಲ್ಲಿದ್ದು ಯುದ್ಧದಲ್ಲಿ ಸೋತಿದ್ದರೆ ಅಥವಾ ಲಗ್ನಾಧಿಪತಿ ಎಂಟನೇ ಸ್ಥಾನದಲ್ಲಿದ್ದು ಯುದ್ಧದಲ್ಲಿ ಸೋತಿದ್ದರೆ ಒಂದು ತಿಂಗಳಿನಲ್ಲಿ ಮರಣ.

ವಿ–ಲಗ್ನಾಧಿಪತಿ ಏಳನೇ ಸ್ಥಾನದಲ್ಲಿದ್ದು ಪಾಪಗ್ರಹದೊಡನೆ ಯುದ್ಧದಲ್ಲಿ ಸೋತಿದ್ದರೆ ಅಥವಾ ಜನ್ಮರಾಶ್ಯಧಿಪತಿ (ಚಂದ್ರನಿರುವ ರಾಶಿಯ ಅಧಿಪತಿ) ಏಳನೇ ಸ್ಥಾನದಲ್ಲಿರುವುದಲ್ಲದೆ ಪಾಪಗ್ರಹದಿಂದ ಯುದ್ಧದಲ್ಲಿ ಪರಾಜಿತನಾಗಿದ್ದು ಚಂದ್ರನಿಗೆ ಶುಭಗ್ರಹದೃಷ್ಟಿ ಇಲ್ಲದಿದ್ದಾಗ ಹುಟ್ಟಿದ ಮಗು ಒಂದುತಿಂಗಳೊಳಗೆ ಸಾಯುವುದೆಂದು ಸಾರಾವಳೀ ಗ್ರಂಥದಲ್ಲಿದೆ.

ಮಂಗಳ ಬುಧ ಗುರು ಶುಕ್ರ ಶನಿಗಳು ತಾರಾಗ್ರಹಗಳು. ಒಂದೇ ಕಾಲದಲ್ಲಿ ಎರಡು ತಾರಾಗ್ರಹಗಳು ದಕ್ಷಿಣೋತ್ತರ ಒಂದೇ ರೇಖೆಯಲ್ಲಿ ಇರುವಾಗ ಆ ಗ್ರಹಗಳಿಗೆ ಪರಸ್ಪರ ಯುದ್ಧವಾಗುತ್ತದೆ. ಇದರಲ್ಲಿ ಪ್ರಕಾಶದಿಂದ ಕೂಡಿ ಉತ್ತರದಲ್ಲಿರುವುದೇ ಯುದ್ಧದಲ್ಲಿ ಗೆದ್ದ ಗ್ರಹ. ದಕ್ಷಿಣದಲ್ಲಿ ಕಾಂತಿ ಹೀನನಾಗಿ ಕಾಣುವುದೇ ಸೋತ ಗ್ರಹ.

೧೨. ಆರು ಎಂಟನೇ ಸ್ಥಾನಗಳಲ್ಲಿ ಶುಭಗ್ರಹವಿದ್ದು ಅದನ್ನು ವಕ್ರಗತಿಯಿಂದ ಕೂಡಿರುವ ಅಶುಭಗ್ರಹಗಳು ನೋಡಿ ಶುಭಗ್ರಹ ನೋಡದಿದ್ದರೆ ಅಥವಾ ಅಶುಭಗ್ರಹಗಳು ಏಳನೇ ಸ್ಥಾನದಲ್ಲಿರುವ ಲಗ್ನಾಧಿಪತಿಯನ್ನು ಯುದ್ಧದಲ್ಲಿ ಗೆದ್ದಿದ್ದರೆ ಒಂದು ತಿಂಗಳೊಳಗೆ ಈ ಲಗ್ನದಲ್ಲಿ ಹುಟ್ಟಿದವನಿಗೆ ಬ್ರಹ್ಮನು ಕಾಯುತ್ತಿದ್ದರೂ ಮರಣವುಂಟಾಗುತ್ತದೆ.

ವಿ–ಗ್ರಹಗಳಿಗೆ ಋಜುಗತಿ ವಕ್ರಗತಿಯೆಂದು ಸ್ಫುಟಗತಿ ಎರಡುವಿಧ. ಋಜುಗತಿ ಎಂದರೆ ಕ್ರಮಗತಿ (ಮುಂದು ಮುಂದಕ್ಕೆ ಹೋಗುವುದು). ಈ ಗತಿಯಿಂದ ಎಲ್ಲ ಗ್ರಹಗಳೂ ಸಂಚರಿಸುತ್ತವೆ. ವಕ್ರಗತಿ ಎಂದರೆ ವಿಪರೀತಗತಿ (ಹಿಂದು ಹಿಂದಕ್ಕೆ ಹೋಗುವುದು). ಸೂರ್ಯ ಚಂದ್ರರನ್ನು ಬಿಟ್ಟು ಉಳಿದ ಐದು

---

[1] ಸಾ (ಕ ಗ) [2] ರ್ದನಿದನಾ (ಕ ಗ) [3] ನುಬೋತ್ಕರ (ಗ) [4] ಸ್ತ್ರೋದಮು (ಕ ಗ) [5] ದೆಲ್ಲ (ಕ ಗ) [6] ದೊ (ಕ).

[1]ಮೃತ್ಯು ಗೃಹೆಮೆನಿಪ ಶುಕ್ರ[1]
ಕ್ಷೇತ್ರದೊಳಿರೆ ಮಿತ್ರ ಮಿತ್ರಪುತ್ರ ಧರಿತ್ರೀ
ಪುತ್ರರ್ ತದ್ಬಾಲಕನಂ
ಧಾತ್ರನು ಮೃತ್ಯುಂಗಳಿಂ[2]ದೆ[2] ಕಾಯಲ್ ನೆಱೆಯಂ ೧೩

(ಹುಟ್ಟಿದ ನಾಲ್ಕು ತಿಂಗಳ ಮೇಲೆ ಮರಣಯೋಗ)

ನೆಲಸಿರೆ ನಿಧನಾಲಯದೊಳ್
ವಿಲಗ್ನನಾ[3]ಥಂ[3] ಸಮಸ್ತಪಾಪಗ್ರಹಮುಂ
ಬಲಯುತರಭಿವೀಕ್ಷಿಸೆ ತ
ದ್ವಿಲಗ್ನಜಂ ನಾಲ್ಕುತಿಂಗಳಿಂದಂ ಸಾಯ್ಗುಂ ೧೪

---

ತಾರಾಗ್ರಹಗಳೂ ಈ ಗತಿಯಿಂದ ಕೆಲವು ವೇಳೆ ಸಂಚರಿಸುತ್ತವೆ. ಇದನ್ನು ಸಿದ್ಧಾಂತ ಗಣಿತದಿಂದ ಲೆಕ್ಕಮಾಡಿ ತಿಳಿಯಬಹುದು. ವಕ್ರಗತಿಯಿಂದ ಕೂಡಿರುವ ಗ್ರಹ ಉಚ್ಚರಾಶಿಯ ಫಲವನ್ನು ಕೊಡುವುದೆಂದು ಜ್ಯೌತಿಷಾಚಾರ್ಯರ ಅಭಿಪ್ರಾಯ. ಇದರಂತೆ ವಕ್ರಗ್ರಹವೆಂದರೆ ಬಲಿಷ್ಠಗ್ರಹವೆಂದು ಹೇಳಬಹುದು.

೧೩. ಶುಕ್ರಕ್ಷೇತ್ರ (ವೃಷಭ ಅಥವಾ ತುಲಾರಾಶಿ) ಎಂಟನೇ ಸ್ಥಾನವಾಗಿ ಅಲ್ಲಿ ಸೂರ್ಯ ಶನಿ ಮಂಗಳರಿದ್ದಾಗ ಹುಟ್ಟಿದ ಮಗುವನ್ನು ಮೃತ್ಯುಗಳಿಂದ ಕಾಯಲು ಬ್ರಹ್ಮನೂ ಸಮರ್ಥನಲ್ಲ.

ವಿ—ಈ ಪದ್ಯದಲ್ಲಿ ಎರಡುಯೋಗಗಳನ್ನು ಹೇಳಿದೆ: (೧) ತುಲಾಲಗ್ನದಲ್ಲಿ ಜನನವಾಗಿ ವೃಷಭರಾಶಿಯಲ್ಲಿ ಸೂರ್ಯ ಶನಿ ಮಂಗಳರಿರುವುದು. ಈ ಯೋಗ ವೃಷಭಮಾಸದಲ್ಲಿ (ಮೇ ಜೂನ್ ತಿಂಗಳಿನಲ್ಲಿ) ಶನಿ ಕುಜರು ವೃಷಭದಲ್ಲಿದ್ದಾಗ ಸಂಭವಿಸುತ್ತದೆ. (೨) ಮೀನಲಗ್ನದಲ್ಲಿ ಜನನವಾಗಿ ತುಲಾರಾಶಿಯಲ್ಲಿ ಸೂರ್ಯ ಶನಿ ಮಂಗಳರಿರುವುದು. ಈ ಯೋಗ ತುಲಾಮಾಸದಲ್ಲಿ (ಅಕ್ಟೋಬರ್ ನವಂಬರ್ ತಿಂಗಳಿನಲ್ಲಿ) ಶನಿ ಕುಜರು ತುಲಾರಾಶಿಯಲ್ಲಿದ್ದಾಗ ಸಂಭವಿಸುತ್ತದೆ.

೧೪. ಎಂಟನೇ ಸ್ಥಾನದಲ್ಲಿ ಲಗ್ನಾಧಿಪತಿ ಇದ್ದು ಎಲ್ಲ ಪಾಪಗ್ರಹಗಳೂ ಬಲಿಷ್ಠರಾಗಿ ಅವನನ್ನು ನೋಡಿದರೆ ಆ ಲಗ್ನದಲ್ಲಿ ಹುಟ್ಟಿದವನು ನಾಲ್ಕು ತಿಂಗಳೊಳಗೆ ಸಾಯುತ್ತಾನೆ.

---

[1] ಶತ್ರುಗ್ರಹಮೆನಿಪ ಮಿತ್ರ (ಕ ಗ) [2] ಗೆ (ಕ ಗ) [3] ವಂ (ಕ) ದಂ (ಗ).

(ಹುಟ್ಟಿದ ಆರು ಅಥವಾ ಎಂಟು ತಿಂಗಳೊಳಗೆ ಮರಣಯೋಗ)

ಕ್ರೂರಗ್ರಹದೊಡನಿರೆ [1]ವನ[1]
ಜಾರಿ ವಿಲಗ್ನಾಂ[2]ತ್ಯಗೃಹದೊಳಲ್ಲಿರದಂದ[2]
ಕ್ರೂರರಬುದಿಂಗಳಿಂದಂ
ದಾರಕಲಯಮಲ್ಲದಂದು ಮಾಸಾಷ್ಟಕದೊಳ್ ೧೫

(ಹುಟ್ಟಿದ ಹದಿನಾರು ದಿನ, ತಿಂಗಳು, ವರ್ಷದೊಳಗೆ ಮರಣಯೋಗ)

ಶನಿ ಲಗ್ನಸ್ಥಿತನಾಗೆ ವೀಕ್ಷಿಸೆ ಶುಭಾನ್ಯರ್ ಷೋಡಶಾಹಕ್ಕೆ ಮೇಣ್
ಶನಿ ಪಾಪಗ್ರಹಯುಕ್ತನಾಗೆ ಶುಭಹೀನರ್ ನೋಡೆ ಮಾಸಕ್ಕೆ ಮೇಣ್
ಶನಿಯಂ ನೋಡೆ ಶುಭೇತರ ಗ್ರಹಗಣಂ ವರ್ಷಕ್ಕೆ ತಲ್ಲಗ್ನಜಾ
ತನರಂ ಸಂದೆಯಮೇನೊ ಪೊಂದುಗುಮದಕ್ಕೇಂ [3]ಪಂಚ[3]ದೇಂಮಂತಣಂ ೧೬

ಅಹಿತಾಲಯಮೆನಿಪಷ್ಟಮ
ಗೃಹದೊಳ್ ಸೌಮ್ಯೇತರಗ್ರಹಂ ನಿಲೆ ಪಾಪ
ಗ್ರಹಮದನಾಳೋಕಿಪ್ಪೊಡೇ
ಕಹಾಯ[4]ನದಿನತ್ತಲ[4]ರ್ಭಕಂ ನಿರ್ವಹಿಸಂ ೧೭

---

೧೫. ಕ್ರೂರಗ್ರಹದ ಕೂಡ ಚಂದ್ರ ಲಗ್ನದಿಂದ ಹನ್ನೆರಡನೆಯ ಸ್ಥಾನದಲ್ಲಿದ್ದು ಶುಭಗ್ರಹ ಸಂಬಂಧವಿಲ್ಲದಿದ್ದರೆ ಆರು ಅಥವಾ ಎಂಟುತಿಂಗಳೊಳಗೆ ಮಗು ಸಾಯುತ್ತದೆ.

೧೬. ಶನಿ ಲಗ್ನದಲ್ಲಿದ್ದು ಅಶುಭಗ್ರಹಗಳು ನೋಡಿದರೆ ಹುಟ್ಟಿದ ಹದಿನಾರುದಿನಗಳೊಳಗೆ ಅಥವಾ ಶನಿಯೊಡನೆ ಪಾಪಗ್ರಹವಿದ್ದು ಅಶುಭಗ್ರಹಗಳು ನೋಡಿದರೆ ಒಂದುತಿಂಗಳಿಗೆ ಅಥವಾ ಶನಿಯನ್ನು ಪಾಪಗ್ರಹಗಳು ನೋಡಿದರೆ ಒಂದುವರ್ಷದೊಳಗೆ ಆ ಲಗ್ನದಲ್ಲಿ ಹುಟ್ಟಿದ ಮಗು ಸಾಯುವುದರಲ್ಲಿ ಸಂದೇಹವಿಲ್ಲ. ಅದಕ್ಕೆ ಯಾವ ಮಂತ್ರಾಲೋಚನೆಯೂ ಫಲಕಾರಿಯಲ್ಲ.

ವಿ—ಶನಿ ಆಯುಷ್ಕಾರಕ. ಜನನಕಾಲದಲ್ಲಿ ಆತನಿಗೆ ಪಾಪಗ್ರಹ ಸಂಬಂಧವಿದ್ದರೆ ಮೃತ್ಯುವುಂಟಾಗುತ್ತದೆ. ಶುಭಗ್ರಹದೃಷ್ಟಿಯಿಂದ ಇದಕ್ಕೆ ಪರಿಹಾರವುಂಟು.

೧೭. ಶತ್ರುಕ್ಷೇತ್ರವಾದ ಎಂಟನೇ ಸ್ಥಾನದಲ್ಲಿ ಅಶುಭಗ್ರಹವಿದ್ದು ಪಾಪಗ್ರಹ ಅದನ್ನು ನೋಡಲು ಹುಟ್ಟಿದ ಮಗು ಒಂದು ವರ್ಷದಮೇಲೆ ಜೀವಿಸುವುದಿಲ್ಲ.

---

[1] ದನು (ಗ) [2] ತ್ಯಗೃಹದೊಳಲ್ಲಿರದಂತಾ (ಕ ಗ) [3] ಪಕ್ಷ (ಕ) [4] ನದಿಂದಲ (ಕ) ನದಿಂದತ್ತಲ (ಗ).

(ಹುಟ್ಟಿದ ಎರಡುವರ್ಷಗಳೊಳಗೆ ಮರಣಯೋಗ)

ವಕ್ರಸ್ಥನಾಗಿ ಶನಿ ನಿಲೆ
ವಕ್ರಾಲಯಮೆನಿಪ ಕೇಂದ್ರ ಷಷ್ಠಾಷ್ಟ[1]ಮ[1]ದೊಳ್
ವಕ್ರಂ ಬಲಯುತನೀಕ್ಷಿಸೆ
ವಕ್ರಿಪರಾರವನ ಸಾವನಾಬ್ದದ್ವಯದೊಳ್ ೧೮

ಸೂರಯುತಮಿಂದು ಕೇಂದ್ರಾ
ಗಾರದೊಳಿರೆ ನೋಡೆ ಭಾಸ್ಕರಾಪತ್ಯನುಮಂ
ಗಾರಕನುಂ ಮೇಣ್ ಕೂಡಿರೆ
ದಾರಕನಬ್ದದ್ವಯಕ್ಕೆ ಲಯಮಾಗದಿರಂ ೧೯

(ಹುಟ್ಟಿದ ಮೂರು ವರ್ಷಗಳೊಳಗೆ ಮರಣಯೋಗ)

ಧರಣಿ[ಜ] ಗೃಹ[2]ಮೆನಿ[2]ಪೆಂಟನೆ
ಯ ರಾಶಿಯೊಳ್ ನಿಂದ ಗುರುವನೀಕ್ಷಿಸೆ ಶನಿ ಭಾ
ಸ್ಕರ [3]ಸೋಮ ಭೌಮ[3]ರೀಕ್ಷಿಸ
ದಿರೆ ಭೃಗುಜಂ ಮೂಱುವರ್ಷದೊಳ್ ಮಡಿಗುಮವಂ ೨೦

---

೧೮. ವಕ್ರಗತಿಯಿಂದ ಕೂಡಿದ ಶನಿ ಅಂಗಾರಕನ ರಾಶಿಯಾದ ಮೇಷ ಅಥವಾ ವೃಶ್ಚಿಕದಲ್ಲಿ ಕೇಂದ್ರ (ಲಗ್ನ ನಾಲ್ಕು ಏಳು ಹತ್ತು) ಅಥವಾ ಆರು ಅಥವಾ ಎಂಟನೇ ಸ್ಥಾನದಲ್ಲಿದ್ದು ಬಲಿಷ್ಠನಾದ ಅಂಗಾರಕ ನೋಡಿದರೆ ಹುಟ್ಟಿದ ಮಗುವಿನ ಸಾವನ್ನು ಎರಡುವರ್ಷಗಳೊಳಗೆ ಯಾರು ತಾನೆ ಹಿಂದಕ್ಕೆ ತಳ್ಳಿ ಅವನನ್ನು ಜೀವಂತನನ್ನಾಗಿ ಮಾಡಬಲ್ಲರು ?

ವಿ–ವಕ್ರಗತಿಯ ವಿವರ ೮೨ನೇ ಪದ್ಯದ ವಿಶೇಷವಿಷಯದಲ್ಲಿ ಕೊಟ್ಟಿದೆ. ವಕ್ರಾಲಯ–ಅಂಗಾರಕನ ರಾಶಿ (ಮೇಷ ವೃಶ್ಚಿಕ ರಾಶಿಗಳು).

೧೯. ಸೂರ್ಯನೊಡನಿರುವ ಚಂದ್ರ ಕೇಂದ್ರ (ಲಗ್ನ ನಾಲ್ಕು ಏಳು ಹತ್ತನೇ) ಸ್ಥಾನದಲ್ಲಿದ್ದಾಗ ಆತನನ್ನು ಶನಿಮಂಗಳರು ನೋಡಿದರೆ ಅಥವಾ ಆತನೊಡನಿದ್ದರೆ ಹುಟ್ಟಿದ ಮಗು ಎರಡುವರ್ಷಗಳೊಳಗೆ ಸಾಯದೇ ಇರುವುದಿಲ್ಲ.

ವಿ–ಈ ಯೋಗವು ಅಮಾವಾಸ್ಯೆ ತಿಥಿಯಲ್ಲಿ ಹುಟ್ಟಿದಾಗ ಸಂಭವಿಸುತ್ತದೆ. ಇದರಲ್ಲಿ ಹುಟ್ಟಿದ ಮಗು ನಾಲ್ಕುವರ್ಷಗಳೊಳಗೆ ಸಾಯುತ್ತದೆಂದು ಸಾರಾವಳೀ ಗ್ರಂಥದಲ್ಲಿದೆ.

೨೦. ಅಂಗಾರಕನ ರಾಶಿ ಎಂಟನೆಯದಾಗಿ ಅಲ್ಲಿರುವ ಗುರುವನ್ನು ಶನಿ ಸೂರ್ಯ ಚಂದ್ರಮಂಗಳರು ನೋಡಿ ಶುಕ್ರ ನೋಡದಿದ್ದರೆ ಹುಟ್ಟಿದ ಮಗು ಮೂರುವರ್ಷಗಳೊಳಗೆ ಸಾಯುತ್ತದೆ.

---

[1] ಕ (ಗ) [2] ಮೆಂದೆನಿ (ಗ) [3] ಸೌಮ್ಯ ಭೌಮ (ಕ) ಮ (ಗ).

ಹೋರೇಶಂಗೆಂಟನೆಯೊಳ್[6]
ತಾರೇಶಂ ಕ್ಷೀಣನಿರೆ ನಿರೀಕ್ಷಿಸೆ ಸಕಲ
ಕ್ರೂರ[1]ಗಣಂ[1] ಕಾಣದೊ[2]ಡ[2]
ಕ್ರೂರಗ್ರಹಮಾತನಟಿಗುಮಬ್ದ[3]ತ್ರಯ[3]ದೊಳ್[6] ೨೧

(ಹುಟ್ಟಿದ ನಾಲ್ಕುವರ್ಷಗಳೊಳಗೆ ಮರಣಯೋಗ)

ಬುಧನೊಂದಿದೊಡಷ್ಟಮ ಷ
ಷ್ಠಧಾಮಮೆನಿಸಿದ ಕುಳೀರದೊಳ್[6] ಕಾಣ್ಗೊಡದಂ
ವಿಧು ನಾಲ್ಕುವರ್ಷದಿಂದಂ
ನಿಧನಂ ಬಾಲಂಗೆ ಕಾಲನಿಂ ಸಮನಿಸುಗುಂ ೨೨

(ಹುಟ್ಟಿದ ಐದುವರ್ಷಗಳೊಳಗೆ ಮರಣಯೋಗ)

ಉದಯದೊಳಿರೆ ಫಣಿಪತಿ [4]ಚ
ಕ್ರದದರ್ಶನ[4]ಭಾಗದೊಳಶುಭಪ್ರಕ[5]ರಂ[5] ದೃ
ಶ್ಯದೊಳಿ[6]ರೆ[6] ಶುಭಗ್ರಹಂ ಪು
ಟ್ಟಿದವಂ ಪಂಚತ್ವನಾಗೆ ಪಂಚಮ ಸಮದೊಳ್[6] ೨೩

---

ವಿ—ಈ ಯೋಗವು ಮೇಷ ಅಥವಾ ಕನ್ಯಾಲಗ್ನದಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ. ಮೇಷಲಗ್ನದಲ್ಲಿ ಜನನವಾಗಿ ಗುರು ವೃಶ್ಚಿಕರಾಶಿಯಲ್ಲಿದ್ದು ಆತನನ್ನು ಶನಿ ಸೂರ್ಯ ಚಂದ್ರ ಮಂಗಳರು ನೋಡುವುದು. ಕನ್ಯಾಲಗ್ನದಲ್ಲಿ ಜನನವಾಗಿ ಗುರು ಮೇಷರಾಶಿಯಲ್ಲಿದ್ದು ಆತನನ್ನು ಶನಿ ಸೂರ್ಯ ಚಂದ್ರ ಮಂಗಳರು ನೋಡುವುದು. ಈ ಯೋಗಗಳು ಹನ್ನೆರಡು ವರ್ಷಕ್ಕೆ ಒಂದು ಬಾರಿ ಸಂಭವಿಸುತ್ತವೆ.

೨೧. ಲಗ್ನಾಧಿಪತಿಗೆ ಎಂಟನೇ ಸ್ಥಾನದಲ್ಲಿ ಕ್ಷೀಣಚಂದ್ರನಿದ್ದು ಎಲ್ಲ ಕ್ರೂರಗ್ರಹಗಳು ಆತನನ್ನು ನೋಡಿ ಶುಭಗ್ರಹ ನೋಡದಿದ್ದರೆ ಹುಟ್ಟಿದವನು ಮೂರುವರ್ಷಗಳೊಳಗೆ ಸಾಯುತ್ತಾನೆ.

೨೨. ಬುಧ ಎಂಟು ಅಥವಾ ಆರನೇ ಸ್ಥಾನವಾದ ಕರ್ಕಟಕರಾಶಿಯಲ್ಲಿದ್ದು ಅದನ್ನು ಚಂದ್ರ ನೋಡಲು ನಾಲ್ಕುವರ್ಷದೊಳಗೆ ಮಗುವಿಗೆ ಯಮನಿಂದ ಸಾವು ಉಂಟಾಗುತ್ತದೆ.

ವಿ—ಧನುಸ್ಸು ಅಥವಾ ಕುಂಭಲಗ್ನದಲ್ಲಿ ಜನನವಾಗಿ ಬುಧ ಕರ್ಕಟಕ ರಾಶಿಯಲ್ಲಿದ್ದು ಚಂದ್ರ ಮಕರದಲ್ಲಿದ್ದರೆ ಹುಟ್ಟಿದ ಮಗು ನಾಲ್ಕುವರ್ಷಗಳಲ್ಲಿ ಸಾಯುತ್ತದೆ.

೨೩. ಲಗ್ನದಲ್ಲಿ ರಾಹುವಿದ್ದು ಚಕ್ರದ ಅದೃಶ್ಯಭಾಗದಲ್ಲಿ ಅಶುಭಗ್ರಹಗಳೂ ದೃಶ್ಯಭಾಗದಲ್ಲಿ ಶುಭಗ್ರಹಗಳೂ ಇರುವಾಗ ಹುಟ್ಟಿದವನು ಐದನೆಯ ವರ್ಷದಲ್ಲಿ ಸಾಯುತ್ತಾನೆ.

---

[1] ಗ್ರಹಂ (ಕ) [2] ವಾ (ಕ) [3] ಕ್ರಮ (ಗ) [4] ವಕ್ರದದಶನ ವಿ (ಕ) ವಕ್ರಾದದಶನ (ಗ)
[5] ರಮ (ಕ ಗ) [6] ರೆ (ಕ ಗ).

ರವಿ ಶಶಿ ಕುಜ ಗುರುಗಳ್ ಮೇ
ಣವನಿಜ [1]ಶನಿ[1] ಸೂರ್ಯ ಚಂದ್ರಜರ್ ಮೇಣ್ ಶಶಿ ಭಾ
ರ್ಗವ ರವಿ ಕುಜರೇಕಾಲಯ
ನಿವಾಸಿಗಳೆನಿಪ್ಪೊಡಯ್ದು ವರ್ಷಂ ಬಾಳ್ಗುಂ ೨೪

(ಹುಟ್ಟಿದ ಆರು ವರ್ಷಗಳೊಳಗೆ ಮರಣಯೋಗ)

ಭೃಗುಜನಿರೆ ಕರ್ಕಿಯೊಳ್ ಮೇಣ್
ಮೃಗಪತಿಯೊಳ್ ದ್ವಾದಶಾರಿ ನಿಧನ ಸ್ಥಿತ ಸೌ
ಮ್ಯಗಣಂ ವೀಕ್ಷಿಸುವೊಡೆ ಪೊಂ
ದುಗುಮಾ ಲಗ್ನೋದ್ಭವಂ ಷಡಬ್ದಾಂತರದೊಳ್ ೨೫

---

ವಿ–ಚಕ್ರದೃಶ್ಯಾರ್ಧ–ಲಗ್ನದಿಂದ ಹಿಂದಿನ ಆರು ರಾಶಿಗಳು ಅಂದರೆ ಜನನಕಾಲದಲ್ಲಿ ಪೂರ್ವ ಪಶ್ಚಿಮ ಕ್ಷಿತಿಜಗಳ ಮಧ್ಯೆ ನಮಗೆ ಕಾಣುವ ಗೋಳ ವಿಭಾಗದಲ್ಲಿರುವ ರಾಶಿಗಳು. ಅದೃಶ್ಯಾರ್ಧ–ನಮಗೆ ಆ ಕಾಲದಲ್ಲಿ ಕಾಣದಿರುವ ಉಳಿದ ರಾಶಿಗಳು.

ದೃಶ್ಯರಾಶಿಗಳಲ್ಲಿರುವ ಗ್ರಹಗಳು ನಮಗೆ ಕಾಣುತ್ತವೆ. ಅದೃಶ್ಯರಾಶಿಗಳಲ್ಲಿರುವ ಗ್ರಹಗಳು ನಮಗೆ ಕಾಣುವುದಿಲ್ಲ.

ಉದಾ–ಲಗ್ನಸ್ಫುಟ ರಾಶ್ಯಾದಿ ೧–೪–೨೫ ಆದರೆ ೧–೪–೨೫ರಿಂದ ೭–೪–೨೫ರ ವರೆಗೆ ಅದೃಶ್ಯಭಾಗ. ೭–೪–೨೫ರಿಂದ ೧–೪–೨೫ರ ವರೆಗೆ ದೃಶ್ಯಭಾಗ.

೨೪. ಸೂರ್ಯ ಚಂದ್ರ ಕುಜ ಗುರುಗಳು ಅಥವಾ ಕುಜ, ಶನಿ ಸೂರ್ಯ ಬುಧರು ಅಥವಾ ಚಂದ್ರ ಶುಕ್ರ ಸೂರ್ಯ ಕುಜರು ಒಂದೇ ರಾಶಿಯಲ್ಲಿದ್ದಾಗ ಹುಟ್ಟಿದ ಮಗು ಐದುವರ್ಷ ಜೀವಿಸುತ್ತದೆ.

ವಿ–ಸೂರ್ಯಚಂದ್ರರ ಯೋಗ ಅಮಾವಾಸ್ಯೆಯಲ್ಲಿ ಆಗುವುದರಿಂದ ೧, ೩ನೇ ಯೋಗಗಳು ಅಮಾವಾಸ್ಯೆ ಸಮೀಪದಲ್ಲಿ ಹುಟ್ಟಿದಾಗ ಸಂಭವಿಸುತ್ತವೆ.

೨೫. ಶುಕ್ರನು ಕರ್ಕಾಟಕ ಅಥವಾ ಸಿಂಹರಾಶಿಯಲ್ಲಿರುವಾಗ ಹನ್ನೆರಡು ಆರು ಮತ್ತು ಎಂಟನೇ ಸ್ಥಾನದಲ್ಲಿರುವ ಶುಭಗ್ರಹಗಳು ಅವನನ್ನು ನೋಡಿದರೆ ಆ ಲಗ್ನದಲ್ಲಿ ಹುಟ್ಟಿದವನು ಆರುವರ್ಷಗಳೊಳಗೆ ಸಾಯುತ್ತಾನೆ.

ವಿ–ಶುಕ್ರನಿಗೆ ಸೂರ್ಯ ಚಂದ್ರರು ಶತ್ರುಗಳು. ಆದುದರಿಂದ ಕರ್ಕಾಟಕ ಸಿಂಹ ರಾಶಿಗಳು ಶತ್ರುಕ್ಷೇತ್ರಗಳಾಗುತ್ತವೆ. ಜನನಕಾಲದಲ್ಲಿ ಶತ್ರುಕ್ಷೇತ್ರದಲ್ಲಿರುವ ಶುಕ್ರನನ್ನು ಷಷ್ಠಾಷ್ಟಮ ವ್ಯಯ ರಾಶಿಗಳಲ್ಲಿರುವ ಪಾಪಗ್ರಹಗಳು ನೋಡಿದರೆ ಹುಟ್ಟಿದ ಮಗು ಆರುವರ್ಷಗಳೊಳಗೆ ಸಾಯುತ್ತದೆ.

---

[1] ನಶಿ (ಗ).

(ಹುಟ್ಟಿದ ಏಳುವರ್ಷಗಳೊಳಗೆ ಮರಣಯೋಗ)

ದಿನಕೃತ್ಸುತ ಧರಣೀಸುತ
ದಿನೇಶ[1]ರಾ[1]ಜನೆಯಲಿರೆ ಶಶಾಂಕಂ ಕ್ಷೀಣಂ
[2]ದ್ಯು[2]ನದೊಳಿರೆ ಕಾಣದಿರೆ ಭೃಗು
ಜನಿರನವಂ ಬಾಲನೇಳುವರ್ಷದಿನತ್ತಂ ೨೬

ಮೃಗರಾಜ ಮೇಷ ಕುಂಭಾ
[3]ಳಿ[3]ಗಳೆಂಬ ವಿಲಗ್ನದೊಳ್ ಫಣೀಂದ್ರಂ ನಿಲೆ ಪಾ
ಪಗಣಮು[4]ದೀ[4]ಕ್ಷಿಸುವೊಡೆ ಪೊ
ರ್ದುಗುಮಾ ನರನೇಳುವರ್ಷದಿಂ ಯಮಪುರಮಂ ೨೭

ಉದಯದ್ರೇಕ್ಕಾಣಂ ನಿಗ
ಳದ ಪಾಶದ ಫಣಿಯ ಖಗದ ಪೆಸರಿಂ ಬರೆ ಕೂ
ಡಿದರಶುಭರ್ ತದ್ದ್ರೇಕ್ಕಾ
ಣದ ಪತಿ ಕಾಣದೊಡೆ ಸಪ್ತಮಾಬ್ದದಿನಟಿಗುಂ ೨೮

---

೨೬. ಶನಿ ಕುಜ ಸೂರ್ಯರು ಆರನೆಯ ಸ್ಥಾನದಲ್ಲೂ ಚಂದ್ರನು ಕ್ಷೀಣನಾಗಿ ಏಳನೆಯ ಸ್ಥಾನದಲ್ಲೂ ಇದ್ದು ಶುಕ್ರನು ನೋಡದಿದ್ದರೆ ಏಳುವರ್ಷಗಳ ಮೇಲೆ ಹುಡುಗನು ಬದುಕಿರುವುದಿಲ್ಲ.

ವಿ–ಸೂರ್ಯ ಶನಿ ಮಂಗಳರು ಲಗ್ನದಲ್ಲೂ ಕ್ಷೀಣಚಂದ್ರನು ಸಪ್ತಮಸ್ಥಾನದಲ್ಲಿ ವೃಷಭ ಅಥವಾ ತುಲಾ ರಾಶಿಯಲ್ಲೂ ಇದ್ದು ಗುರು ಚಂದ್ರನನ್ನು ನೋಡದಿದ್ದರೆ ಹುಟ್ಟಿದ ಮಗು ಏಳುವರ್ಷಗಳೊಳಗೆ ಸಾಯುತ್ತದೆ; ಎಂದು ಸಾರಾವಳೀ ಮುದ್ರಿತ ಪುಸ್ತಕದಲ್ಲಿದೆ. ಲಗ್ನದಲ್ಲಿ ರವಿ ಇರುವಾಗ ಸಪ್ತಮದಲ್ಲಿ ಕ್ಷೀಣಚಂದ್ರನಿರುವುದು ಅಸಂಭವ. ಆದಕಾರಣ ಶ್ರೀಧರನು ಹೇಳಿರುವಂತೆ ಷಷ್ಠದಲ್ಲಿ ರವಿ ಇರುವಾಗ ಈ ಯೋಗ ಸಂಭವಿಸುತ್ತದೆ. ಸಾರಾವಳಿಯಲ್ಲಿ 'ಲಗ್ನೇ ರವಿ ಮಂದ ಕುಜೈಃ' ಎಂದಿರುವುದನ್ನು 'ಷಷ್ಠೇ ರವಿ ಮಂದ ಕುಜೈಃ' ಎಂದು ಸರಿಪಡಿಸಿಕೊಳ್ಳಬೇಕಾಗುತ್ತದೆ.

೨೭. ಸಿಂಹ ಮೇಷ ಕುಂಭ ವೃಶ್ಚಿಕರಾಶಿಗಳಲ್ಲೊಂದು ಲಗ್ನವಾಗಿದ್ದು ಆ ಲಗ್ನದಲ್ಲಿರುವ ರಾಹುವನ್ನು ಪಾಪಗ್ರಹಗಳು ನೋಡಿದರೆ ಏಳುವರ್ಷಗಳೊಳಗೆ ಆ ಮಗು ಯಮಪಟ್ಟಣವನ್ನು ಸೇರುತ್ತದೆ.

೨೮. ಜನನಲಗ್ನದಲ್ಲಿ ಉದಿಸಿರುವ ದ್ರೇಕ್ಕಾಣ ನಿಗಳ ಪಾಶ ಸರ್ಪ ಪಕ್ಷಿಯ ಹೆಸರಿನದಾಗಿ ಈ ದ್ರೇಕ್ಕಾಣಗಳಲ್ಲಿ ಅಶುಭಗ್ರಹಗಳಿದ್ದು ಆಯಾ ದ್ರೇಕ್ಕಾಣಾಧಿಪತಿ ನೋಡದಿದ್ದರೆ ಏಳುವರ್ಷಗಳಲ್ಲಿ ಮಗು ಸಾಯುತ್ತದೆ.

ವಿ–ನಿಗಳ–ಮಕರರಾಶಿಯ ಮೊದಲನೆಯ ದ್ರೇಕ್ಕಾಣ. ಪಾಶ–ವೃಶ್ಚಿಕ ರಾಶಿಯ ಎರಡನೆಯ ದ್ರೇಕ್ಕಾಣ. ಸರ್ಪ–ವೃಶ್ಚಿಕರಾಶಿಯ ಮೊದಲನೆಯ

---

[1] ನಾ (ಕ ಗ) [2] ದ್ಯೂ (ಕ) [3] ಧಿ (ಗ) [4] ಎೀ (ಕ ಗ).

(ಹುಟ್ಟಿದ ಒಂಬತ್ತು ವರ್ಷಗಳೊಳಗೆ ಮಾರಣಯೋಗ)

ದಿವಸಕರ ಚಂದ್ರಯುತ ಭಾ
ರ್ಗವನಂ ಜನ್ಮಾವಸರದೊಳೀಕ್ಷಿಸುವೊಡೆ ದೇ
ವವಿನೂತಂ ಪುಟ್ಟಿದ ಮಾ
ನವನಿರದೆ ನವಾಬ್ದದಿಂ ಪುನರ್ಭವನಕ್ಕುಂ ೨೯

ಶಶಿ[1]ಯಿಂ[1] ದ್ವಾದಶದೆಡೆಯೊಳ್
[2]ಶಿಶಿರ[2]ಪ್ರದ್ಯೋತ[3]ನಂಶದೊಳ್[3] ನಿರೆ ಲಗ್ನೇ
ಶ ಶುಭಗ್ರಹವೀಕ್ಷಿಸುವೊಡ
ಮಶುಭಗ್ರಹಮಾ ನರಂ ನವಾಬ್ದದಿನಳಿಗುಂ ೩೦

ಆರಾರ್ಕರೊಡನೆ ಕೂಡಿ ಸು
ಧಾರುಚಿ ಪಂಚಮದೊಳಕ್ಕೆ ವಿತ್ತದೊಳಿರಲ
ಕ್ರೂರರಭೀಕ್ಷಿ[4]ಸ[4]ದಂದು ಕು
ಮಾರಕನೊಂಬತ್ತು ವರ್ಷದಿಂದಂ ಸಾಯ್ಗುಂ ೩೧

---

ದ್ರೇಕ್ಕಾಣ, ಕರ್ಕಟಕ ಮತ್ತು ಮೀನರಾಶಿಗಳ ಕೊನೆಯ ದ್ರೇಕ್ಕಾಣ. ಪಕ್ಷಿ–ತುಲಾ ಮತ್ತು ಕುಂಭರಾಶಿಗಳ ಮೊದಲನೆಯ ದ್ರೇಕ್ಕಾಣ, ಮಿಥುನ ಮತ್ತು ಸಿಂಹರಾಶಿಗಳ ಎರಡನೆಯ ದ್ರೇಕ್ಕಾಣ.

ಫಲದೀಪಿಕಾ ಗ್ರಂಥದಲ್ಲಿ ವೃಷಭರಾಶಿಯ ಕೊನೆಯ ದ್ರೇಕ್ಕಾಣವೂ ಪಕ್ಷಿದ್ರೇಕ್ಕಾಣವೆಂದಿದೆ. ದ್ರೇಕ್ಕಾಣ ವಿಚಾರವು ೧೯ನೇ ಪ್ರಕರಣದಲ್ಲಿದೆ.

೨೯. ಸೂರ್ಯಚಂದ್ರರೊಡನಿರುವ ಶುಕ್ರನನ್ನು ಜನನಕಾಲದಲ್ಲಿ ಗುರು ನೋಡಿದರೆ ಹುಟ್ಟಿದ ಮಾನವನು ಒಂಬತ್ತು ವರ್ಷಗಳಲ್ಲಿ ಮತ್ತೆ ಹುಟ್ಟುವವನಾಗುತ್ತಾನೆ (ಸಾಯುತ್ತಾನೆ).

ವಿ–ಅಮಾವಾಸ್ಯೆಯ ದಿವಸ ಹುಟ್ಟಿದವನಿಗೆ ಈ ಯೋಗವು ಸಂಭವಿಸುತ್ತದೆ. ಸೂರ್ಯ ಚಂದ್ರ ಶುಕ್ರರು ಒಂದೇ ರಾಶಿಯಲ್ಲಿದ್ದು ಗುರು ನೋಡಿದರೆ ಒಂಬತ್ತು ವರ್ಷಗಳಲ್ಲಿ ಮಗು ಸಾಯುತ್ತದೆ.

೩೦. ಚಂದ್ರನಿಗೆ ಹನ್ನೆರಡನೆಯ ಸ್ಥಾನದಲ್ಲಿ ಆತನ ನವಾಂಶ (ಕರ್ಕಟಕ) ದಲ್ಲಿ ಶುಭನಾದ ಲಗ್ನಾಧಿಪತಿ ಇದ್ದು ಅಶುಭಗ್ರಹ ನೋಡಿದರೆ ಮಗು ಒಂಬತ್ತು ವರ್ಷಗಳಲ್ಲಿ ಸಾಯುತ್ತದೆ.

ವಿ–'ಲಗ್ನಾಧಿಪತಿಃ ಪಾಪಃ' ಎಂದು ಸಾರಾವಳಿಯಲ್ಲಿದೆ. ಇದರಂತೆ ಲಗ್ನಾಧಿಪತಿ ಪಾಪಗ್ರಹವಾಗಿರಬೇಕು.

೩೧. ಕುಜ ಸೂರ್ಯರೊಡನೆ ಚಂದ್ರನು ಕೂಡಿ ಐದನೆಯ ಸ್ಥಾನದಲ್ಲಾಗಲೀ ಎರಡನೆಯ ಸ್ಥಾನದಲ್ಲಾಗಲೀ ಇದ್ದು ಶುಭಗ್ರಹಗಳು ನೋಡದಿದ್ದರೆ ಕುವರನು ಒಂಬತ್ತು ವರ್ಷಗಳಲ್ಲಿ ಸಾಯುತ್ತಾನೆ.

---

[1] ಯುಂ (ಕ ಗ) [2] ಶಶಿರಂ (ಕ) ಶಶಿ (ಗ) [3] ನಂದನಂ (ಕ ಗ) [4] ಸಿ (ಗ).

(ಹತ್ತು ಅಥವಾ ಹದಿನಾರುವರ್ಷಗಳೊಳಗೆ ಅರಿಷ್ಟಯೋಗ)
ಉರಗೇಂದ್ರಂ ಕೇಂದ್ರದೊಳಿರೆ
ನಿರೀಕ್ಷಿಸೆ ಶುಭೇತರರ್[1] ನರಂ ದಶ ಸಂವ
ತ್ಸರದಿಂ ಮೇಣ್ ಷೋಡಶ ವ
ತ್ಸರದಿಂದಂ ಸಾಯ್ಗುಮೆಂಬರರೆಬರ ಮತದೊಳ್[2] ೩೨

(ಹನ್ನೊಂದು ವರ್ಷಗಳೊಳಗೆ ಅರಿಷ್ಟಯೋಗ)
ಇಂದುಸುತಂ ಕೂಡಿರೆ ಸೂ
ರ್ಯೇಂದುಗಳೊಳ್ ನೋಡೆ ಸೌಮ್ಯರುದಯದೊಳಿರೆ ಸಂ
ಕ್ರಂದನಗುರುವಂತ್ಯದೆ ಹ
ನ್ನೊಂದಬ್ಧದಿನತ್ತಲಗ್ಗಳಂ ಬಾಟನವಂ ೩೩

(ಹನ್ನೆರಡುವರ್ಷಗಳೊಳಗೆ ಅರಿಷ್ಟಯೋಗ)
ರಾಹು ನೆಲಸಿದೊಡೆ ಸಪ್ತಮ
ಗೇಹದೊಳೀಕ್ಷಿಪೊಡೆ ಸೂರ್ಯಶಶಿಗಳ್ ಶುಭಸಂ
ದೋಹಂ[3] ಕಾಣದೊಡನಲಂ
ಗಾಹುತಿ ಪನ್ನೆರಡುವರ್ಷದಿಂದವನಕ್ಕುಂ ೩೪

---

೩೨. ರಾಹುವು ಲಗ್ನ ನಾಲ್ಕು ಏಳು ಮತ್ತು ಹತ್ತು ಈ ನಾಲ್ಕು ಕೇಂದ್ರಸ್ಥಾನಗಳಲ್ಲೊಂದರಲ್ಲಿದ್ದು ಅಶುಭಗ್ರಹಗಳು ನೋಡಿದರೆ ಹತ್ತುವರ್ಷಗಳೊಳಗೆ ಮಗುವು ಸಾಯುತ್ತದೆ. ಈ ಯೋಗದಲ್ಲಿ ಹುಟ್ಟಿದ ಮಗು ಹದಿನಾರುವರ್ಷಗಳೊಳಗೆ ಸಾಯುವುದೆಂದು ಕೆಲವು ಜ್ಯೌತಿಷಾಚಾರ್ಯರ ಅಭಿಪ್ರಾಯ.

೩೩. ಜನನಕಾಲದಲ್ಲಿ ಸೂರ್ಯಚಂದ್ರರೊಡನೆ ಇರುವ ಬುಧನನ್ನು ಶುಭಗ್ರಹಗಳು ಲಗ್ನದಲ್ಲಿದ್ದು ನೋಡುವುದಲ್ಲದೆ ಗುರುವು ಹನ್ನೆರಡನೆಯ ಸ್ಥಾನದಲ್ಲಿದ್ದರೆ ಹನ್ನೊಂದುವರ್ಷಕ್ಕಿಂತ ಹೆಚ್ಚು ಆ ಹುಡುಗ ಬಾಳಲಾರ (ಜೀವಿಸುವುದಿಲ್ಲ).

ವಿ–ಶುಭಗ್ರಹಗಳು ಲಗ್ನದಲ್ಲಿರಬೇಕೆನ್ನುವ ಅಂಶವೂ ಗುರುವು ಹನ್ನೆರಡನೆಯ ಸ್ಥಾನದಲ್ಲಿರಬೇಕೆನ್ನುವ ಅಂಶವೂ ಸಾರಾವಳಿಯಲ್ಲಿಲ್ಲ. ಇದಕ್ಕೆ ಪ್ರತಿಯಾಗಿ 'ದೇವಾಂಕೇಽಪಿ ಸ್ಥಿತಂ ಜಾತಂ' [ದೇವರ ತೊಡೆಯಮೇಲಿದ್ದರೂ] ಎನ್ನುವ ವಿಶೇಷಣವಿದೆ.

೩೪. ರಾಹು ಏಳನೇ ಸ್ಥಾನದಲ್ಲಿದ್ದು ಸೂರ್ಯಚಂದ್ರರು ನೋಡಿದರೆ ಶುಭಗ್ರಹಗಳು ನೋಡದಿದ್ದರೆ ಹುಟ್ಟಿದವನು ಹನ್ನೆರಡುವರ್ಷಗಳೊಳಗೆ ಬೆಂಕಿಗೆ ಆಹುತಿಯಾಗುತ್ತಾನೆ (ಸಾಯುತ್ತಾನೆ).

---

[1] ರನ್ನರಂ (ಕ) ರಂ (ಗ) [2] ದಿಂ (ಗ) [3] ಗ್ರಹಂ (ಗ).

(ಲಗ್ನರಾಶಿ ಸಂಖ್ಯಾವರ್ಷಗಳಲ್ಲಿ ಅರಿಷ್ಟಯೋಗ)

ಜನನಗೃಹನಾಥ ಲಗ್ನಾ
ಧಿನಾಥರಸ್ತಮಿಪ್ರೂಡಷ್ಟಮ ದ್ವಾದಶ ಷ
ಷ್ಠನಿವಾಸದೊಳಾ ಲಗ್ನ[1]ಜ
ನನಿತ[1]ಬ್ದದಿನತ್ತಲಗ್ಗಳಂ ಬರ್ದಪ[2]ನೇ[2] ೩೫

ಹರಿಜನ್ಮಮಾಗೆ ಮಂದಂ
ಬೆರಸಿನನಿರೆ ನಿಧನದೊಳ್ ನಿರೀಕ್ಷಿಸೆ ರಕ್ಷೋ
ಗುರು ಲಗ್ನದಿನಷ್ಟಮ ಮಂ
ದಿರಕ್ಕಜಾಳಿಯನೆ ತತ್ಪ್ರಮಾಣಕ್ಕೆ ಲಯಂ ೩೬

---

೩೫. ಜನ್ಮರಾಶ್ಯಧಿಪತಿ ಲಗ್ನಾಧಿಪತಿಗಳು ಅಸ್ತರಾಗಿದ್ದು ಎಂಟು ಹನ್ನೆರಡು ಆರನೇ ಸ್ಥಾನಗಳಲ್ಲಿರುವಾಗ ಉದಿಸಿರುವ ಲಗ್ನದಲ್ಲಿ ಹುಟ್ಟಿದವನು ಲಗ್ನರಾಶಿ ಸಂಖ್ಯೆಯಷ್ಟು ವರ್ಷಗಳಾದಮೇಲೆ ಸಾಯುವವನೇ.

ವಿ–ಜನನಕಾಲದಲ್ಲಿ ಚಂದ್ರನಿರುವ ರಾಶಿಯೇ ಜನ್ಮರಾಶಿ. ಸೂರ್ಯನೊಡನೆ ಗ್ರಹವಿದ್ದರೆ ಆಗ ಆ ಗ್ರಹವು ನಮ್ಮ ಕಣ್ಣಿಗೆ ಕಾಣದಿರುವುದರಿಂದ ಅಸ್ತವಾಗಿದೆ ಎಂದು ತಿಳಿಯಬೇಕು. ಸೂರ್ಯನಿಗೂ ಗ್ರಹಕ್ಕೂ ಎಷ್ಟು ಅಂತರವಿರುವಾಗ ಗ್ರಹವು ಅಸ್ತವಾಗುತ್ತದೆ ಎನ್ನುವ ವಿಷಯ ಸಿದ್ಧಾಂತ ಗ್ರಂಥಗಳಲ್ಲಿದೆ.

೩೬. ಸಿಂಹವು ಜನ್ಮರಾಶಿಯಾಗಿ ಶನಿಯೊಡನೆ ಸೂರ್ಯನು ಲಗ್ನದಿಂದ ಎಂಟನೆಯ ಸ್ಥಾನದಲ್ಲಿದ್ದು ಶುಕ್ರನು ನೋಡಿದರೆ, ಆ ಎಂಟನೆಯ ಸ್ಥಾನದ ರಾಶಿಗೆ ಮೇಷಾದಿ ಗಣನೆಯಿಂದ ಬರುವ ಸಂಖ್ಯೆಯಷ್ಟು ವರ್ಷಗಳಲ್ಲಿ ಮಗುವಿಗೆ ಸಾವು ಉಂಟಾಗುತ್ತದೆ.

ವಿ–ಮಖ ಪುಬ್ಬ ಮತ್ತು ಉತ್ತರಾ ೧ನೇ ಪಾದದಲ್ಲಿ ಹುಟ್ಟಿದವರಿಗೆ ಮಾತ್ರ ಈ ಯೋಗವು ಸಂಭವಿಸುತ್ತದೆ. ರಾಶಿಸಂಖ್ಯೆ ೧ರಿಂದ ೧೨ರ ವರೆಗೆ ಮಾತ್ರವಿರುವುದರಿಂದ ಈ ಯೋಗದಲ್ಲಿ ಹುಟ್ಟಿದವನು ೧೨ ವರ್ಷಗಳಮೇಲೆ ಜೀವಿಸಿರುವುದಿಲ್ಲ. ಶನಿಯು ಆಯುಷ್ಕಾರಕನಾದುದರಿಂದ ಅಷ್ಟಮಸ್ಥಾನದಲ್ಲಿ ಶುಭಫಲಪ್ರದನಲ್ಲ. ಸೂರ್ಯನು ಜನ್ಮರಾಶ್ಯಧಿಪತಿಯಾಗಿರುವುದಲ್ಲದೆ ಆರೋಗ್ಯಕಾರಕನಾದುದರಿಂದ ಅಷ್ಟಮಸ್ಥಾನದಲ್ಲಿ ಶುಭಫಲಪ್ರದನಲ್ಲ. ರವಿ ಶನಿಗಳು ಪರಸ್ಪರ ವೈರಿಗಳು ಮತ್ತು ಪಾಪಗ್ರಹಗಳಾದಕಾರಣ ಇವರಿಗೆ ಅಷ್ಟಮಸ್ಥಾನ ಸ್ಥಿತಿಯು ಅಶುಭಫಲಪ್ರದವು.

೩೭. ಜನನಕಾಲದಲ್ಲಿ ಲಗ್ನಾಧಿಪತಿ ಆರನೇ ಸ್ಥಾನದಲ್ಲಿದ್ದರೆ ಮೇಷಾದಿ (ರಾಶಿಗಣನೆಯಿಂದ ಬರುವ ಷಷ್ಠ) ರಾಶಿಸಂಖ್ಯಾ ಪ್ರಮಾಣದಷ್ಟು ವರ್ಷಗಳಲ್ಲಿ ಸಾಯುತ್ತಾನೆ. ಲಗ್ನದಲ್ಲಿ ಉದಿಸಿರುವ ದ್ರೇಕ್ಕಾಣಾಧಿಪತಿಯು ಆರನೇ ಸ್ಥಾನದಲ್ಲಿದ್ದರೆ ಆ ರಾಶಿಸಂಖ್ಯಾ ಪ್ರಮಾಣದಷ್ಟು ತಿಂಗಳುಗಳಲ್ಲಿ ಸಾಯುತ್ತಾನೆ.

---

[1] ಜಾತನಿತ (ಕ)? [2] ನೋ (ಕ).

ಉದಯೇಶಂ ನಿಲೆ ಷಷ್ಠದೊಳ್ [1]ಪ[1]ಬಗಣಿಂ ಮೇಷಾದಿ ರಾಶಿಪ್ರಮಾ
ಣದೆ ಸಾಯ್ಗುಂ ನಿಲೆ ಷಷ್ಠದೊಳ್ ತದುದಯದ್ರೇಕ್ಕಾಣ[2]ಪಂ[2] ತತ್ಪ್ರಮಾ
ಣದ ತಿಂಗಳ್ಗಟಿಗುಂ ನರಂ ನಿಲೆ ತದಂಶಾಧೀಶ್ವರಂ ಷಷ್ಠಗೇ
ಹದೊಳಾ ಲಗ್ನಭವಂ ಪುನರ್ಭವನೆನಿಕ್ಕುಂ ತತ್ಪ್ರಮಾಣಾ[3]ಹ[3]ದಿಂ ೩೭

ಹರಿಯೊ[4]ಳ್ಕೈ[4]ದು ಗೋಪತಿಯೊಳೊಂಬತ್ತು ಕುಂಭದೊಳಿಪ್ಪತ್ತೇೞು ದಂಪತಿಯೊಳಿಪ್ಪ
ತ್ತೆರಡು ಮೃಗದೊಳಿಪ್ಪತ್ತು ಕರ್ಕಿಯೊಳಿಪ್ಪತ್ತೆರಡಳಿಯೊಳ್[ರಲ]ಪ್ಪತ್ತಮೂಱು
ತರುಣಿಗೃಹದೊಳೊಂ[5]ದಜ[5]ದೊಳೆಂಟನಿಮೇಷದೊಳ್ ಹತ್ತು ಧನುವಿನೊಳೆಂಟು ತುಲಾ
ಧರನೊಳ್ ನಾಲ್ಕುಭಾಗೆಯೊಳಿರೆ ಹಿಮಕರಂ ತತ್ಪ್ರಮಾಣಾಬ್ದದಿ [6]ನರ[6] ಮಡಿಗುಂ ೩೮

ಲಗ್ನದಲ್ಲಿ ಉದಯಿಸಿರುವ ನವಾಂಶಾಧಿಪತಿ ಆರನೇಸ್ಥಾನದಲ್ಲಿದ್ದರೆ ಆ ಲಗ್ನದಲ್ಲಿ ಹುಟ್ಟಿದವನು ಅಂಶರಾಶ್ಯಧಿಪತಿಯಿರುವ ರಾಶಿಸಂಖ್ಯಾಪ್ರಮಾಣದಷ್ಟು ದಿವಸಗಳಲ್ಲಿ ಪುನರ್ಭವನಾಗುತ್ತಾನೆ.

ವಿ–ಜನನಕಾಲದಲ್ಲಿ ಲಗ್ನಾಧಿಪತಿ ಷಷ್ಠರಾಶಿಯಲ್ಲಿದ್ದರೆ ಆ ರಾಶಿಸಂಖ್ಯಾಪ್ರಮಾಣದಷ್ಟು ವರ್ಷಗಳಲ್ಲೂ ದ್ರೇಕ್ಕಾಣಾಧಿಪತಿ ಷಷ್ಠದಲ್ಲಿದ್ದರೆ ಆ ರಾಶಿಸಂಖ್ಯಾ ಪ್ರಮಾಣದಷ್ಟು ತಿಂಗಳುಗಳಲ್ಲೂ ಅಂಶಾಧಿಪತಿ ಷಷ್ಠದಲ್ಲಿದ್ದರೆ ಆ ರಾಶಿಸಂಖ್ಯಾ ಪ್ರಮಾಣದಷ್ಟು ದಿನಗಳಲ್ಲೂ ಮಗುವು ಸಾಯುತ್ತದೆ.

೩೮. ಸಿಂಹದಲ್ಲಿ ಐದು ವೃಷಭದಲ್ಲಿ ಒಂಬತ್ತು ಕುಂಭದಲ್ಲಿ ಇಪ್ಪತ್ತೇಳು ಮಿಥುನದಲ್ಲಿ ಇಪ್ಪತ್ತೆರಡು ಮಕರದಲ್ಲಿ ಇಪ್ಪತ್ತು ಕರ್ಕಟಕರಾಶಿಯಲ್ಲಿ ಇಪ್ಪತ್ತೆರಡು ವೃಶ್ಚಿಕದಲ್ಲಿ ಇಪ್ಪತ್ತುಮೂರು ಕನ್ಯಾರಾಶಿಯಲ್ಲಿ ಒಂದು ಮೇಷರಾಶಿಯಲ್ಲಿ ಎಂಟು ಮೀನರಾಶಿಯಲ್ಲಿ ಹತ್ತು ಧನುಸ್ಸಿನಲ್ಲಿ ಎಂಟು ತುಲಾರಾಶಿಯಲ್ಲಿ ನಾಲ್ಕು ಈ ಅಂಶಗಳಲ್ಲಿ ಚಂದ್ರನಿರುವಾಗ ಹುಟ್ಟಿದವನು ಆಯಾ ಅಂಶಸಂಖ್ಯಾ ಪ್ರಮಾಣ ವರ್ಷಗಳಲ್ಲಿ ಸಾಯುತ್ತಾನೆ.

ವಿ–ಚಂದ್ರಸ್ಫುಟವು ರಾಶ್ಯಾದಿ

| | | | |
|---|---|---|---|
| ೦—೭—೦ | ರಿಂದ | ೦—೮—೦ | ಒಳಗೆ |
| ೧—೮—೦ | ,, | ೧—೯—೦ | ,, |
| ೨—೨೧—೦ | ,, | ೨—೨೨—೦ | ,, |
| ೩—೨೧—೦ | ,, | ೩—೨೨—೦ | ,, |
| ೪—೪—೦ | ,, | ೪—೫—೦ | ,, |
| ೫—೦—೦ | ,, | ೫—೧—೦ | ,, |
| ೬—೩—೦ | ,, | ೬—೪—೦ | ,, |
| ೭—೨೨—೦ | ,, | ೭—೨೩—೦ | ,, |
| ೮—೭—೦ | ,, | ೮—೮—೦ | , |
| ೯—೧೯—೦ | ,, | ೯—೨೦—೦ | ,, |
| ೧೦—೨೬—೦ | ,, | ೧೦—೨೭—೦ | ,, |
| ೧೧—೯—೦ | ,, | ೧೧—೧೦—೦ | ,, |

ಇದ್ದಾಗ ಹುಟ್ಟಿದ ಮಗು ಆಯಾ ಅಂಶಸಂಖ್ಯಾ ಪ್ರಮಾಣ ವರ್ಷಗಳಲ್ಲಿ ಸಾಯುತ್ತದೆ.

[1] ಪ್ರೊ (ಗ) [2] ಕಂ (ಕ ಗ) [3] ಬ್ಬ (ಕ ಗ) [4] ಳಗ್ರೈ (ಗ) [5] ದ ಝಷ (ಕ) [6] ನಾವಾಂ (ಕ) ನಾ ನರಂ (ಗ).

ನಿರೆ ದೋಷಾಕರನೊಂದು ಕೇಂದ್ರಗೃಹದೊಳ್ ಕ್ರೂ[1]ರರ್[1] ತ್ರಿಕೋಣಂಗಳೊಳ್
ನಿರೆ [2]ಮೇಣ್ ಸಂಜೆ[2]ಯೊಳಿಂದುಹೋರೆಯೊಳಿನಂ ಪಾಪಂ ಗೃಹಾಂತ್ಯಂಗಳೊಳ್
ನಿರೆ ಮೇಣ್ ಕ್ಷೀಣಸುಧಾಕರಂ ನಿರೆ ವಿಲಗ್ನಕ್ಷೇತ್ರದೊಳ್ ಕ್ರೂರರುಂ
ನಿರೆ ಕೇಂದ್ರಂಗಳೊಳಕ್ಕೆ ಮೇಣ್ ನಿಧನದೊಳ್ ಲಗ್ನೋದ್ಭವಂ ಪೊಂದುಗುಂ ೩೯

ಜಾಮಿತ್ರಾಷ್ಟಮ ಧರ್ಮ ಪಂಚಮ ವಿಲಗ್ನ ದ್ವಾದಶ ಕ್ಷೇತ್ರದೊಳ್
ಸೋಮಂ ಕ್ರೂರರೊಳೊಂದಿ ನಿಂದೊಡೆ ಬುಧಂ ಮೇಣ್ ಭಾರ್ಗವಂ ಮೇಣ್ ಸುರೇಂ
ದ್ರಾಮಾತ್ಯಂ ಬಳವಂತರೀಕ್ಷಿಸದೆ ಮಾಣ್ದೊಂದಿರ್ದು ನಿಂದಂದು ಮೇ
ಣಾ ಮರ್ತ್ಯಂ ಕ್ಷಣಮಾತ್ರದಿಂದೆ ಪುಗುಗುಂ ಕೀನಾಶ[3]ನಾ[3]ವಾಸಮಂ ೪೦

---

೩೯. ಜನನಕಾಲದಲ್ಲಿ ಚಂದ್ರನು ಒಂದು ಕೇಂದ್ರಸ್ಥಾನದಲ್ಲಿಯೂ ಕ್ರೂರಗ್ರಹಗಳು ತ್ರಿಕೋಣಗಳಲ್ಲೂ ಇದ್ದರೆ ಅಥವಾ ಸಾಯಂಕಾಲದಲ್ಲಿ ಜನನವಾಗಿ ಚಂದ್ರಹೋರೆಯಲ್ಲಿ ಸೂರ್ಯನೂ ಪಾಪಗ್ರಹವು ರಾಶಿಯ ಕೊನೆಯ ನವಾಂಶದಲ್ಲೂ ಇದ್ದರೆ ಅಥವಾ ಕ್ಷೀಣಚಂದ್ರ ಲಗ್ನದಲ್ಲಿದ್ದು ಕ್ರೂರಗ್ರಹಗಳು ಕೇಂದ್ರಗಳಲ್ಲಾಗಲೀ ಎಂಟನೇ ರಾಶಿಯಲ್ಲಾಗಲೀ ಇರುವಾಗ ಉದಿಸಿರುವ ಲಗ್ನದಲ್ಲಿ ಹುಟ್ಟಿದವನು ಸಾಯುತ್ತಾನೆ.

ವಿ—ಬೃಹಜ್ಜಾತಕ ಲಘುಜಾತಕ ಸಾರಾವಳಿ ಮೊದಲಾದ ಜ್ಯೋತಿಷಗ್ರಂಥಗಳಲ್ಲಿ ಸಾಯಂಕಾಲ ಚಂದ್ರಹೋರೆಯಲ್ಲಿ ಜನನವಾದರೆ ಎಂದಿದೆ. ಚಂದ್ರಹೋರೆಯಲ್ಲಿ ಸೂರ್ಯನಿರಬೇಕೆಂದಿಲ್ಲ.

ಕೃತ್ತಿಕ ಉತ್ತರ ಉತ್ತರಾಷಾಢ ನಕ್ಷತ್ರಗಳ ಮೊದಲನೇ ಪಾದದಲ್ಲಿ ಮೃಗಶಿರ ಚಿತ್ತ ಧನಿಷ್ಠ ನಕ್ಷತ್ರಗಳ ಎರಡನೇ ಪಾದದಲ್ಲಿ ಪುನರ್ವಸು ವಿಶಾಖ ಪೂರ್ವಾಭಾದ್ರ ನಕ್ಷತ್ರಗಳ ಮೂರನೇ ಪಾದದಲ್ಲಿ ಆಶ್ಲೇಷ ಜ್ಯೇಷ್ಠ ರೇವತಿ ನಕ್ಷತ್ರಗಳ ನಾಲ್ಕನೇ ಪಾದದಲ್ಲಿ ಗ್ರಹಗಳಿದ್ದಾಗ ರಾಶಿಯ ಕೊನೆಯ ನವಾಂಶದಲ್ಲಿ ಇದ್ದಂತಾಗುತ್ತದೆ.

೪೦. ಜನನಕಾಲದಲ್ಲಿ ಏಳು ಎಂಟು ಒಂಬತ್ತು ಐದು ಲಗ್ನ ಹನ್ನೆರಡು ಈ ಕ್ಷೇತ್ರಗಳಲ್ಲಿ ಚಂದ್ರನು ಕ್ರೂರಗ್ರಹಗಳೊಡನೆ (ರವಿ ಕುಜ ಶನಿಗಳೊಡನೆ) ಇದ್ದು ಬಲಿಷ್ಠನಾದ ಬುಧ ಅಥವಾ ಶುಕ್ರ ಅಥವಾ ಗುರು ನೋಡದಿದ್ದರೆ ಅಥವಾ ಕೂಡ ಇಲ್ಲದಿದ್ದರೆ ಹುಟ್ಟಿದವನು ಕ್ಷಣಮಾತ್ರದಲ್ಲೇ ಯಮನಗರಿಯನ್ನು ಪ್ರವೇಶಿಸುತ್ತಾನೆ.

ವಿ—ಸೂರ್ಯನಿಗೂ ಬುಧ ಶುಕ್ರರಿಗೂ ನಾಲ್ಕು ರಾಶಿಗಳ ಅಂತರವು ನಮ್ಮ ದೇಶದಲ್ಲಿ ಸಂಭವಿಸುವುದಿಲ್ಲ. ಆದುದರಿಂದ ಚಂದ್ರನೊಡನೆ ಸೂರ್ಯನಿದ್ದಾಗ ಶುಕ್ರ ಬುಧರ ದೃಷ್ಟಿ ಚಂದ್ರನಿಗೆ ಇಲ್ಲದಕಾರಣ ಗುರುದೃಷ್ಟಿಯನ್ನು ಮಾತ್ರ ತೆಗದು ಕೊಳ್ಳಬೇಕು. ಅಂದರೆ ಅಮಾವಾಸ್ಯೆಯ ಸಮೀಪದಲ್ಲಿ ಜನನವಾಗಿ ಲಗ್ನ ಐದು ಏಳು ಎಂಟು ಒಂಬತ್ತು ಹನ್ನೆರಡನೇ ಸ್ಥಾನಗಳಲ್ಲಿ ಚಂದ್ರನು ಕುಜ ಶನಿ

---

[1] ರ (ಕ ಗ) [2] ಮೇಣಸಂಜ್ಞೆ (ಕ) [3] ನೀ (ಕ ಗ).

ಉದಯದಿನಿಂದು ಹೀನತನು ಕೂಡಿರೆ ಕೇಂದ್ರದೊಳಕ್ಕೆ ಮೃತ್ಯುಗೇ
ಹದೊಳಿರೆ ಪಾಪವರ್ಗಮದು ಕೂಡದೆ ಮಾಣ್ಡೊಡೆ ಪಾಪಯುಗ್ಮಮ
ಧ್ಯದೆ ಚತುರಸ್ರರಾಶಿಗಳೊಳಸ್ತದೊಳಕ್ಕಿರೆ ಶೀತರೋಚಿ ಪು
ಟ್ಟಿದ ಮನುಜಂ ಸುಧಾರಸಮನೀಂಟಿದೊಡಂ ಬದುಕಲ್ಕೆ ಬಲ್ಲನೇ    ೪೧

ದಿನಪಂ ಸಪ್ತಮದೊಳ್ ವಿಲಗ್ನಗೃಹದೊಳ್ ಧಾತ್ರೀತನೂಜಾತನ
ಕ್ಕಿನಜಂ ಕೂಡಿರೆ ಪೇಣ್ ದಿನೇಶಸುತನಕ್ಕುರ್ವೀಜನಕ್ಕಸ್ತದೊಳ್
ದಿನಪಂ ಲಗ್ನದೊಳಿರ್ದೊಡಕ್ಕೆ ಶಶಲಕ್ಷ್ಮಂ ಮಂದನೊಳ್ ಪೇಣ್ ಮಹೀ
ಜನೊಳೊಂದಿರ್ದೊಡೆ ಸೌಮ್ಯ[1]ರೀಕ್ಷಿಸ[1]ದೊಡಕ್ಕುಂ ಲಗ್ನಜಂ ಪೊಂದುಗುಂ    ೪೨

---

ಗಳೊಡನೆ ಇದ್ದು ಗುರುವು ಚಂದ್ರನಿಂದ ಐದು ಏಳು ಒಂಬತ್ತನೇ ಸ್ಥಾನಗಳ ಲ್ಲೊಂದರಲ್ಲಿಲ್ಲದಿದ್ದಾಗ ಈ ಯೋಗವು ಸಂಭವಿಸುತ್ತದೆ.

೪೧. ಜನನಲಗ್ನದಲ್ಲಿ ಕ್ಷೀಣಚಂದ್ರನಿದ್ದು ಕೇಂದ್ರಸ್ಥಾನದಲ್ಲಾಗಲೀ ಅಷ್ಟಮದಲ್ಲಾಗಲೀ ಪಾಪಗ್ರಹಗಳಿದ್ದಾಗ ಅಥವಾ ಈ ಯೋಗ ಕೂಡದಿದ್ದರೆ ಎರಡುಪಾಪಗ್ರಹಗಳ ಮಧ್ಯದಲ್ಲಿ ಲಗ್ನದಿಂದ ನಾಲ್ಕನೇರಾಶಿಯಲ್ಲಾಗಲೀ ಎಂಟನೇರಾಶಿಯಲ್ಲಾಗಲೀ ಏಳನೇರಾಶಿಯಲ್ಲಾಗಲೀ ಚಂದ್ರನಿದ್ದಾಗ ಹುಟ್ಟಿದವನು ಅಮೃತಪಾನ ಮಾಡಿಸಿದರೂ ಬದುಕಬಲ್ಲನೇ ? (ಬದುಕುವುದಿಲ್ಲ).

ವಿ–ಪದ್ಯದಲ್ಲಿ 'ಅದು ಕೂಡದೆ ಮಾಣ್ಡೊಡೆ' ಎನ್ನುವುದಕ್ಕೆ ಪ್ರತಿಯಾಗಿ 'ಶುಭಗ್ರಹದೃಷ್ಟಿಯಿಲ್ಲದಿದ್ದರೆ ಎನ್ನುವ ಅರ್ಥಕೊಡುವ ಪಾಠವಿದ್ದರೆ ಸರಿಯೆಂದು ಇತರ ಜ್ಯೌತಿಷ ಗ್ರಂಥಗಳಿಂದ ತಿಳಿದುಬರುತ್ತದೆ.

೪೨. ಜನನಕಾಲದಲ್ಲಿ ಸೂರ್ಯನು ಏಳನೆಯ ಸ್ಥಾನದಲ್ಲಿರುವಾಗ ಲಗ್ನದಲ್ಲಿ ಅಂಗಾರಕನಾಗಲೀ ಶನಿಯಾಗಲೀ ಇದ್ದರೆ ಅಥವಾ ಶನಿಯಾಗಲೀ ಮಂಗಳನಾಗಲೀ ಏಳನೆಯ ಸ್ಥಾನದಲ್ಲೂ ಸೂರ್ಯನು ಲಗ್ನದಲ್ಲೂ ಇದ್ದರೆ ಅಥವಾ ಚಂದ್ರನು ಶನಿಯೊಡನೆ ಅಥವಾ ಅಂಗಾರಕನೊಡನೆ ಇದ್ದರೆ ಶುಭ ಗ್ರಹಗಳು ನೋಡದಿರುವ ಲಗ್ನದಲ್ಲಿ ಹುಟ್ಟಿದವನು ಸಾಯುತ್ತಾನೆ.

ವಿ–ಜನನಕಾಲದಲ್ಲಿ ಸೂರ್ಯನು ಲಗ್ನದಲ್ಲಾಗಲೀ ಸಪ್ತಮದಲ್ಲಾಗಲೀ ಇರುವುದಲ್ಲದೆ ಸೂರ್ಯನಿಗೆ ಸಪ್ತಮಸ್ಥಾನದಲ್ಲಿ ಕುಜ ಶನಿಗಳಿದ್ದು ಲಗ್ನವನ್ನು ಶುಭ ಗ್ರಹಗಳು ನೋಡದಿದ್ದರೆ ಅಥವಾ ಜನ್ಮರಾಶಿಯಲ್ಲಿ ಶನಿಯಾಗಲೀ ಅಂಗಾರಕನಾಗಲೀ ಇದ್ದು ಲಗ್ನವನ್ನು ಶುಭಗ್ರಹಗಳು ನೋಡದಿದ್ದರೆ ಮಗು ಸಾಯುತ್ತದೆ.

---

[1] ರೀಕ್ಷಿಸಿ (ಕ) ವೀಕ್ಷಿಸಿ (ಗ).

ಅಶುಭಂ ಸಬಳನತಿಕ್ಷೀ
ಣ ಶಶಾಂಕಯುತಂ ತ್ರಿಕೋಣ ಲಗ್ನಾಸ್ತ ದ್ವಾ
ದಶ ನಿಧನದೊಳಿರೆ ಕಾಣದೊ
ಡೆ ಶುಭಗ್ರಹಮಾ ಕುಮಾರಕಂಗಟಿವಕ್ಕುಂ ೪೩

ಉದಯಿಸ ಕೀಟಗೃಹಂ ಚ
ಕ್ರದ ಪೂರ್ವಾರ್ಧದೊಳಸದ್ಗ್ರಹಂ ನಿರೆ ಪಶ್ಚಾ
ರ್ಧದೊಳಿರೆ ಸೌಮ್ಯರ್ ಮೇಣುದ
ಯದೊಳಸ್ತದೊಳಿರೆ ಶುಭೇತರರ್ ಕಟಿಗುಮವಂ ೪೪

---

೪೩. ಜನನಕಾಲದಲ್ಲಿ ಪಾಪಗ್ರಹವು ಬಲಿಷ್ಠವಾಗಿ ಕ್ಷೀಣಚಂದ್ರನೊಡನೆ ಐದು ಒಂಬತ್ತು ಲಗ್ನ ಏಳು ಹನ್ನೆರಡು ಎಂಟು ಈ ಸ್ಥಾನಗಳೊಂದರಲ್ಲಿದ್ದು ಶುಭಗ್ರಹ ನೋಡದಿದ್ದರೆ ಮಗು ಸಾಯುತ್ತದೆ.

೪೪. ಜನನಕಾಲದಲ್ಲಿ ಕರ್ಕಟಕ ಅಥವಾ ವೃಶ್ಚಿಕರಾಶಿ ಉದಯಿಸಿದ್ದು [ಕರ್ಕಟಕ ಅಥವಾ ವೃಶ್ಚಿಕ ಲಗ್ನದಲ್ಲಿ ಜನನವಾಗಿದ್ದು] ಚಕ್ರದ ಪೂರ್ವಾರ್ಧ ಭಾಗದಲ್ಲಿ ಪಾಪಗ್ರಹಗಳೂ ಪಶ್ಚಾದರ್ಧದಲ್ಲಿ ಶುಭಗ್ರಹಗಳೂ ಇದ್ದರೆ ಅಥವಾ ಲಗ್ನ ಸಪ್ತಮಗಳಲ್ಲಿ ಪಾಪಗ್ರಹಗಳಿದ್ದರೆ ಮಗು ಸಾಯುತ್ತದೆ.

ವಿ–ಈ ಶ್ಲೋಕದಲ್ಲಿ ಎರಡು ಅರಿಷ್ಟಯೋಗಗಳನ್ನು ಹೇಳಿದೆ. ೪೨ನೇ ಪದ್ಯದಲ್ಲಿ ಹೇಳಿರುವ ಯೋಗವನ್ನು ಈ ಪದ್ಯದಲ್ಲಿ ಹೇಳಿರುವ ೨ನೇ ಯೋಗದ ಒಂದು ಭೇದವೆಂದೇ ಹೇಳಬಹುದು.

ಲಗ್ನದಲ್ಲಿ ಎಷ್ಟುಭಾಗ ಉದಿತವಾಗಿರುತ್ತದೆಯೋ ಅಷ್ಟುಭಾಗಗಳನ್ನು ನಾಲ್ಕನೇ ರಾಶಿಯಲ್ಲಿ ಬಿಟ್ಟು ಅಲ್ಲಿಂದ ಮುಂದಿನ ಭಾಗಗಳು ೫, ೬, ೭, ೮, ೯ನೇ ರಾಶಿಗಳು ಮತ್ತು ೧೦ನೇ ರಾಶಿಯಲ್ಲಿ ಲಗ್ನೋದಿತ ಭಾಗ ಇವಿಷ್ಟು ಚಕ್ರ ಪಶ್ಚಾದರ್ಧ, ಉಳಿದ ಭಾಗ ಚಕ್ರಪೂರ್ವಾರ್ಧ.

ಉದಾ:–ಲಗ್ನಸ್ಫುಟ ರಾಶ್ಯಾದಿ ೩–೫–೬ ಆದರೆ ೭–೫–೬ರಿಂದ ೧–೫–೬ ರ ವರೆಗೆ ಚಕ್ರಪಶ್ಚಾದರ್ಧವೂ ೧–೫–೬ರಿಂದ ೭–೫–೬ರ ವರೆಗೆ ಚಕ್ರಪೂರ್ವಾರ್ಧವೂ ಆಗುತ್ತದೆ.

ಶ್ರೀಧರನು ಲಗ್ನ ಮತ್ತು ಸಪ್ತಮ ಕೇಂದ್ರಗಳಲ್ಲಿ ಪಾಪಗ್ರಹವಿದ್ದರೆ ಮೃತ್ಯುವುಂಟಾಗುತ್ತದೆಂದು ಹೇಳಿರುತ್ತಾನೆ. ಆದರೆ ಬೃಹಜ್ಜಾತಕದಲ್ಲಿ ಲಗ್ನ ಸಪ್ತಮಗಳ ಎರಡು ಪಾರ್ಶ್ವಗಳಲ್ಲೂ ಪಾಪಗ್ರಹವಿದ್ದರೆ ಮೃತ್ಯುವುಂಟಾಗುತ್ತದೆ ಎಂದಿದೆ. ಲಗ್ನದ ಎರಡು ಪಾರ್ಶ್ವಗಳಲ್ಲಾಗಲೀ ಅಥವಾ ಸಪ್ತಮ ಸ್ಥಾನದ ಎರಡು ಪಾರ್ಶ್ವಗಳಲ್ಲಾಗಲೀ ಪಾಪಗ್ರಹವಿದ್ದರೆ ಮೃತ್ಯುವುಂಟಾಗುತ್ತದೆಂದು ಒಂದೇ ಯೋಗವನ್ನು ಎರಡುಯೋಗಗಳನ್ನಾಗಿ ಬಿಡಿಸಿ ಕೆಲವು ಜ್ಯೋತಿಷಾಚಾರ್ಯರು ಹೇಳಿರುತ್ತಾರೆ.

ಹಿಮಕರನಿರೆ ಸುಖ ಸಪ್ತಾ
ಷ್ಟಮದೊಳ್ ಪಾಪಗ್ರಹಂಗಳಿರೆ ಕೆಲದೊಳ್ ಸಂ
ಕ್ರಮಿಸಿರೆ ಮೇಣುದಯದೊಳಿರೆ
ಹಿಮಕರನಸ್ತದೊಳಸದ್ಗ್ರಹಂ ನಿರೆ ಮರಣಂ     ೪೫

ಕನಕಂ ಛಿದ್ರದೊಳುಷ್ಣಾಂ
ಶು ನವಮದೊಳ್ ಚಂದ್ರನುದಯದೊಳ್ ದ್ವಾದಶದೊಳ್
ಶನಿ ನಿರೆ ಜೀವಂ ಬಲವಂ
ತನಾಗೆ ತದ್ಬಾಲನಕ್ಕಟೆಂತುಂ ಬಾಬಂ     ೪೬

---

೪೫. ಜನನಕಾಲದಲ್ಲಿ ಚಂದ್ರನು ನಾಲ್ಕು ಏಳು ಎಂಟನೇ ಸ್ಥಾನಗಳೊಂದರಲ್ಲಿದ್ದು ಆತನ ಪಾರ್ಶ್ವದಲ್ಲಿ ಪಾಪಗ್ರಹಗಳಿದ್ದರೆ ಅಥವಾ ಲಗ್ನದಲ್ಲಿ ಚಂದ್ರನಿದ್ದು ಏಳನೇಸ್ಥಾನದಲ್ಲಿ ಅಶುಭಗ್ರಹವಿದ್ದರೆ ಮಗುವಿಗೆ ಮರಣವುಂಟಾಗುತ್ತದೆ.

ವಿ—'ಳಿರೆ ಕೆಲದೊಳ್' ಎನ್ನುವುದಕ್ಕೆ ಪ್ರತಿಯಾಗಿ 'ಳಿರ್ಕೆಲದೊಳ್' ಎಂದು ಪಾಠವಿದ್ದರೆ ಸರಿಯೆಂದು ತಿಳಿದುಬರುತ್ತದೆ.

೪೬. ಅಂಗಾರಕನು ಎಂಟನೇ ಸ್ಥಾನದಲ್ಲಿ ಸೂರ್ಯನು ಒಂಬತ್ತನೇ ಸ್ಥಾನದಲ್ಲಿ ಚಂದ್ರನು ಲಗ್ನದಲ್ಲಿ ಹನ್ನೆರಡನೆಯ ಸ್ಥಾನದಲ್ಲಿ ಶನಿ ಇದ್ದರೆ ಗುರು ಬಲಿಷ್ಠನಾಗಿ ಈ ಗ್ರಹಗಳನ್ನು ನೋಡದಿದ್ದರೆ ಆ ಲಗ್ನದಲ್ಲಿ ಹುಟ್ಟಿದ ಹುಡುಗನು ಜೀವಿಸುವುದಿಲ್ಲ.

ವಿ—ಪದ್ಯದಲ್ಲಿ 'ಜೀವಂ ಬಲವಂತನಾಗೆ' ಎಂದಿದೆ. ಇದರಂತೆ ಗುರುವು ಬಲಿಷ್ಠನಾಗಿದ್ದರೆ ಎಂದು ಮಾತ್ರ ಅರ್ಥವಾಗುತ್ತದೆ. ಆದರೆ ಜನನಕಾಲದಲ್ಲಿ ಗುರು ಬಲಿಷ್ಠನಾದರೆ ಹುಡುಗನಿಗೆ ಅರಿಷ್ಟವುಂಟಾಗುತ್ತದೆ ಎನ್ನುವುದು ಶಾಸ್ತ್ರ ಸಮ್ಮತವಲ್ಲ. ಆದುದರಿಂದ 'ಬಲಿಷ್ಠನಾದ ಗುರು ನೋಡದಿದ್ದರೆ' ಎಂದು ಇತರ ಜ್ಯೌತಿಷಗ್ರಂಥಗಳಲ್ಲಿರುವಂತೆ ಅರ್ಥಮಾಡಿದೆ.

ಗುರುವು ಯೋಗಕಾರಕಗ್ರಹಗಳಲ್ಲಿ ಕೆಲವರನ್ನು ನೋಡಿದರೂ ಬಲಹೀನನಾದ ಗುರು ಎಲ್ಲ ಗ್ರಹಗಳನ್ನೂ ನೋಡಿದರೂ ಹುಟ್ಟಿದ ಸ್ವಲ್ಪಕಾಲಾನಂತರ ಸಾಯುತ್ತಾನೆ. ಗುರು ಪಂಚಮದಲ್ಲಿದ್ದು ಎಲ್ಲ ಗ್ರಹಗಳನ್ನೂ ನೋಡಿದರೆ ಅರಿಷ್ಟವಿಲ್ಲ.

ಉಡುನಾಥಂ ಪಾಪಗ್ರಹ
ದೊಡನಿ[1]ರ್ದು[1]ದಯಾಂತ್ಯ ಸಪ್ತಮಾಷ್ಟಮದೊಳ್ ನಿಂ
ದೊಡೆ ಸೌಮ್ಯರ್ ಕೇಂದ್ರದೊಳಿರ
ದೊಡವರ್ ಕಾಣದೊಡೆ ಕಾಣರಾ ಬಾಲಕನಂ ४೭

ಜಲಜಸಖನಕ್ಕೆ ಶಶಿಯ
ಕ್ಕೆ ಲಗ್ನಗತ[2]ನಾ[2]ಗೆ ನಿಧನ ನವ ಪಂಚಮದೊಳ್
ನಿಲೆ ಪಾಪಗಣಂ ಸೌಮ್ಯರ್
ಬಲಯುತರಾಗದೊಡೆ ಕಾಣದಿರ್ದೊಡೆ ಮರಣಂ ४೮

(ತಾಯಿಯೊಡನೆ ಮಗುವಿನ ಅರಿಷ್ಟಯೋಗ)

ಕ್ರೂರದ್ವಯಮಧ್ಯದೊಳಿರೆ
ತಾರಾಪತಿ ನಿಧನಗ್ರಹದೊಳಕ್ಕಸ್ತದೊ[3]ಳು[3]
ಕ್ರೂರರಿರೆ ಪೂರ್ಣಬಲರ
ಕ್ರೂರರ್ ಕಾಣದೊಡೆ ಕೂಸು ತಾಯ್ವೆರಸಟಗುಂ ४೯

---

४೭. ಜನನಕಾಲದಲ್ಲಿ ಚಂದ್ರನು ಪಾಪಗ್ರಹದ ಕೂಡ ಲಗ್ನ ಹನ್ನೆರಡು ಏಳು ಎಂಟು ಈ ಸ್ಥಾನಗಳೊಂದರಲ್ಲಿದ್ದರೆ, ಶುಭಗ್ರಹಗಳು ಕೇಂದ್ರಸ್ಥಾನಗಳಲ್ಲಿಲ್ಲದಿದ್ದರೆ ಮತ್ತು ಚಂದ್ರನನ್ನು ನೋಡದಿದ್ದರೆ ಹುಟ್ಟಿದ ಮಗು ಜೀವಂತವಾಗಿರುವುದಿಲ್ಲ.

ವಿ—ಕ್ಷೀಣಚಂದ್ರ ಪಾಪಗ್ರಹದೊಡನೆ ಲಗ್ನ ಏಳು ಎಂಟು ಹನ್ನೆರಡು ಈ ಸ್ಥಾನಗಳಲ್ಲೊಂದರಲ್ಲಿದ್ದು ಶುಭಗ್ರಹಗಳು ಆತನನ್ನು ನೋಡದಿದ್ದರೆ ಮತ್ತು ಕೇಂದ್ರಸ್ಥಾನಗಳಲ್ಲಿಲ್ಲದಿದ್ದರೆ ಮಗುವು ಸಾಯುತ್ತದೆ; ಎಂದು ಸಾರಾವಳಿಯಲ್ಲಿದೆ.

४೮. ಸೂರ್ಯನಾಗಲೀ ಚಂದ್ರನಾಗಲೀ ಲಗ್ನದಲ್ಲಿದ್ದು ಎಂಟು ಒಂಬತ್ತು ಐದನೇ ಸ್ಥಾನಗಳಲ್ಲಿ ಪಾಪಗ್ರಹಗಳೂ ಇದ್ದು ಬಲಿಷ್ಠರಾದ ಶುಭಗ್ರಹಗಳು ಕೂಡ ಇಲ್ಲದಿದ್ದರೆ ಅಥವಾ ನೋಡದಿದ್ದರೆ ಮಗು ಸಾಯುತ್ತದೆ.

ವಿ—ಶುಭಗ್ರಹಗಳ ಯೋಗ ಅಥವಾ ದೃಷ್ಟಿಯಿದ್ದರೆ ಅರಿಷ್ಟಫಲ ಉಂಟಾಗುವುದಿಲ್ಲ.

४೯. ಜನನಕಾಲದಲ್ಲಿ ಎರಡು ಕ್ರೂರಗ್ರಹಗಳ ಮಧ್ಯದಲ್ಲಿ ಚಂದ್ರನೂ ಎಂಟನೇ ಸ್ಥಾನದಲ್ಲಾಗಲೀ ಏಳನೇ ಸ್ಥಾನದಲ್ಲಾಗಲೀ ಕ್ರೂರಗ್ರಹಗಳೂ ಇದ್ದು ಬಲಿಷ್ಠರಾದ ಶುಭಗ್ರಹಗಳು ನೋಡದಿದ್ದರೆ ಮಗುವು ತಾಯಿಯೊಡನೆ ಸಾಯುತ್ತದೆ.

---

[1] ರದು (ಕ) ರೆದು (ಗ) [2] ರಾ (ಕ ಗ) [3] ೪ (ಗ).

(ತಾಯಿ ಮತ್ತು ಮಗುವಿಗೆ ಶಸ್ತ್ರಘಾತದಿಂದ ಅರಿಷ್ಟಯೋಗ)

ಬರೆ ಸೋಮಗ್ರಹಣಂ ವಿಲಗ್ನದೊಳಿನಾಪತ್ಯೇಂದುಗಳ್ ಛಿದ್ರದೊಳ್
ಧರಣೀನಂದನ [1]ಕೂ[1]ಡೆ ತಾಯ್ವೆರ[2]ಸು[2] ಕಂದಂ ಪೊಂದುಗುಂ ಮತ್ತೆಯುಂ
ಬರೆ ಸೂರ್ಯಗ್ರಹಣಂ ಕುಜಂ ನಿಧನದೊಳ್ ಲಗ್ನರ್ಕ್ಷದೊಳ್ ಭಾನು ಭಾ
ಸ್ಕರಿಗಳ್ ಕೂಡಿರೆ ಕೂಸು ತಾಯ್ವೆರ[2]ಸು[2] ಶಸ್ತ್ರಾಘಾತದಿಂ ಪೊಂದುಗುಂ　　೫೦

(ಗಂಡಾಂತದಲ್ಲಿ ಹುಟ್ಟಿದ ಶಿಶುವಿಗೆ ಅರಿಷ್ಟಯೋಗ)

ಸಮನಿಸೆ ಗಂಡಾಂತಂ ಜಾ
ತಮರ್ತ್ಯನಟಿಗುಂ ಸ್ವಮಾತೃಪಿತೃಕುಳ ಸಹಿತಂ
ಸಮವಾಯು ಬರ್ದುಂಕಿದೊಡ
ಶ್ವ ಮತಂಗಜಪತಿಯೆನಿಪ್ಪ ಭೂಪತಿಯಕ್ಕುಂ　　೫೧

---

೫೦. ಚಂದ್ರಗ್ರಹಣದ ದಿವಸ ಜನನವಾಗಿ ಲಗ್ನದಲ್ಲಿ ಶನಿಚಂದ್ರರೂ ಎಂಟನೇ ಸ್ಥಾನದಲ್ಲಿ ಕುಜನೂ ಇದ್ದರೆ ಮಗು ತಾಯಿಯೊಡನೆ ಮರಣ ಹೊಂದುತ್ತದೆ; ಸೂರ್ಯಗ್ರಹಣದ ದಿವಸ ಜನನವಾಗಿ ಕುಜನು ಎಂಟನೇ ಸ್ಥಾನದಲ್ಲೂ ಲಗ್ನದಲ್ಲಿ ಸೂರ್ಯಶನಿಗಳೂ ಕೂಡಿದ್ದರೆ ಶಸ್ತ್ರಘಾತದಿಂದ ಮಗು ತಾಯಿಯೊಡನೆ ಸಾಯುತ್ತದೆ.

ವಿ–ಲಗ್ನ ಸಪ್ತಮ ಅಷ್ಟಮಗಳಲ್ಲಿ ಪಾಪಗ್ರಹಗಳಿರುವುದರಿಂದ ಮಗುವಿಗೂ ಮಾತೃಕಾರಕನಾದ ಚಂದ್ರನೊಡನೆ ಮತ್ತು ಚಂದ್ರನಿಗೆ ಸಪ್ತಮ ಮತ್ತು ಅಷ್ಟಮ ಸ್ಥಾನಗಳಲ್ಲೂ ಪಾಪಗ್ರಹವಿರುವುದಲ್ಲದೆ ಚಂದ್ರನೂ ಗ್ರಹಣಪೀಡಿತನಾಗುವುದರಿಂದ ತಾಯಿಗೂ ಮರಣವುಂಟಾಗುತ್ತದೆ. ಈ ಯೋಗವು ಪೂರ್ಣಿಮಾ ಪ್ರತಿಪತ್ ಸಂಧಿಯಕಾಲದಲ್ಲಿ ಹುಟ್ಟಿದರೆ ಮಾತ್ರ ಸಂಭವವಾಗುತ್ತದೆ. ಸೂರ್ಯನು ಗ್ರಹಣ ಪೀಡಿತನಾದಾಗ ಲಗ್ನದಲ್ಲಿ ಸೂರ್ಯಶನಿಗಳೂ ಅಷ್ಟಮದಲ್ಲಿ ಅಂಗಾರಕನೂ ಇದ್ದರೆ ಶಸ್ತ್ರಚಿಕಿತ್ಸೆಯಿಂದ ತಾಯಿಮಕ್ಕಳಿಬ್ಬರಿಗೂ ಮರಣವುಂಟಾಗುತ್ತದೆ. ಈ ಯೋಗವು ಅಮಾವಾಸ್ಯೆ ಪ್ರತಿಪತ್ ಸಂಧಿಕಾಲದಲ್ಲಿ ಹುಟ್ಟಿದ್ದರೆ ಮಾತ್ರ ಸಂಭವಿಸುತ್ತದೆ. ಈ ಎರಡು ಯೋಗಗಳಲ್ಲೂ ಲಗ್ನದಲ್ಲಿ ರಾಹು ಅಥವಾ ಕೇತು ಇರುತ್ತದೆ.

೫೧. ಗಂಡಾಂತದಲ್ಲಿ ಹುಟ್ಟಿದವನು ತನ್ನ ತಾಯಿ ತಂದೆ ಮತ್ತು ಅವರ ವಂಶಗಳೊಡನೆ ತಾನೂ ಸಾಯುತ್ತಾನೆ. ಆಯುಷ್ಮಂತನಾಗಿ ಬದುಕಿದ್ದೇ ಆದರೆ ಕುದುರೆ ಮತ್ತು ಆನೆಗಳನ್ನು ಹೊಂದಿರುವ ಭೂಪತಿಯಾಗುತ್ತಾನೆ.

ವಿ–'ಕುಳೀರ ಮೀನಾಳಿ ಗೃಹಾಂತಸಂಧಿಂ ವದಂತಿ ಗಂಡಾಂತಂ' ಎಂದು ಸಾರಾವಳಿಯಲ್ಲಿ ಹೇಳಿರುವಂತೆ, ಕರ್ಕಾಟಕ ವೃಶ್ಚಿಕ ಮೀನರಾಶಿಗಳ ಕೊನೆಯ ಭಾಗವೇ ಗಂಡಾಂತವು. ಈ ಗಂಡಾಂತದಲ್ಲಿ ಹುಟ್ಟಿದವನಿಗೆ ಮೃತ್ಯು ಖಂಡಿತ. ಆದರೂ ಗ್ರಹಗಳ ಸ್ಥಿತಿಯಿಂದ ಮಗು ಜೀವಿಸಿದ್ದೇ ಆದರೆ ಆತನು ರಾಜಯೋಗ ಫಲವನ್ನು ಅನುಭವಿಸುತ್ತಾನೆ.

---

[1] ನೋ (ಕ ಗ)　[2] ಸಿ (ಕ).

(ಬಾಲಾರಿಷ್ಟದಲ್ಲಿ ಅನುಕ್ತಮರಣಕಾಲಜ್ಞಾನ)

ಬರೆ [1]ರಿ[1]ಷ್ಟಂ ಕೃತ್ಯಯೋಗಗ್ರಹವತಿಬಳನಾಗಿರ್ದ ತಾಣಕ್ಕೆ ಜನ್ಮಂ
ದೊರೆಕೊಳ್ವಂದಿಂದು ಮುನ್ನಿರ್ದೆಡೆಗೆ ಜನನಲಗ್ನಕ್ಕೆ ಮೇಣ್ ವೀರ್ಯಯುಕ್ತಂ
ಹರಿಣಾಂಕಂ ಬಂದೊಡಾ ಮೂಱನೆಯೆಡೆಯುಡುಪಂ ನೋೞ್ಪುದುಗ್ರರ್ ಬಲಾಢ್ಯರ್
ಮರಣಂ ಸಂವತ್ಸರಾಭ್ಯಂತರದೊ[2]ಳ್[2] ಶಿಶುವಿಂಗಾದಿನಕ್ಕೊಂದಿ ಬಕ್ಕಂ ೫೨

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ ಸರಸಪ್ರಸನ್ನ
ವಚೋಲಕ್ಷ್ಮೀಧರಂ ಗದ್ಯಪದ್ಯವಿದ್ಯಾಧರಂ ಶ್ರೀಧರಾಚಾರ್ಯ ಪ್ರಣೀತಮಪ್ಪ
ಜಾತಕತಿಲಕದೊಳ್ ಅರಿಷ್ಟಯೋಗಪ್ರಕರಣವರ್ಣನಂ ಷಷ್ಠಾಧಿಕಾರಂ

---

೫೨. ಅರಿಷ್ಟಯೋಗಕಾರಕ ಗ್ರಹಗಳಲ್ಲಿ ಬಲಿಷ್ಠನಾದವನು ಜನ್ಮಕಾಲದಲ್ಲಿದ್ದ ಸ್ಥಾನಕ್ಕೆ ಚಂದ್ರನು ಬಂದಾಗ, ಜನನಕಾಲದಲ್ಲಿದ್ದ ಸ್ಥಾನಕ್ಕೆ ಅಥವಾ ಜನನಲಗ್ನಕ್ಕೆ ಬಲಿಷ್ಠನಾದ ಚಂದ್ರನು ಬಂದಾಗ, ಈ ಮೂರು ಸ್ಥಾನಗಳೊಂದರಲ್ಲಿರುವ ಚಂದ್ರನನ್ನು ಬಲಿಷ್ಠರಾದ ಪಾಪಗ್ರಹಗಳು ನೋಡಿದರೆ ಒಂದುವರ್ಷದೊಳಗೆ ಆ ಕಾಲದಲ್ಲಿ ಮಗುವಿಗೆ ಮರಣವುಂಟಾಗುತ್ತದೆ.

---

[1] ದ (ಕ ಗ) [2] ಳು (ಕ ಗ).

# ಸಪ್ತಮಾಧಿಕಾರಂ

## ಅರಿಷ್ಟಭಂಗಪ್ರಕರಣಂ

(ಚಂದ್ರಾರಿಷ್ಟಭಂಗ)

ಉಶನಂ ಮಿತ್ರನವಾಂಶಕೋಪಗತನಾ ಪೂರ್ಣೇಂದುವಂ ನೋಡೆ ಮೇಣ್
ಶಶಲಕ್ಷ್ಮಂ ಪರಮೋಚ್ಚದೊಳ್ ನೆಲಸೆ ಶುಕ್ರಂ ನೋಡೆ ಸರ್ವಗ್ರಹಂ
ಶಿಶಿರಪ್ರದ್ಯುತಿಯಂ ಪ್ರಪೂರ್ಣತನು[1]ವಂ[1] ಮೇಣ್ ನೋಡೆ ಮೇಣ್ ಪೂರ್ಣನಾ
ಗಿ ಶುಭದ್ವಾದಶಭಾಗದೊಳ್ ನಿಲೆ ಶಶಾಂಕಂ ಚಂದ್ರರಿಷ್ಟಾಪಹಂ ೧

ಅತಿಶಯಫಲದಾಯಿ ಗ್ರಹ
ಯುತನಮೃತಮರೀಚಿ ತದ್ಗ್ರಹದ್ರೇಕ್ಕಾ[2]ಣ
ಸ್ಥಿ[2]ತನೆನಿಪೊಡರಿಷ್ಟಮಹಃ
ಪತಿಯಿಂ ತಮದೊಡ್ಡು ಕೆಡುವ ತೆಱದಿಂ ಕೆಡುಗುಂ ೨

---

೧. ಜನನಕಾಲದಲ್ಲಿ ಶುಕ್ರನು ಮಿತ್ರನವಾಂಶದಲ್ಲಿದ್ದು ಪೂರ್ಣಚಂದ್ರನನ್ನು ನೋಡಿದರೆ ಅಥವಾ ಚಂದ್ರನು ಪರಮೋಚ್ಚಭಾಗದಲ್ಲಿದ್ದು ಶುಕ್ರನು ನೋಡಿದರೆ ಅಥವಾ ಎಲ್ಲ ಗ್ರಹಗಳೂ ಪೂರ್ಣಚಂದ್ರನನ್ನು ನೋಡಿದರೆ ಅಥವಾ ಹುಣ್ಣಿಮೆಯ ಚಂದ್ರನು ಶುಭಗ್ರಹದ ದ್ವಾದಶಾಂಶದಲ್ಲಿದ್ದರೆ ಚಂದ್ರನಿಂದ ಉಂಟಾಗುವ ಅರಿಷ್ಟವು ಪರಿಹಾರವಾಗುತ್ತದೆ.

ವಿ—ಶುಕ್ರನು ಬುಧಶನಿಗಳ ನವಾಂಶದಲ್ಲಿ ಅಂದರೆ ಮಿಥುನ ಕನ್ಯಾ ಮಕರ ಕುಂಭ ಈ ನವಾಂಶಗಳಲ್ಲಿದ್ದರೆ ಮಿತ್ರನ ನವಾಂಶದಲ್ಲಿದ್ದಂತಾಗುತ್ತದೆ. ಚಂದ್ರನು ವೃಷಭರಾಶಿಯ ಮೂರನೇ ಅಂಶದಲ್ಲಿದ್ದಾಗ (ರಾ. ೧ ಭಾ. ೩) ಪರಮೋಚ್ಚಭಾಗದಲ್ಲಿರುವನೆಂದು ತಿಳಿಯಬೇಕು.

೨. ಶುಭಫಲವನ್ನು ಕೊಡುವ ಗ್ರಹದೊಡನೆ ಚಂದ್ರನು ಆ ಗ್ರಹದ ದ್ರೇಕ್ಕಾಣದಲ್ಲಿದ್ದರೆ ಸೂರ್ಯನಿಂದ ಕತ್ತಲೆಯು ರಾಶಿಯು ಕೆಡುವಂತೆ ಅರಿಷ್ಟವು ಕೆಡುತ್ತದೆ (ಪರಿಹಾರವಾಗುತ್ತದೆ).

---

[1] ವಂ (ಕ) [2] ಣಾನ್ವಿ (ಗ).

(ಬಾಲಾರಿಷ್ಟದಲ್ಲಿ ಅನುಕ್ತಮರಣಕಾಲಜ್ಞಾನ)

ಬರೆ [1]ರಿ[1]ಷ್ಟಂ ಕೃತ್ಯಯೋಗಗ್ರಹವತಿಬಳನಾಗಿರ್ದ ತಾಣಕ್ಕೆ ಜನ್ಮಂ
ದೊರೆಕೊಳ್ವಂದಿಂದು ಮುನ್ನಿರ್ದೆಡೆಗೆ ಜನನಲಗ್ನಕ್ಕೆ ಮೇಣ್ ವೀರ್ಯಯುಕ್ತಂ
ಹರಿಣಾಂಕಂ ಬಂದೊಡಾ ಮೂಱನೆಯೆಡೆಯುಡುಪಂ ನೋಳ್ಪೊಡುಗ್ರರ್ ಬಲಾಢ್ಯರ್
ಮರಣಂ ಸಂವತ್ಸರಾಭ್ಯಂತರದೊ[2]ಳ್[2] ಶಿಶುವಿಂಗಾದಿನಕ್ಕೊಂದಿ ಬಕ್ಕಂ ೫೨

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ ಸರಸಪ್ರಸನ್ನ
ವಚೋಲಕ್ಷ್ಮೀಧರಂ ಗದ್ಯಪದ್ಯವಿದ್ಯಾಧರಂ ಶ್ರೀಧರಾಚಾರ್ಯ ಪ್ರಣೀತಮಪ್ಪ
ಜಾತಕತಿಲಕದೊಳ್ ಅರಿಷ್ಟಯೋಗಪ್ರಕರಣವರ್ಣನಂ ಷಷ್ಠಾಧಿಕಾರಂ

---

೫೨. ಅರಿಷ್ಟಯೋಗಕಾರಕ ಗ್ರಹಗಳಲ್ಲಿ ಬಲಿಷ್ಠನಾದವನು ಜನ್ಮಕಾಲದಲ್ಲಿದ್ದ ಸ್ಥಾನಕ್ಕೆ ಚಂದ್ರನು ಬಂದಾಗ, ಜನನಕಾಲದಲ್ಲಿದ್ದ ಸ್ಥಾನಕ್ಕೆ ಅಥವಾ ಜನನಲಗ್ನಕ್ಕೆ ಬಲಿಷ್ಠನಾದ ಚಂದ್ರನು ಬಂದಾಗ, ಈ ಮೂರು ಸ್ಥಾನಗಳೊಂದರಲ್ಲಿರುವ ಚಂದ್ರನನ್ನು ಬಲಿಷ್ಠರಾದ ಪಾಪಗ್ರಹಗಳು ನೋಡಿದರೆ ಒಂದುವರ್ಷದೊಳಗೆ ಆ ಕಾಲದಲ್ಲಿ ಮಗುವಿಗೆ ಮರಣವುಂಟಾಗುತ್ತದೆ.

---

[1] ಏ (ಕ ಗ) [2] ಳು (ಕ ಗ).

# ಸಪ್ತಮಾಧಿಕಾರಂ

---

## ಅರಿಷ್ಟಭಂಗಪ್ರಕರಣಂ

(ಚಂದ್ರಾರಿಷ್ಟಭಂಗ)

ಉಶನಂ ಮಿತ್ರನವಾಂಶಕೋಪಗತನಾ ಪೂರ್ಣೇಂದುವಂ ನೋಡೆ ಮೇಣ್
ಶಶಲಕ್ಷ್ಮಂ ಪರಮೋಚ್ಚದೊಳ್ ನೆಲಸೆ ಶುಕ್ರಂ ನೋಡೆ ಸರ್ವಗ್ರಹಂ
ಶಿಶಿರಪ್ರದ್ಯುತಿಯಂ ಪ್ರಪೂರ್ಣತನು[1]ವಂ[1] ಮೇಣ್ ನೋಡೆ ಮೇಣ್ ಪೂರ್ಣನಾ
ಗಿ ಶುಭದ್ವಾದಶಭಾಗದೊಳ್ ನಿಲೆ ಶಶಾಂಕಂ ಚಂದ್ರರಿಷ್ಟಾಪಹಂ ೧

ಅತಿಶಯಫಲದಾಯಿ ಗ್ರಹ
ಯುತನಮೃತಮರೀಚಿ ತದ್ಗ್ರಹದ್ರೇಕ್ಕಾ[2]ಣ
ಸ್ಥಿ[2]ತನೆನಿಪೊಡರಿಷ್ಟಮಹಃ
ಪತಿಯಿಂ ತಮದೊಡ್ಡು ಕೆಡುವ ತೆಱದಿಂ ಕೆಡುಗುಂ ೨

---

೧. ಜನನಕಾಲದಲ್ಲಿ ಶುಕ್ರನು ಮಿತ್ರನವಾಂಶದಲ್ಲಿದ್ದು ಪೂರ್ಣಚಂದ್ರನನ್ನು ನೋಡಿದರೆ ಅಥವಾ ಚಂದ್ರನು ಪರಮೋಚ್ಚಭಾಗದಲ್ಲಿದ್ದು ಶುಕ್ರನು ನೋಡಿದರೆ ಅಥವಾ ಎಲ್ಲ ಗ್ರಹಗಳೂ ಪೂರ್ಣಚಂದ್ರನನ್ನು ನೋಡಿದರೆ ಅಥವಾ ಹುಣ್ಣಿಮೆಯ ಚಂದ್ರನು ಶುಭಗ್ರಹದ ದ್ವಾದಶಾಂಶದಲ್ಲಿದ್ದರೆ ಚಂದ್ರನಿಂದ ಉಂಟಾಗುವ ಅರಿಷ್ಟವು ಪರಿಹಾರವಾಗುತ್ತದೆ.

ವಿ—ಶುಕ್ರನು ಬುಧಶನಿಗಳ ನವಾಂಶದಲ್ಲಿ ಅಂದರೆ ಮಿಥುನ ಕನ್ಯಾ ಮಕರ ಕುಂಭ ಈ ನವಾಂಶಗಳಲ್ಲಿದ್ದರೆ ಮಿತ್ರನ ನವಾಂಶದಲ್ಲಿದ್ದಂತಾಗುತ್ತದೆ. ಚಂದ್ರನು ವೃಷಭರಾಶಿಯ ಮೂರನೇ ಅಂಶದಲ್ಲಿದ್ದಾಗ (ರಾ. ೧ ಭಾ. ೩) ಪರಮೋಚ್ಚಭಾಗದಲ್ಲಿರುವನೆಂದು ತಿಳಿಯಬೇಕು.

೨. ಶುಭಫಲವನ್ನು ಕೊಡುವ ಗ್ರಹದೊಡನೆ ಚಂದ್ರನು ಆ ಗ್ರಹದ ದ್ರೇಕ್ಕಾಣದಲ್ಲಿದ್ದರೆ ಸೂರ್ಯನಿಂದ ಕತ್ತಲೆಯ ರಾಶಿಯು ಕೆಡುವಂತೆ ಅರಿಷ್ಟವು ಕೆಡುತ್ತದೆ (ಪರಿಹಾರವಾಗುತ್ತದೆ).

---

[1] ವ್ಯಂ (ಕ) [2] ಣಾ ಸ್ವಿ (ಗ).

ವನಜಾರಿಯಿನಾಱನೆ ಯೇ
ಟನೆಯೆಂಟನೆಯೆಡೆಯೊಳಕ್ಕೆ ಸೌಮ್ಯರ್ ನಿಲೆ ಪಾ
ಪ ನಿರೀಕ್ಷಣಮಿಲ್ಲದೊಡಾ
ಮನುಜಂಗಾ ಶಿಶಿರಕರನರಿ*ಷ್ಟಂ ಕೆಡುಗುಂ ೩

ತುಹಿನಕರಂ ನಿಲೆ ಸೌಮ್ಯ
ಗ್ರಹರಾಶಿಯೊಳುದಯಪತಿ ನಿರೀಕ್ಷಿಪೊಡನ್ಯ
ಗ್ರಹಮೀಕ್ಷಿಸದೊಡೆ ಶಶಿ [1]ರಿ[1] *
ಷ್ಟಹರನಭೀಷ್ಟಪ್ರವರ್ಧನಂ ಬುಧಮಿತ್ರಾ ೪

(ಜನ್ಮರಾಶ್ಯಧಿಪತಿಯಿಂದ ಅರಿಷ್ಟಭಂಗ)

ಜನ್ಮೇಶಂ ಬಳಯುಕ್ತನಾಗಿರೆ ಸುಹೃತ್ಸೌಮ್ಯಗ್ರಹಂ ನೋಡೆ ವೇಣ್
ಜನ್ಮೇಶಂ ನಿಲೆ ಜನ್ಮಲಗ್ನಗೃಹದೊಳ್ ಸರ್ವಗ್ರಹಂ ನೋಡೆ ವೇಣ್
ಜನ್ಮಸ್ವಾಮಿ ಬಳಾಢ್ಯನಾಗಿ ನಿಲೆ ಸೌಮ್ಯರ್ ನೋಡೆ ಕೂಸಂ ಸು[2]ಧಾ[2]
ಜನ್ಮಂ ರಕ್ಷಿಸು[3]ವಂ[3] ಸ್ವಕೀಯ ಶಿಶುವಂ ತಾಯ್ ರಕ್ಷಿಪೊಂದಂದದಿಂ ೫

೩. ಚಂದ್ರನಿಂದ ಆರನೇ ಏಳನೇ ಅಥವಾ ಎಂಟನೇ ಸ್ಥಾನದಲ್ಲಿ ಶುಭಗ್ರಹಗಳಿದ್ದು ಪಾಪಗ್ರಹದೃಷ್ಟಿ ಇಲ್ಲದಿದ್ದರೆ ಆ ಮಗುವಿಗೆ ಚಂದ್ರನಿಂದ ಉಂಟಾಗುವ ಅರಿಷ್ಟವು ಪರಿಹಾರವಾಗುತ್ತದೆ.

೪. ಜನನಕಾಲದಲ್ಲಿ ಚಂದ್ರನು ಶುಭಗ್ರಹದ ರಾಶಿಯಲ್ಲಿದ್ದು ಲಗ್ನಾಧಿಪತಿ ನೋಡಿ ಉಳಿದ ಗ್ರಹಗಳು ನೋಡದಿದ್ದರೆ ಅವನು ಅರಿಷ್ಟವನ್ನು ಹೋಗಲಾಡಿಸಿ ಶುಭಫಲಗಳನ್ನು ಹೆಚ್ಚಿಸುತ್ತಾನೆ.

೫. ಜನನಕಾಲದಲ್ಲಿ ಜನ್ಮರಾಶ್ಯಧಿಪತಿ ಬಲಿಷ್ಠನಾಗಿದ್ದು ಮಿತ್ರ ಶುಭಗ್ರಹ ನೋಡಿದರೆ ಅಥವಾ ಜನ್ಮರಾಶ್ಯಧಿಪತಿ ಜನ್ಮಲಗ್ನದಲ್ಲಿದ್ದು ಎಲ್ಲ ಗ್ರಹಗಳೂ ನೋಡಿದರೆ ಅಥವಾ ಜನ್ಮರಾಶ್ಯಧಿಪತಿ ಬಲಿಷ್ಠನಾಗಿದ್ದು ಶುಭ ಗ್ರಹಗಳು ನೋಡಿದರೆ ತಾಯಿ ತನ್ನ ಮಗುವನ್ನು ಕಾಪಾಡುವಂತೆ ಚಂದ್ರನು ಆ ಶಿಶುವನ್ನು ರಕ್ಷಿಸುತ್ತಾನೆ.

[1] ಚರಿ (ಗ) [2] ರಾ (ಕ ಗ) [3] ಗುಂ (ಕ).
* ಈ ಭಾಗ (ಕ) ಪ್ರತಿಯಲ್ಲಿಲ್ಲ.

ಶಶಲಾಂಛನನಿಂದಂ ದ್ವಾ
ದಶದೊಳ್ ಬುಧಶುಕ್ರರಿರೆ ಬೃಹಸ್ಪತಿಯಿರೆ ತಾ
ನೆ ಶುಭಗ್ರಹಗೃಹವೆನಿಸಿದ
ದಶಮದೊಳುಡುನಾಥಜಾತ ದುರಿತವಿನಾಶಂ ೬

ತಾರಾಧಿನಾಯಕಂ ನಿಲೆ
ಹೋರೇಶಂಗುಪಚಯರ್ಕ್ಷದೊಳ್ ಹಿಬುಕದೊಳ್[1]
ಕ್ರೂರಗ್ರಹಮೀಕ್ಷಿಪೊಡೆ ಸು
ಧಾರೋಚಿಯಿನಾದುದೊಂದರಿಷ್ಟಂ ಕೆಡುಗುಂ ೭

ಕ್ರೂರಗ್ರಹಮಧ್ಯದೊಳಾ[2]
ಕ್ರೂರಗ್ರಹ[3]ವರ್ಗದೊಳ್[3] ಸುಧಾಕರನಿರೆ ಮ
ತ್ತಾ ರಾ[4]ಶ್ಯಧಿಪಂ[4] ನೋಡೆ ಕು
ಮಾರಕನಾರಿಷ್ಟ ವಿಜಯಿ ಬುಧಜನಮಿತ್ರಾ ೮

---

೬. ಜನನಕಾಲದಲ್ಲಿ ಚಂದ್ರನಿಂದ ಹನ್ನೆರಡನೆಯ ಸ್ಥಾನದಲ್ಲಿ ಬುಧ ಶುಕ್ರರಿದ್ದು ಗುರುವು ಶುಭಗ್ರಹರಾಶಿಯಾದ ಹತ್ತನೇ ಸ್ಥಾನದಲ್ಲಿದ್ದರೆ ಚಂದ್ರನಿಂದುಂಟಾದ ಅರಿಷ್ಟವು ನಿವಾರಣೆಯಾಗುತ್ತದೆ.

ವಿ—ಹನ್ನೊಂದನೆಯ ಸ್ಥಾನದಲ್ಲಿ ಪಾಪಗ್ರಹಗಳಿರಬೇಕೆಂದು ಸಾರಾವಳಿಯಲ್ಲಿ ಅಧಿಕವಾಗಿದೆ.

೭. ಚಂದ್ರನು ಲಗ್ನಾಧಿಪತಿಗೆ ಉಪಚಯರಾಶಿಯಲ್ಲಿ ಅಥವಾ ನಾಲ್ಕನೇ ರಾಶಿಯಲ್ಲಿದ್ದು ಶುಭಗ್ರಹಗಳು ನೋಡಿದರೆ ಚಂದ್ರನಿಂದುಂಟಾದ ಅರಿಷ್ಟವು ಕೆಡುತ್ತದೆ.

ವಿ—ಲಗ್ನದಿಂದ ಅಥವಾ ಉದ್ದಿಷ್ಟಸ್ಥಾನದಿಂದ ಮೂರು ಆರು ಹತ್ತು ಹನ್ನೊಂದನೇ ರಾಶಿಗಳು ಉಪಚಯರಾಶಿಗಳು. ಲಗ್ನಾಧಿಪತಿಗೆ ಮೂರು ನಾಲ್ಕು ಆರು ಹತ್ತು ಹನ್ನೊಂದು ಈ ಸ್ಥಾನಗಳೊಂದರಲ್ಲಿ ಚಂದ್ರನಿದ್ದು ಶುಭಗ್ರಹಗಳು ನೋಡಿದರೆ ಆತನು ಅರಿಷ್ಟವನ್ನುಂಟುಮಾಡುವುದಿಲ್ಲ.

೮. ಕ್ರೂರಗ್ರಹಮಧ್ಯದಲ್ಲಿ ಮತ್ತು ಅಶುಭಗ್ರಹಷದ್ವರ್ಗದಲ್ಲಿ ಚಂದ್ರನಿದ್ದು ಚಂದ್ರನಿರುವ ರಾಶ್ಯಧಿಪತಿ ನೋಡಿದರೆ ಮಗುವಿನ ಅರಿಷ್ಟವು ನಿವಾರಣೆಯಾಗುತ್ತದೆ.

ವಿ—ಚಂದ್ರನು ಕ್ರೂರಗ್ರಹದ ರಾಶಿಯಲ್ಲಿ ಅಶುಭಗ್ರಹದ ಷದ್ವರ್ಗದಲ್ಲಿದ್ದು ಚಂದ್ರನಿರುವ ರಾಶ್ಯಧಿಪತಿ ಆತನನ್ನು ನೋಡಿದರೆ ಚಂದ್ರನಿಂದ ಅರಿಷ್ಟವುಂಟಾಗುವುದಿಲ್ಲ ಎಂದು ಸಾರಾವಳಿಯಲ್ಲಿದೆ.

---

[1] ಳಾ (ಕ) [2] ಳ (ಗ) [3] ಮವರ್ಗಳೊಳ್ (ಗ) [4] ಸ್ಯಾಧಿಪ (ಕ ಗ).

ಜನನೋದಯಾಧಿಪಂ ಕೇಂ
ದ್ರನಿವಾಸದೊಳೊಂದಿ ನಿಂದನಪ್ಪೊಡೆ ಶಶಲಾಂ
ಛನನಕ್ಕೆ ಸೌಮ್ಯನಕ್ಕಾ
ಱನೆಯೆಂಟನೆಯೆಡೆಯೊಳಿರ್ದ ದೋಷಮನ[1]ರೆ[1]ಗುಂ ೯

ದೊರೆಕೊಳೆ ಜನ್ಮಂ ಜೊನ್ನದೊ
ಳಿರುಳೊಳ್ ಸೌಮ್ಯಗ್ರಹಂ ನಿರೀಕ್ಷಿಸೆ ಶುಕ್ಲೇ
ತರ ಪಕ್ಷದೊಳಹದೊಳ್ ಕ್ರೂ
ರರಭೀಕ್ಷಿಸೆ ಶಶಿಯಿನೊಗೆದರಿಷ್ಟಂ ಕೆಡುಗುಂ ೧೦

ಹರಿಣಾಂಕಂ ಪೂರ್ಣಬಿಂಬಂ ನಿಜೆ ನಿಜಗೃಹದೊಳ್ ಸೌಮ್ಯಮಿತ್ರಾತ್ಮವರ್ಗಾಂ
ತರದೊಳ್ ಮೇಣುಚ್ಚದೊಳ್ ವೀಕ್ಷಿಸೆ ಶುಭನಿವಹಂ ನೋಡ[2]ದಿ[2]ರ್ದಂದು ಮೇಣ್ ಕೂ
ಡಿರದಂದುಗ್ರ ಗ್ರಹಂ ಕಾಣ್ಕೆಗೆ ಪೊಱಗನೆ ತತ್ಕಾಲಶತ್ರುಗ್ರಹಂಗಳ್
ದೊರೆಕೊಳ್ಗುಂ ಯಾಮಿನೀಸ್ವಾಮಿಯಿನೊಗೆವ ಮಹಾರಿಷ್ಟ[3]ಭೀಷ್ಮಕ್ಕೆ ಭಂಗಂ[3] ೧೧

---

೯. ಜನನಕಾಲದಲ್ಲಿ ಲಗ್ನಾಧಿಪತಿ ಕೇಂದ್ರಸ್ಥಾನದಲ್ಲಿದ್ದರೆ ಚಂದ್ರನಾಗಲೀ ಶುಭಗ್ರಹವಾಗಲೀ ಆರು ಅಥವಾ ಎಂಟನೆಯ ಸ್ಥಾನದಲ್ಲಿರುವುದರಿಂದುಂಟಾಗುವ ದೋಷವನ್ನು ಆತನು ಹೋಗಲಾಡಿಸುತ್ತಾನೆ.

೧೦. ಶುಕ್ಲಪಕ್ಷದಲ್ಲಿ ರಾತ್ರಿ ಜನನವಾಗಿ ಶುಭಗ್ರಹವು ನೋಡಿದರೆ ಅಥವಾ ಕೃಷ್ಣಪಕ್ಷದಲ್ಲಿ ಹಗಲು ಜನನವಾಗಿ ಕ್ರೂರಗ್ರಹಗಳು ನೋಡಿದರೆ ಚಂದ್ರನಿಂದುಂಟಾದ ಅರಿಷ್ಟವು ನಾಶವಾಗುತ್ತದೆ.

೧೧. ಪೂರ್ಣಚಂದ್ರನು ಸ್ವಕ್ಷೇತ್ರ (ಕರ್ಕಟಕ)ದಲ್ಲಾಗಲೀ ಶುಭಗ್ರಹದ ಅಥವಾ ಮಿತ್ರಗ್ರಹದ ಅಥವಾ ತನ್ನ ಷಡ್ವರ್ಗದಲ್ಲಾಗಲೀ ಉಚ್ಚಕ್ಷೇತ್ರ (ಮೇಷ)ದಲ್ಲಾಗಲೀ ಇದ್ದು ಶುಭಗ್ರಹಗಳು ನೋಡಿ ಪಾಪಗ್ರಹಗಳು ನೋಡದ ಅಥವಾ ಕೂಡ ಇರದೆ ತತ್ಕಾಲಶತ್ರುಗಳೂ ನೋಡದಿದ್ದರೆ ಚಂದ್ರನಿಂದುಂಟಾದ ಮಹಾರಿಷ್ಟ ಭಯಕ್ಕೆ ಭಂಗ ಬರುತ್ತದೆ.

ವಿ—ಗ್ರಹವಿರುವ ಸ್ಥಾನದಿಂದ ಮೂರು ಹನ್ನೊಂದು ಹನ್ನೆರಡು ಎರಡು ಹತ್ತು ನಾಲ್ಕು ಈ ಆರು ಸ್ಥಾನಗಳನ್ನು ಬಿಟ್ಟು ಉಳಿದ ಸ್ಥಾನಗಳಲ್ಲಿರುವ ಗ್ರಹವು ತತ್ಕಾಲಶತ್ರುವು.

ಈ ಪದ್ಯದಲ್ಲಿ ಐದು ಅರಿಷ್ಟಯೋಗಭಂಗಗಳಿವೆ.

| | | |
|---|---|---|
| ೧. ಪೂರ್ಣಚಂದ್ರನು | ಕರ್ಕಟಕ ರಾಶಿಯಲ್ಲಿ | ಇರುವಾಗ ಚಂದ್ರನಿಗೆ ಶುಭ ಗ್ರಹದೃಷ್ಟಿಯಿದ್ದು ಪಾಪಗ್ರಹದ ದೃಷ್ಟಿ ಅಥವಾ ಯೋಗ ಮತ್ತು ತತ್ಕಾಲಶತ್ರುಗ್ರಹದ ದೃಷ್ಟಿ ಇಲ್ಲದಿದ್ದರೆ |
| ೨. ,, | ಶುಭಗ್ರಹದ ರಾಶಿಯಲ್ಲಿ | |
| ೩. ,, | ಮಿತ್ರಕ್ಷೇತ್ರದಲ್ಲಿ | |
| ೪. ,, | ತನ್ನ ಷಡ್ವರ್ಗದಲ್ಲಿ | |
| ೫. ,, | ವೃಷಭ ರಾಶಿಯಲ್ಲಿ | |

ಚಂದ್ರನಿಂದುಂಟಾಗುವ ಅರಿಷ್ಟವು ನಿವಾರಣೆಯಾಗುತ್ತದೆ.

---

[1] ರೆ (ಕ) [2] ಲ (ಕ) [3] ಭೀಷ್ಮಕ್ಕೆ ಭಗ್ನಂ (ಕ) ಭೀಷ್ಮಕ್ಕೆ ಭಂಗಂ (ಗ).

(ಸರ್ವಾರಿಷ್ಟಭಂಗ)

ಬಲಯುತರಾಗಿರೆ ಸೌಮ್ಯರ್
ಬಲಹೀನರಸದ್ಗ್ರಹಂಗಳಾಗಿರೆ ಬಲವ
ದ್ಬಲ[1]ಭಿ[1]ದ್ಗುರು ವೀಕ್ಷಿಸೆ ಶುಭ
ವಿಲಗ್ನಮಾದಂದು ಸರ್ವರಿಷ್ಟಂ ಕೆಡುಗುಂ ೧೨

ಪಿರಿದು ಪಳಾಳದೊಳೇಂ ಸುರ
ಗುರುವೊರ್ವನೆ ವೀರ್ಯವಂತನುಂ ಕಾಂತನುಮಾ
ಗಿರೆ ಜನ್ಮಲಗ್ನದೊಳ್ ಸಂ
ಹರಿಸುಗುಮಘಮಂ ಕರೀಂದ್ರಮಂ ಸಿಂಹದವೊಲ್ ೧೩

ಶುಭವರ್ಗದೊಳೊಡಗೂಡಿರೆ
ಶುಭೇತರಗ್ರಹಮದಂ ನಿರೀಕ್ಷಿಪೊಡೆ ವಲಂ
ಶುಭ[2]ವರ್ಗ[2]ದೊಳೊಡಗೂಡದ
ಶುಭಗ್ರಹಂ ಸಕಲದುರಿತಮಂ [3]ಪರಿ[3]ಹರಿಕುಂ ೧೪

---

೧೨. ಜನನಕಾಲದಲ್ಲಿ ಶುಭಗ್ರಹಗಳು ಬಲಿಷ್ಠರೂ ಪಾಪಗ್ರಹಗಳು ದುರ್ಬಲರೂ ಆಗಿದ್ದು ಬಲಿಷ್ಠನಾದ ಗುರುವು ನೋಡುವ ಶುಭಲಗ್ನದಲ್ಲಿ ಜನಿಸಿದ್ದರೆ ಎಲ್ಲ ಅರಿಷ್ಟಗಳೂ ನಾಶವಾಗುತ್ತವೆ.

ವಿ–ಗುರುವಿಗೆ ೫, ೯ನೇ ಸ್ಥಾನಗಳಲ್ಲಿ ವಿಶೇಷದೃಷ್ಟಿಯಿರುವುದರಿಂದ ಗುರುವು ತ್ರಿಕೋಣ (೫, ೯) ಅಥವಾ ಸಪ್ತಮ ಕೇಂದ್ರದಲ್ಲಿದ್ದರೆ ಲಗ್ನವನ್ನು ನೋಡಿದಂತಾಗುತ್ತದೆ.

೧೩. ನಿಷ್ಫಲವಾದ ಹೆಚ್ಚು ಮಾತಿನಿಂದೇನು ! ಗುರುವು ಒಬ್ಬನೇ ಬಲಿಷ್ಠನೂ ಮನೋಹರನೂ (ಕಾಂತಿಯುತನೂ) ಆಗಿ ಜನ್ಮಲಗ್ನದಲ್ಲಿದ್ದರೆ ಆನೆಯನ್ನು ಸಿಂಹವು ಸಂಹರಿಸುವಂತೆ ಆತನು ಅರಿಷ್ಟವನ್ನು ಹೋಗಲಾಡಿಸುತ್ತಾನೆ.

ವಿ–ಷಡ್ಬಲಯುತನಾದ ಗುರುವು ಲಗ್ನದಲ್ಲಿದ್ದರೆ ಎಲ್ಲ ಅರಿಷ್ಟಗಳನ್ನೂ ನಿವಾರಿಸುತ್ತಾನೆ.

೧೪. ಶುಭಷಡ್ವರ್ಗದಲ್ಲಿರುವ ಅಶುಭಗ್ರಹವನ್ನು ಶುಭಷಡ್ವರ್ಗದಲ್ಲಿರುವ ಶುಭಗ್ರಹ ನೋಡಿದರೆ ಅದು ಎಲ್ಲ ಅರಿಷ್ಟವನ್ನೂ ಪರಿಹರಿಸುತ್ತದೆ.

---

1 ಘ್ನ (ಕ ಗ) 2 ಲಗ್ನ (ಕ ಗ) 3 ಸಂ (ಕ).

ಸಮನಿಸೆ ಜನ್ಮೋದಯಮಾ
ಸಮಯದೊಳುದಯಿಪ್ಪೊಡಗಸ್ತ್ಯಮುನಿಪಂ ಮೇಣ್ ಸ
ಪ್ತಮುನೀಂದ್ರರುದಯಮಾದೊಡೆ
ಸಮಸ್ತದೋಷೋಪಶಮನಮದು ಬುಧಮಿತ್ರಾ ೧೫

---

೧೫. ಜನನಕಾಲಕ್ಕೆ ಸರಿಯಾಗಿ ಅಗಸ್ತ್ಯೋದಯವಾಗಲೀ ಸಪ್ತಋಷಿಗಳ ಉದಯವಾಗಲೀ ಆದರೆ ಎಲ್ಲ ಅರಿಷ್ಟದೋಷಗಳೂ ಶಾಂತವಾಗುತ್ತವೆ.

ವಿ–ಗ್ರಹಗಳಾಗಲೀ ನಕ್ಷತ್ರಗಳಾಗಲೀ ಸೂರ್ಯನ ಸಮೀಪದಲ್ಲಿ ಸಂಚರಿಸುವಾಗ ನಮ್ಮ ದೃಷ್ಟಿಗೆ ಕಾಣದಿರುವುದರಿಂದ ಆ ಕಾಲದಲ್ಲಿ ಆ ಗ್ರಹ ಅಥವಾ ನಕ್ಷತ್ರವು ಅಸ್ತವಾಗಿರುತ್ತದೆಂದೂ ಪುನಃ ಯಾವ ದಿನದಲ್ಲಿ ಕಾಣಲು ಆರಂಭಿಸುತ್ತದೆಯೋ ಆ ದಿವಸ ಅದು ಉದಯವಾಗುತ್ತದೆಂದೂ ತಿಳಿಯಬೇಕು. ಈ ಕಾಲಗಳನ್ನು ಗಣಿತಮಾಡಿ ಮೊದಲೇ ತಿಳಿಯಬಹುದು.

ಆಕಾಶದಲ್ಲಿ ನಕ್ಷತ್ರವನ್ನು ಗುರುತಿಸಬೇಕಾದರೆ ಅದು ಕ್ರಾಂತಿವೃತ್ತಸಮರೇಖೆಯಲ್ಲಿ ಕ್ರಾಂತಿವೃತ್ತದಿಂದ ದಕ್ಷಿಣೋತ್ತರದಲ್ಲಿ ಎಷ್ಟು ದೂರದಲ್ಲಿರುತ್ತದೆ ಎನ್ನುವುದನ್ನು ತಿಳಿಯಬೇಕು. ಕ್ರಾಂತಿವೃತ್ತದಲ್ಲಿ ಸಮರೇಖೆ ಎಷ್ಟನೆಯ ಅಂಶದಲ್ಲಿ ಇರುತ್ತದೆ ಎನ್ನುವುದನ್ನು ತಿಳಿಸುವುದೇ ಅದರ ಧ್ರುವಕ. ಕ್ರಾಂತಿವೃತ್ತಸಮರೇಖೆಯಲ್ಲಿ (ದಕ್ಷಿಣೋತ್ತರರೇಖೆ) ದಕ್ಷಿಣೋತ್ತರ ಅಂತರವೇ ಶರ.

* ಅಗಸ್ತ್ಯನಕ್ಷತ್ರಕ್ಕೆ ಧ್ರುವಕ ರಾಶ್ಯಾದಿ ರಾ. ೨ ಅಂ. ೨೭ ಕ. ೦. ದಕ್ಷಿಣಶರ ೭೭ ಅಂಶಗಳು.

ಸೂರ್ಯನಿಗೂ ಉದಯ ಅಥವಾ ಅಸ್ತವಾಗುವ [1]ನಕ್ಷತ್ರಕ್ಕೂ ಇರುವ ಅಂತರವೇ ಕಾಲಾಂಶ. ಅಗಸ್ತ್ಯನಕ್ಷತ್ರದ ಕಾಲಾಂಶ ೧೩ ಅಂಶಗಳು.

ಕೇತಕೀ ಗ್ರಹಗಣಿತದಂತೆ ಲೆಕ್ಕಮಾಡಿದರೆ ಸೂರ್ಯನು ಪುಷ್ಯನಕ್ಷತ್ರ ೩ನೇ ಪಾದದಲ್ಲಿರುವಾಗ (ಸೂರ್ಯಸ್ಫುಟ ರಾಶ್ಯಾದಿ ೩–೧೨–೧೮ ಆದಾಗ) ಮೈಸೂರಿನಲ್ಲಿ ಅಗಸ್ತ್ಯೋದಯವಾಗುತ್ತದೆ. ವರಾಹಮಿಹಿರಾಚಾರ್ಯರು ಬೃಹತ್ಸಂಹಿತೆಯಲ್ಲಿ ಹೇಳಿರುವಂತೆ ಸ್ಫುಟರವಿಯು ಸಿಂಹರಾಶಿಯಲ್ಲಿ ೨೭ನೇ ಅಂಶದಲ್ಲಿರುವಾಗ ಉಜ್ಜಯಿನಿಯಲ್ಲಿ ಅಗಸ್ತ್ಯೋದಯವಾಗುತ್ತದೆ, ಅಗಸ್ತ್ಯೋದಯವಾದರೆ ಕೊಚ್ಚೆಯಿಂದ ಕಲುಷಿತವಾದ ನೀರೂ ಸತ್ಪುರುಷರ ಹೃದಯದಂತೆ ನಿರ್ಮಲವಾಗುತ್ತದೆ ಎಂದು ಆಚಾರ್ಯರು ತಮ್ಮ ಸಂಹಿತೆಯಲ್ಲಿ ಹೇಳಿರುತ್ತಾರೆ.

ಆಕಾಶದ ಉತ್ತರಭಾಗದಲ್ಲಿ (ಸ) ಸಕಾರದ ಒತ್ತಕ್ಷರದಂತೆ ಕಾಣುವ ಏಳು ನಕ್ಷತ್ರಗಳೇ ಸಪ್ತಋಷಿಗಳು. ಈ ಗುಂಪಿನಲ್ಲಿ ಪೂರ್ವಭಾಗದಲ್ಲಿರುವ ನಕ್ಷತ್ರವೇ ಮರೀಚಿ, ಆತನಿಗೆ ಪಶ್ಚಿಮದಲ್ಲಿರುವುದೇ ವಸಿಷ್ಠ, ವಸಿಷ್ಠನಿಗೆ ಪಶ್ಚಿಮದಲ್ಲಿರುವುದೇ ಆಂಗಿರಸ, ಆತನಿಗೆ ಪಶ್ಚಿಮದಲ್ಲಿರುವುದೇ ಅತ್ರಿ, ಅತ್ರಿಯ ಪಕ್ಕದಲ್ಲಿ ಕ್ರಮವಾಗಿ ಪುಲಸ್ತ್ಯ ಪುಲಹ ಕ್ರತು ಇವರಿರುವರು.

* ಸಿದ್ಧಾಂತಶೇಖರದಂತೆ. [1] ಗ್ರಹೋದಯಾಸ್ತಗಳಲ್ಲಿ ಗ್ರಹಕ್ಕೂ.

ಉರಗೇಂದ್ರಂ ನಿಲೆ ಷಟ್ ತ್ರಿ ಲಾಭಗೃಹದೊಳ್ ಸೌಮ್ಯಗ್ರಹಂ ನೋಡೆ ಮೇಣ್
ಬರೆ ಲಗ್ನಂ ವೃಷ ಮೇಷ ಕರ್ಕಟಕಮಾ ಲಗ್ನಂಗಳೊಳ್ ರಾಹು ಕೂ
ಡಿರೆ ಮೇಣಾ ಸಕಳಗ್ರಹಂ ನಿರಭಿಭೂತಂ ಪೂರ್ಣತೇಜಸ್ವರಾ
ಗಿರೆ ಶೀರ್ಷೋದಯರಾಶಿಯೊಳ್ ನಿಖಿಳರಿಷ್ಟಂ ನಷ್ಟಮಂ ಪೊರ್ದುಗುಂ ೧೬

ಶುಭಯೋಗಾವಳಿ ಬರೆ ಮೇಣ್
ಶುಭಗ್ರಹಂ ಕೂಡಿಯಿರ್ದೊಡಂ[1] ಸೌಮ್ಯರ್ ಮ
ತ್ತಭಿವೀಕ್ಷಿಸೆ ಬಹುವಿಧ ರಿ
ಷ್ಟಭಂಗಮೊಂದಱಿಗೆ ಜನನ ತಾತ್ಕಾಲಿಕದೊಳ್ ೧೭

---

ಈ ನಕ್ಷತ್ರರೂಪದಲ್ಲಿ ಕಂಡುಬರುವ ಏಳು ಋಷಿಗಳು ಒಂದೊಂದು ನಕ್ಷತ್ರದಲ್ಲೂ ನೂರುವರ್ಷಗಳು ಇರುವರು. ಪಾಂಡವರಲ್ಲಿ ಹಿರಿಯನಾದ ಯುಧಿಷ್ಠಿರ ಮಹಾರಾಜನು ರಾಜ್ಯವಾಳುತ್ತಿದ್ದಾಗ ಈ ಋಷಿಗಳು ಮಘಾ ನಕ್ಷತ್ರದಲ್ಲಿದ್ದರೆಂದು ವರಾಹಮಿಹಿರಾಚಾರ್ಯರು ಬೃಹತ್ಸಂಹಿತೆಯಲ್ಲಿ ತಿಳಿಸಿರುತ್ತಾರೆ. ಈಗ ಈ ಋಷಿಗಳು ಪುಷ್ಯನಕ್ಷತ್ರದಲ್ಲಿ ಸಂಚರಿಸುತ್ತಾರೆ.

೧೬. ರಾಹುವು ಆರು ಮೂರು ಹನ್ನೊಂದನೇ ರಾಶಿಯಲ್ಲಿದ್ದು ಶುಭಗ್ರಹ ನೋಡಿದರೆ ಅಥವಾ ವೃಷಭ ಮೇಷ ಕರ್ಕಟಕ ರಾಶಿಗಳಲ್ಲೊಂದು ಲಗ್ನವಾಗಿದ್ದು ಅಲ್ಲಿ ರಾಹುವಿದ್ದರೆ ಅಥವಾ ಎಲ್ಲ ಗ್ರಹಗಳೂ ಯುದ್ಧದಲ್ಲಿ ಸೋತಿರದೆ ಕಾಂತಿಯುತರಾಗಿ ಶೀರ್ಷೋದಯರಾಶಿಯಲ್ಲಿದ್ದರೆ ಎಲ್ಲ ಅರಿಷ್ಟಗಳೂ ನಾಶವಾಗುತ್ತವೆ.

ವಿ—ಈ ಪದ್ಯದಲ್ಲಿ ಮೂರು ಅರಿಷ್ಟಭಂಗಯೋಗಗಳಿವೆ:

(೧) ರಾಹುವು ಮೂರು ಆರು ಹನ್ನೊಂದನೆಯ ರಾಶಿಯಲ್ಲಿದ್ದು ಶುಭಗ್ರಹ ನೋಡುವುದು.

(೨) ಮೇಷ ವೃಷಭ ಕರ್ಕಟಕ ರಾಶಿಗಳಲ್ಲಿ ರಾಹುವಿದ್ದು ಶುಭಗ್ರಹ ನೋಡುವುದು.

(೩) ಎಲ್ಲ ಗ್ರಹಗಳೂ ಯುದ್ಧದಲ್ಲಿ ಸೋತಿರದೆ ಸಿಂಹ ಕನ್ಯಾ ತುಲಾ ವೃಶ್ಚಿಕ ಕುಂಭರಾಶಿಗಳಲ್ಲಿರುವುದು.

೧೭. ಜನನಕಾಲದಲ್ಲಿ ಶುಭಯೋಗಗಳಿದ್ದರೂ ಶುಭಗ್ರಹವು ಲಗ್ನದಲ್ಲಿದ್ದು ಶುಭಗ್ರಹಗಳು ಲಗ್ನವನ್ನು ನೋಡಿದರೂ ಅರಿಷ್ಟಗಳೆಲ್ಲಾ ಜನನ ಕಾಲದಲ್ಲೇ ಶಾಂತವಾಗುತ್ತವೆ.

---

[1] ಡಿರ್ದೊ (ಕ) ಬಿಡಿರ್ದೊ (ಗ).

ಪವನರಜಂ ಮೃದುವುಂ ಸ್ನಿ
ಗ್ಧ[1]ವು[1]ಮಾದೊಡೆ ಶುಭಮುಹೂರ್ತಮಾಗಿರೆ ಮುಗಿಲಾ
ದವೆ [2]ಗು[2]ಣ್ಪಂ ಪಡೆದೊಡೆ ಪರಿ
ಭವ[ಮು]ಂ ಗ್ರಹಕಾಗದಿರ್ದೊ[3]ಡಪ[3]ಸಂಹರಣಂ ೧೮

ಗ್ರಹಮಿರೆ ಪರಿವೇಷದೊಳಾ
ಗ್ರಹಮಂ [ಕ್ರೂರಗ್ರಹಂ] ನಿರೀಕ್ಷಿಸುವೊಡರಿ
ಷ್ಟಹರಂ ತುಷ್ಟಿಕರಮಭೀ
ಷ್ಟಹೇತು ಜನ್ಮಾವಸರದೊಳಿದು ಬುಧವಿತ್ತಾ ೧೯

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ ಸರಸಪ್ರಸನ್ನ ವಚೋಲಕ್ಷ್ಮೀಧರಂ ಗದ್ಯಪದ್ಯವಿದ್ಯಾಧರಂ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ಅರಿಷ್ಟಭಂಗಪ್ರಕರಣವರ್ಣನಂಸಪ್ತಮಾಧಿಕಾರಂ

---

೧೮. ಮೃದುವೂ ನಯವೂ ಆದ ಧೂಳಿನಿಂದ ಕೂಡಿದ ಗಾಳಿ ಬೀಸಿದಾಗ ಮೋಡ ಹೆಚ್ಚಾಗಿ ಗುಂಪು ಕೂಡಿದಾಗ ಗ್ರಹಗಳು ಯುದ್ಧದಲ್ಲಿ ಸೋತಿರದಿದ್ದಾಗ ಶುಭಮುಹೂರ್ತದಲ್ಲಿ ಹುಟ್ಟಿದರೆ ಅರಿಷ್ಟನಿವಾರಣೆಯಾಗುತ್ತದೆ.

೧೯. ಜನನಕಾಲದಲ್ಲಿ ಗ್ರಹವು ಪರಿವೇಷದಿಂದ ಸುತ್ತಲ್ಪಟ್ಟಿದ್ದು ಆ ಗ್ರಹವನ್ನು ಕ್ರೂರಗ್ರಹವು ನೋಡಿದರೆ ಅರಿಷ್ಟನಿವಾರಣೆಯೂ ತುಷ್ಟಿಕರವೂ ಅಭೀಷ್ಟಕ್ಕೆ ಕಾರಣವೂ ಆಗುತ್ತದೆ.

ವಿ–ಕೆಲವುವೇಳೆ ಗ್ರಹಮಂಡಲದ ಸುತ್ತಲೂ ಕಂಡುಬರುವ ಒಂದು ವೃತ್ತಾಕಾರದ ಗುರುತೇ ಪರಿವೇಷ.

---

[1] ವು (ಕ ಗ) [2] ಣು (ಕ ಗ) [3] ಡೆ ಗಣ (ಕ).

# ಅಷ್ಟಮಾಧಿಕಾರಂ

## ಆಯುರ್ದಾಯ ಪ್ರಕರಣಂ

*(ಅಂಶಾಯುರ್ದಾಯಾನಯನ ಕ್ರಮ)

ಕ್ರಮದಿಂದಂ ಗ್ರಹರಾಶಿ ಭಾಗ ಕಲೆಯಂ ನೂಱೆಂಟಱಿಂ ಪೆರ್ಚಿಸು
ಕ್ರಮದಿಂ[1]ದೆತ್ತ[1]ಱುವತ್ತಱಿಂದ ಕಲೆಯಂ ಮೂವತ್ತಱಿಂದೆತ್ತು ಭಾ
ಗಮನೀರಾಱಲು ರಾಶಿಯಂ ಭಗಣಮಕ್ಕುಂ ಲಬ್ಧಮಾ ಪೆತ್ತ ಲ
ಬ್ಧಮನೀರಾಱಱಿನಬ್ದ ಮಾಸ ದಿನ ನಾಡೀಸಂಖೆ ಶೇಷಸ್ಥಿತಂ ೧

---

೧. ಕ್ರಮವಾಗಿ ಜನನಕಾಲಗ್ರಹಸ್ಫುಟದ ರಾಶಿ ಅಂಶ ಕಲೆಗಳನ್ನು ನೂರೆಂಟರಿಂದ ಗುಣಿಸಿ ಬಂದ ಕಲೆಗಳನ್ನು ಅರುವತ್ತರಿಂದಲೂ ಅಂಶಗಳನ್ನು ಮೂವತ್ತರಿಂದಲೂ ರಾಶಿಗಳನ್ನು ಹನ್ನೆರಡರಿಂದಲೂ ಭಾಗಿಸಿದರೆ ಕೊನೆಯಲ್ಲಿ ಬರುವ ಲಬ್ಧಿಯೇ ಭಗಣವೆನಿಸುತ್ತದೆ. ಆ ಲಬ್ಧಿಯನ್ನು ಹನ್ನೆರಡರಿಂದ ಭಾಗಿಸಿ ಬರುವ ಶೇಷವೇ ವರ್ಷಪ್ರಮಾಣವು. ಕ್ರಮವಾಗಿ ಹಿಂದೆ ಬಂದಿರುವ ಶೇಷಗಳೇ ಮಾಸ ದಿವಸ ಘಳಿಗೆಗಳು ಆಗುತ್ತವೆ.

ವಿ–ಜನನಕಾಲದ ಗ್ರಹಸ್ಫುಟವನ್ನು ನೂರೆಂಟರಿಂದ ಗುಣಿಸಿ ಬರುವ ಭಗಣಾದಿಸ್ಫುಟದಲ್ಲಿ ಭಗಣವನ್ನು ಹನ್ನೆರಡರಿಂದ ಭಾಗಿಸಿ ಭಗಣಶೇಷವನ್ನು ಬರೆದುಕೊಳ್ಳಬೇಕು. ಭಗಣಶೇಷವೇ ಆ ಗ್ರಹವು ಕೊಡುವ ಆಯುಸ್ಸಿನ ವರ್ಷ ಪ್ರಮಾಣ; ರಾಶಿಶೇಷವೇ ತಿಂಗಳು; ಅಂಶಶೇಷವೇ ದಿನ; ಕಲಾಶೇಷವೇ ಘಳಿಗೆ. ಇದರಂತೆ ಪ್ರತಿಗ್ರಹದಿಂದಲೂ ಬರುವ ಆಯುಸ್ಸಿನ ಪ್ರಮಾಣವನ್ನು ಕೂಡಿದರೆ ಆ ಜಾತಕನ ಒಟ್ಟು ಆಯುಃಪ್ರಮಾಣವು ತಿಳಿದುಬರುತ್ತದೆ. ಗ್ರಹವು ಕೊಡಬಹುದಾದ ಪರಮಾಯುಸ್ಸಿನ ಪ್ರಮಾಣವು ಹನ್ನೆರಡುವರ್ಷಗಳಿಗಿಂತ ಅಧಿಕವಾಗುವುದಿಲ್ಲ.

ಉದಾ–ಜನನಕಾಲದಲ್ಲಿ ಸೂರ್ಯಸ್ಫುಟ ರಾಶ್ಯಾದಿ ರಾ೧ ಭಾ೪ ಕ೧೦. ಆದಾಗ ಸೂರ್ಯನು ಕೊಡುವ ಆಯುಸ್ಸಿನ ಪ್ರಮಾಣ—

ಕಲಾ– ೧೦×೧೦೮=೧೦೮೦–೧೦೮೦/೬೦=ಲಬ್ಧಿ ೧೮, ಶೇಷ ೦.

ಭಾಗ– ೪×೧೦೮=೪೩೨+೧೮=೪೫೦. ೪೫೦/೩೦=ಲಬ್ಧಿ ೧೫, ಶೇಷ ೦.

---

[1] ದೆಂದ (ಕ). * ಇದು ಸತ್ಯಾಚಾರ್ಯರು ಹೇಳಿರುವ ಅಂಶಾಯುರ್ದಾಯ.

ರಾಶಿ– ೧×೧೦೮=೧೦೮+೧೫=೧೨೩, ೧೨೩/೧೨=ಲಬ್ಧಿ ೧೦, ಶೇಷ ೩
ಭಗಣ– ೧೦/೧೨=ಲಬ್ಧಿ ೦, ಶೇಷ ೧೦.

ಇದರಲ್ಲಿ ಕಲಾಶೇಷವೇ ಘಟೀ ಪ್ರಮಾಣ=೦. ಭಾಗಶೇಷವೇ ದಿನಪ್ರಮಾಣ=೦. ರಾಶಿಶೇಷವೇ ಮಾಸಪ್ರಮಾಣ=೩. ಭಗಣಶೇಷವೇ ವರ್ಷಪ್ರಮಾಣ=೧೦. ಆದುದರಿಂದ ಸೂರ್ಯನು ಕೊಡುವ ಆಯುಸ್ಸಿನ ಪ್ರಮಾಣ=೧೦ ವರ್ಷ ೩ ತಿಂಗಳು·೦ ದಿನ ೦ ಘಟೀ ಎಂದು ತಿಳಿಯಬೇಕು. ಇದರಂತೆಯೇ ಉಳಿದ ಗ್ರಹಗಳು ಕೊಡುವ ಆಯುಸ್ಸಿನ ಪ್ರಮಾಣವನ್ನು ಗಣಿತಮಾಡಿ ತಿಳಿದುಕೊಳ್ಳಬಹುದು. ಈ ವಿಧವಾಗಿ ಆಯುರ್ದಾಯಗಣನೆ ಮಾಡುವುದಕ್ಕೆ ಅಂಶಾಯುರ್ದಾಯವೆಂದು ಹೆಸರು. ಇದನ್ನು ಸುಲಭವಾಗಿ ಇನ್ನೊಂದು ವಿಧದಲ್ಲಿ ಆನಯನ ಮಾಡಬಹುದು.

ಗ್ರಹಸ್ಫುಟವನ್ನು ಕಲೆಗಳನ್ನಾಗಿ ಮಾಡಿ ೨೦೦ರಿಂದ ಭಾಗಿಸಿದರೆ ವರ್ಷಾದಿ ಆಯುಃಪ್ರಮಾಣವು ಬರುತ್ತದೆ.

ಉದಾ–ಸೂರ್ಯಸ್ಫುಟ ರಾಶ್ಯಾದಿ ೧–೪–೧೦. ಇದನ್ನು ಕಲೆಗಳನ್ನಾಗಿ ಮಾಡಿದರೆ ೧×೩೦=೩೦+೪=೩೪×೬೦=೨೦೪೦+೧೦=೨೦೫೦.
ಇದನ್ನು ೨೦೦ರಿಂದ ಭಾಗಿಸಿದರೆ=೨೦೫೦/೨೦೦=೧೦ ವರ್ಷ, ಶೇಷ ೫೦.
೫೦×೧೨=೬೦೦/೨೦೦=೩ ತಿಂ.

ರವಿಯು ಕೊಡುವ ಆಯುಸ್ಸಿನ ಪ್ರಮಾಣ=೧೦ ವರ್ಷ ೩ ತಿಂ.

ಉಪಪತ್ತಿ.–ಒಟ್ಟು ರಾಶಿಚಕ್ರದಲ್ಲಿ ೧೦೮ ನವಾಂಶಗಳಿವೆ. ಆದುದರಿಂದ ೧೦೮ನ್ನು ಭಾಜಕವನ್ನಾಗಿ ತೆಗೆದುಕೊಂಡಿದೆ. ಸುಲಭಮಾರ್ಗದಲ್ಲಿ ಎಲ್ಲವನ್ನು ಕಲೆಗಳನ್ನಾಗಿ ಮಾಡಿರುವುದರಿಂದ ಒಂದು ನವಾಂಶ ಪ್ರಮಾಣದಿಂದ (೨೦೦ ಕಲೆಗಳು) ಭಾಗಿಸಿದೆ.

ಆಯುರ್ದಾಯವು (೧) ಗಣಿತಾಗತಾಯುರ್ದಾಯ (೨) ಯೋಗಾಯುರ್ದಾಯ ಎಂದು ಎರಡು ವಿಧ. ಇದರಲ್ಲಿ ಗಣಿತಾಗತಾಯುರ್ದಾಯವು (೧) ಅಂಶಾಯುರ್ದಾಯ (೨) ಪೈಂಡಾಯುರ್ದಾಯ (೩) ನೈಸರ್ಗಿಕಾಯುರ್ದಾಯ (೪) ಜೀವಶರ್ಮೋಕ್ತಾಯುರ್ದಾಯ ಎಂದು ನಾಲ್ಕುವಿಧ. ಇದರಲ್ಲಿ ಮೊದಲನೆಯದಾದ ಅಂಶಾಯುರ್ದಾಯವನ್ನು ಸತ್ಯಾಚಾರ್ಯರು ಹೇಳಿರುತ್ತಾರೆ. ಈ ಕ್ರಮವನ್ನೇ ಅನೇಕ ಜ್ಯೌತಿಷಾಚಾರ್ಯರು ಒಪ್ಪಿರುತ್ತಾರೆ. ವರಾಹಮಿಹಿರಾಚಾರ್ಯರೂ ಅಂಶಾಯುರ್ದಾಯವೇ ಶ್ರೇಷ್ಠವೆಂದು ಅಭಿಪ್ರಾಯಪಟ್ಟಿರುತ್ತಾರೆ. ಈ ಕಾರಣದಿಂದಲೇ ಲಘುಜಾತಕದಲ್ಲಿ ವರಾಹಮಿಹಿರಾಚಾರ್ಯರು ಹೇಳಿರುವಂತೆ ಶ್ರೀಧರಾಚಾರ್ಯನೂ ಅಂಶಾಯುರ್ದಾಯವನ್ನು ಪ್ರಾರಂಭದಲ್ಲೇ ಹೇಳಿರುತ್ತಾನೆ.

(ಲಗ್ನಾಯುರ್ದಾಯ)

ರವಿಮುಖ್ಯಗ್ರಹಕೆಂತು ತಪ್ಪದು ವಿಲಗ್ನಕ್ಕಂತೆ ದಲ್ ತಪ್ಪದಾ
ಯುವನಾ ಲಗ್ನವಶೇಷವೀರ್ಯಯುತಮಾಗಿರ್ದಂದು ರಾಶಿಪ್ರಮಾ
ಬ್ದವೆನಿಕ್ಕುಂ ಬಳಿಕಂಶಮಂ ಕಲೆಯುಮಂ ತ್ರೈರಾಶಿಕಂಗೊಂಡೊಡೆ
[1]ಲ್ಲ ವಲಂ[1] ಪೆತ್ತವು ಮಾಸ ವಾಸರ ಘಟೀ[2]ಮಾ[2]ನಂ ತದಾಯುಷ್ಯದಾ ೨

---

೨. ಸೂರ್ಯಾದಿ ಗ್ರಹಗಳಿಗೆ ಆಯುರ್ದಾಯ ಗಣನೆಯು ಹೇಗೋ ಅದರಂತೆ ಲಗ್ನಕ್ಕೂ ತಪ್ಪದೆ ಆಯುಸ್ಸನ್ನು ಗಣಿತಮಾಡಿ ತಿಳಿಯಬೇಕು. ಈ ಆಯುರ್ದಾಯ ಪ್ರಮಾಣಕ್ಕೆ ಲಗ್ನವು ಬಲಿಷ್ಠವಾಗಿದ್ದಾಗ ಲಗ್ನಗತರಾಶಿ ಸಂಖ್ಯಾಪ್ರಮಾಣದಷ್ಟು ವರ್ಷಗಳನ್ನೂ, ಅಂಶ ಮತ್ತು ಕಲೆಗಳನ್ನು ತ್ರೈರಾಶಿ ಮಾಡಿ ಬಂದ ಮಾಸ ದಿನ ಘಟಿಗಳನ್ನೂ ಸೇರಿಸಿದರೆ ಲಗ್ನದ ಒಟ್ಟು ಆಯುಃ ಪ್ರಮಾಣವಾಗುತ್ತದೆ.

ವಿ-ಲಗ್ನವು ಬಲಿಷ್ಠವಾಗಿಲ್ಲದಿದ್ದಾಗ ಸಾಮಾನ್ಯವಾಗಿ ಗ್ರಹಕ್ಕೆ ಅಂಶಾಯುರ್ದಾಯುವನ್ನು ಆನಯನಮಾಡುವಂತೆ ಆಯುರ್ದಾಯಗಣನೆ ಮಾಡಬೇಕು. ಲಗ್ನವು ಬಲಿಷ್ಠವಾಗಿದ್ದರೆ ಈ ರೀತಿ ಆನಯನ ಮಾಡಿರುವ ಆಯುರ್ದಾಯಕ್ಕೆ ಈ ಮುಂದೆ ತಿಳಿಸಿರುವ ಸಂಸ್ಕಾರವನ್ನು ಹೆಚ್ಚಾಗಿಮಾಡಬೇಕು. ಲಗ್ನ ಗತರಾಶಿ ಸಂಖ್ಯಾಪ್ರಮಾಣದಷ್ಟು ವರ್ಷಗಳನ್ನು ಮೊದಲು ಬಂದಿರುವ ವರ್ಷಸಂಖ್ಯೆಗೆ ಸೇರಿಸಿದರೆ ಒಟ್ಟು ವರ್ಷಸಂಖ್ಯೆಯಾಗುತ್ತದೆ. ಲಗ್ನಸ್ಫುಟದ ಅಂಶಗಳನ್ನು ೬೦ ರಿಂದ ಗುಣಿಸಿ ಕಲೆಗಳನ್ನಾಗಿ ಮಾಡಿ ಸ್ಫುಟದಲ್ಲಿರುವ ಕಲೆಗಳನ್ನು ಇದಕ್ಕೆ ಸೇರಿಸಿದರೆ ಕಲಾಪಿಂಡವಾಗುತ್ತದೆ. ಇದರಿಂದ ಅನುಪಾತ ಮಾಡಬೇಕು. ಅನುಪಾತಕ್ರಮ—ರಾಶಿಪ್ರಮಾಣ ಕಲೆಗಳಿಗೆ ಅಂದರೆ

೧೮೦೦ ಕಲೆಗಳಿಗೆ ೧ ವರ್ಷ ಅಂದರೆ ೧೨ ತಿಂಗಳುಗಳಾದರೆ ಇಷ್ಟ ಕಲಾಪಿಂಡಗಳಿಗೆ ಎಷ್ಟು ?

$$= \frac{\text{ಇಷ್ಟಕಲಾಪಿಂಡ} \times ೧೨}{೧೮೦೦} = \text{ಮಾಸಗಳು}$$

ಇಷ್ಟಕಲಾಪಿಂಡವನ್ನು ೧೫೦ ರಿಂದ ಭಾಗಿಸಿ ಬರುವ ಲಬ್ಧಿಯೇ ಮಾಸ ಪ್ರಮಾಣ, ಶೇಷವನ್ನು ೫ ರಿಂದ ಭಾಗಿಸಿ ಬರುವ ಲಬ್ಧಿಯೇ ದಿನ ಪ್ರಮಾಣ, ಶೇಷವನ್ನು ೧೨ ರಿಂದ ಗುಣಿಸಿ ಬರುವ ಫಲವೇ ಘಟೀ ಪ್ರಮಾಣ. ಈ ಮಾಸಾದಿ ಫಲವನ್ನು ಹಿಂದೆ ವರ್ಷಸಂಖ್ಯೆಯನ್ನು ಸೇರಿಸಿರುವ ಮೊತ್ತಕ್ಕೆ ಕೂಡಿಸಿದರೆ ಲಗ್ನವು ಬಲಿಷ್ಠವಾಗಿದ್ದಾಗ ಆಯುಸ್ಸಿನ ಪ್ರಮಾಣವು ಬರುತ್ತದೆ.

---

[1] ಲ್ಲವಲಂ (ಕ) ಲ್ಲ ನೆಲರ್ (ಗ) [2] ನಾ (ಗ).

(ಆಯುರ್ದಾಯಕ್ಕೆ ಗ್ರಹಸ್ಥಿತಿ ವಿಶೇಷದಿಂದ ದ್ವಿಗುಣ ತ್ರಿಗುಣ ವೃದ್ಧಿ)

ಜನನ ಪ್ರಸ್ತುತಕಾಲದೊಳ್ ಸ್ವಭವನ ದ್ರೇಕ್ಕಾಣ ವರ್ಗೋತ್ತಮಾಂ
ಶ ನವಾಂಶೋಪಗತಂ ಸಕೃದ್ದ್ವಿಗುಣಮಂ ವಕ್ರಸ್ಥನಾಗಿರ್ದೊಡ
ಕ್ಕೆ ನಿಜೋಚ್ಚಸ್ಥಿತನಾದೊಡಂ ತ್ರಿಗುಣಮಂ ತಾನೀಗುಮಾ ಮೇಗೆ ಪೆ
ತ್ತನಿತಂ ಮೂವಡಿ ಮಾಳ್ಪುದೊಮ್ಮೆಯೆ ವಲಂ ದ್ವಿತ್ರ್ಯಾಹತಂ ಬಂದೊಡಂ ೩

(ನೀಚ ಶತ್ರುಕ್ಷೇತ್ರಾದಿ ಹರಣ)

ಯಮ ದನುಜೇಂದ್ರ[1]ವಂದ್ಯ[1]ರಹಿತಂ ರವಿಮಂಡಲದೊಳ್ ಗ್ರಹಂಗಳ
ಸ್ತಮಿಸಿದೊಡಕ್ಕೆ ಭೌಮರಹಿತಂ [2][ದ್ಯುಚರಂ][2] ನಿಲೆ ನೀಚದೊಳ್ [3]ತದ
ರ್ಧಮನ[ಿಕುಂ][3] ವಿರೋಧಿಭವನೋಪಗತಗ್ರಹಮಾ ತೃತೀಯಭಾ
ಗಮನದು ತನ್ನದೊಂದು ಕುಡುವಾಯುವಿನೊಳ್ ಕ್ಷಣದಿಂದ ಕುಂದಿಕುಂ ೪

---

೩. ಜನ್ಮ ಅಥವಾ ಆಧಾನಕಾಲದಲ್ಲಿ ಸ್ವಕ್ಷೇತ್ರ ಸ್ವದ್ರೇಕ್ಕಾಣ ವರ್ಗೋತ್ತಮಾಂಶ ಸ್ವನವಾಂಶ ಇವುಗಳಲ್ಲಿರುವ ಗ್ರಹವು ತಾನು ಸ್ವಾಭಾವಿಕವಾಗಿ ಕೊಡುವ ಆಯುಸ್ಸಿನ ಎರಡರಷ್ಟನ್ನೂ, ವಕ್ರಿಯಾಗಲೀ ಉಚ್ಚಕ್ಷೇತ್ರಸ್ಥವಾಗಲೀ ಆದರೆ ಮೂರರಷ್ಟನ್ನೂ ಕೊಡುತ್ತದೆ. ಹಿಂದೆ ಬಂದಿರುವ ಆಯುರ್ದಾಯಕ್ಕೆ ಈ ರೀತಿಯಲ್ಲಿ ದ್ವಿಗುಣ ತ್ರಿಗುಣಗಳು ಒಂದೇ ಕಾಲದಲ್ಲಿ ಬಂದರೆ ಆಗ ಒಂದುಸಾರಿ ತ್ರಿಗುಣವನ್ನು ಮಾತ್ರಮಾಡಬೇಕು.

ವಿ_ಉದಾ_ವಕ್ರಗತ ಬುಧಸ್ಫುಟ ರಾ. ೫ ಭಾ. ೪ ಕ. ೩೦. ಬುಧನು ಕನ್ಯಾರಾಶಿ ಕನ್ಯಾದ್ರೇಕ್ಕಾಣದಲ್ಲಿ ವಕ್ರಿಯಾಗಿರುವನು. ಕನ್ಯಾರಾಶಿಯು ಬುಧನಿಗೆ ಉಚ್ಚಕ್ಷೇತ್ರ. ಬುಧನು ಕೊಡುವ ಆಯುರ್ದಾಯಕ್ಕೆ ಆತನು ಉಚ್ಚಕ್ಷೇತ್ರದಲ್ಲಿರುವುದರಿಂದ ಒಂದು ತ್ರಿಗುಣ, ವಕ್ರನಾಗಿರುವುದರಿಂದ ಒಂದು ತ್ರಿಗುಣ, ಕನ್ಯಾದ್ರೇಕ್ಕಾಣದಲ್ಲಿರುವುದರಿಂದ ಒಂದು ದ್ವಿಗುಣ, ಹೀಗೆ ಒಟ್ಟಿನಲ್ಲಿ ಎರಡು ತ್ರಿಗುಣಗಳೂ ಒಂದು ದ್ವಿಗುಣವೂ ಒಂದೇ ಕಾಲದಲ್ಲಿ ಬಂದಿದೆ. ಈ ವಿಧವಾದ ಸಂದರ್ಭದಲ್ಲಿ ಒಂದು ಸಲ ಮಾತ್ರ ತ್ರಿಗುಣಮಾಡಬೇಕು. ಆದುದರಿಂದ ಬುಧನು ತಾನು ಸ್ವಾಭಾವಿಕವಾಗಿ ಕೊಡುವ ಆಯುರ್ದಾಯದ ಮೂರರಷ್ಟನ್ನು ಮಾತ್ರ ಕೊಡುತ್ತಾನೆ.

೪. ಶನಿ ಶುಕ್ರರನ್ನು ಬಿಟ್ಟು ಉಳಿದ ಗ್ರಹಗಳು ಸೂರ್ಯಮಂಡಲದಲ್ಲಿ ಅಸ್ತಂಗತರಾಗಲೀ ಅಥವಾ ಅಂಗಾರಕನನ್ನು ಬಿಟ್ಟು ಉಳಿದ ಗ್ರಹಗಳು ನೀಚಕ್ಷೇತ್ರಗತರಾಗಲೀ ಆಗಿದ್ದರೆ ತಾವು ಕೊಡುವ ಆಯುಸ್ಸಿನ ಅರ್ಧಭಾಗವನ್ನು ನಾಶಮಾಡುತ್ತವೆ. ಶತ್ರುಕ್ಷೇತ್ರದಲ್ಲಿರುವ ಗ್ರಹ ತಾನು ಕೊಡುವ ಆಯುಸ್ಸಿನ ಮೂರನೆಯ ಒಂದುಭಾಗವನ್ನು ಕಡಿಮೆಮಾಡುತ್ತದೆ.

ವಿ_ಅಂಗಾರಕನಿಗೆ ನೀಚಕ್ಷೇತ್ರಹರಣವಿಲ್ಲವೆಂದು ಶ್ರೀಧರನು ಹೇಳಿರುತ್ತಾನೆ, ಆದರೆ ವರಾಹಮಿಹಿರಾಚಾರ್ಯರೇ ಮೊದಲಾದ ಜ್ಯೌತಿಷಾಚಾರ್ಯರು ಅಂಗಾರಕನಿಗೆ ಶತ್ರುಕ್ಷೇತ್ರಹರಣವಿಲ್ಲವೆಂದು ಹೇಳಿರುತ್ತಾರೆ. ನೀಚಕ್ಷೇತ್ರಹರಣವು ಅಂಗಾರಕನಿಗೆ ಇಲ್ಲವೆಂದು ತಮ್ಮ ಗ್ರಂಥಗಳಲ್ಲಿ ಹೇಳಿರುವುದಿಲ್ಲ.

---

[1] ನಂದ್ಯ (ಗ) [2] ದಿನಪಂ (ಕ ಗ) [3] ತದರ್ಧಮನಪಹರಂ (ಕ) ದರ್ಧ......ರಂ (ಗ)

(ಚಕ್ರಪಾತ ಹರಣ)

ಉದಯಕ್ಕಂತ್ಯದೊಳೊಂದಿ ನಿಂದೊಡೆ ನಿಜಾಯುರ್ದಾಯಮಂ ಲಾಭಗೇ
ಹದೊಳಂ ತದ್ವ್ಯತಯಾಂಶಮಂ ದಶಮದೊಳ್ ಸ್ವತ್ರ್ಯಂಶಮಂ ತ್ರಿತ್ರಿಕೋ
ಣದೊಳಾ ನಾಲ್ಕನೆಯಂಶಮಂ ನಿಧನದೊಳ್ ಪಂಚಾಂಶಮಂ ಸಪ್ತಮ
ರ್ಕ್ಷದೊಳಾಱಂಶಮನಾವಗಂ ಕೆಡಿಸುಗುಂ ಪಾಪಗ್ರಹಂ ನಿಶ್ಚಯಂ ೫

ಜನ[1]ನಲಗ್ನಕ್ಕಂ[1]ತ್ಯದೊಳಾ[2]ಯು[ವಿನೊಳರ್ಧ] ಭಾ[2]ಗಮನಾಯದೊಳಾಯುವ ನಾ
ಲ್ಕನೆಯ ಭಾಗವಂ ದಶಮದೊಳಾಯುವ ಷಡ್ಭಾಗವಂ ನವಮದೊ[ಳರಲೆಂ][3]
ಟನೆ[ಯ ಭಾಗಮನೆಂಟನೆ]ಯೆಡೆಯೊಳಾಯುವ ದಶಭಾಗಮನಸ್ತನಿಕೇ
ತನದೊಳಾಯುವ ದ್ವಾದಶಭಾಗಮಂ ಸದ್ಗ್ರಹಂ ಕೆಡಿಸುಗುಂ ನಿಜದಾಯದೊಳ್ ೬

೫. ಪಾಪಗ್ರಹವು ಲಗ್ನಕ್ಕೆ ಹನ್ನೆರಡನೆಯ ಸ್ಥಾನದಲ್ಲಿದ್ದರೆ ತಾನು ಕೊಡುವ ಎಲ್ಲ ಆಯುರ್ದಾಯವನ್ನೂ ಹನ್ನೊಂದನೆಯ ಸ್ಥಾನದಲ್ಲಿದ್ದರೆ ಅರ್ಧ ಭಾಗವನ್ನೂ ಹತ್ತನೆಯ ಸ್ಥಾನದಲ್ಲಿದ್ದರೆ ತನ್ನ ಆಯುಸ್ಸಿನ ಮೂರನೆಯ ಒಂದುಭಾಗವನ್ನೂ ಒಂಬತ್ತನೆಯ ಸ್ಥಾನದಲ್ಲಿದ್ದರೆ ಕಾಲುಭಾಗವನ್ನೂ ಎಂಟನೆಯ ಸ್ಥಾನದಲ್ಲಿದ್ದರೆ ಐದನೆಯ ಒಂದುಭಾಗವನ್ನೂ ಏಳನೆಯ ಸ್ಥಾನ ದಲ್ಲಿದ್ದರೆ ಆರನೆಯ ಒಂದುಭಾಗವನ್ನೂ ನಾಶಮಾಡುತ್ತವೆ.

ವಿ–ರವಿ ಕುಜ ಶನಿಗಳು ವ್ಯಯಭಾವಮಧ್ಯದಲ್ಲಿದ್ದರೆ ತಾವು ಕೊಡುವ ಆಯುಸ್ಸಿನ ಪ್ರಮಾಣ ಶೂನ್ಯವೂ ಹನ್ನೊಂದನೇ ಭಾವಮಧ್ಯದಲ್ಲಿದ್ದರೆ ಅರ್ಧವೂ ಹತ್ತನೆಯ ಭಾವಮಧ್ಯದಲ್ಲಿದ್ದರೆ ಮೂರನೆಯ ಒಂದುಭಾಗ ಹಾನಿಯೂ, ಒಂಬತ್ತನೆಯ ಭಾವಮಧ್ಯದಲ್ಲಿದ್ದರೆ ಕಾಲುಭಾಗ ಹಾನಿಯೂ ಎಂಟನೆಯ ಭಾವಮಧ್ಯದಲ್ಲಿದ್ದರೆ ಐದನೆಯ ಒಂದುಭಾಗ ಹಾನಿಯೂ ಏಳನೇ ಭಾವ ಮಧ್ಯದಲ್ಲಿದ್ದರೆ ಆರನೆಯ ಒಂದುಭಾಗ ಹಾನಿಯೂ ಆಗುತ್ತದೆ. ಅನುಪಾತ ದಿಂದ ಆಯಾ ಭಾವದ ಇತರ ಭಾಗಗಳಲ್ಲಿರುವಾಗ ಹರಣವನ್ನು ತಿಳಿಯಬೇಕು.

೬. ಶುಭಗ್ರಹವು ಜನನಲಗ್ನಕ್ಕೆ ಹನ್ನೆರಡನೇ ಭಾವದಲ್ಲಿದ್ದರೆ ತಾನು ಕೊಡುವ ಆಯುಸ್ಸಿನಲ್ಲಿ ಅರ್ಧಭಾಗವನ್ನೂ ಹನ್ನೊಂದನೇ ಭಾವದಲ್ಲಿದ್ದರೆ ಕಾಲುಭಾಗವನ್ನೂ ಹತ್ತನೇ ಭಾವದಲ್ಲಿದ್ದರೆ ಆಯುಸ್ಸಿನ ಆರನೆಯ ಒಂದು ಭಾಗವನ್ನೂ ಒಂಬತ್ತನೇ ಭಾವದಲ್ಲಿದ್ದರೆ ಎಂಟನೆಯ ಒಂದುಭಾಗವನ್ನೂ ಎಂಟನೆಯ ಭಾವದಲ್ಲಿದ್ದರೆ ಆಯುಸ್ಸಿನ ಹತ್ತನೇ ಒಂದುಭಾಗವನ್ನೂ ಏಳನೇ ಭಾವದಲ್ಲಿದ್ದರೆ ತಾನು ಕೊಡುವ ಆಯುಸ್ಸಿನ ಹನ್ನೆರಡನೇ ಒಂದುಭಾಗವನ್ನೂ ಕಡಿಮೆ ಮಾಡುತ್ತದೆ.

ವಿ–ಚಂದ್ರ ಬುಧ ಗುರು ಶುಕ್ರರು ವ್ಯಯಭಾವಮಧ್ಯದಲ್ಲಿದ್ದರೆ ಅರ್ಧವನ್ನೂ ಲಾಭಭಾವಮಧ್ಯದಲ್ಲಿದ್ದರೆ ಕಾಲುಭಾಗವನ್ನೂ ದಶಮಭಾವದ ಮಧ್ಯದಲ್ಲಿದ್ದರೆ

---

[1] ನಂ ಲಗ್ನಾಂ (ಗ) [2] ಯುದೊಳಾಯುವ ಭಾ (ಕ) ಯುಭಾ (ಗ) [3] ಳೆಂ (ಕ ಗ).

(ಬುಧಾಷ್ಟಕ ವರ್ಗ)

ಹಿಮರುಕ್ಪುತ್ರಂ ಷಡಾಯ ವ್ಯಯ ನವ ದಶ ಪಂಚ ತ್ರಿ ಗೇಹಂಗಳೊಳ್ ಚಂ
ದ್ರಮನಿಂ ಲಾಭ ದ್ವಿ ಷಷ್ಠಾಷ್ಟಮ ದಶಮ ಚತುರ್ಥಂಗಳೊಳ್ ಮಂತ್ರಿಯಿಂದ
ಷ್ಟಮ ಷಷ್ಠೈಕಾದಶ ದ್ವಾದಶದೊಳಸಿತನಿಂ ಭೌಮನಿಂ ಧರ್ಮ ಕರ್ಮಾ
ಷ್ಟಮ ಲಾಭ ದ್ಯೂನ ಬಂಧು ದ್ವಿತಯ ಸ[1]ಮ[1]ತನುಸ್ಥಾನದೊಳ್ ಮಾಳ್ಕುಮೊಳ್ಪಂ ೮

ದನುಜೇಂದ್ರಾರ್ಚಿತನಿಂ ತ್ರಿ ಪಂಚಮ ಚತುರ್ಥೈಕಾದಶ ಛಿದ್ರ ದೇ
ಹ ನವೋ[2]ಕ್ತ್ಯ[2]ಳಯದೊಳ್ ದಿನಾಧಿಪತಿಯಿಂದೇಕಾದ[3]ಶಾಪತ್ಯ[3] ಷ
ಷ್ಠ ನವ ದ್ವಾದಶದೊಳ್ ವಿಲಗ್ನಗೃಹದಿಂದೇಕಾದಶ ಛಿದ್ರ ಷಟ್
ತನು ಕರ್ಮ ದ್ವಿ ಚತುರ್ಥ ಮಂದಿರದೊಳಿಂದುಪ್ರೋದ್ಭವಂ ಶೋಭನಂ ೯

(ಗುರ್ವಷ್ಟಕ ವರ್ಗ)

ಅಮರೇಜ್ಯಂ ಕೇಂದ್ರ ಲಾಭಾಷ್ಟಮ ಸಹಜ ಧನಸ್ಥಾನದೊಳ್ ಲಗ್ನದಿಂ ಪಂ
ಚಮ ಷಷ್ಠೈಕಾದಶಾಸ್ತ ದ್ವಿ ತನು [4]ನವಮ ಪಾತಾಳ[4] ಕರ್ಮಂಗಳೊಳ್ ಶೀ
ತಮಯೂಖಾಪತ್ಯನಿಂದಂ ತನು ಧನ ದಶ ಧರ್ಮಾಯ ಪಾತಾಳ ಷಟ್ ಪಂ
ಚಮದೊಳ್ ಧಾತ್ರೀಜನಿಂ [5]ಕೇಂದ್ರ ನಿಧನ ನಯ[5]ನಾಯಂಗಳೊಳ್ ಪೂಜ್ಯನಕ್ಕುಂ ೧೦

---

೮–೯. ಬುಧನು ತಾನಿರುವ ರಾಶಿಯಿಂದ ಷಟ್(೬) ಆಯ(೧೧) ವ್ಯಯ(೧೨) ನವ(೯) ದಶ(೧೦) ಪಂಚ(೫) ತ್ರಿ(೩) ಗೇಹ(೧) ಈ ಎಂಟು ಸ್ಥಾನಗಳಲ್ಲೂ, ಚಂದ್ರನಿಂದ ಲಾಭ(೧೧) ದ್ವಿ(೨) ಷಷ್ಠ(೬) ಅಷ್ಟಮ(೮) ದಶಮ(೧೦) ಚತುರ್ಥ(೪) ಈ ಆರುಸ್ಥಾನಗಳಲ್ಲೂ, ಗುರುವಿಂದ ಅಷ್ಟಮ(೮) ಷಷ್ಠ(೬) ಏಕಾದಶ(೧೧) ದ್ವಾದಶ(೧೨) ಈ ನಾಲ್ಕುಸ್ಥಾನಗಳಲ್ಲೂ, ಶನಿಯಿಂದ ಮತ್ತು ಮಂಗಳನಿಂದ ಧರ್ಮ(೯) ಕರ್ಮ(೧೦) ಅಷ್ಟಮ(೮) ಲಾಭ(೧೧) ದ್ಯೂನ(೭) ಬಂಧು(೪) ದ್ವಿತಯ(೨) ತನು(೧) ಈ ಎಂಟುಸ್ಥಾನಗಳಲ್ಲೂ, ಶುಕ್ರನಿಂದ ತ್ರಿ(೩) ಪಂಚಮ(೫) ಚತುರ್ಥ(೪) ಏಕಾದಶ(೧೧) ಛಿದ್ರ(೮) ದೇಹ(೧) ನವ(೯) ಉಕ್ತಿ(೨) ಈ ಎಂಟುಸ್ಥಾನಗಳಲ್ಲೂ, ಸೂರ್ಯನಿಂದ ಏಕಾದಶ(೧೧) ಅಪತ್ಯ(೫) ಷಷ್ಠ(೬) ನವ(೯) ದ್ವಾದಶ(೧೨) ಈ ಐದು ಸ್ಥಾನಗಳಲ್ಲೂ, ಲಗ್ನದಿಂದ ಏಕಾನಶ(೧೧) ಛಿದ್ರ(೮) ಷಟ್(೬) ತನು(೧) ಕರ್ಮ(೧೦) ದ್ವಿ(೨) ಚತುರ್ಥ(೪) ಈ ಏಳುಸ್ಥಾನಗಳಲ್ಲೂ ಶುಭಫಲವನ್ನು ಕೊಡುತ್ತಾನೆ.

೧೦–೧೧. ಗುರುವು ತಾನಿರುವ ರಾಶಿಯಿಂದ ಕೇಂದ್ರ(೧–೪–೭–೧೦) ಲಾಭ(೧೧) ಅಷ್ಟಮ(೮) ಸಹಜ(೩) ಧನ(೨) ಈ ಎಂಟುಸ್ಥಾನಗಳಲ್ಲೂ, ಲಗ್ನದಿಂದ ಪಂಚಮ(೫) ಷಷ್ಠ(೬) ಏಕಾದಶ(೧೧) ಅಸ್ತ(೭) ದ್ವಿ(೨)

---

[1] ಮಟ (ಕ) ಮಜ (ಗ) [2] ತ್ಯಾ (ಕ ಗ) [3] ಶಾಪುತ್ರ (ಕ) ಶಾಪುತ್ರ್ಯ (ಗ) [4] ಪಟುಕ ಪಾತಾಳ ಧರ್ಮ (ಕ ಗ) [5] ದಂ ಕೇಂದ್ರ ಧನ ನಿಧ (ಕ) ಕೇಂ........(ಗ).

ಸಿತನಿಂ ಧರ್ಮ ಧನಾರಿ ಪಂಚಮ ದಶಾಯಸ್ಥಾನದೊಳ್ ಮಂದನಿಂ
ತ್ರಿತಯಾರಾತಿ ಸುತಾಂತ್ಯದೊಳ್ ದಿನಪನಿಂ ಕೇಂದ್ರ ದ್ವಿ[ತೀಯಂ ನವ]
ತ್ರಿತಯಾ[1]ಯಾ[1]ಷ್ಟಮದೊಳ್ ತುಷಾರಕರನಿಂದೇಕಾದಶ ದ್ರವ್ಯ ಧ
ರ್ಮ ತನೂಜಾಸ್ತದೊಳಿಂದ್ರಮಂತ್ರಿ ಶುಭದಂ ಶೇಷಂಗಳೊಳ್ ನಿಂದಿತಂ ೧೧

(ಶುಕ್ರಾಷ್ಟಕ ವರ್ಗ)

ದನುಜೇಜ್ಯಂ ಧರ್ಮ ಕರ್ಮ ತ್ರಿ ತನು ಧನ ಚತುಷ್ಪಂಚ [2]ರಂಧ್ರಾಯ[2]ದೊಳ್ ಚಂ
ದ್ರನಿನಾದ್ಯಾಂತ್ಯಷ್ಟಮೈಕಾದಶ ನವ ಧನ ಪುತ್ರ ತ್ರಿ ತೂರ್ಯಂಗಳೊಳ್ ಮಂ
ದನಿನಾಯಾಪತ್ಯ ಧರ್ಮಾಷ್ಟಮ ಸಹಜ ಚತುಷ್ಕರ್ಮದೊಳ್ ಲಗ್ನದಿಂ ಪಂ
ಚ ನವಾಷ್ಟೈಕಾದಶ ದ್ವಿ ತ್ರಿಕ ಹಿಬುಕ ತನುಸ್ಥಾನದೊಳ್ ಲೇಸೆನಿಕ್ಕುಂ ೧೨

---

ತನು(೧) ನವಮ(೯) ಪಾತಾಳ(೪) ಕರ್ಮ(೧೦) ಈ ಒಂಬತ್ತುಸ್ಥಾನಗಳಲ್ಲೂ, ಬುಧನಿಂದ ತನು(೧) ಧನ(೨) ದಶ(೧೦) ಧರ್ಮ(೯) ಆಯ(೧೧) ಪಾತಾಳ (೪) ಷಟ್(೬) ಪಂಚಮ(೫) ಈ ಎಂಟುಸ್ಥಾನಗಳಲ್ಲೂ, ಮಂಗಳನಿಂದ ಕೇಂದ್ರ (೧–೪–೭–೧೦) ನಿಧನ(೮) ನಯನ(೨) ಆಯ(೧೧) ಈ ಏಳುಸ್ಥಾನಗಳಲ್ಲೂ, ಶುಕ್ರನಿಂದ ಧರ್ಮ(೯) ಧನ(೨) ಅರಿ(೬) ಪಂಚಮ(೫) ದಶ(೧೦) ಆಯ(೧೧) ಈ ಆರುಸ್ಥಾನಗಳಲ್ಲೂ, ಶನಿಯಿಂದ ತ್ರಿತಯ(೩) ಅರಾತಿ(೬) ಸುತ(೫) ಅಂತ್ಯ(೧೨) ಈ ನಾಲ್ಕುಸ್ಥಾನಗಳಲ್ಲೂ, ಸೂರ್ಯನಿಂದ ಕೇಂದ್ರ (೧–೪–೭–೧೦) ದ್ವಿತೀಯ(೨) ನವ(೯) ತ್ರಿತಯ(೩) ಆಯ(೧೧) ಅಷ್ಟಮ(೮) ಈ ಒಂಬತ್ತುಸ್ಥಾನಗಳಲ್ಲೂ, ಚಂದ್ರನಿಂದ ಏಕಾದಶ(೧೧) ದ್ರವ್ಯ(೨) ಧರ್ಮ(೯) ತನೂಜ(೫) ಅಸ್ತ(೭) ಈ ಐದುಸ್ಥಾನಗಳಲ್ಲೂ ಶುಭಫಲವನ್ನು ಕೊಡುತ್ತಾನೆ. ಉಳಿದ ಸ್ಥಾನಗಳಲ್ಲಿ ಕೆಟ್ಟಫಲವನ್ನು ಕೊಡುತ್ತಾನೆ.

೧೨–೧೩. ಶುಕ್ರನು ತಾನಿರುವ ರಾಶಿಯಿಂದ ಧರ್ಮ(೯) ಕರ್ಮ (೧೦) ತ್ರಿ(೩) ತನು(೧) ಧನ(೨) ಚತುಃ(೪) ಪಂಚ(೫) ರಂಧ್ರ (೮) ಆಯ(೧೧) ಈ ಒಂಬತ್ತುಸ್ಥಾನಗಳಲ್ಲೂ, ಚಂದ್ರನಿಂದ ಆದಿ(೧) ಅಂತ್ಯ(೧೨) ಅಷ್ಟಮ(೮) ಏಕಾದಶ(೧೧) ನವ(೯) ಧನ(೨) ಪುತ್ರ(೫) ತ್ರಿ(೩) ತೂರ್ಯ(೪) ಈ ಒಂಬತ್ತುಸ್ಥಾನಗಳಲ್ಲೂ, ಶನಿಯಿಂದ ಆಯ(೧೧) ಅಪತ್ಯ(೫) ಧರ್ಮ(೯) ಅಷ್ಟಮ(೮) ಸಹಜ(೩) ಚತುಃ(೪) ಕರ್ಮ(೧೦) ಈ ಏಳುಸ್ಥಾನಗಳಲ್ಲೂ, ಲಗ್ನದಿಂದ ಪಂಚ (೫) ನವ(೯) ಅಷ್ಟ(೮) ಏಕಾದಶ(೧೧) ದ್ವಿ(೨) ತ್ರಿ(೩) ಹಿಬುಕ (೪) ತನು(೧) ಈ ಎಂಟುಸ್ಥಾನಗಳಲ್ಲೂ, ಗುರುವಿಂದ ಧರ್ಮ(೯)

---

[1] ಯ ಧರ್ಮ (ಕ ಗ) [2] ಕೇಂದ್ರಾಯ (ಕ) ಯ (ಗ)

ಸುರಗುರುವಿಂದೆ ಧರ್ಮ ದಶಮಾಷ್ಟಮ ಲಾಭ ತನೂಜದೊಳ್* ನಿಶಾ
ಕರಸುತನಿಂದೆ ಷಷ್ಠ ನವ ಪಂಚಮ ಲಾಭ ತೃತೀಯ ರಾಶಿಯೊಳ್
ಧರಣಿಜನಿಂದೆ ಪಂಚಮ ತೃತೀಯ ನವ ವ್ಯಯ ಲಾಭ ಷಷ್ಠದೊಳ್ *
ಸರಸಿಜಮಿತ್ರನಿಂದೆ ನಿಧ[1]ನ ವ್ಯಯ ಲಾಭ[1]ದೊಳೊಳ್ಳಿದಂ ಸಿತಂ ೧೩

(ಶನ್ಯಷ್ಟಕ ವರ್ಗ)

ರವಿಪುತ್ರಂ ತ್ರಿ ಷಡಾಯ ಪಂಚಮದೊಳಿಂದೂದ್ಭೂತನಿಂ ಲಾಭ ಷ
ಣ್ಣವ [2]ಕರ್ಮಾಷ್ಟಮ ರಿಃಫ[2]ದೊಳ್ ಭೃಗುಜನಿಂ ಷಷ್ಠಾಂತ್ಯ ಲಾಭಂಗಳೊಳ್
ರವಿಯಿಂ ಕೇಂದ್ರ ಧನಾ[3]ಯ[3] ರಂಧ್ರಗೃಹದಿಂ ಮಾಹೇಯನಿಂ ಷಟ್ ತನೂ
ಭವ ಕರ್ಮಾಂತ್ಯ ತೃತೀಯ ಲಾಭದೊಳಭೀಷ್ಟಪ್ರಾಪ್ತಿಯಂ ಮಾಡುಗುಂ ೧೪

ಗುರುವಿಂ ವ್ಯಯಾಯ ಪಂಚಮ
ವಿರೋಧಿಯೊಳ್ ಲಗ್ನದಿಂ ಚತುಸ್ತನು ದಶ ಲಾ
ಭ ರಿಪು [4]ಭ್ರಾತೃವಿನೊಳ್[4] ಹಿಮ
ಕರನಿಂ ತ್ರಿ ಷಡಾಯದೊಳ್ ಶುಭಪ್ರದನಸಿತಂ ೧೫

---

ದಶಮ(೧೦) ಅಷ್ಟಮ(೮) ಲಾಭ(೧೧) ತನೂಜ(೫) ಈ ಐದುಸ್ಥಾನಗಳಲ್ಲೂ, ಬುಧನಿಂದ ಷಷ್ಠ(೬) ನವ(೯) ಪಂಚಮ(೫) ಲಾಭ(೧೧) ತೃತೀಯ (೩) ಈ ಐದುಸ್ಥಾನಗಳಲ್ಲೂ, ಮಂಗಳನಿಂದ ಪಂಚಮ(೫) ತೃತೀಯ(೩) ನವ(೯) ವ್ಯಯ(೧೨) ಲಾಭ(೧೧) ಷಷ್ಠ(೬) ಈ ಆರುಸ್ಥಾನಗಳಲ್ಲೂ, ಸೂರ್ಯನಿಂದ ನಿಧನ(೮) ವ್ಯಯ(೧೨) ಲಾಭ(೧೧) ಈ ಮೂರುಸ್ಥಾನಗಳಲ್ಲೂ ಒಳ್ಳೆಯ ಫಲವನ್ನು ಕೊಡುತ್ತಾನೆ

೧೪-೧೫. ಶನಿಯು ತಾನಿರುವ ರಾಶಿಯಿಂದ ತ್ರಿ(೩) ಷಟ್(೬) ಆಯ(೧೧) ಪಂಚಮ(೫) ಈ ನಾಲ್ಕುಸ್ಥಾನಗಳಲ್ಲೂ, ಬುಧನಿಂದ ಲಾಭ(೧೧) ಷಟ್(೬) ನವ(೯) ಕರ್ಮ(೧೦) ಅಷ್ಟಮ(೮) ರಿಃಫ(೧೨) ಈ ಆರುಸ್ಥಾನಗಳಲ್ಲೂ, ಶುಕ್ರನಿಂದ ಷಷ್ಠ(೬) ಅಂತ್ಯ(೧೨) ಲಾಭ(೧೧) ಈ ಮೂರುಸ್ಥಾನಗಳಲ್ಲೂ, ಸೂರ್ಯನಿಂದ ಕೇಂದ್ರ(೧-೪-೭-೧೦) ಧನ(೨) ಆಯ(೧೧) ರಂಧ್ರ(೮) ಈ ಏಳುಸ್ಥಾನಗಳಲ್ಲೂ, ಮಂಗಳನಿಂದ ಷಟ್(೬) ತನೂಭವ(೫) ಕರ್ಮ(೧೦) ಅಂತ್ಯ(೧೨) ತೃತೀಯ(೩) ಲಾಭ(೧೧) ಈ ಆರುಸ್ಥಾನಗಳಲ್ಲೂ, ಗುರುವಿಂದ ವ್ಯಯ(೧೨) ಆಯ(೧೧) ಪಂಚಮ(೫) ವಿರೋಧಿ(೬) ಈ ನಾಲ್ಕುಸ್ಥಾನಗಳಲ್ಲೂ, ಲಗ್ನದಿಂದ ಚತುಃ(೪) ತನು(೧) ದಶ(೧೦) ಲಾಭ(೧೧) ರಿಪು(೬) ಭ್ರಾತೃ(೩) ಈ ಆರುಸ್ಥಾನಗಳಲ್ಲೂ, ಚಂದ್ರನಿಂದ ತ್ರಿ(೩) ಷಟ್(೬) ಆಯ(೧೧) ಈ ಮೂರುಸ್ಥಾನಗಳಲ್ಲೂ ಇಷ್ಟಫಲಗಳನ್ನು ಕೊಡುತ್ತಾನೆ.

---

[1] ನಾಯ ವ್ಯಯ (ಕ) ನಾಯುವ್ಯಯ ಿದಾಯ (ಗ) [2] ಪಂಚಾಷ್ಟಮರಿಷ್ಟ (ಕ) ಕರ್ಮಾಷ್ಟಮರಿಷ್ಟಮ (ಗ) [3] ಯು (ಕ) ಧಯ (ಗ) [4] ತ್ರರಾಶಿಯೊಳ್ (ಕ ಗ).
* ಈ ಭಾಗ (ಗ) ಪ್ರತಿಯಲ್ಲಿಲ್ಲ.

(ಅಷ್ಟಕವರ್ಗ ಫಲ)

ಇರೆ ಮಿತ್ರೋಪಚಯೋಚ್ಚಮಂದಿರದೊಳಾ ಕ್ಷೇತ್ರಂಗಳೊಳ್ ಬಿಂದು ಮಿ
ಕ್ಕಿರೆ ಸಂಪೂರ್ಣಫಳಂ ಬಟಿ[1]ಕ್ಕಪಚಯಂ[1] ದ್ವಿಟ್ ನೀಚಗೇಹಸ್ಥರಾ
ಗಿರೆ ರೇಖಾಂಕಮದಾಗೆ ಪೊಲ್ಲದು ಕರಂ ತದ್ವೈಪರೀತ್ಯಕ್ರಮಂ
ದೊರೆಕೊಂಡಂದು ಶುಭಾಶುಭಂಗಳ ಫಲಂ ಸಾಮಾನ್ಯಮಿಾ ಮಾಷ್ಕಯಿಂ ೧೬

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ಅಷ್ಟಕವರ್ಗಪ್ರಕರಣವರ್ಣನಂ ದಶಮಾಧಿಕಾರಂ*

---

೧೬. ಜನನಕಾಲದಲ್ಲಿ ಮಿತ್ರ ಉಪಚಯ(೩–೬–೧೦–೧೧) ಉಚ್ಚ ಸ್ವಕ್ಷೇತ್ರಗಳಲ್ಲಿರುವ ಗ್ರಹವು ಅಷ್ಟಕವರ್ಗದಲ್ಲಿ ಹೆಚ್ಚುಬಿಂದುಗಳು ಬಂದಿರುವ ರಾಶಿಗಳಲ್ಲಿ ಸಂಚರಿಸುವಾಗ ಪೂರ್ಣಶುಭಫಲವನ್ನೂ ಅಪಚಯು (೧–೨–೪–೫–೭–೮–೯–೧೨) ಶತ್ರು ನೀಚ ಕ್ಷೇತ್ರಗಳಲ್ಲಿರುವ ಗ್ರಹವು ಅಷ್ಟಕವರ್ಗದಲ್ಲಿ ಹೆಚ್ಚು ರೇಖೆಗಳು ಬಂದಿರುವ ರಾಶಿಗಳಲ್ಲಿ ಸಂಚರಿಸುವಾಗ ಪೂರ್ಣ ಅಶುಭಫಲವನ್ನೂ ಇದಕ್ಕೆ ವಿಪರೀತ ಅಂದರೆ ಮಿತ್ರ ಉಪಚಯ ಉಚ್ಚ ಸ್ವಕ್ಷೇತ್ರಗಳಲ್ಲಿದ್ದು ರೇಖೆ ಅಧಿಕವಾಗಿ ಬಂದಿರುವ ರಾಶಿಗಳಲ್ಲಿ ಸಂಚರಿಸುವಾಗ ಮತ್ತು ಅಪಚಯ ಶತ್ರು ನೀಚ ಕ್ಷೇತ್ರಗಳಲ್ಲಿದ್ದು ಬಿಂದು ಅಧಿಕವಾಗಿ ಬಂದಿರುವ ರಾಶಿಗಳಲ್ಲಿ ಸಂಚರಿಸುವಾಗ ಶುಭಾಶುಭಮಿಶ್ರಫಲವನ್ನೂ ಕೊಡುತ್ತದೆ.

ವಿ–ಪ್ರತ್ಯೇಕವಾಗಿ ಪ್ರತಿಗ್ರಹಕ್ಕೂ ಹೇಳಿರುವ ಅಷ್ಟಕವರ್ಗಕ್ಕೆ ಭಿನ್ನಾಷ್ಟಕವರ್ಗವೆಂದು ಹೆಸರು. ಅಷ್ಟಕವರ್ಗದಲ್ಲಿ ಒಟ್ಟು ೩೩೭ ಬಿಂದುಗಳಿವೆ. ಅಷ್ಟಕವರ್ಗವನ್ನು ರಾಶಿಕುಂಡಲಿಯ ಗ್ರಹಸ್ಥಿತಿಯಿಂದಲೇ ಗುರುತಿಸಬೇಕು. ರಾಹು ಕೇತುಗಳಿಗೆ ಅಷ್ಟಕವರ್ಗವಿಲ್ಲ. ಅಷ್ಟಕವರ್ಗದಿಂದ ಪರಾಶರಾದಿಗಳು ಆಯುರ್ದಾಯ ಗಣನೆಯನ್ನೂ ತಿಳಿಸಿರುತ್ತಾರೆ. ಆದರೆ ವರಾಹಮಿಹಿರಾಚಾರ್ಯರು ಈ ವಿಚಾರವನ್ನು ತಮ್ಮ ಗ್ರಂಥಗಳಲ್ಲಿ ಹೇಳಿಲ್ಲ. ಇವರ ಅನುಯಾಯಿಯಾದ ಶ್ರೀಧರನೂ ತನ್ನ ಗ್ರಂಥದಲ್ಲಿ ಈ ವಿಚಾರವನ್ನು ಬಿಟ್ಟಿರುತ್ತಾನೆ. ಅಷ್ಟಕವರ್ಗದಲ್ಲಿ ಗ್ರಹಗಳು ಬಿಂದುಪ್ರದಸ್ಥಾನಗಳನ್ನು ಸುಲಭವಾಗಿ ತಿಳಿಯುವಂತೆ ಅಷ್ಟಕವರ್ಗ ಚಕ್ರದಲ್ಲಿ ಸಂಗ್ರಹಿಸಿ ಕೊಟ್ಟಿದೆ.

---

[1] ಕ್ಯಾಪಚಯಂ (ಕ) ಕ್ಕನ ಧಯಂ (ಗ).

* (ಕ) ಪ್ರತಿಯಲ್ಲಿ ದಶಮಾಧಿಕಾರವಾದಮೇಲೆ ಏಕಾದಶಾಧಿಕಾರಕ್ಕೆ ಮೊದಲು ಹೆಚ್ಚಾಗಿ ಕಂಡುಬರುವ ಅಷ್ಟಕವರ್ಗ ವಿಚಾರವನ್ನು ಪರಿಶಿಷ್ಟದಲ್ಲಿ ಕೊಟ್ಟಿದೆ.

## ಅಷ್ಟಕವರ್ಗಚಕ್ರ

| ಗ್ರಹ | ರವ್ಯಷ್ಟಕ ವರ್ಗ | ಚಂದ್ರಾಷ್ಟಕ ವರ್ಗ | ಕುಜಾಷ್ಟಕ ವರ್ಗ | ಬುಧಾಷ್ಟಕ ವರ್ಗ | ಗುರ್ವಷ್ಟಕ ವರ್ಗ | ಶುಕ್ರಾಷ್ಟಕ ವರ್ಗ | ಶನ್ಯಷ್ಟಕ ವರ್ಗ |
|---|---|---|---|---|---|---|---|
| ರವಿ | ೧–೨–೪–೭–೮–೯–೧೦–೧೧ | ೩–೬–೭–೮–೧೦–೧೧ | ೩–೫–೬–೧೦–೧೧ | ೫–೬–೯–೧೧–೧೨ | ೧–೨–೩–೪–೭–೮–೯–೧೦–೧೧ | ೮–೧೧–೧೨ | ೧–೨–೪–೭–೮–೧೦–೧೧ |
| ಚಂದ್ರ | ೩–೬–೧೦–೧೧ | ೧–೩–೬–೭–೧೦–೧೧ | ೩–೬–೧೧ | ೨–೪–೬–೮–೧೦–೧೧ | ೨–೫–೭–೯–೧೧ | ೧–೨–೩–೪–೫–೮–೯–೧೧–೧೨ | ೩–೬–೧೧ |
| ಕುಜ | ೧–೨–೪–೭–೮–೯–೧೦–೧೧ | ೨–೩–೫–೬–೯–೧೦–೧೧ | ೧–೨–೪–೭–೮–೧೦–೧೧ | ೧–೨–೪–೭–೮–೯–೧೦–೧೧ | ೧–೨–೪–೭–೮–೧೦–೧೧ | ೩–೫–೬–೯–೧೧–೧೨ | ೩–೫–೬–೧೦–೧೧–೧೨ |
| ಬುಧ | ೩–೫–೬–೯–೧೦–೧೧–೧೨ | ೧–೩–೪–೫–೭–೮–೧೦–೧೧ | ೩–೫–೬–೧೧ | ೧–೩–೫–೬–೯–೧೦–೧೧–೧೨ | ೧–೨–೪–೫–೬–೯–೧೦–೧೧ | ೩–೫–೬–೯–೧೧ | ೬–೮–೯–೧೦–೧೧–೧೨ |
| ಗುರು | ೫–೬–೯–೧೧ | ೧–೨–೪–೭–೮–೧೦–೧೧ | ೬–೧೦–೧೧–೧೨ | ೬–೮–೧೧–೧೨ | ೧–೨–೩–೪–೭–೮–೧೦–೧೧ | ೫–೮–೯–೧೦–೧೧ | ೫–೬–೧೧–೧೨ |
| ಶುಕ್ರ | ೬–೭–೧೨ | ೩–೪–೫–೭–೯–೧೦–೧೧ | ೬–೮–೧೧–೧೨ | ೧–೨–೩–೪–೫–೮–೯–೧೧ | ೨–೫–೬–೯–೧೦–೧೧ | ೧–೨–೩–೪–೫–೮–೯–೧೦–೧೧ | ೬–೧೧–೧೨ |
| ಶನಿ | ೧–೨–೪–೭–೮–೯–೧೦–೧೧ | ೩–೫–೬–೧೧ | ೧–೪–೭–೮–೯–೧೦–೧೧ | ೧–೨–೪–೭–೮–೯–೧೦–೧೧ | ೩–೫–೬–೧೨ | ೩–೪–೫–೮–೯–೧೦–೧೧ | ೩–೫–೬–೧೧ |
| ಲಗ್ನ | ೩–೪–೬–೧೦–೧೧–೧೨ | ೩–೬–೧೦–೧೧ | ೧–೩–೬–೧೦–೧೧ | ೧–೨–೪–೬–೮–೧೦–೧೧ | ೧–೨–೪–೫–೬–೭–೯–೧೦–೧೧ | ೧–೨–೩–೪–೫–೮–೯–೧೧ | ೧–೩–೪–೬–೧೦–೧೧ |
| ಒಟ್ಟು ಬಿಂದುಗಳು | ೪೮ | ೪೯ | ೩೮ | ೫೪ | ೫೬ | ೫೨ | ೩೯ |

ಉದಾ—

| | | | |
|---|---|---|---|
| ಮೀನ | ಮೇಷ | ವೃಷಭ | ಮಿಥುನ ಗುರು |
| ಕುಂಭ ಲಗ್ನ | ರಾಶಿ ಕುಂಡಲಿ | | ಕರ್ಕಟಕ |
| ಮಕರ | | | ಸಿಂಹ ರ ಚಂ ಬು ಶುಕ್ರ ಶನಿ |
| ಧನುಸ್ಸು | ವೃಶ್ಚಿಕ | ತುಲಾ ಕುಜ | ಕನ್ಯಾ |

ಈ ಕುಂಡಲಿಯಲ್ಲಿ ಮೇಷ ವೃಷಭ ಮೊದಲಾದ ಹನ್ನೆರಡು ಹೆಸರುಗಳಿರುವ ಮನೆಗಳು ಆಯಾ ರಾಶಿಗಳನ್ನು ಸೂಚಿಸುತ್ತವೆ. ಉದಾಹರಣೆಯಾಗಿ ಕೊಟ್ಟಿರುವ ಈ ರಾಶಿಕುಂಡಲಿಯಲ್ಲಿ ಒಬ್ಬ ಜಾತಕನ ಜನನಕಾಲದ ಗ್ರಹಸ್ಥಿತಿಯನ್ನೂ ಲಗ್ನವನ್ನೂ ಗುರುತಿಸಿದೆ. ಈ ಗ್ರಹಸ್ಥಿತಿಯಿಂದ ಮೇಷಾದಿ ರಾಶಿಗಳಲ್ಲಿ ಸೂರ್ಯಾದಿ ಅಷ್ಟಕವರ್ಗದಲ್ಲಿ ಬರುವ ಬಿಂದುಸಂಖ್ಯೆಯನ್ನೂ ಬಿಂದುಪ್ರದ ಗ್ರಹದ ಹೆಸರನ್ನೂ ಅಷ್ಟಕವರ್ಗಪ್ರಸ್ತಾರದಲ್ಲಿ ಕೊಟ್ಟಿದೆ.

ಕುಂಡಲಿಯಲ್ಲಿ ಸೂರ್ಯನು ಸಿಂಹರಾಶಿಯಲ್ಲಿರುವನು. ಸೂರ್ಯಾಷ್ಟಕವರ್ಗದಲ್ಲಿ ಸೂರ್ಯನಿಂದ ೧–೨–೪–೭–೮–೯–೧೦–೧೧ನೇ ಸ್ಥಾನಗಳಲ್ಲಿ ಬಿಂದು ಬರುತ್ತದೆ; ಅಂದರೆ ಸಿಂಹ ಕನ್ಯಾ ವೃಶ್ಚಿಕ ಕುಂಭ ಮೀನ ಮೇಷ ವೃಷಭ ಮಿಥುನ ರಾಶಿಗಳಲ್ಲಿ ಸೂರ್ಯನು ಬಿಂದುಪ್ರದನಾಗುತ್ತಾನೆ. ಇದನ್ನೇ (ರ) ಎಂಬ ಸಂಕೇತದಿಂದ ಆಯಾ ರಾಶಿಗಳ ಕೆಳಗಡೆ ಸೂರ್ಯಾಷ್ಟಕದ ಸಾಲಿನಲ್ಲಿ ಗುರುತಿಸಿದೆ. ಇದೇ ಅಷ್ಟಕವರ್ಗದಲ್ಲಿ ಚಂದ್ರನು ೩–೬–೧೦–೧೧ನೇ ಸ್ಥಾನಗಳಲ್ಲಿ ಬಿಂದುಪ್ರದನಾಗುತ್ತಾನೆ. ಇದನ್ನು (ಚ) ಎಂಬ ಸಂಕೇತದಿಂದ ಬಿಂದುಗಳು ಬರುವ ರಾಶಿಗಳ ಕೆಳಗಡೆ ಅದೇ ಸಾಲಿನಲ್ಲಿ ಗುರುತಿಸಿದೆ. ಇದೇ ರೀತಿಯಲ್ಲಿ ಕುಜನಿಗೆ (ಕು) ಬುಧನಿಗೆ (ಬು) ಗುರುವಿಗೆ (ಗು) ಶುಕ್ರನಿಗೆ (ಶು) ಶನಿಗೆ (ಶ) ಲಗ್ನಕ್ಕೆ (ಲ) ಎಂದು ಸಂಕೇತ ಕೊಟ್ಟು ಅವರು ಬಿಂದುಪ್ರದರಾಗುವ ರಾಶಿಗಳಲ್ಲಿ ಈ ಸಂಕೇತಗಳನ್ನು ಬಿಂದುವಿಗೆ ಪ್ರತಿಯಾಗಿ ಯಾವ ಗ್ರಹದಿಂದ ಬಿಂದುವು ಬಂದಿವೆ ಎಂದು ಸುಲಭವಾಗಿ ತಿಳಿಯುವುದಕ್ಕಾಗಿ ಉದಾಹೃತ ಪ್ರಸ್ತಾರದಲ್ಲಿ ಗುರುತಿಸಿದೆ. ಪ್ರತಿ ರಾಶಿಯಲ್ಲೂ ಬಂದಿರುವ ಒಟ್ಟು ಬಿಂದುಗಳ ಸಂಖ್ಯೆಯನ್ನು ಆಯಾ ಅಷ್ಟಕವರ್ಗದ ಸಾಲಿನಲ್ಲಿ ರಾಶಿಗಳ ಕೆಳಗಡೆ ಗುರುತಿಸಿದೆ.

## ಉದಹರಿಸಿರುವ ಜಾತಕದ ಅಷ್ಟಕವರ್ಗ ಪ್ರಸ್ತಾರ

| ರಾಶಿ / ಗ್ರಹ | ಮೇಷ | ವೃಷಭ | ಮಿಥುನ | ಕರ್ಕಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನುಸ್ಸು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ರವ್ಯಷ್ಟಕ | ರ ಕು ಬು ಗು ಶ ಲ ೬ | ರ ಚ ಕು ಬು ಶ ಲ ೬ | ರ ಚ ಕು ಬು ಶ ೫ | ಕು ಬು ಶು ಲ ೪ | ರ ಕು ಶ ೩ | ರ ಶ ೨ | ಚ ಕು ಬು ಗು ೪ | ರ ಕು ಗು ಶ ಲ ೫ | ಬು ಲ ೨ | ಚ ಕು ಬು ಶು ಲ ೫ | ರ ಗು ಶು ಶ ೪ | ರ ಶ ೨ |
| ಚಂದ್ರಾಷ್ಟಕ | ಗು ಶು ಲ ೩ | ರ ಚ ಬು ಶು ೪ | ರ ಚ ಕು ಬು ಗು ಶು ಶ ೭ | ಕು ಗು ಲ ೩ | ಚ ಕು ಬು ೩ | ಗು ೧ | ರ ಚ ಬು ಶು ಶ ೫ | ಕು ಬು ಶು ಲ ೪ | ಕು ಬು ಗು ಶು ಶ ಲ ೬ | ರ ಚ ಗು ಶ ೪ | ರ ಚ ಕು ಬು ಶು ೫ | ರ ಕು ಬು ಗು ೪ |
| ಕುಜಾಷ್ಟಕ | ಕು ಗು ಶ ಲ ೪ | ರ ಕು ಗು ಶ ೪ | ರ ಚ ಬು ಶು ಶ ೫ | ಕು ಶು ಲ ೩ | ಶ ಕು ೨ | ... | ರ ಚ ಕು ಬು ೪ | ಕು ಗು ಶ ಲ ೪ | ರ ಬು ಲ ೩ | ರ ಚ ಕು ಬು ಶು ೫ | ಶ ಲ ೨ | ಗು ಶು ೨ |
| ಬುಧಾಷ್ಟಕ | ರ ಕು ಬು ಗು ಶು ಶ ೬ | ಚ ಕು ಬು ಗು ಶ ಲ ೬ | ರ ಚ ಕು ಬು ಶು ಶ ೬ | ರ ಕು ಬು ಲ ೪ | ಕು ಬು ಶು ಶ ೪ | ಚ ಶು ಶ ಲ ೪ | ಕು ಬು ಶು ೩ | ಚ ಕು ಗು ಶು ಶ ಲ ೬ | ರ ಬು ಶು ಲ ೪ | ರ ಚ ಕು ಬು ಗು ೫ | ಶ ಲ ೨ | ಚ ಶು ಶ ಲ ೪ |
| ಗುರ್ವಷ್ಟಕ | ರ ಚ ಕು ಬು ಗು ಶು ೬ | ರ ಕು ಬು ಶು ಲ ೫ | ರ ಚ ಬು ಗು ಶು ಲ ೬ | ಕು ಗು ಶ ಲ ೪ | ರ ಕು ಬು ಗು ಲ ೫ | ರ ಚ ಬು ಗು ಶು ೫ | ರ ಕು ಶ ಲ ೪ | ರ ಕು ಬು ಲ ೪ | ಚ ಬು ಗು ಶು ಶ ಲ ೬ | ಕು ಬು ಗು ಶು ಶ ೫ | ರ ಚ ಲ ೩ | ರ ಗು ಲ ೩ |
| ಶುಕ್ರಾಷ್ಟಕ | ಚ ಬು ಗು ಶು ಶ ಲ ೬ | ಶು ಶ ಲ ೩ | ರ ಚ ಕು ಬು ಶು ಶ ಲ ೭ | ರ ಚ ೨ | ಚ ಕು ಶು ೩ | ಚ ಕು ಶು ಲ ೪ | ಚ ಬು ಗು ಶು ಶ ಲ ೬ | ಚ ಶು ಶ ೩ | ಚ ಕು ಬು ಶು ಶ ಲ ೬ | ಬು ಗು ೨ | ಕು ಗು ಲ ೩ | ರ ಚ ಕು ಗು ಶು ಶ ಲ ೭ |
| ಶನ್ಯಷ್ಟಕ | ಬು ಗು ಲ ೩ | ರ ಬು ಗು ಲ ೪ | ರ ಚ ಬು ಶು ಶ ೫ | ಕು ಬು ಶು ಲ ೪ | ರ ಕು ೨ | ರ ಕು ೨ | ಚ ಗು ಶ ೩ | ರ ಗು ಲ ೩ | ಕು ಶ ಲ ೩ | ಚ ಬು ಶು ಶ ೪ | ರ ಕು ಲ ೩ | ರ ಕು ಬು ೩ |

ಗ್ರಹವು ತನ್ನ ಅಷ್ಟಕವರ್ಗದಲ್ಲಿ ಎಂಟುಬಿಂದುಗಳು ಬಂದಿರುವ ರಾಶಿಯಲ್ಲಿ ಪೂರ್ಣಶುಭಫಲವನ್ನೂ ಬಿಂದುಗಳೇ ಇಲ್ಲದಿರುವ ರಾಶಿಯಲ್ಲಿ ಪೂರ್ಣ ಅಶುಭಫಲವನ್ನೂ ಉಳಿದ ರಾಶಿಗಳಲ್ಲಿ ಅನುಪಾತದಿಂದ ಬಿಂದುವಿಗೆ ತಕ್ಕಷ್ಟು ಫಲವನ್ನೂ ಕೊಡುತ್ತದೆ. ಪ್ರಕೃತೋದಾಹರಣೆಯಲ್ಲಿ ಸೂರ್ಯನು ಸ್ವಕ್ಷೇತ್ರದಲ್ಲಿರುವುದರಿಂದ ಆತನ ಅಷ್ಟಕವರ್ಗದಲ್ಲಿ ಮೇಷರಾಶಿಯಲ್ಲಿ ಆರು ಬಿಂದುಗಳು ಬಂದಿರುವುದರಿಂದ ಆತನು ಮೇಷರಾಶಿಯಲ್ಲಿ ಸಂಚರಿಸುವಾಗ ೩/೪ ಭಾಗ ಶುಭಫಲವನ್ನೂ ಸಿಂಹರಾಶಿಯಲ್ಲಿ ಮೂರು ಬಿಂದುಗಳು ಬಂದಿರುವುದರಿಂದ ೩/೮ ಭಾಗ ಶುಭಫಲವನ್ನೂ ಕನ್ಯಾರಾಶಿಯಲ್ಲಿ ಎರಡು ಬಿಂದುಗಳು ಬಂದಿರುವುದರಿಂದ ಅಲ್ಲಿ ೧/೪ ಭಾಗ ಶುಭಫಲವನ್ನೂ ಮಕರರಾಶಿಯಲ್ಲಿ ಐದು ಬಿಂದುಗಳು ಬಂದಿರುವುದರಿಂದ ಅಲ್ಲಿ ೫/೮ ಭಾಗ ಶುಭಫಲವನ್ನೂ ಕೊಡುತ್ತಾನೆ. ಇದೇ ರೀತಿ ಉಳಿದ ಗ್ರಹಗಳು ಮೇಷಾದಿ ರಾಶಿಗಳಲ್ಲಿ ಸಂಚರಿಸುವಾಗ ಕೊಡುವ ಶುಭಾಶುಭಫಲಗಳನ್ನು ಅಷ್ಟಕವರ್ಗದಿಂದ ತಿಳಿದುಕೊಳ್ಳಬಹುದು.

---

# ಏಕಾದಶಾಧಿಕಾರಂ

## ಕರ್ಮಜೀವನ ಪ್ರಕರಣಂ

(ಧನಪ್ರಾಪ್ತಿ ವಿಚಾರ)

ಜಲರುಹಬಂಧು ಚಂದ್ರಮನಿನಕ್ಕೆ ವಿಲಗ್ನದಿನಕ್ಕೆ ಪತ್ತುಜೊಳ್
ನಿಲೆ ಪಿತೃವಿಂ ಧನಂ ಸಮನಿಕುಂ ನಿಲೆ ಶೀತಗು ಮಾತೃವಿಂ ಕುಜಂ
ನಿಲೆ ರಿಪುವರ್ಗದಿಂ ಶಶಿಸುತಂ ನಿಲೆ ಮಿತ್ರರಿನಂಗಿರಾಸುತಂ
ನಿಲೆ ಸಹಜಾತರಿಂ ನಿಲೆ ಸಿತಂ ವಧುವಿಂ ನಿಲೆ ಸೌರಿ ಭೃತ್ಯರಿಂ ೧

ಉದಯದಿನೊಂದುಡುಪನಿನೊಂ
ದು ದಶಮ:ದೊಳ್ ನೆಲಸಿದಂದು ಮೇಣ್ ಗ್ರಹಯುಗ್ಮಂ
ಮೊದಲಾಗೆನಿತುಂ ನಿಲೆ ದಶ
ಮದೊಳಾತಂಗರ್ಥಮೆಯ್ದುಗುಂ ಬಳವ[1]ಶದಿಂ[1] ೨

---

೧. ಜನನಕಾಲದಲ್ಲಿ ಸೂರ್ಯನು ಚಂದ್ರನಿಂದಾಗಲೀ ಲಗ್ನದಿಂದಾಗಲೀ ಹತ್ತನೆಯ ಸ್ಥಾನದಲ್ಲಿದ್ದರೆ ತಂದೆಯಿಂದ, (ಲಗ್ನದಿಂದ ಹತ್ತನೆಯ ಸ್ಥಾನದಲ್ಲಿ) ಚಂದ್ರನಿದ್ದರೆ ತಾಯಿಯಿಂದ, ಮಂಗಳನಿದ್ದರೆ ಶತ್ರುಗಳಿಂದ, ಬುಧನಿದ್ದರೆ ಸ್ನೇಹಿತರಿಂದ, ಗುರುವಿದ್ದರೆ ಸಹೋದರರಿಂದ, ಶುಕ್ರನಿದ್ದರೆ ಹೆಂಗಸಿನಿಂದ, ಶನಿಯಿದ್ದರೆ ಸೇವಕರಿಂದ ಹಣವು ದೊರೆಯುತ್ತದೆ.

ವಿ—ಹಣವು ಯಾರಿಂದ ದೊರೆಯುತ್ತದೆ ಮತ್ತು ಯಾವ ವೃತ್ತಿಯಿಂದ ಮನುಷ್ಯನು ಜೀವನವನ್ನು ನಡೆಸುತ್ತಾನೆ ಎನ್ನುವುದೇ ಕರ್ಮಾಜೀವ.

೨. ಲಗ್ನದಿಂದ ಹತ್ತನೆಯ ಸ್ಥಾನದಲ್ಲಿ ಒಂದುಗ್ರಹವೂ ಚಂದ್ರನಿಂದ ಹತ್ತನೆಯ ಸ್ಥಾನದಲ್ಲಿ ಒಂದುಗ್ರಹವೂ ಇದ್ದಾಗ ಎರಡು ಅಥವಾ ಅದಕ್ಕಿಂತ ಹೆಚ್ಚು ಗ್ರಹಗಳು ದಶಮದಲ್ಲಿದ್ದಾಗ ಹುಟ್ಟಿರುವವನಿಗೆ ಆ ಗ್ರಹಗಳ ಬಲಾನುಗುಣವಾಗಿ ಹಣವು ಲಭಿಸುತ್ತದೆ.

ವಿ—ಭಟ್ಟೋತ್ಪಲರ ಅಭಿಪ್ರಾಯದಂತೆ ದಶಮದಲ್ಲಿರುವ ಎಲ್ಲಗ್ರಹಗಳೂ ಜಾತಕನಿಗೆ ತಮ್ಮತಮ್ಮ ದಶಾಂತರ್ದಶಾ ಕಾಲಗಳಲ್ಲಿ ಫಲವನ್ನು ಕೊಡುತ್ತವೆ. ಭಟ್ಟೋತ್ಪಲರ ಈ ಸಾಮಾನ್ಯಾಭಿಪ್ರಾಯವನ್ನು ಶ್ರೀಧರನು ವಿಶೇಷವಾಗಿ 'ಬಲವಶದಿಂ' ಎಂದು ಹೇಳಿರುವುದರಿಂದ ಗ್ರಹ ಬಲಿಷ್ಠವಾಗಿದ್ದರೆ ಪೂರ್ಣಫಲವನ್ನೂ ಬಲಿಷ್ಠವಲ್ಲದಿದ್ದರೆ ಅಲ್ಪಫಲವನ್ನೂ ಕೊಡುತ್ತದೆಂದು ತಿಳಿದುಬರುತ್ತದೆ.

---

[1] ದಿಶಂ (ಕ) . . (ಗ).

(ವೃತ್ತಿವಿಚಾರ)

ಇನ ಲಗ್ನೇಂದುಗಳೊಳ್ ಸಬ
[1]ಲನಿಂದೆ ದಶಮಕ್ಕಧೀಶನೆಸೆದಿರ್ಪನದಾ
ವ ನವಾಂಶ[1]ದೊಳಾ[ಯಾ]ಳ್ದಂ
ಶನಾಥ[2]ವೃತ್ತಿ[2]ಯೊಳು ಬಾಳ್ಗುಮಾ ಪುಟ್ಟಿದವಂ ೩

(ಸೂರ್ಯ ಚಂದ್ರ ಕುಜ ಬುಧರಿಂದ ಜೀವನ ನಿರ್ಣಯ)

ತರಣಿನವಾಂಶದೊಳ್ ತೃಣ ವಿಭೇಷಜ ಕಂಬಳ ಕಾಂಚನಾದಿಯಿಂ
ಹರಿಣಧರಾಂಶದೊಳ್ ಜಲಧಿಯಿಂ ಕೃಷಿಯಿಂ ಲಲನಾಶ್ರಯಾದಿಯಿಂ
ಧರಣಿಸುತಾಂಶದೊಳ್[3][ಪ್ರಹರಣಾನಲ ಸಾಹಸ ಧಾತುವಿಂ ಸುಧಾ
ಕರಜ ನವಾಂಶದೊಳ್ ಗಣಿತ ಕಾವ್ಯ ಸುಶಿಲ್ಪ ಲಿಪಿವ್ರಜಾದಿಯಿಂ][3] ೪

---

೩. ಜನನಕಾಲದ ಸೂರ್ಯ ಲಗ್ನ ಚಂದ್ರರಲ್ಲಿ ಬಲಿಷ್ಠನಾದವನಿಂದ ದಶಮಸ್ಥಾನಾಧಿಪತಿ ಯಾವ ನವಾಂಶದಲ್ಲಿರುವನೋ ಆ ಅಂಶಾಧಿಪತಿಯ ಕಸುಬಿನಿಂದ ಜಾತಕನು ಜೀವಿಸುತ್ತಾನೆ.

ವಿ—ಈ ಅಭಿಪ್ರಾಯ ಭಟ್ಟೋತ್ಪಲರಿಗೆ ಸಮ್ಮತವಲ್ಲ. ಮನುಷ್ಯನಿಗೆ ಧನವು ಅನೇಕ ಪ್ರಕಾರಗಳಿಂದ ಬರುವುದನ್ನು ನಾವು ನೋಡುತ್ತಿದ್ದೇವೆ. ಆದಕಾರಣ ಲಗ್ನ ಚಂದ್ರ ಸೂರ್ಯ ಈ ಮೂರರಿಂದಲೂ ದಶಮದಲ್ಲಿರುವ ಎಲ್ಲ ಗ್ರಹಗಳಿಂದ ಅವರವರ ದಶಾಕಾಲದಲ್ಲಿ ಅವರಿಗೆ ಉಕ್ತವಾಗಿರುವ ಫಲಪ್ರಾಪ್ತಿಯಾಗುತ್ತದೆ ಬಲ ವಿವಕ್ಷಿತವಲ್ಲ ಎನ್ನುವುದೇ ಅವರ ಅಭಿಪ್ರಾಯ.

೪. ಜನನಕಾಲದಲ್ಲಿ ದಶಮಸ್ಥಾನಾಧಿಪತಿ ಸೂರ್ಯನ (ಸಿಂಹ) ನವಾಂಶದಲ್ಲಿದ್ದರೆ ಹುಲ್ಲು ಔಷಧ ಉಣ್ಣೆ ಚಿನ್ನ ಮೊದಲಾದವುಗಳಿಂದ ಚಂದ್ರನ (ಕರ್ಕಾಟಕ) ನವಾಂಶದಲ್ಲಿದ್ದರೆ ಸಮುದ್ರ ವ್ಯವಸಾಯ ಸ್ತ್ರೀಯರ ಆಶ್ರಯ ಮೊದಲಾದವುಗಳಿಂದ ಮಂಗಳನ (ಮೇಷ ವೃಶ್ಚಿಕ) ನವಾಂಶಗಳಲ್ಲಿದ್ದರೆ ಆಯುಧ ಬೆಂಕಿ ಸಾಹಸಕೆಲಸ ಧಾತು ಮೊದಲಾದವುಗಳಿಂದ ಬುಧನ (ಮಿಥುನ ಕನ್ಯಾ) ನವಾಂಶಗಳಲ್ಲಿದ್ದರೆ ಲೆಕ್ಕ ಕಾವ್ಯ ಶಿಲ್ಪ ಬರೆಹ ಮೊದಲಾದವುಗಳಿಂದ ಜಾತಕನು ಜೀವಿಸುತ್ತಾನೆ.

---

[1]ಳೀಶನಿಂದೆ ದಶಮಪದದರ್ಪನಾವ ಗ್ರಹವೊಂದು ನವಾಂಶ (ಕ). ಳೀಶನಿಂದೆ ದಶಮಪದಿರ್ಪನಾವಗ್ರಹ (ಗ) [2]ವೃತ್ತಿ (ಕ ಗ) [3]ಗಣಿತ ಶಿಲ್ಪಿತ್ವ ಲಿಪಿಬ್ರಜಾಳಿ ಯಿಂಗ ಧಾತು ಅಗ್ನಿ ಪ್ರಹರಣ ಸಾಹಸ್ಕೆ (ಕ) ಗಣಿತ ಸಿ . . ಪ್ರಜಾಳಿಯಿಂದಮಿಗಿಳ ಧಾತುಗಳಗ್ನಿ ಗ್ರಹರಣ ಸಾಹಸಕ್ಕೆ ಕುಜಾಂ (ಗ).

(ಗುರು ಶುಕ್ರ ಶನಿಗಳಿಂದ ಜೀವನ ನಿರ್ಣಯ)

ಪುರುಹೂತಾರ್ಚಿತನಂಶದೊಳ್ ವಿಬುಧ ಧಾತ್ರೀನಾಥ ಧರ್ಮಾ[1]ಕರೋ[1]
ತ್ಕರದಿಂ ಭಾರ್ಗವನಂಶದೊಳ್ ಮಹಿ[2]ಷಿ[2] ಗೋ ಮಾಣಿಕ್ಯ ರೂ[3]ಪ್ಯಾದಿಯಿಂ[3]
ತರಣಿಪ್ರೋದ್ಭವನಂಶದೊಳ್ [4]ಶ್ರಮ ವಧ[4]ವ್ಯಾಪಾರ ನೀಚಕ್ರಿಯಾ
ಚರ[5]ದಿಂ[5] ಸಂತತಮಾ ವಿಲಗ್ನಜನಿತಂಗಾ ಜೀವನಂ ಕೂಡುಗುಂ ೫

ನಿಲೆ ಕರ್ಮಾಧಿಪತಿಗೆ.ಹಂ ಸ್ವಗೃಹದೊಳ್ ತನ್ನಿಂ ಸುಹೃತ್ಕ್ಷೇತ್ರದೊಳ್
ನಿಲೆ ಮಿತ್ರಾಳಿಯಿನನ್ಯಗೇಹದೊಳು ನಿಂದಂದನ್ಯರಿಂದೊಂದುಗುಂ
ಫಲಮ[6]ರ್ಕಂ[6] ನಿಜ ಕರ್ಮನಾಥನೆನಿಸಿದಾರ್ತ್ತೋಚ್ಚದೊಳ್ ಕೂಡೆ ಮೇಣ್
ಬಲಸಂಪನ್ನತೆವೆತ್ತೊಡಾ[7]ತ್ಮ[7]* ಬಳದಿಂ [8]ತಾನಾರ್ಜಿಕುಂ[8] ವಿತ್ತಮಂ ೬

ಉದಯದೊಳಕ್ಕೇಕಾದಶ
ಸ[ದನದೊಳಕ್ಕ]ರ್ಥ ಗೃಹದೊಳಕ್ಕೆ ಬಲಂ ಕೂ
ಡಿದ ಶೋಭನಗ್ರಹಂ ಕೂ
ಡಿದೊಡಾ[ತನನೇಕ]*ತೆಱದಿನರ್ಥಂ ಬಡೆಗುಂ ೭

---

೫. ದಶಮಸ್ಥಾನಾಧಿಪತಿ ಗುರುವಿನ (ಧನುಸ್ಸು ಮೀನ) ನವಾಂಶಗಳಲ್ಲಿದ್ದರೆ ಪಂಡಿತರು ರಾಜರು ಧರ್ಮ ಆಕರ (ಸುವರ್ಣಾದಿ ಉತ್ಪತ್ತಿಸ್ಥಾನ) ಮೊದಲಾದವುಗಳಿಂದ ಶುಕ್ರನ (ವೃಷಭ ತುಲಾ) ನವಾಂಶಗಳಲ್ಲಿದ್ದರೆ ಎಮ್ಮೆ ಹಸು ಮಾಣಿಕ್ಯ ಬೆಳ್ಳಿ ಮೊದಲಾದವುಗಳಿಂದ ಶನಿಯು (ಮಕರ ಕುಂಭ) ನವಾಂಶಗಳಲ್ಲಿದ್ದರೆ ಶ್ರಮ ಕೊಲೆ ಹೀನಕಾರ್ಯ ಮೊದಲಾದವುಗಳಿಂದ ಆ ಲಗ್ನದಲ್ಲಿ ಹುಟ್ಟಿದವನಿಗೆ ಜೀವನವು ನಡೆಯುತ್ತದೆ.

೬. ಹತ್ತನೆಯ ಸ್ಥಾನಾಧಿಪತಿ ತನ್ನ ರಾಶಿಯಲ್ಲಿದ್ದರೆ ತನ್ನಿಂದ ಸ್ನೇಹಿತನ ರಾಶಿಯಲ್ಲಿದ್ದರೆ ಸ್ನೇಹಿತರಿಂದ ಉಳಿದ ರಾಶಿಗಳಲ್ಲಿದ್ದರೆ ಉಳಿದವರಿಂದ (ಶತ್ರುಗಳಿಂದ) ಜಾತಕನಿಗೆ ಫಲವುಂಟಾಗುತ್ತದೆ. ಸೂರ್ಯನು ಹತ್ತನೆಯ ಸ್ಥಾನಾಧಿಪತಿಯಾಗಿ ತನ್ನ ಉಚ್ಚರಾಶಿಯಲ್ಲಿ ಬಲಿಷ್ಠನಾಗಿದ್ದರೆ ತನ್ನ ಶಕ್ತಿಯಿಂದ ಹಣವನ್ನು ಗಳಿಸುತ್ತಾನೆ.

ವಿ—ವೃಶ್ಚಿಕಲಗ್ನದಲ್ಲಿ ಹುಟ್ಟಿದರೆ ಸೂರ್ಯ ದಶಮಸ್ಥಾನಾಧಿಪತಿಯಾಗುತ್ತಾನೆ. ಬಲಿಷ್ಠನಾದ ಸೂರ್ಯ ಮೇಷದಲ್ಲಿರುವಾಗ ವೃಶ್ಚಿಕ ಲಗ್ನದಲ್ಲಿ ಹುಟ್ಟಿದರೆ ಆ ಜಾತಕನು ತನ್ನ ಶಕ್ತಿಯಿಂದ ಹಣವನ್ನು ಸಂಪಾದಿಸುತ್ತಾನೆ. ಲಗ್ನದಂತೆ ಜನ್ಮರಾಶಿಯಿಂದಲೂ ಈ ಫಲವನ್ನು ತಿಳಿಯಬಹುದು.

೭. ಜನನಲಗ್ನದಲ್ಲಾಗಲೀ ಹನ್ನೊಂದನೆಯ ಸ್ಥಾನದಲ್ಲಾಗಲೀ ಎರಡನೆಯ ಸ್ಥಾನದಲ್ಲಾಗಲೀ ಬಲಿಷ್ಠನಾದ ಶುಭಗ್ರಹವಿದ್ದರೆ ಆ ಕಾಲದಲ್ಲಿ ಹುಟ್ಟಿದವನು ಅನೇಕಪ್ರಕಾರದಿಂದ ಹಣವನ್ನು ಪಡೆಯುತ್ತಾನೆ.

---

[1] ತ್ಕರಾ (ಕ) [2] ಷ (ಗ) [3] ಪ್ಯಾಂತದಿಂ (ಗ) [4] ಸಮರತ (ಕ ಗ) [5] ರಿಂ (ಗ)
[6] ಕ್ಯಂ (ಕ ಗ) [7] ಕ್ತ (ಗ) [8] ವಾವರ್ಧಕಂ (ಗ) * ಈ ಭಾಗ (ಕ) ಪ್ರತಿಯಲ್ಲಿಲ್ಲ.

ಉದಯದಿನಕರ್ಗನಿನುಡುಪನಿ
ನಿದಿರ್ಚಿ ನಿಂದೊಂದು ನೆಲ[1]ಸೆ[1] ಮೇಣ್ ಗ್ರಹಯುಗ್ಮಂ
ಮೊದಲಾ[2]ಗ[2]ನಿತುಂ ನಿಲೆ ದಶ
ಮದೊ[3]ಳಪ[3]ರಿಂದರ್ಥಮೆಯ್ದುಗುಂ ಬಲವಶದಿಂ ೮

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯ ಪದ್ಯ ವಿದ್ಯಾಧರ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ಕರ್ಮಜೀವನ ಪ್ರಕರಣವರ್ಣನಂ ಏಕಾದಶಾಧಿಕಾರಂ

---

೮. ಜನನಕಾಲದ ಲಗ್ನದಿಂದ ಸೂರ್ಯನಿಂದ ಚಂದ್ರನಿಂದ ದಶಮ ಸ್ಥಾನದಲ್ಲಿ ಒಂದು ಗ್ರಹವಾಗಲೀ ಅಥವಾ ಎರಡು ಮೊದಲು ಎಲ್ಲಗ್ರಹ ಗಳಾಗಲೀ ಇದ್ದರೆ ಆ ಗ್ರಹಗಳ ಬಲಾನುಗುಣವಾಗಿ ಜಾತಕನಿಗೆ ಹಣವು ಲಭಿಸುತ್ತದೆ.

ವಿ—ಅಂಶಾಧಿಪತಿ ಬಲಿಷ್ಠನಾಗಿದ್ದರೆ ಶ್ರಮವಿಲ್ಲದೆ ಧನಪ್ರಾಪ್ತಿಯೂ ದುರ್ಬಲನಾಗಿದ್ದರೆ ಅಲ್ಪಫಲವೂ ಉಂಟಾಗುತ್ತದೆ. ದಶಮಾಧಿಪತಿ ಇರುವ ನವಾಂಶರಾಶಿಯ ದಿಕ್ಕಿನಲ್ಲಿ ಫಲವು ಲಭಿಸುತ್ತದೆ. ಆ ನವಾಂಶದಲ್ಲಿ ಅದರ ಅಧಿಪತಿ ಇದ್ದರೆ ಅಥವಾ ನವಾಂಶವನ್ನು ಅಧಿಪತಿ ನೋಡಿದರೆ ಅಥವಾ ನವಾಂಶ ಸ್ಥಿರರಾಶಿಯಾಗಿದ್ದರೆ ಜಾತಕನು ತನ್ನ ದೇಶದಲ್ಲಿ ಸಂಪಾದಿಸುತ್ತಾನೆ. ದಶಮಸ್ಥಾನಾಧಿಪತಿಯಿರುವ ಆ ನವಾಂಶದಲ್ಲಿ ಅದರ ಅಧಿಪತಿಯನ್ನು ಬಿಟ್ಟು ಉಳಿದ ಗ್ರಹಗಳಿದ್ದರೆ ಅಥವಾ ಉಳಿದ ಗ್ರಹಗಳು ಆ ನವಾಂಶವನ್ನು ನೋಡಿದರೆ ಬೇರೆ ಊರಿನಲ್ಲಿ ಸಂಪಾದಿಸುತ್ತಾನೆ.

---

[1] ಸಿ (ಕ) [2] ವ (ಗ) [3] ಳಾ (ಕ).

# ದ್ವಾದಶಾಧಿಕಾರಂ

---

## ರಾಜಯೋಗ ಪ್ರಕರಣಂ

(ರಾಜವಂಶ ಮತ್ತು ಅನ್ಯವಂಶದಲ್ಲಿ ಹುಟ್ಟಿರುವವರಿಗೆ ರಾಜಯೋಗ)

ಪದುಳಂ ತ್ರಿಪ್ರಭೃತಿಗ್ರಹಂಗಳಿರೆ ತಂತಮ್ಮುಚ್ಚದೊಳ್ ಭೂಪವಂ
ಶದವಂ ಭೂಪತಿಯಕ್ಕುಮಯ್ದುಮೊದಲಾಗಿರ್ದಂದು ತದ್ವಂಶನ
ಲ್ಲದವಂ ಭೂಭುಜನೊಂದೆರಷ್ಟೆ ಲಸೆ ವಿತ್ತಸ್ವಾಮಿ ಮೂಲತ್ರಿಕೋ
ಣದೊಳಂ ತತ್ಕ್ರಮದಿಂ ಗ್ರಹಂಗಳಿರೆಯುಂ ಸಾರ್ತಕ್ಕುಮಂತಾ ಫಳಂ ೧

---

೧. ಬಲಿಷ್ಠರಾದ ಮೂರು ಅಥವಾ ಅಧಿಕಗ್ರಹಗಳು ತಮ್ಮತಮ್ಮ ಉಚ್ಚಕ್ಷೇತ್ರದಲ್ಲಿದ್ದರೆ ರಾಜವಂಶದಲ್ಲಿ ಹುಟ್ಟಿದವನು ರಾಜನಾಗುತ್ತಾನೆ. ಐದು ಅಥವಾ ಅದಕ್ಕಿಂತ ಹೆಚ್ಚು ಗ್ರಹಗಳು ತಮ್ಮತಮ್ಮ ಉಚ್ಚಕ್ಷೇತ್ರದಲ್ಲಿದ್ದರೆ ರಾಜವಂಶದವನಲ್ಲದಿದ್ದರೂ ರಾಜನಾಗುತ್ತಾನೆ. ಒಂದು ಅಥವಾ ಎರಡು ಗ್ರಹಗಳು ಉಚ್ಚಕ್ಷೇತ್ರದಲ್ಲಿದ್ದರೆ ಧನಿಕನಾಗುತ್ತಾನೆ. ಮೂಲತ್ರಿಕೋಣದಲ್ಲಿ ಮೇಲೆ ತಿಳಿಸಿರುವ ಕ್ರಮದಲ್ಲಿ ಗ್ರಹಗಳಿದ್ದರೂ ಈ ರಾಜಯೋಗಫಲವುಂಟಾಗುತ್ತದೆ.

ವಿ–ಗ್ರಹಗಳ ಉಚ್ಚ ಮತ್ತು ಮೂಲತ್ರಿಕೋಣಗಳ ವಿವರ ಸಂಜ್ಞಾ ಪ್ರಕರಣದ ೪೦–೪೧–೪೨ನೇ ಪದ್ಯಗಳಲ್ಲಿದೆ. ಮೂಲತ್ರಿಕೋಣವು ಗ್ರಹದ ಸ್ವಕ್ಷೇತ್ರ ಅಥವಾ ಉಚ್ಚಕ್ಷೇತ್ರವೇ ಆಗಿರುತ್ತದೆ. 'ತತ್ಕ್ರಮದಿಂ ಗ್ರಹಂಗಳಿರೆಯುಂ ಸಾರ್ತಕ್ಕುಮಂತಾ ಫಳಂ' ಎಂದರೆ—ಮೂರುಗ್ರಹಗಳು ಮೂಲತ್ರಿಕೋಣದಲ್ಲಿದ್ದರೆ ರಾಜವಂಶದಲ್ಲಿ ಹುಟ್ಟಿದವನು ರಾಜನಾಗುತ್ತಾನೆ; ಐದು ಅಥವಾ ಅದಕ್ಕಿಂತ ಹೆಚ್ಚು ಗ್ರಹಗಳು ಮೂಲತ್ರಿಕೋಣದಲ್ಲಿದ್ದರೆ ಅನ್ಯವಂಶದಲ್ಲಿ ಹುಟ್ಟಿದವನೂ ರಾಜನಾಗುತ್ತಾನೆ; ಒಂದು ಅಥವಾ ಎರಡುಗ್ರಹಗಳು ಮೂಲತ್ರಿಕೋಣದಲ್ಲಿದ್ದರೆ ಧನಿಕನಾಗುತ್ತಾನೆ— ಎಂದರ್ಥ.

ಜನನಕಾಲದಲ್ಲಿ ಪಾಪಗ್ರಹಗಳು ಉಚ್ಚಕ್ಷೇತ್ರದಲ್ಲಿದ್ದರೆ ಪಾಪಬುದ್ಧಿಯುಳ್ಳ ರಾಜನೂ ಶುಭಗ್ರಹಗಳಿದ್ದರೆ ಒಳ್ಳೆಯ ಬುದ್ಧಿಯುಳ್ಳ ರಾಜನೂ ಶುಭ ಮತ್ತು ಪಾಪಗ್ರಹಗಳಿದ್ದರೆ ಕ್ರೂರ ಸೌಮ್ಯ ಮಿಶ್ರಸ್ವಭಾವವುಳ್ಳ ರಾಜನೂ ಆಗುತ್ತಾನೆ. ಇದು ಯವನ ಮಣಿತ್ಥರ ಅಭಿಪ್ರಾಯ. ಪಾಪಗ್ರಹಗಳು ಉಚ್ಚಕ್ಷೇತ್ರದಲ್ಲಿದ್ದರೆ ರಾಜನಾಗುವುದಿಲ್ಲ; ರಾಜನಿಗೆ ಸಮನೂ ಕೋಪಿಷ್ಠನೂ ಕಲಹಪ್ರಿಯನೂ ಆಗುವನೆಂದು ಜೀವಶರ್ಮನು ಹೇಳಿರುತ್ತಾನೆ. ವರಾಹಮಿಹಿರಾಚಾರ್ಯರು ಯವನಮತವನ್ನೇ ಅಂಗೀಕರಿಸಿರುತ್ತಾರೆ. ಕೆಲವು ಜ್ಯೋತಿಷ್ಕರು ಮೂರು ಅಥವಾ ಅಧಿಕಗ್ರಹಗಳು ಉಚ್ಚಕ್ಷೇತ್ರದಲ್ಲಿದ್ದ ಮಾತ್ರಕ್ಕೆ ರಾಜಯೋಗವಿರುವುದಿಲ್ಲ; ಉಚ್ಚ ಅಥವಾ ಸ್ವಕ್ಷೇತ್ರಗಳಲ್ಲಿರುವ ಗ್ರಹಗಳು ಪರಸ್ಪರ ಕೇಂದ್ರ ಅಥವಾ ತ್ರಿಕೋಣಗಳಲ್ಲಿರಬೇಕೆಂದು ಅಭಿಪ್ರಾಯಪಡುತ್ತಾರೆ.

ಪಲವುಂ ಸ್ವೋಚ್ಚದೊಳಿರ್ದೊಡಂ ನೆರೆ[1]ಪೊಡಂ ಮಿತ್ರ[೦] ಗ್ರ[2]ಹಂ[2] ಸ್ವೋಚ್ಚದೊಳ್
ನಿಲೆ ಮಿತ್ರಗ್ರಹವೀಕ್ಷಿಪಂದು ನೃಪನಕ್ಕುಂ ಮೂಱು ನಾಲ್ಕು ಗ್ರಹಂ
ಬಲಸಂಪನ್ನತೆವೆತ್ತು ಕೇಂದ್ರಗೃಹದೊಳ್ ಕೂಡಿರ್ದೊಡಂ [3]ಧಾರಿಣೀ[3]
ತಲನಾಥತ್ವಮನಾತನಲ್ತೆ ಪಡೆಗುಂ ಸವ್ಯಕ್ತರತ್ನಾಕರಾ ೨

(ಕರ್ಕಟಕ ಮತ್ತು ಕನ್ಯಾ ಲಗ್ನ ರಾಜಯೋಗ)

ಅಸುರೇಜ್ಯಂ ನಾಲ್ಕಱೊಳ್ ಕರ್ಕಟಕದುದಯದೊಳ್ ಚಂದ್ರಮಂ ಷಷ್ಠದೊಳ್ ಭಾ
ನು ಸುರೇಜ್ಯಂ ಪತ್ತಱೊಳ್ ಭೂಸುತ ದಿನಪಸುತರ್ ಮೂಱಱೊಳ್ ದ್ಯೂನದೊಳ್ ಸೋ
ಮಸುತಂ ಕೂಡಿರ್ದೊಡಂ ಮೇಣ್ ಮಕರದೊ[4]ಳಸಿತಾ[4]ರರ್ ವಧೂಲಗ್ನದೊಳ್ ಚಂ
ದ್ರಸುತಂ ಜೀವೇಂದು ಶುಕ್ರರ್ ಧನುವಿನೊಳಿರೆ ತಾಂ ಪುಟ್ಟಿದಂ ಭೂಪನಕ್ಕುಂ ೩

೨. ಮೂರು ಅಥವಾ ಅದಕ್ಕಿಂತ ಹೆಚ್ಚು ಗ್ರಹಗಳು ತಮ್ಮ ತಮ್ಮ ಉಚ್ಚಕ್ಷೇತ್ರದಲ್ಲಿ ಮಿತ್ರಗ್ರಹದೊಡನಿದ್ದರೆ ಗ್ರಹವು ತನ್ನ ಉಚ್ಚಕ್ಷೇತ್ರದಲ್ಲಿದ್ದು ಮಿತ್ರಗ್ರಹ ನೋಡಿದರೆ ಆ ಕಾಲದಲ್ಲಿ ಹುಟ್ಟಿದವನು ರಾಜನಾಗುತ್ತಾನೆ. ಮೂರು ಅಥವಾ ನಾಲ್ಕು ಗ್ರಹಗಳು ಬಲಿಷ್ಠರಾಗಿ ಕೇಂದ್ರಸ್ಥಾನದಲ್ಲಿ ಒಟ್ಟಿಗೆ ಇದ್ದರೆ ರಾಜವಂಶದಲ್ಲಿ ಹುಟ್ಟಿದವನು ರಾಜನಾಗುತ್ತಾನೆ.

ವಿ—ಉಚ್ಚ ಕ್ಷೇತ್ರದಲ್ಲಿರುವ ಮೂರು ಅಥವಾ ನಾಲ್ಕು ಗ್ರಹಗಳು ಕೇಂದ್ರ ಸ್ಥಾನದಲ್ಲಿದ್ದಾಗ ಹುಟ್ಟಿದವನು ರಾಜನಾಗುತ್ತಾನೆಂದು ಕೆಲವು ಜ್ಯೌತಿಷಜ್ಞರ ಅಭಿಪ್ರಾಯ.

೩. ಶುಕ್ರ ನಾಲ್ಕನೆಯ ಸ್ಥಾನದಲ್ಲಿ ಕರ್ಕಟಕಲಗ್ನದಲ್ಲಿ ಚಂದ್ರ ಆರನೆಯ ಸ್ಥಾನದಲ್ಲಿ ಸೂರ್ಯ ಗುರು ಹತ್ತನೆಯ ಸ್ಥಾನದಲ್ಲಿ ಅಂಗಾರಕ ಶನಿಗಳು ಮೂರ ನೆಯ ಸ್ಥಾನದಲ್ಲಿ ಏಳನೆಯ ಸ್ಥಾನದಲ್ಲಿ ಬುಧ ಇರುವಾಗ ಅಥವಾ ಮಕರದಲ್ಲಿ ಶನಿ ಮಂಗಳರು ಕನ್ಯಾಲಗ್ನದಲ್ಲಿ ಬುಧ ಗುರು ಚಂದ್ರ ಶುಕ್ರರು ಧನುಸ್ಸಿನಲ್ಲಿ ಇರುವಾಗ ಹುಟ್ಟಿದವನು ರಾಜನಾಗುತ್ತಾನೆ.

ವಿ—ಈ ಪದ್ಯದಲ್ಲಿ ಎರಡು ರಾಜಯೋಗಗಳಿವೆ.

| | | | |
|---|---|---|---|
| | ಗುರು | | |
| | ೧ನೇ ರಾಜಯೋಗ (ಕರ್ಕಟಕಲಗ್ನ) | | ಲಗ್ನ ಚಂದ್ರ |
| ಬುಧ | | | |
| ರವಿ | | ಶುಕ್ರ | ಶನಿ ಕುಜ |

| | | | |
|---|---|---|---|
| | | | |
| | ೨ನೇ ರಾಜಯೋಗ (ಕನ್ಯಾಲಗ್ನ) | | |
| ಶನಿ ಕುಜ | | | |
| ಗುರು ಚಂದ್ರ ಶುಕ್ರ | | | ಲಗ್ನ ಬುಧ |

[1] ರೆ (ಗ) [2] ಪ (ಕ ಗ) [3] ಮೇಣ್ (ಗ) [4] ಳಾಸಿತ (ಕ) ಳಸಿ (ಗ).

ಗುರು ಕರ್ಕಿಲಗ್ನದೊಳ್ ಭಾ
ಸ್ಕರನಜದೊಳ್ ಸೋಮಸೂನು ಭೃಗುಸೂನು ಸುಧಾ
ಕರರೇಕಾದಶದೊಳ್ ನಿರೆ
ಪರಾಕ್ರಮೋನ್ನತಿಯೆನಿಪ್ಪ ಭೂಪತಿಯಕ್ಕುಂ ೪

(ಮಕರಲಗ್ನ ರಾಜಯೋಗ)

*ಶನಿ ಮಕರಲಗ್ನದೊಳ್ ಭೌ
ಮನಜದೊಳಮೃತಾಂಶು ಕರ್ಕಿಯೊಳ್ ರವಿ ಹರಿಯೊಳ್
ದನುಜೇಜ್ಯಂ ತೊರೆಯೊಳ್ ಸೌ
ಮ್ಯನಿರಲ್ ನರಯುಗ್ಮದೊಳ್ ನರಾಧಿಪನಕ್ಕುಂ ೫

---

ಮೊದಲನೆಯ ಯೋಗದಲ್ಲಿ ಸೂರ್ಯನು ಧನುಸ್ಸಿನಲ್ಲೂ ಚಂದ್ರನು ಕರ್ಕಟಕದಲ್ಲಿ ಲಗ್ನದಲ್ಲೇ ಇರುವರು. ಆದುದರಿಂದ ಧನುರ್ಮಾಸದ ಕೃಷ್ಣಪಕ್ಷದ ಆದಿ ಭಾಗದ ರಾತ್ರಿಯಲ್ಲಿ ಪುನರ್ವಸು ೪ನೇ ಪಾದ ಪುಷ್ಯ ಆಶ್ಲೇಷ ಈ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ ಈ ಯೋಗವು ಸಂಭವಿಸುತ್ತದೆ. ಈ ಯೋಗದಲ್ಲಿ ನಾಲ್ಕು ಕೇಂದ್ರಗಳಲ್ಲಿ ಶುಭಗ್ರಹಗಳೂ ಉಪಚಯದಲ್ಲಿ ಪಾಪಗ್ರಹಗಳೂ ಇರುವುವು. ಎರಡನೆಯ ಯೋಗವು ಕನ್ಯಾ ತುಲಾ ವೃಶ್ಚಿಕ ಧನುರ್ಮಾಸಗಳ ಶುಕ್ಲಪಕ್ಷದಲ್ಲಿ ಮೂಲ ಪೂರ್ವಾಷಾಢ ಉತ್ತರಾಷಾಢ ೧ನೇ ಪಾದದಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ.

೪. ಕರ್ಕಟಕಲಗ್ನವಾಗಿ ಲಗ್ನದಲ್ಲಿ ಗುರು ಮೇಷದಲ್ಲಿ ಸೂರ್ಯ ಹನ್ನೊಂದನೆಯ ಸ್ಥಾನದಲ್ಲಿ ಬುಧ ಶುಕ್ರ ಚಂದ್ರರು ಇದ್ದಾಗ ಹುಟ್ಟಿದವನು ಅತ್ಯಂತ ಪರಾಕ್ರಮಶಾಲಿಯಾದ ರಾಜನಾಗುತ್ತಾನೆ.

| | | | |
|---|---|---|---|
| | ರವಿ | ಬುಧ ಶುಕ್ರ ಚಂದ್ರ | |
| | ಕರ್ಕಟಕಲಗ್ನ ರಾಜಯೋಗ | | ಲಗ್ನ ಗುರು |
| | | | |
| | | | |

ಟಿ—ಈ ಯೋಗವು ೧೨ ವರ್ಷಗಳಿಗೊಮ್ಮೆ ಮೇಷಮಾಸ ಶುಕ್ಲಪಕ್ಷ ಪಂಚಮಿತಿಥಿಗೆ ಮೊದಲು ಮಧ್ಯಾಹ್ನ ಕಾಲದಲ್ಲಿ ಕೃತ್ತಿಕಾ ೧-೨-೩ನೇ ಪಾದಗಳು ರೋಹಿಣಿ ಮೃಗಶಿರ ೧-೨ನೇ ಪಾದಗಳಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ.

೫. ಮಕರಲಗ್ನವಾಗಿ ಲಗ್ನದಲ್ಲಿ ಶನಿ ಮೇಷದಲ್ಲಿ ಅಂಗಾರಕ ಕರ್ಕಟಕದಲ್ಲಿ ಚಂದ್ರ ಸಿಂಹದಲ್ಲಿ ಸೂರ್ಯ ತುಲಾದಲ್ಲಿ ಶುಕ್ರ ಮಿಥುನದಲ್ಲಿ ಬುಧ ಈ ವಿಧವಾದ ಯೋಗದಲ್ಲಿ ಹುಟ್ಟಿದವನು ರಾಜನಾಗುತ್ತಾನೆ.

---

* (ಗ) ಪ್ರತಿಯಲ್ಲಿ ಈ ಪದ್ಯವಿಲ್ಲ.

(ಕನ್ಯಾಲಗ್ನ ರಾಜಯೋಗ)

ಅಸಿತಾಂಗಾರರ್ ಮಕರದೊ
ಳಸುರೇಜ್ಯಂ ಪತ್ತಱೊಳ್ ನಿಜೋಚ್ಚಸ್ಥಿತ ಸೋ
ಮಸುತಂ [1]ಲಗ್ನದೊ[1]ಳಿರಲಿಂ
ದು ಸುರಾರ್ಚಿತರಸ್ತಗೃಹದೊಳಿರೆ ನೃಪನಕ್ಕುಂ ೬

---

| | | | |
|---|---|---|---|
| | ಕುಜ | | ಬುಧ |
| | ಮಕರಲಗ್ನ ರಾಜಯೋಗ | | ಚಂದ್ರ |
| ಲಗ್ನ ಶನಿ | | | ರವಿ |
| | | ಶುಕ್ರ | |

ವಿ—ಈ ಯೋಗದಲ್ಲಿ ಗುರುವನ್ನು ಬಿಟ್ಟು ಉಳಿದ ಆರುಗ್ರಹಗಳೂ ಸ್ವಕ್ಷೇತ್ರದಲ್ಲಿರುತ್ತವೆ. ಈ ಯೋಗವು ಸಿಂಹಮಾಸ ಕೃಷ್ಣಪಕ್ಷದ ಕೊನೆಯ ಭಾಗದಲ್ಲಿ ಪುನರ್ವಸು ೪ನೇ ಪಾದ ಪುಷ್ಯ ಆಶ್ಲೇಷಾ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಸಂಭವಿಸುತ್ತದೆ.

೬. ಶನಿ ಕುಜರು ಮಕರದಲ್ಲಿ ಶುಕ್ರ ಹತ್ತನೆಯಸ್ಥಾನದಲ್ಲಿ ತನ್ನ ಉಚ್ಚರಾಶಿಯಲ್ಲಿರುವ ಬುಧ ಲಗ್ನದಲ್ಲಿ ಚಂದ್ರಗುರುಗಳು ಏಳನೆಯಸ್ಥಾನದಲ್ಲಿ ಇರುವಾಗ ಹುಟ್ಟಿದವನು ರಾಜನಾಗುತ್ತಾನೆ.

| | | | |
|---|---|---|---|
| ಚಂದ್ರ ಗುರು | | | ಶುಕ್ರ |
| | ಕನ್ಯಾಲಗ್ನ ರಾಜಯೋಗ | | |
| ಶನಿ ಕುಜ | | | |
| | | | ಲಗ್ನ ಬುಧ |

ವಿ—ಈ ಯೋಗವು ಮಿಥುನ ಕರ್ಕಾಟಕ ಸಿಂಹ ಕನ್ಯಾಮಾಸಗಳ ಕೃಷ್ಣಪಕ್ಷದ ಆರಂಭದಿಂದ ದಶಮಿಯೊಳಗೆ ಪೂರ್ವಾಹ್ಣಕಾಲದಲ್ಲಿ ಪೂರ್ವಾಭಾದ್ರ ೪ನೇ ಪಾದ ಉತ್ತರಾಭಾದ್ರ ರೇವತಿ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಷಘಾತ್ರ ಸಂಭವಿಸುತ್ತದೆ.

---

[1] ಕನ್ನೆಯೊ (ಕ ಗ).

(ಕರ್ಕಟಕಲಗ್ನ ರಾಜಯೋಗ)

ಅರಿನೀಚಗ್ರಹಂ ಪೊಱಗಾ
ಗಿರೆ ಶೀರ್ಷೋದಯದೊಳಿರೆ ಸಮಸ್ತಗ್ರಹವೆಂ
ದಿರೆ ಕರ್ಕಿಲಗ್ನದೊಳ್ ಶೀ
ತರೋಚಿ ಪರಿಪೂರ್ಣನಾಗೆ ನೃಪನಕ್ಕುಮವಂ ೭

ವನಜಾರಿಯಿನುಪಚಯದೊಳ್
ಜನನಾಧಿಪನಿರೆ ಶುಭಗ್ರಹಂ ನೆಲಸಿರೆ ಕೇಂ
ದ್ರನವಾಸ ಶುಭಾಂಶದೊಳಶು
ಭನಿಚಯ[1]ಕಂ ವಿಬಲಮಾಗೆ[1] ಭೂಪತಿಯಕ್ಕುಂ ೮

ಪರಮೋಚ್ಚದೊಳಿರ್ದುದಯಿಸೆ
ಪರಾಭವಂಬಡದ ಗಗನಚರನಂ ಮಿತ್ರಾಂ
ಬರಚರರೀಕ್ಷಿಸಲೀಕ್ಷಿಸ
ದಿರೆ ಶತ್ರುನಭಶ್ಚರಂ ನರಂ ನೃಪನಕ್ಕುಂ ೯

---

೭. ಶತ್ರು ನೀಚಕ್ಷೇತ್ರಗಳನ್ನು ಬಿಟ್ಟು ಶೀರ್ಷೋದಯರಾಶಿಗಳಲ್ಲಿ ಎಲ್ಲ ಗ್ರಹಗಳೂ ಇದ್ದು ಕರ್ಕಟಕಲಗ್ನದಲ್ಲಿ ಚಂದ್ರನು ಪೂರ್ಣನಾಗಿರುವಾಗ ಹುಟ್ಟಿದವನು ರಾಜನಾಗುತ್ತಾನೆ.

ವಿ—ಸಿಂಹ ಕನ್ಯಾ ತುಲಾ ವೃಶ್ಚಿಕ ಕುಂಭ ಇವು ಶೀರ್ಷೋದಯರಾಶಿಗಳು. ಕುಂಭಮಾಸದಲ್ಲಿ ಪುನರ್ವಸು ಕನೇಪಾದ ಪುಷ್ಯ ಆಶ್ಲೇಷ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ ಈ ಯೋಗವು ಸಂಭವಿಸುತ್ತದೆ.

೮. ಚಂದ್ರನಿಂದ ಮೂರು ಆರು ಹತ್ತು ಹನ್ನೊಂದನೆಯ ಸ್ಥಾನಗಳಲ್ಲಿ ಜನ್ಮಾಧಿಪತಿಯೂ ಶುಭಗ್ರಹವು ಕೇಂದ್ರದಲ್ಲಿ ಶುಭಗ್ರಹದ ಅಂಶದಲ್ಲೂ ಇದ್ದು ಪಾಪಗ್ರಹಗಳು ಬಲರಹಿತರಾಗಿದ್ದಾಗ ಹುಟ್ಟಿದವನು ರಾಜನಾಗುತ್ತಾನೆ.

೯. ಪರಮೋಚ್ಚಾಂಶದಲ್ಲಿದ್ದು ಯುದ್ಧದಲ್ಲಿ ಸೋಲದೆ ಪ್ರಕಾಶಿಸುವ ಗ್ರಹವನ್ನು ಮಿತ್ರಗ್ರಹಗಳು ನೋಡಿ ಶತ್ರುಗ್ರಹಗಳು ನೋಡದಿದ್ದರೆ ಆ ಕಾಲದಲ್ಲಿ ಹುಟ್ಟಿದವನು ರಾಜನಾಗುತ್ತಾನೆ.

ವಿ—ಗ್ರಹಗಳ ಪರಮೋಚ್ಚಭಾಗಗಳು ಸಂಜ್ಞಾಪ್ರಕರಣದ ೪೧ನೇ ಪದ್ಯದಲ್ಲಿವೆ.

---

[1] ಕರಂ ವಿಬಲಂಬಾಗೆ (ಕ) ಕಂ ವಿಬಲಂಬಾಗೆ (ಗ).

ಹರಿಣಾಂಕಂ ಪರಮೋಚ್ಚದೊ
ಳಿರೆ ದನುಜಾಧೀಶಗುರು ನಿರೀಕ್ಷಿಸೆ ಸೌಮ್ಯೇ
ತರರಾಪೋಕ್ಲೀಬದೊಳಿರೆ
ಧರಣೀಶ್ವರನಕ್ಕುಮಾ ವಿಲಗ್ನಪ್ರಭವಂ ೧೦

ಉದಯ [1]ಜನ'ನಾಥಿ[2]ಪರ'[2] ಸೋ
ಲದೆ ಬಳಯುತ[3]ರಾಗೆ[3] ಮಿತ್ರ ಸೌಮ್ಯಗಣಂ ಕೇಂ
ದ್ರದೊಳಿರ್ದು ನಿರೀಕ್ಷಿಸೆ ಪು
ಟ್ಟಿದ ನರನರಸಕ್ಕುಮೆಂಬುದಾವುದು ಚೋದ್ಯಂ ೧೧

ದಿನಪತಿ ಸಿಂಹದೊಳುಡುಪತಿ
ತನಯಂ ಕನ್ನೆಯೊಳಿಳಾತನೂಭವನಜದೊಳ್
ದನುಜೇಜ್ಯಂ ತೊಲೆಯೊಳ್ ಕೋ
ಕನದಾಹಿತನಿರೆ ಕುಳೀರದೊಳ್ ನೃಪನಕ್ಕುಂ ೧೨

೧೦. ಚಂದ್ರನು ಪರಮೋಚ್ಚಭಾಗ(ವೃಷಭರಾಶಿ ೩ನೆಯ ಅಂಶ)ದಲ್ಲಿದ್ದು ಶುಕ್ರನು ನೋಡುವುದಲ್ಲದೆ ಪಾಪಗ್ರಹಗಳು ಅಪೋಕ್ಲೀಬ (೩, ೬, ೯, ೧೨) ಸ್ಥಾನದಲ್ಲಿರುವಾಗ ಹುಟ್ಟಿದವನು ಭೂಪತಿಯಾಗುತ್ತಾನೆ.

ವಿ—ಈ ಯೋಗವು ಕೃತ್ತಿಕ ೨ನೆಯ ಪಾದದ ಕೊನೆಯ ಭಾಗದಲ್ಲಿ ಹುಟ್ಟಿರುವವರಿಗೆ ಮಾತ್ರ ಸಂಭವಿಸುತ್ತದೆ.

೧೧. ಯುದ್ಧದಲ್ಲಿ ಸೋಲದೆ ಬಲಿಷ್ಠರಾಗಿರುವ ಲಗ್ನ ಮತ್ತು ಜನ್ಮ ರಾಶ್ಯಧಿಪತಿಗಳನ್ನು ಮಿತ್ರ ಶುಭಗ್ರಹಗಳು ಕೇಂದ್ರ (೧, ೪, ೭, ೧೦) ಸ್ಥಾನದಲ್ಲಿದ್ದು ನೋಡಿದರೆ ಆ ಕಾಲದಲ್ಲಿ ಹುಟ್ಟಿದವನು ಅರಸನಾಗುತ್ತಾನೆಂಬುದು ಏನಾಶ್ಚರ್ಯ!

೧೨. ಸೂರ್ಯ ಸಿಂಹದಲ್ಲಿ ಬುಧ ಕನ್ಯಾದಲ್ಲಿ ಅಂಗಾರಕ ಮೇಷದಲ್ಲಿ ಶುಕ್ರ ತುಲಾದಲ್ಲಿ ಚಂದ್ರ ಕರ್ಕಾಟಕದಲ್ಲಿ ಇರುವಾಗ ಹುಟ್ಟಿದವನು ರಾಜನಾಗುತ್ತಾನೆ.

| | | | |
|---|---|---|---|
| | ಕುಜ | | |
| | ರಾಜಯೋಗ | | ಚಂದ್ರ |
| | | | ರವಿ |
| | | ಶುಕ್ರ | ಬುಧ |

ವಿ—ಈ ಯೋಗವು ಸಿಂಹಮಾಸ ಕೃಷ್ಣಪಕ್ಷದ ಕೊನೆಯಲ್ಲಿ ಪುನರ್ವಸು ೪ನೇ ಪಾದ ಪುಷ್ಯ ಆಶ್ಲೇಷಾ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ. ಈ ಯೋಗದಲ್ಲಿ ಶನಿಯು ಮಕರರಾಶಿಯ ಎರಡನೆಯ ಅರ್ಧದಲ್ಲಿರಬೇಕೆಂದು ಸಾರಾವಳೀ ಗ್ರಂಥದಲ್ಲಿದೆ. ಇದೇ ಅಧಿಕರಣದ ೫ನೇ ಪದ್ಯದಲ್ಲಿ ಹೇಳಿರುವ ಯೋಗದಲ್ಲಿ ಬುಧನ ಸ್ಥಿತಿಯನ್ನು ಬಿಟ್ಟು ಉಳಿದೆಲ್ಲ ಅಂಶಗಳೂ ಈ ಯೋಗಕ್ಕೆ ಸಮಾನಾಗಿವೆ. ಬುಧನು ಮಾತ್ರ ಮಿಥುನಕ್ಕೆ ಪ್ರತಿಯಾಗಿ ಕನ್ಯಾರಾಶಿಯಲ್ಲಿರುತ್ತಾನೆ.

[1] ದ (ಗ)  [2] ಪಂ (ಕ ಗ)  [3] ನಾಗಿ (ಕ) . . (ಗ).

(ಅಕುಲೋದ್ಭವ ರಾಜಯೋಗ)

ಅಮರೇಜ್ಯ ಶಶಾಂಕರ್ ಪಂ
ಚಮದೊಳ್ ನಿಲೆ ಲಗ್ನಪತಿ ನಿರೀಕ್ಷಿಸೆ ನಿಲೆ ದೈ
ತ್ಯಮಹತ್ತರನನಿಮಿಷದೊಳ್
ಸಮಸ್ತ ಧರಣೀಶನಕ್ಕುಮಕುಲೋದ್ಭವನುಂ ೧೩

ಉದಯಿಸೆ ನಿಜವರ್ಗದೊಳೊಂ
ದಿದೊಡೆ ಗ್ರಹಂ ಪೂರ್ಣಚಂದ್ರನುಚ್ಚದೊಳಿರೆ ನೋ
[1]ಡಿ[1]ದೊಡೆ ಸಬಳಾಶುಭರ್ ಕೇಂ
ದ್ರದೊಳಿರದೊಡೆ ಸೌಮ್ಯಮಿತ್ರರವನಿಪನಕ್ಕುಂ ೧೪

ಉದಿತಸಕಲಗ್ರಹಂ ನಿಜ
ಸದನದೊಳಕ್ಕಾತ್ಮವರ್ಗದೊಳ್ ನಿಲೆ ಮೇಣ್ ಕೇಂ
ದ್ರದೊಳುದ[2]ಯೇಶಂ[2] ಸದ್ಗ್ರಹ
[3]ಮು[3]ದಯದೊಳಿರೆ ನೋಡೆ ಮಿತ್ರ[4]ರ[4]ವನಿಪನಕ್ಕುಂ ೧೫

೧೩. ಗುರು ಚಂದ್ರರು ಪಂಚಮಸ್ಥಾನದಲ್ಲಿದ್ದು ಲಗ್ನಾಧಿಪತಿಯು ಅವರನ್ನು ನೋಡುವುದಲ್ಲದೆ ಶುಕ್ರನು ಮೀನದಲ್ಲಿರುವಾಗ ಹೀನಕುಲದಲ್ಲಿ ಹುಟ್ಟಿದವನೂ ಭೂಮಂಡಲಕ್ಕೆ ಅಧಿಪತಿಯಾಗುತ್ತಾನೆ.

೧೪. ಅಸ್ತನಾಗದೇ ಉದಿತನಾಗಿ ತನ್ನ ವರ್ಗದಲ್ಲಿರುವ ಗ್ರಹವು ಉಚ್ಚಕ್ಷೇತ್ರದಲ್ಲಿರುವ ಪೂರ್ಣಚಂದ್ರನನ್ನು ನೋಡುವುದಲ್ಲದೆ ಬಲಿಷ್ಠರಾದ ಅಶುಭ ಗ್ರಹಗಳು ಕೇಂದ್ರದಲ್ಲಿ ಇಲ್ಲದಿರುವಾಗ ಹುಟ್ಟಿದವನು ಸೌಮ್ಯಗ್ರಹದ ದಶಾಕಾಲ ದಲ್ಲಿ ರಾಜನಾಗುತ್ತಾನೆ.

ವಿ—ಕೃತ್ತಿಕಾ ೨—೩—೪ನೇ ಪಾದಗಳು ರೋಹಿಣಿ ಮೃಗಶಿರ ೧—೨ನೇ ಪಾದಗಳು ಈ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಈ ಯೋಗಸಂಭವವಿರುತ್ತದೆ; "ಸೌಮ್ಯ ಮಿತ್ರರವನಿಪನಕ್ಕುಂ" ಎನ್ನುವುದಕ್ಕೆ ಪ್ರತಿಯಾಗಿ "ಸೌಮ್ಯದಶೆಯೊಳ ವನಿಪನಕ್ಕುಂ" ಎಂದಿದ್ದರೆ ಮೂಲಗ್ರಂಥಕ್ಕೆ ಸರಿಯಾಗುತ್ತದೆ.

ಚಂದ್ರನನ್ನು ನೋಡುವ ಗ್ರಹ ವರ್ಗೋತ್ತಮಾಂಶದಲ್ಲಿರಬೇಕೆಂದು ಸಾರಾವಳೀ ಗ್ರಂಥದಲ್ಲಿದೆ.

೧೫. ಎಲ್ಲ ಗ್ರಹಗಳೂ ಅಸ್ತರಾಗದೆ ಉದಿತರಾಗಿದ್ದು ಸ್ವಕ್ಷೇತ್ರ ಅಥವಾ ತಮ್ಮ ವರ್ಗದಲ್ಲಿದ್ದರೆ ಅಥವಾ ಕೇಂದ್ರ (೧—೪—೭—೧೦) ಸ್ಥಾನದಲ್ಲಿ ಲಗ್ನಾಧಿಪತಿಯಿದ್ದು ಮಿತ್ರಗ್ರಹಗಳು ನೋಡುವುದಲ್ಲದೆ ಶುಭಗ್ರಹವು ಲಗ್ನದಲ್ಲಿದ್ದರೆ ಆ ಕಾಲದಲ್ಲಿ ಹುಟ್ಟಿದವನು ರಾಜನಾಗುತ್ತಾನೆ.

[1] ಡ (ಕ ಗ) [2] ಯಿಸೆ (ಕ) [3] ದು (ಕ ಗ), [4] ನ (ಗ).

ತೊರೆಯೊಳು ದೈತ್ಯಾಮಾತ್ಯಂ
ನಿಲೆ ದಿವಿಜಾಮಾತ್ಯನಾತ್ಮತುಂಗೋದಯದೊಳ್
ನಿಲೆ ವೃಷಭದೊಳುಡುನಾಥಂ
ನಿಲೆ ಪುಟ್ಟಿದ ಮನುಜನವನಿಪಾಲಕನಕ್ಕುಂ ೧೬

ಸಿತನಿರೆ ಘಟಗೃಹದೊಳ್ ವಾ
ಕ್ಪತಿ ಕರ್ಕಿಯೊಳಿಂದು ಮೀನದೊಳ್ ಮೇಣ್ ಸಿತವೀ
ಕ್ಷಿತ ಮಂದಂ ಘಟದೊಳ್ ದಿನ
ಪತಿ ಹರಿಯೊಳ್ ಚಂದ್ರನಜದೊಳಿರೆ ನೃಪನಕ್ಕುಂ ೧೭

---

೧೬. ತುಲಾರಾಶಿಯಲ್ಲಿ ಶುಕ್ರ ಕರ್ಕಟಕಲಗ್ನದಲ್ಲಿ ಗುರು ವೃಷಭರಾಶಿಯಲ್ಲಿ ಚಂದ್ರ ಇರುವಾಗ ಹುಟ್ಟಿದವನು ರಾಜನಾಗುತ್ತಾನೆ.

| | | | |
|---|---|---|---|
| | | ಚಂದ್ರ | |
| | ಕರ್ಕಟಕ ಲಗ್ನ ರಾಜಯೋಗ | | ಲಗ್ನ ಗುರು |
| | | | |
| | | ಶುಕ್ರ | |

ವಿ–ಕೃತ್ತಿಕ ೨–೩–೪ನೇ ಪಾದಗಳು ರೋಹಿಣಿ ಮೃಗಶಿರ ೧–೨ನೇ ಪಾದಗಳು ಈ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ ಈ ಯೋಗವು ಸಂಭವಿಸುತ್ತದೆ. ಗುರುವು ಕರ್ಕಟಕರಾಶಿಯನ್ನು ಬಿಟ್ಟು ಪುನಃ ಆ ರಾಶಿಗೆ ಬರಲು ೧೨ ವರ್ಷಗಳಾಗುವುದರಿಂದ ಈ ಯೋಗವು ೧೨ ವರ್ಷಗಳಿಗೆ ಒಂದು ಸಲ ಸಂಭವಿಸುತ್ತದೆ.

೧೭. ಶುಕ್ರನು ಕುಂಭರಾಶಿಯಲ್ಲಿ ಗುರು ಕರ್ಕಟಕರಾಶಿಯಲ್ಲಿ ಚಂದ್ರ ಮೀನರಾಶಿಯಲ್ಲಿ ಇರುವಾಗ ಅಥವಾ ಶುಕ್ರನಿಂದ ದೃಷ್ಟನಾದ ಶನಿ ಕುಂಭದಲ್ಲಿ ಸೂರ್ಯ ಸಿಂಹದಲ್ಲಿ ಚಂದ್ರ ಮೇಷದಲ್ಲಿ ಇರುವಾಗ ಹುಟ್ಟಿದವನು ರಾಜನಾಗುತ್ತಾನೆ.

ವಿ–ಈ ಪದ್ಯದಲ್ಲಿ ಎರಡು ಯೋಗಗಳು ಉಕ್ತವಾಗಿವೆ. ಮೊದಲನೆಯ ಯೋಗವು ಪೂರ್ವಾಭಾದ್ರ ೪ನೇ ಪಾದ ಉತ್ತರಾಭಾದ್ರ ರೇವತಿ ಈ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ. ಎರಡನೆಯ ಯೋಗದಲ್ಲಿ ಚಂದ್ರನು ಜಲಚರರಾಶಿಯಲ್ಲಿರಬೇಕೆಂದು ಸಾರಾವಳೀ ಗ್ರಂಥದಲ್ಲಿದೆ. ಈ ಯೋಗವು ಸಿಂಹಮಾಸ ಕೃಷ್ಣಪಕ್ಷದ ಅಶ್ವಿನಿ ಭರಣಿ ಕೃತ್ತಿಕ ೧ನೇ ಪಾದ ಈ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ.

(ಮಕರ ಮತ್ತು ಮೀನಲಗ್ನ ರಾಜಯೋಗ)

ಖರಕರನಂದನಂ ಮಕರಲಗ್ನದೊಳಿಂದ್ರಪುರೋಹಿತಂ ಧನು
ರ್ಧರಗೃಹದೊಳ್ ಬುಧಂ ವಧುವಿನೊಳ್ ಶಶಿ ಮೀನದೊಳೊಂದಿದಂದು ಮೇ
ಣಿರೆ ಶನಿ ಕುಂಭದೊಳ್ ಝಷವಿಲಗ್ನದೊಳಿಂದು ನಿಜೋಚ್ಚದೊಳ್ ಕುಜಂ
[1]ತರಣಿ ಮೃಗೇಂದ್ರದೊಳ್ ಸಕಲಭೂವಲಯಾಧಿಪನಕ್ಕುಮಾ ನರಂ ೧೮

---

೧೮. ಶನಿ ಮಕರಲಗ್ನದಲ್ಲಿ ಗುರು ಧನುಸ್ಸಿನಲ್ಲಿ ಬುಧ ಕನ್ಯಾರಾಶಿಯಲ್ಲಿ ಚಂದ್ರ ಮೀನರಾಶಿಯಲ್ಲಿ ಇರುವಾಗ ಅಥವಾ ಶನಿ ಕುಂಭದಲ್ಲಿ ಮೀನಲಗ್ನದಲ್ಲಿ ಚಂದ್ರ ತನ್ನ ಉಚ್ಚ(ಮಕರ)ರಾಶಿಯಲ್ಲಿ ಕುಜ ಸಿಂಹದಲ್ಲಿ ಸೂರ್ಯ ಇರುವಾಗ ಹುಟ್ಟಿದವನು ಭೂಮಂಡಲಾಧಿಪತಿಯಾಗುತ್ತಾನೆ.

ವಿ—ಈ ಪದ್ಯದಲ್ಲಿ ಎರಡುಯೋಗಗಳು ಉಕ್ತವಾಗಿವೆ. ಈ ಎರಡುಯೋಗಗಳೂ ಪೂರ್ವಾಭಾದ್ರ ೪ನೆಯ ಪಾದ ಉತ್ತರಾಭಾದ್ರ ರೇವತೀ ನಕ್ಷತ್ರಗಳಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತವೆ. ಸಾರಾವಳಿಯಲ್ಲಿರುವಂತೆ ೧ನೇ ಯೋಗದಲ್ಲಿ ಕುಜನು ಮಿಥುನದಲ್ಲಿರಬೇಕು. ಇದನ್ನು ಶ್ರೀಧರನು ಬಿಟ್ಟಿರುತ್ತಾನೆ. ಎರಡನೇ ಯೋಗವು ಸಿಂಹಮಾಸ ಕೃಷ್ಣಪಕ್ಷದ ಆರಂಭದಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ.

ಸಾರಾವಳಿಯಲ್ಲಿ ಚಂದ್ರನು ಮೀನರಾಶಿಯ ಅಂತ್ಯನವಾಂಶದಲ್ಲಿರಬೇಕೆನ್ನುವ ಅಂಶವಿರುವುದಿಲ್ಲ. ಮಿಥುನ ಕನ್ಯಾ ಧನುಸ್ಸು ಮೀನ ಈ ನಾಲ್ಕೂ ದ್ವಿಸ್ವಭಾವ ರಾಶಿಗಳು.

| | | | |
|---|---|---|---|
| ಚಂದ್ರ | | | |
| | ೧ನೇ ಯೋಗ ಮಕರಲಗ್ನ | | |
| ಲಗ್ನ ಶನಿ | | | |
| ಗುರು | | | ಬುಧ |

| | | | |
|---|---|---|---|
| ಲಗ್ನ ಚಂದ್ರ | | | |
| ಶನಿ | ೨ನೇ ಯೋಗ ಮೀನಲಗ್ನ | | |
| ಕುಜ | | | ರವಿ |
| | | | |

[1] ಥ (ಕ ಗ).

(ದ್ವಿಸ್ವಭಾವ ಲಗ್ನ ರಾಜಯೋಗ)

ಹಿಮಧಾಮಮಂ ಸಕಳಂ ಝಷಾಂತಿಮನವಾಂಶಪ್ರಾಂತದೊಳ್ ಕೂಡಿದಂ
ದಮರೇಜ್ಯೇಂದುಜ ಶುಕ್ರರೀಕ್ಷಿಸೆ ವಿಲಗ್ನದ್ವ್ಯಂಗ ವರ್ಗೋತ್ತಮಾಂ
ಶಮೆ ತಾನಾಗೆ ಬಲಾಢ್ಯನಾಗಿರೆ ವಿಲಗ್ನಾಧೀಶನಾ[1]ತಂ[1] ಸಮ
ಸ್ತಮಹೀವಲ್ಲಭನುಂ ಯಶೋಧಿಕನುಮಕ್ಕುಂ ಪ[2]ದ್ಯ[2]ವಿದ್ಯಾಧರಾ ೧೯

ಉದಯಂ ವರ್ಗೋತ್ತಮಾಂಶಂಗಳೊಳೆಸೆವೊಡೆ ಮೇಣಲ್ಲಿ ದೋಷಾಕರಂ ಕೂ
ಡಿದೊಡಾ ಲಗ್ನೇಂದುವಂ ವೀಕ್ಷಿಸುವೊಡೆ ಚತುರಾದಿಗ್ರಹಂ ಭೂಪನಾ ಪು
ಟ್ಟಿದ ಮರ್ತ್ಯಂ ರಾಜಯೋಗಂ ಸಮನಿಸಿದೊಡೆ[3]ಯು[3]ದ್ಯದ್ಬಲಾಢ್ಯಗ್ರಹಕ್ಕಾ
ದ ದಶಾಪ್ರಸ್ತಾವಕಾಲಕ್ಕುದಯಿಸಿದ ನರಂಗಕ್ಕುಮುರ್ವೀಶ್ವರತ್ವಂ ೨೦

(ರಾಜಕುಮಾರ ರಾಜಯೋಗ)

ದಿನ[4]ಪತಿ[4] ಸಿಂಹದೊಳುರ್ವೀ
ಜನುದಯದೊಳ್ ಶೀತರೋಚಿ ಮೇಷೋದಯದೊಳ್
ಶನಿ ಕುಂಭದೊಳಮರೇಜ್ಯಂ
ಧನುವಿನೊಳಿರೆ ಭೂಪಸೂನು ಭೂಪತಿಯಕ್ಕುಂ ೨೧

೧೯. ಪೂರ್ಣಚಂದ್ರನು ಮೀನರಾಶಿಯ ಕೊನೆಯ(ಮೀನ)ಅಂಶದಲ್ಲಿದ್ದು ಗುರು ಬುಧ ಶುಕ್ರರು ನೋಡುವುದಲ್ಲದೆ ದ್ವಿಸ್ವಭಾವರಾಶಿಲಗ್ನದಲ್ಲಿ ವರ್ಗೋತ್ತಮಾಂಶವಾಗಿ ಲಗ್ನಾಧಿಪತಿ ಬಲಿಷ್ಠನಾಗಿದ್ದಾಗ ಹುಟ್ಟಿದವನು ಯಶಸ್ವಿಯಾದ ರಾಜನಾಗುತ್ತಾನೆ.

ವಿ—ಈ ಯೋಗವು ರೇವತೀನಕ್ಷತ್ರ ೪ನೇ ಪಾದದಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ.

೨೦. ಲಗ್ನವಾಗಲೀ ಚಂದ್ರನಾಗಲೀ ವರ್ಗೋತ್ತಮಾಂಶದಲ್ಲಿದ್ದು ನಾಲ್ಕು ಮೊದಲಾದ ಗ್ರಹಗಳು ನೋಡಿದಾಗ ಹುಟ್ಟಿದವನು ರಾಜನಾಗುತ್ತಾನೆ. ರಾಜಯೋಗವಿರುವ ಜಾತಕನಿಗೆ ಉದಿತಬಲಿಷ್ಠಗ್ರಹದ ದಶಾಕಾಲದಲ್ಲಿ ರಾಜ ಪದವಿ ದೊರೆಯುತ್ತದೆ.

ವಿ—ಲಗ್ನವು ವರ್ಗೋತ್ತಮಾಂಶದಲ್ಲಿದ್ದು ನಾಲ್ಕು ಐದು ಅಥವಾ ಆರು ಗ್ರಹಗಳು ನೋಡುವುದರಿಂದ ಒಟ್ಟು ೨೨ ಯೋಗಗಳು, ಅಂತೆಯೇ ಚಂದ್ರನು ವರ್ಗೋತ್ತಮಾಂಶದಲ್ಲಿದ್ದು ನಾಲ್ಕು ಮೊದಲಾದ ಗ್ರಹಗಳು ನೋಡುವುದರಿಂದ ೨೨ ಯೋಗಗಳು ಹೀಗೆ ಒಟ್ಟು ೪೪ ಯೋಗಗಳು ಸಂಭವಿಸುತ್ತವೆ. ಲಗ್ನವನ್ನು ನಾಲ್ಕುಗ್ರಹಗಳು ನೋಡುವಾಗ ೧೫ ವಿಧ; ಐದುಗ್ರಹಗಳು ನೋಡುವಾಗ ೬ ವಿಧ; ಆರುಗ್ರಹಗಳು ನೋಡುವಾಗ ೧ ವಿಧ; ಹೀಗೆ ಒಟ್ಟು ೧೫+೬+೧=೨೨ ಯೋಗಗಳಾಗುತ್ತವೆ.

೨೧. ಸೂರ್ಯ ಸಿಂಹದಲ್ಲಿ ಕುಜ ಲಗ್ನದಲ್ಲಿ ಚಂದ್ರ ಮೇಷಲಗ್ನದಲ್ಲಿ ಶನಿ ಕುಂಭದಲ್ಲಿ ಗುರು ಧನುಸ್ಸಿನಲ್ಲಿ ಇರುವಾಗ ಹುಟ್ಟಿದ ರಾಜನ ಮಗನು ರಾಜನಾಗುತ್ತಾನೆ.

[1] ವಂ (ಗ) [2] ದ್ಯಂಪ (ಕ) [3] ಮಬ (ಕ ಗ) [4] ಪಂ (ಗ).

ಅಮೃತಕರಂ ಮೇಷದೊಳು
ಷ್ಣಮಯೂಖಂ ಸಿಂಹಲಗ್ನದೊಳ್ ಘಟಗೃಹದೊಳ್
ಯಮನವನಿಜನುಚ್ಚದೊಳಿಂ
ದ್ರಮಂತ್ರಿ ನಿಜಗೃಹದೊಳಿರೆ ನೃಪಾತ್ಮಜನೆ ನೃಪಂ ೨೨

---

| | | | |
|---|---|---|---|
| | ಲಗ್ನ ಕುಜ ಚಂದ್ರ | | |
| | ಮೇಷಲಗ್ನ ರಾಜಯೋಗ | | |
| ಶನಿ | | | ರವಿ |
| ಗುರು | | | |

ವಿ—ಈ ಯೋಗವು ಸಿಂಹಮಾಸ ಕೃಷ್ಣಪಕ್ಷದ ಅಶ್ವಿನಿ ಭರಣಿ ಕೃತ್ತಿಕ ೧ನೇ ಪಾದ ಈ ನಕ್ಷತ್ರಗಳಲ್ಲಿ ರಾತ್ರಿ ಹುಟ್ಟಿದವರಿಗೆ ' ಮಾತ್ರ ಸಂಭವಿಸುತ್ತದೆ.

೨೨. ಚಂದ್ರ ಮೇಷದಲ್ಲಿ ಸೂರ್ಯ ಸಿಂಹಲಗ್ನದಲ್ಲಿ ಶನಿ ಕುಂಭದಲ್ಲಿ ಕುಜ ಉಚ್ಚ(ಮಕರ)ದಲ್ಲಿ ಗುರು ಸ್ವಕ್ಷೇತ್ರ(ಧನುಸ್ಸು ಅಥವಾ ಮೀನ)ದಲ್ಲಿ ಇರುವಾಗ ಹುಟ್ಟಿದ ರಾಜನ ಮಗನು ರಾಜನಾಗುತ್ತಾನೆ.

| | | | |
|---|---|---|---|
| | ಚಂದ್ರ | | |
| ಶನಿ | ಸಿಂಹಲಗ್ನ ರಾಜಯೋಗ | | |
| ಕುಜ | | | ಲಗ್ನ ರವಿ |
| ಗುರು | | | |

ವಿ—ಸಿಂಹಮಾಸ ಕೃಷ್ಣಪಕ್ಷದ ಮೊದಲಿನಲ್ಲಿ ಅಶ್ವಿನಿ ಭರಣಿ ಕೃತ್ತಿಕ ೧ನೇ ಪಾದ ಈ ನಕ್ಷತ್ರಗಳಲ್ಲಿ ಉದಯ ಕಾಲದಲ್ಲಿ ಹುಟ್ಟಿದವರಿಗೆ ಮಾತ್ರ ಈ ಯೋಗವು ಸಂಭವಿಸುತ್ತದೆ. ಬೃಹಜ್ಜಾತಕದ ರಾಜಯೋಗಾಧ್ಯಾಯ ೧೪ನೇ ಶ್ಲೋಕದಲ್ಲಿ ಸಿಂಹಲಗ್ನಕ್ಕೆ ಪ್ರತಿಯಾಗಿ ಮೇಷವು ಲಗ್ನವಾಗಿ ರವಿಯು ಲಗ್ನದಲ್ಲಿರಬೇಕೆಂದಿದೆ.

*ಸಿತನಿರೆ ನಿಜಗೃಹಮೆನಿಸಿದ
ಚತುರ್ಥದೊಳ್ ಹಿಮಗು ನವಮದೊಳ್ ಪೆಱರಾಯು
[1]ತ್ರಿ ತನೂನಿಕೇತನದೊಳುಂ
ಸ್ಥಿತರಾ[1]ಗಿರೆ ನೃಪತಿವಂಶಜಂ ನೃಪನಕ್ಕುಂ ೨೩

೨೩. ಶುಕ್ರನು ಸ್ವಕ್ಷೇತ್ರದಲ್ಲಿ ನಾಲ್ಕನೆಯ ಸ್ಥಾನದಲ್ಲೂ ಚಂದ್ರನು ನವಮಸ್ಥಾನದಲ್ಲೂ ಉಳಿದ ಗ್ರಹಗಳು ಲಗ್ನ ಮೂರು ಮತ್ತು ಹನ್ನೊಂದನೆಯ ಸ್ಥಾನಗಳಲ್ಲೂ ಇರುವಾಗ ಹುಟ್ಟಿದ ರಾಜವಂಶದವನು ರಾಜನಾಗುತ್ತಾನೆ.

ವಿ—ಶುಕ್ರನ ಕ್ಷೇತ್ರ ನಾಲ್ಕನೆಯ ಸ್ಥಾನವಾಗಬೇಕಾದರೆ ಕರ್ಕಟಕ ಅಥವಾ ಕುಂಭರಾಶಿಯೂ ಲಗ್ನವಾಗಿರಬೇಕು. ಚಂದ್ರನು ನವಮಸ್ಥಾನದಲ್ಲಿರಬೇಕಾದರೆ ಮೀನ ಅಥವಾ ತುಲಾರಾಶಿಯಲ್ಲಿರಬೇಕು. ಈ ಯೋಗದಲ್ಲಿ 'ಪೆಱರಾಯು ತ್ರಿ ತನೂನಿಕೇತನದೊಳುಂ ಸ್ಥಿತರಾಗಿರೆ' ಎಂದಿರುವುದರಿಂದ ಮೂರುರಾಶಿಗಳಿಗಿಂತ ಹೆಚ್ಚು ಅಂತರವು ರವಿ ಬುಧ ಶುಕ್ರರಿಗೆ ಸಂಭವಿಸದ ಕಾರಣ ವೃಷಭದಲ್ಲಿ ಶುಕ್ರನಿರುವಾಗ ರವಿ ಬುಧರು ಮೇಷರಾಶಿಯಲ್ಲೂ ತುಲಾರಾಶಿಯಲ್ಲಿ ಶುಕ್ರನಿರುವಾಗ ರವಿ ಬುಧರು ಕನ್ಯಾರಾಶಿಯಲ್ಲೂ ಇರಬೇಕಾಗುತ್ತದೆ. ಈ ಯೋಗವು ಮೇಷಮಾಸದಲ್ಲಿ ಶುಕ್ಲಚತುರ್ದಶೀ ಪೂರ್ಣಿಮಾ ಕೃಷ್ಣಪ್ರಥಮಾ ಈ ತಿಥಿಗಳು ಚಿತ್ತ ೩-೪ನೇ ಪಾದಗಳು ಸ್ವಾತಿ ವಿಶಾಖ ೧-೨-೩ನೇ ಪಾದಗಳು ಈ ನಕ್ಷತ್ರಗಳು ಮತ್ತು ಕುಂಭಲಗ್ನದಲ್ಲಿ ಜನನವಾದವರಿಗೂ, ಕನ್ಯಾಮಾಸದಲ್ಲಿ ಶುಕ್ಲಚತುರ್ದಶೀ ಪೂರ್ಣಿಮಾ ಕೃಷ್ಣಪ್ರಥಮಾ ಈ ತಿಥಿಗಳು ಪೂರ್ವಾಭಾದ್ರ ೪ನೇ ಪಾದ ಉತ್ತರಾಭಾದ್ರ ರೇವತಿ ಈ ನಕ್ಷತ್ರಗಳು ಮತ್ತು ಕರ್ಕಟಕ ಲಗ್ನದಲ್ಲಿ ಹುಟ್ಟಿದವರಿಗೂ ಸಂಭವಿಸುತ್ತದೆ.

| | | | | | | | |
|---|---|---|---|---|---|---|---|
| | ರವಿ ಬುಧ | ಶುಕ್ರ | | ಚಂದ್ರ | | ಕುಜ ಶನಿ | |
| ಲಗ್ನ ಗುರು | ಕುಂಭಲಗ್ನ ರಾಜಯೋಗ | | | | ಕರ್ಕಟಕಲಗ್ನ ರಾಜಯೋಗ | | ಲಗ್ನ ಗುರು |
| | | | | | | | |
| ಕುಜ ಶನಿ | | ಚಂದ್ರ | | | | ಶುಕ್ರ | ರವಿ ಬುಧ |

[1] ತ್ರಿತಯ ತನೂಜೋಽಪಚಯಸ್ಥಿತಸಾ (ಕ ಗ)

* (ಗ) ಪ್ರತಿಯಲ್ಲಿ ೨೪ನೇ ಪದ್ಯವಾದಮೇಲೆ ೨೩ನೇ ಪದ್ಯವಿದೆ.

ಬಳವದ್ಬುಧನುದಯದೊಳತಿ
ಬಳಸೌಮ್ಯಂ ಕೇಂದ್ರದೊಳ್ ದ್ವಿ ನವವೋಪಚಯಂ
ಗಳೊಳನ್ಯಗ್ರಹವೊಂದಿದೊ
ಡಿಳಾಧಿಪಪ್ರಭವ ನರನಿಳಾಧಿಪನಕ್ಕುಂ ೨೪

ಸಿತನುಂ ಭಾಸ್ಕರನುಂ ನಿರೆ
ಚತುರ್ಥದೊಳ್ ಹಿಮಗು ಪತ್ತಱೊಳ್ ಲಾಭದೊಳ
ರ್ಕತನೂಜಂ ಬುಧ ಭೌಮರ್
ದ್ವಿತಿಯದೊಳಿರೆ ಜನಪಸೂನು ಜನಪತಿಯಕ್ಕುಂ ೨೫

ಶಶಿಸುತ ಕುಜಸಿತರೇಕಾ
ದಶದೊಳ್ ಗುರು ನಾಲ್ಕಱೊಳ್ ಶಶಾಂಕಾದಿತ್ಯರ್
ದಶಮದೊಳೊಡ[1]ಲೊಳ್ ಕೂಡೆ ರ
ವಿಸುತನವನಿಪಾ[1]ತ್ಮಜಂ ನೃಪಂ ತಾನಕ್ಕುಂ ೨೬

---

೨೪. ಬಲಿಷ್ಠನಾದ ಬುಧ ಲಗ್ನದಲ್ಲಿ ಅತಿಬಲಿಷ್ಠನಾದ ಶುಭಗ್ರಹ ಕೇಂದ್ರ ಸ್ಥಾನದಲ್ಲಿ ಎರಡು ಒಂಬತ್ತು ಉಪಚಯ (೩–೬–೧೦–೧೧) ಸ್ಥಾನಗಳಲ್ಲಿ ಉಳಿದ ಗ್ರಹಗಳಿರುವಾಗ ಹುಟ್ಟಿದ ರಾಜನ ಮಗನು ರಾಜನಾಗುತ್ತಾನೆ.

ವಿ–ಬೃಹಜ್ಜಾತಕದಲ್ಲಿ 'ವೀರ್ಯಾಢ್ಯೇ ಚ ಶುಭೇ ಸುಖಯಾತೇ' ಎಂದಿರುವುದರಿಂದ ಬಲಿಷ್ಠನಾದ ಶುಭಗ್ರಹ ಚತುರ್ಥಕೇಂದ್ರದಲ್ಲಿರಬೇಕೆಂದು ತಿಳಿದುಬರುತ್ತದೆ. 'ಸುಖಯಾತೇ' ಎನ್ನುವುದಕ್ಕೆ ಪ್ರತಿಯಾಗಿ 'ಶುಭಯಾತೇ' ಎಂದು ಪಾಠಾಂತರವಿದೆ ; ಆದರೆ ಅದು ಶ್ರೀಧರನಿಗೆ ಸಮ್ಮತವಾಗಿರುವುದಿಲ್ಲ. 'ಸೌಮ್ಯೇ ವೀರ್ಯಯುತೇ ತನುಯುಕ್ತೇ' ಎಂದು ಬೃಹಜ್ಜಾತಕದಲ್ಲಿರುವುದನ್ನು 'ಬಳವದ್ಬುಧನುದಯದೊಳ್' ಎಂದು ಶ್ರೀಧರನು ಹೇಳಿರುತ್ತಾನೆ. ಇಲ್ಲಿ ಸೌಮ್ಯನೆಂದರೆ ಶುಭಗ್ರಹವೆಂದೂ ಅರ್ಥವಾಗುವುದರಿಂದ ಕೆಲವರು ಈ ಯೋಗದಲ್ಲಿ ಶುಭಗ್ರಹವು ಲಗ್ನದಲ್ಲಿರಬೇಕೆಂದು ಅಭಿಪ್ರಾಯಪಡುತ್ತಾರೆ.

೨೫. ಶುಕ್ರ ರವಿಗಳು ನಾಲ್ಕನೆಯ ಸ್ಥಾನದಲ್ಲಿ ಚಂದ್ರ ಹತ್ತನೆಯ ಸ್ಥಾನದಲ್ಲಿ ಶನಿ ಹನ್ನೊಂದನೆಯ ಸ್ಥಾನದಲ್ಲಿ ಎರಡನೆಯ ಸ್ಥಾನದಲ್ಲಿ ಬುಧ ಮಂಗಳರು ಇರುವಾಗ ಹುಟ್ಟಿದ ರಾಜವಂಶದವನು ರಾಜನಾಗುತ್ತಾನೆ.

ವಿ–ಈ ಯೋಗದಲ್ಲಿ ಗುರು ಲಗ್ನದಲ್ಲಿರಬೇಕೆಂದು ಬೃಹಜ್ಜಾತಕದಲ್ಲಿದೆ. ಸೂರ್ಯ ಚಂದ್ರರಿಗೆ ಆರುರಾಶಿಗಳ ಅಂತರವಿರುವುದರಿಂದ ಸಾಮಾನ್ಯವಾಗಿ ಶುಕ್ಲಚತುರ್ದಶೀ ಪೂರ್ಣಿಮಾ ಕೃಷ್ಣಪ್ರಥಮಾತಿಥಿಗಳಲ್ಲಿ ಹುಟ್ಟಿದವರಿಗೆ ಈ ಯೋಗವು ಸಂಭವಿಸುತ್ತದೆ.

೨೬. ಬುಧ ಕುಜ ಶುಕ್ರರು ಹನ್ನೊಂದನೆಯ ಸ್ಥಾನದಲ್ಲಿ ಗುರು ನಾಲ್ಕನೆಯ ಸ್ಥಾನದಲ್ಲಿ ಚಂದ್ರಸೂರ್ಯರು ಹತ್ತನೆಯ ಸ್ಥಾನದಲ್ಲಿ ಶನಿ ಲಗ್ನದಲ್ಲಿ ಇರುವಾಗ ಹುಟ್ಟಿದ ರಾಜಕುಮಾರನು ರಾಜನಾಗುತ್ತಾನೆ.

---

[1]ಗೂಡೆ ಶನ್ಯೈಶ್ವರನವನಿಶಾ (ಕ) ಗೂಡೆ ನೈಶ್ವರನವನಿಜಾ (ಗ).

ತಾರಾಪತಿ ವೃಷಲಗ್ನಾ
ಗಾರದೊಳಮರೇಜ್ಯನೆರಡಱೊಳ್ ಬುಧಸಿತ[1]ರ
ವ್ಯಾರರಿರೆ ಲಾಭ[1]ಭವನದೊ
ಳಾ ರಾಜಕುಲಪ್ರಸೂತನವನಿಪನಕ್ಕುಂ ೨೭

ರವಿ ದಶಮದೊಳಮರೇಜ್ಯಂ
ನವಮದೊಳವನಿ[2]ಸುತ[2]ಸೂರ್ಯಸು[3]ತರುದಯದೊಳ್ಕಿಂ
ದವನಾಯದೊಳುಡುಪತಿ ಸುಖ
ಭವನದೊಳಿರೆ ರಾಜಸೂನು ರಾಜನ[3]ನಿ[3]ಕ್ಕುಂ ೨೮

ವಿ–ಈ ಯೋಗವು ಕೃಷ್ಣಚತುರ್ದಶೀ ಅಮಾವಾಸ್ಯೆ ಶುಕ್ಲ ಪ್ರಥಮಾ ತಿಥಿಗಳಲ್ಲಿ ಮಧ್ಯಾಹ್ನಕಾಲದಲ್ಲಿ ಹುಟ್ಟಿದವರಿಗೆ ಸಂಭವಿಸುತ್ತದೆ.

೨೭. ಚಂದ್ರ ವೃಷಭಲಗ್ನದಲ್ಲಿ ಗುರು ಎರಡನೆಯ ಸ್ಥಾನದಲ್ಲಿ ಬುಧ ಶುಕ್ರ ರವಿ ಕುಜರು ಹನ್ನೊಂದನೆಯ ಸ್ಥಾನದಲ್ಲಿ ಇರುವಾಗ ಹುಟ್ಟಿದ ರಾಜ ವಂಶದವನು ರಾಜನಾಗುತ್ತಾನೆ.

| | | | |
|---|---|---|---|
| ಬುಧ ಕುಜ ರವಿ ಶುಕ್ರ | | ಲಗ್ನ ಚಂದ್ರ | ಗುರು |
| | ವೃಷಭಲಗ್ನ ರಾಜಯೋಗ | | |
| | | | |
| | | ಶನಿ | |

ವಿ–ಈ ಯೋಗವು ಮೀನ ಮಾಸ ಶುಕ್ಲಪಕ್ಷದಲ್ಲಿ ಬೆಳಗ್ಗೆ ಕೃತ್ತಿಕಾ ೨–೩–೪ನೇ ಪಾದ ಗಳು ರೋಹಿಣಿ ಮೃಗಶಿರ ೧–೨ನೇ ಪಾದಗಳು ಈ ನಕ್ಷತ್ರ ಗಳಲ್ಲಿ ಹುಟ್ಟಿದವರಿಗೆ ಸಂಭವಿಸು ತ್ತದೆ. ಬೃಹಜ್ಜಾತಕದಲ್ಲಿ ಶನಿ ಆರನೆಯ ಸ್ಥಾನದಲ್ಲಿರಬೇಕೆಂದು ಅಧಿಕವಾಗಿದೆ.

೨೮. ಸೂರ್ಯ ಹತ್ತನೆಯ ಸ್ಥಾನದಲ್ಲಿ ಗುರು ಒಂಬತ್ತನೆಯ ಸ್ಥಾನ ದಲ್ಲಿ ಕುಜಶನಿಗಳು ಲಗ್ನದಲ್ಲಿ ಬುಧ ಹನ್ನೊಂದನೆಯ ಸ್ಥಾನದಲ್ಲಿ ಚಂದ್ರ ನಾಲ್ಕನೆಯ ಸ್ಥಾನದಲ್ಲಿರುವಾಗ ಹುಟ್ಟಿದ ರಾಜಪುತ್ರನು ರಾಜನಾಗುತ್ತಾನೆ.

ವಿ–ಸೂರ್ಯ ಚಂದ್ರರಿಗೆ ಆರು ರಾಶಿಗಳ ಅಂತರವಿರುವುದರಿಂದ ಈ ಯೋಗವು ಶುಕ್ಲಚತುರ್ದಶೀ ಪೂರ್ಣಿಮಾ ಕೃಷ್ಣಪ್ರಥಮಾತಿಥಿಗಳಲ್ಲಿ ಹುಟ್ಟಿದ ವರಿಗೆ ಮಾತ್ರ ಸಂಭವಿಸುತ್ತದೆ.

[1] ರಂಗಾರರಿರೆ ಷಷ್ಠ (ಕ ಗ) [2] ಶನೀಜ (ಗ) [3] ಜು (ಗ).

(ರಾಜಸಮ ಧನಿಕಯೋಗ)

ಜನನಾಥಕುಲೋದ್ಭೂತಂ
ಜನಾಧಿಪತಿಯಕ್ಕುಮೆಂಬ ಲಗ್ನಂಗಳೊಳ
ನ್ಯನರಂ ಪುಟ್ಟಿದೊಡಾತಂ
[1]ಜ[1]ನಪತಿಸಮ ಧನ್ಯನೆನಿಸುಗುಂ ಬುಧಮಿತ್ರಾ ೨೯

(ಚೋರಸ್ವಾಮಿ ಯೋಗ)

ಕ್ರೂರಾಹ್ವಯ ರಾಶಿಗಳೊಳ್
ಕ್ರೂರಂ ನಿಲೆ ಸಬಲಸದ್ಗ್ರಹಂ ನಿಲೆ ಕೇಂದ್ರಾ
ಗಾರಂಗಳೊಳವನೀಶ್ವರ
[2]ಚೋರವ್ರಜದಿಂದಮ[2]ರ್ಥಪತಿಯಕ್ಕುಮವಂ ೩೦

(ಧನಾಢ್ಯ ಯೋಗ)

ಸುರಗುರು ಭೃಗುಸುತ ಶಶಿಸುತ
ರಿರೆ ಲಗ್ನದೊಳಸಿತನೇಟಱೊಳ್ ಪತ್ತಱೊಳಂ
ಬುರುಹಸಖಂ ನಿಲೆ ಪುಟ್ಟಿದ
ನರನತಿವಿತ್ತಾಢ್ಯನೆನಿಸುಗುಂ ಬುಧಮಿತ್ರಾ ೩೧

---

೨೯. ರಾಜವಂಶದಲ್ಲಿ ಹುಟ್ಟಿದವನು ರಾಜನಾಗುತ್ತಾನೆಂದು ತಿಳಿಸಿರುವ ಲಗ್ನಗಳಲ್ಲಿ ರಾಜವಂಶದವನಲ್ಲದವನು ಹುಟ್ಟಿದರೆ ಆತನು ರಾಜನಿಗೆ ಸಮನಾದ ಧನಿಕನಾಗುತ್ತಾನೆ.

೩೦. ಪಾಪಗ್ರಹರಾಶಿಗಳಲ್ಲಿ ಪಾಪಗ್ರಹಗಳೂ ಕೇಂದ್ರಸ್ಥಾನಗಳಲ್ಲಿ ಬಲಿಷ್ಠ ಶುಭಗ್ರಹಗಳೂ ಇರುವಾಗ ಹುಟ್ಟಿದವನು ಕಳ್ಳರ ಗುಂಪಿಗೆ ರಾಜನೂ ಹಣವಂತನೂ ಆಗುತ್ತಾನೆ.

ವಿ—ಶುಭರಾಶಿಕೇಂದ್ರಸ್ಥಾನಗಳಲ್ಲಿ ಬಲಿಷ್ಠವಾದ ಶುಭಗ್ರಹಗಳೂ ಪಾಪ ಗ್ರಹರಾಶಿಗಳಲ್ಲಿ ಪಾಪಗ್ರಹಗಳೂ ಇರುವಾಗ ಹುಟ್ಟಿದವನು ಕಳ್ಳರಿಗೆ ಒಡೆಯನೂ ಹಣವಂತನೂ ಆಗುತ್ತಾನೆ.

೩೧. ಗುರು ಶುಕ್ರ ಬುಧರು ಲಗ್ನದಲ್ಲೂ ಶನಿ ಏಳನೆಯ ಸ್ಥಾನದಲ್ಲೂ ಸೂರ್ಯ ಹತ್ತನೆಯ ಸ್ಥಾನದಲ್ಲೂ ಇರುವಾಗ ಹುಟ್ಟಿದವನು ಧನಾಢ್ಯನೆನಿಸುತ್ತಾನೆ.

ವಿ—ಈ ಯೋಗದಲ್ಲಿ ಸೂರ್ಯನಿಂದ ಬುಧ ಶುಕ್ರರು ನಾಲ್ಕನೆಯ ರಾಶಿಯಲ್ಲಿರುವುದರಿಂದ ಇದು ಕಾಲಾಂತರದಲ್ಲಿ ಸಂಭವಿಸಬಹುದಾದ ಪೂರ್ವ ಮತಾನುಸಾರಿಯೋಗವು ; ಕೆಲವರು ಗುರು ಶುಕ್ರ ಬುಧರಲ್ಲಿ ಒಂದು ಗ್ರಹ ಲಗ್ನ ದಲ್ಲಿರಬೇಕೆಂದೂ ಗುರು ಶುಕ್ರ ಬುಧರಾಶಿಗಳಲ್ಲೊಂದು ಲಗ್ನವಾಗಬೇಕೆಂದು ಮತ್ತೆ ಕೆಲವರೂ ಅಭಿಪ್ರಾಯಪಡುತ್ತಾರೆ.

---

[1] ಧ (ಗ) [2] ಚಾರಬ್ರಜದಿಂ ಮ (ಕ) ಭಾರವ್ರಜದಿಂ ಮ (ಗ).

ರಾತ್ರಿಂದಿವ ಲಗ್ನದೊಳ್[1]ಧಿ[1]
ಮಿತ್ರಾಂಶದೊಳಕ್ಕೆ ನಿಜನಿವಾಸಂಗಳೊಳಂ
ರಾತ್ರಿಪತಿ ನೆಲಸಿ[2]ರಿ[2] ಭೃಗು
ಪುತ್ರ[3]ನ[3]ಭೀಕ್ಷಿಸೆ ಧನಾಢ್ಯನುಂ [4]ಸುಖಿ[4]ಯುಮವಂ ೩೨

ಉದಯಿಸಿದಾಲಯಕ್ಕುಪಚಯಾಲಯದಲ್ಲಿ ಸಮಸ್ತ ಸೌಮ್ಯರೊಂ
ದಿದೊಡತಿಧನ್ಯನೆಂಗುಮವರಾಯೆಡೆಯೊಳ್ ನೆಲಸಲ್ ಧನಾಢ್ಯನೊಂ
ದಿದೊಡೆರಡಿಂದುಗಕ್ಕುದಯರಾಶಿಗೆ ಮೇಣು ಸವಿತ್ತನೊಂದು ಕೂ
ಡಿದೊಡವನಲ್ಪವಿತ್ತನಿದು ಮುಖ್ಯಮೆನಿಪ್ಪುದು ರಾಜಯೋಗದೊಳ್ ೩೩

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ
ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯ ಪ್ರಣೀತಮಪ್ಪ
ಜಾತಕತಿಲಕದೊಳ್ ರಾಜಯೋಗಪ್ರಕರಣ ವರ್ಣನಂ ದ್ವಾದಶಾಧಿಕಾರಂ

---

೩೨. ಹಗಲುಲಗ್ನದಲ್ಲಾಗಲೀ ರಾತ್ರಿಲಗ್ನದಲ್ಲಾಗಲೀ, ಅಧಿಮಿತ್ರಾಂಶ ಅಥವಾ ಸ್ವಕ್ಷೇತ್ರಾದಿಗಳಲ್ಲಿ ಚಂದ್ರನಿದ್ದು ಶುಕ್ರನು ನೋಡಿದರೆ ಆ ಕಾಲದಲ್ಲಿ ಹುಟ್ಟಿದವನು ಧನಿಕನೂ ಸುಖಿಯೂ ಆಗುತ್ತಾನೆ.

೩೩. ಜನನಲಗ್ನಕ್ಕೆ ಉಪಚಯ(೩–೬–೧೦–೧೧)ಸ್ಥಾನಗಳಲ್ಲಿ ಎಲ್ಲ ಶುಭಗ್ರಹಗಳೂ ಇದ್ದರೆ ಹೆಚ್ಚು ಧನಿಕನೂ ಲಗ್ನ ಅಥವಾ ಚಂದ್ರನಿಗೆ ಉಪಚಯದಲ್ಲಿ ಎರಡು ಶುಭಗ್ರಹಗಳಿದ್ದರೆ ಧನಿಕನೂ ಒಂದು ಶುಭಗ್ರಹವಿದ್ದರೆ ಸ್ವಲ್ಪ ಹಣವುಳ್ಳವನೂ ಆಗುತ್ತಾನೆ. ಇದು ರಾಜಯೋಗದಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವು.

---

[1] ಂ (ಕ ಗ) [2] ರ (ಕ ಗ) [3] ರ (ಕ ಗ) [4] ಸುಖ (ಕ ಗ)

# ತ್ರಯೋದಶಾಧಿಕಾರಂ

## ನಾಭಸಯೋಗ ಪ್ರಕರಣಂ

(ರಜ್ಜು ಮುಸಲ ನಳ ಯೋಗಗಳು)

ಚರರಾಶಿಯೊಳೇೞುಗ್ರಹ
ಮಿರೆ ಯೋಗಂ ರಜ್ಜುವೆನಿಸುಗುಂ ಸ್ಥಿರದೊಳ್ ಕೂ
ಡಿರೆ ತಾನದು ಮುಸಲಂ ದ್ವ್ಯಂ
ಗರಾಶಿಯೊಳ್ ಕೂಡಿ ನಿಂದೊಡದು ನಳಯೋಗಂ ೧

---

೧. ಚರರಾಶಿ (ಮೇಷ ಕರ್ಕಟಕ ತುಲಾ ಮಕರ)ಗಳಲ್ಲಿ ಏಳುಗ್ರಹಗಳೂ ಇದ್ದರೆ ರಜ್ಜುಯೋಗ (ಆಶ್ರಯ ೧). ಸ್ಥಿರರಾಶಿ(ವೃಷಭ ಸಿಂಹ ವೃಶ್ಚಿಕ ಕುಂಭ)ಗಳಲ್ಲಿ ಏಳುಗ್ರಹಗಳೂ ಇದ್ದರೆ ಮುಸಲಯೋಗ (ಆಶ್ರಯ ೨). ದ್ವಿಸ್ವಭಾವರಾಶಿ (ಮಿಥುನ ಕನ್ಯಾ ಧನುಸ್ಸು ಮೀನ)ಗಳಲ್ಲಿ ಏಳುಗ್ರಹಗಳೂ ಇದ್ದರೆ ನಳಯೋಗ (ಆಶ್ರಯ ೩).

ವಿ—ಆಕೃತಿಯೋಗಗಳು ೨೦ ಸಂಖ್ಯಾಯೋಗಗಳು ೭ ಆಶ್ರಯಯೋಗಗಳು ೩ ದಲಯೋಗಗಳು ೨; ಒಟ್ಟು ಈ ನಾಲ್ಕುಯೋಗಗಳ ಮೊತ್ತ ೩೨. ಈ ಸಮುದಾಯಕ್ಕೆ ನಾಭಸಯೋಗವೆಂದು ಹೆಸರು. ೩೨ ನಾಭಸಯೋಗಗಳಲ್ಲಿ ಮೂರು ಆಶ್ರಯಯೋಗಗಳನ್ನು ಈ ಪದ್ಯದಲ್ಲಿ ಶ್ರೀಧರನು ಹೇಳಿರುತ್ತಾನೆ.

ರಜ್ಜುಯೋಗದಲ್ಲಿ ನಾಲ್ಕುಚರರಾಶಿಗಳಲ್ಲೂ ಮುಸಲಯೋಗದಲ್ಲಿ ನಾಲ್ಕು ಸ್ಥಿರರಾಶಿಗಳಲ್ಲೂ ನಳಯೋಗದಲ್ಲಿ ನಾಲ್ಕುದ್ವಿಸ್ವಭಾವ ರಾಶಿಗಳಲ್ಲೂ ಗ್ರಹವಿರಬೇಕೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಇದು ಬಹುಸಮ್ಮತವಲ್ಲ. ಏಳುಗ್ರಹಗಳೂ ಚರರಾಶಿಯಲ್ಲಿದ್ದರೆ ಸಾಕು; ರಜ್ಜುಯೋಗ ಸಂಭವಿಸುತ್ತದೆ. ನಾಲ್ಕು ಚರರಾಶಿಗಳಲ್ಲೂ ಗ್ರಹವಿರಬೇಕೆಂಬ ನಿಯಮವಿರುವುದಿಲ್ಲ. ಇದರಂತೆಯೇ ಮುಸಲ ಮತ್ತು ನಳಯೋಗಗಳಲ್ಲಿ ನಾಲ್ಕುರಾಶಿಗಳಲ್ಲೂ ಗ್ರಹವಿರಬೇಕೆಂಬ ನಿಯಮವಿಲ್ಲ.

ನಾಭಸಯೋಗದ ಫಲಗಳು ಇತರ ಯೋಗಗಳಂತೆ ಯೋಗಪ್ರದಗ್ರಹಗಳ ದಶಾಕಾಲದಲ್ಲಿ ಮಾತ್ರ ಫಲಿಸದೆ ಸಾಮಾನ್ಯವಾಗಿ ಎಲ್ಲ ಕಾಲಗಳಲ್ಲೂ ಫಲಿಸುತ್ತವೆ. ವರಾಹಮಿಹಿರಾಚಾರ್ಯರು ಯವನರು ಹೇಳಿರುವ ೧೮೦೦ ನಾಭಸಯೋಗಗಳನ್ನು ೩೨ ಯೋಗಗಳಲ್ಲಿ ಅಡಕಮಾಡಿ ಹೇಳಿರುತ್ತಾರೆ. ರಜ್ಜು ಮುಸಲ ಯೋಗಗಳ ಫಲ ಇದೇ ಅಧಿಕಾರದ ೧೧ ನೇ ಪದ್ಯದಲ್ಲೂ ನಳಯೋಗದ ಫಲ ೧೨ನೇ ಪದ್ಯದಲ್ಲೂ ಇದೆ.

ವಿಶೇಷವಾಗಿ ಕಾಲವನ್ನು ಸೂಚಿಸಿ ಹೇಳಿರುವ [ "ಶಿಶುತೆಯೊಳ್ ವೃದ್ಧತ್ವದೊಳ್ ಸೌಖ್ಯಭಾಜನನಕ್ಕುಂ" (ಪ. ೧೭) ಇವೇ ಮೊದಲಾದ] ಫಲಗಳು ಆಯಾ ಕಾಲಗಳಲ್ಲಿ ಮಾತ್ರ ಸಂಭವಿಸುತ್ತವೆ.

(ಗದಾ ಶಕಟ ಶೃಂಗಾಟಕ ಯೋಗಗಳು)

ಇರೆ ಕೇಂದ್ರದೆರಡ್ಕಲದೊಳ
ಮೆರಡುಂ ಗ್ರಹಮದು ಗದಾಖ್ಯಮುದಯಾಸ್ತದೊಳೊಂ
ದಿರೆ ಶಕಟಮುದಯ ಸುತ ನವ
ಮ ರಾಶಿಯೊಳ್ ನಿಂದೊಡೇೞುಮದು ಶೃಂಗಾಟಂ ೨

(ವಿಹಗ ಹಲ ಯೋಗಗಳು)

*ಗ್ರಹಮೇೞುಂ ನಿಂದೊಡೆ ದಶ
ಮ ಹಿಬುಕದೊಳ್ ವಿಹಗಯೋಗಮೆನಿಕುಂ ಮತ್ತಾ
ಗ್ರಹಮೇೞುಂ [1]ಲಗ್ನೇತರ[1]
ಗೃಹದೊಳ್ ನೆಲಸಿದೊಡೆ ಹಲಮೆನಿಕ್ಕುಂ ಯೋಗಂ ೩

---

೨. ಆಸನ್ನಕೇಂದ್ರಗಳೆರಡರಲ್ಲಿ ಏಳುಗ್ರಹಗಳೂ ಇದ್ದರೆ ಗದಾಯೋಗ (ಆಕೃತಿ ೧). ಲಗ್ನ ಮತ್ತು ಸಪ್ತಮ ಕೇಂದ್ರಗಳಲ್ಲಿ ಏಳುಗ್ರಹಗಳೂ ಇದ್ದರೆ ಶಕಟ ಯೋಗ (ಆಕೃತಿ ೨). ಲಗ್ನ ಪಂಚಮ ನವಮರಾಶಿಗಳಲ್ಲಿ ಏಳುಗ್ರಹಗಳೂ ಇದ್ದರೆ ಶೃಂಗಾಟಕಯೋಗ (ಆಕೃತಿ ೩).

ವಿ-ಕೇಂದ್ರದ ಎರಡುಪಾರ್ಶ್ವಗಳಲ್ಲಿ ಎರಡು ಗ್ರಹವಿದ್ದರೆ ಗದಾಯೋಗ ವೆಂದು ಪದ್ಯದಲ್ಲಿದೆ. ಆದರೆ ಇದು ಸರಿಯಲ್ಲ. ಅಕ್ಕಪಕ್ಕದ ಎರಡು ಕೇಂದ್ರ ಗಳಲ್ಲಿ ಎಲ್ಲಗ್ರಹಗಳೂ ಇದ್ದರೆ ಗದಾಯೋಗವೆಂದು ಪದ್ಯದಲ್ಲಿರುವುದಕ್ಕೆ ತಾತ್ಪರ್ಯವನ್ನು ಕಲ್ಪಿಸಬೇಕಾಗುತ್ತದೆ. ಶ್ರೀಧರನು ಈ ಪದ್ಯದಲ್ಲಿ ಮೂರು ಆಕೃತಿ ಯೋಗಗಳನ್ನು ಮಾತ್ರ ತಿಳಿಸಿರುತ್ತಾನೆ. ಎಲ್ಲಗ್ರಹಗಳೂ (೧) ಲಗ್ನ ಚತುರ್ಥಗಳಲ್ಲಿ (೨) ಚತುರ್ಥಸಪ್ತಮಗಳಲ್ಲಿ (೩) ಸಪ್ತಮ ದಶಮಗಳಲ್ಲಿ (೪) ದಶಮ ಲಗ್ನಗಳಲ್ಲಿ ಇರುವಾಗ ಗದಾಯೋಗವು ಸಂಭವಿಸುತ್ತದೆ. ಗದಾ ಯೋಗದ ಫಲ ೧೨ನೇ ಪದ್ಯದಲ್ಲೂ ಶಕಟ ಶೃಂಗಾಟಕ ಯೋಗಗಳ ಫಲ ೧೩ನೇ ಪದ್ಯದಲ್ಲೂ ಇದೆ.

೩. ಏಳು ಗ್ರಹಗಳೂ ದಶಮ ಚತುರ್ಥ ಕೇಂದ್ರಗಳಲ್ಲಿದ್ದರೆ ವಿಹಗಯೋಗ (ಆಕೃತಿ ೪). ಲಗ್ನವನ್ನು ಬಿಟ್ಟು ಉಳಿದ (ಎರಡು ಮೂರು ನಾಲ್ಕು ಮತ್ತು ಅವುಗಳ ತ್ರಿಕೋಣ) ಸ್ಥಾನಗಳಲ್ಲಿ ಏಳುಗ್ರಹಗಳಿದ್ದರೆ ಹಲಯೋಗ (ಆಕೃತಿ ೫).

ವಿ-ಈ ಪದ್ಯದಲ್ಲಿ ವಿಹಗ ಮತ್ತು ಹಲ ಎಂಬ ಎರಡು ಆಕೃತಿಯೋಗ ಗಳನ್ನು ತಿಳಿಸಿರುತ್ತಾನೆ. ಹಲಯೋಗವು ಮೂರುವಿಧ. ಎಲ್ಲ ಗ್ರಹಗಳೂ (೧) ೨–೬–೧೦ ನೇ ಸ್ಥಾನಗಳಲ್ಲಿರುವುದು (೨) ೩–೭–೧೧ ನೇ ಸ್ಥಾನ ಗಳಲ್ಲಿರುವುದು (೩) ೪–೮–೧೨ ನೇ ಸ್ಥಾನಗಳಲ್ಲಿರುವುದು. ಹಲಯೋಗದ ಫಲ ೧೩ನೇ ಪದ್ಯದಲ್ಲೂ ವಿಹಗಯೋಗದ ಫಲ ೧೪ನೇ ಪದ್ಯದಲ್ಲೂ ಇವೆ.

---

[1] ಲಗ್ನವ್ಯಯ (ಕ). * (ಗ) ಪ್ರತಿಯಲ್ಲಿ ೩ನೇ ಪದ್ಯವಿಲ್ಲ.

(ಚಕ್ರ ಸಮುದ್ರಯೋಗಗಳು)

ಉದ[1]ಯಾದ್ಯೇ[1]ಕ ಗೃಹಾಂತರಿ
ತದೋಳೇಳುಂ ನಿಂದೊಡದುವೆ ಚಕ್ರಂ ವಿತ್ತಂ
ವೊದಲಾಗೇಕಾಂತರವೊಂ
ದಿದೊಡಾಗ್ರಹವೇೞ್ ಸಮುದ್ರ[2]ಮೆಂ[2]ದೀ ಯೋಗಂ ೪

(ಏಳು ಸಂಖ್ಯಾಯೋಗಗಳು)

ನಿಲೆ ಸಪ್ತಗ್ರಹವೊಂದೆ ರಾಶಿಯೊ[3]ಳ[3] ಯೋಗಂ ಗೋಳನಾಮಂ ಯುಗಂ
ನಿಲೆ ಗೇಹದ್ವಯದೊಳ್ ತ್ರಿಗೇಹದೊಳಿರಲ್ ಶೂಲಂ ಚತುರ್ಗೇಹದೊಳ್
ನಿಲೆ ಕೇದಾರಮವ್ಯೆದುಗೇಹದೊಳಿರಲ್ ಪಾಶಂ ಷಡಾವಾಸದೊಳ್
ನಿಲೆ ದಾಮಂ ನಿಲೆ ಸಪ್ತಮಾಲಯದೊಳಕ್ಕುಂ ವಲ್ಲಕೀ ಸಂಜ್ಞಕಂ ೫

---

೪. ಲಗ್ನದಿಂದ ಪ್ರಾರಂಭಿಸಿ ಏಕಾಂತರರಾಶಿಗಳಲ್ಲಿ ಏಳುಗ್ರಹಗಳೂ ಇದ್ದರೆ ಚಕ್ರಯೋಗ (ಆಕೃತಿ ೬). ದ್ವಿತೀಯಸ್ಥಾನ ವೊದಲು ಮಾಡಿ ಏಕಾಂತರ ರಾಶಿಗಳಲ್ಲಿ ಏಳುಗ್ರಹಗಳೂ ಇದ್ದರೆ ಸಮುದ್ರಯೋಗ (ಆಕೃತಿ ೭).

ವಿ–೧, ೩, ೫, ೭, ೯, ೧೧ ಈ ಆರುಸ್ಥಾನಗಳಲ್ಲಿ ಏಳುಗ್ರಹಗಳೂ ಇದ್ದರೆ ಚಕ್ರಯೋಗ. ೨, ೪, ೬, ೮, ೧೦, ೧೨ ಈ ಆರುಸ್ಥಾನಗಳಲ್ಲಿ ಏಳು ಗ್ರಹಗಳೂ ಇದ್ದರೆ ಸಮುದ್ರಯೋಗ. ಚಕ್ರ ಸಮುದ್ರಯೋಗ ಫಲಗಳು ೧೪ನೇ ಪದ್ಯದಲ್ಲಿವೆ.

೫. ಏಳುಗ್ರಹಗಳೂ ಒಂದೇರಾಶಿಯಲ್ಲಿದ್ದರೆ ಗೋಳಯೋಗ (ಸಂಖ್ಯಾ ೧). ಎರಡುರಾಶಿಗಳಲ್ಲಿದ್ದರೆ ಯುಗಯೋಗ (ಸಂಖ್ಯಾ ೨). ಮೂರುರಾಶಿಗಳಲ್ಲಿದ್ದರೆ ಶೂಲಯೋಗ (ಸಂಖ್ಯಾ ೩). ನಾಲ್ಕುರಾಶಿಗಳಲ್ಲಿದ್ದರೆ ಕೇದಾರಯೋಗ (ಸಂಖ್ಯಾ ೪). ಐದುರಾಶಿಗಳಲ್ಲಿದ್ದರೆ ಪಾಶಯೋಗ(ಸಂಖ್ಯಾ ೫). ಆರುರಾಶಿಗಳಲ್ಲಿದ್ದರೆ ದಾಮಯೋಗ (ಸಂಖ್ಯಾ ೬). ಏಳು ರಾಶಿಗಳಲ್ಲಿದ್ದರೆ ವಲ್ಲಕೀಯೋಗ (ಸಂಖ್ಯಾ ೭).

ವಿ–ಈ ಪದ್ಯವು ಆಕೃತಿಯೋಗಗಳನ್ನು ತಿಳಿಸುವ ಪದ್ಯಗಳಾದ ಮೇಲೆ ಇರಬೇಕು. ಆದರೆ ಶ್ರೀಧರನು ಆಕೃತಿ ಆಶ್ರಯ ಸಂಖ್ಯಾ ದಲ ಎಂದು ಯೋಗವಿಭಾಗವನ್ನು ಮಾಡದಿರುವುದರಿಂದ ಯೋಗಕ್ರಮವು ವಿವಕ್ಷಿತವಲ್ಲ.

ಆಕೃತಿಯೋಗಗಳೊಡನೆ ಕೆಲವುವೇಳೆ ಸಂಖ್ಯಾಯೋಗವೂ ಇರುವುದುಂಟು. ಆಗ ಆಕೃತಿಯೋಗವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಬೇಕು. ಗದಾ ಪಕ್ಷಿ ಶಕಟ ಯೋಗಗಳು ಯುಗ ಯೋಗದ ಒಂದು ಭೇದ. ಶೃಂಗಾಟಕ ಹಲ ಯೋಗಗಳು ಶೂಲಯೋಗದ ಒಂದು ಭೇದ. ವಜ್ರ ಯವ ಕಮಲ ವಾಪೀ ಯೂಪ ಇಷು ಶಕ್ತಿ ದಂಡಯೋಗಗಳು ಕೇದಾರ ಯೋಗದ ಒಂದು ಭೇದ.

---

[1] ಯಷ್ಯೇ (ಕ) . (ಗ) [2] ದಿಂ (ಕ ಗ) [3] ಳು (ಕ ಗ).

(ವಜ್ರ ಯವ ಕಮಲ ವಾಪೀಯೋಗಗಳು)

ಉದಯದೊಳಸ್ತದೊಳ್ ನಿರೆ ಶುಭಗ್ರಹಮುಗ್ರಗಣಂ ಚತುರ್ಥ ಕ
ರ್ಮದೊಳಿರೆ ವಜ್ರಯೋಗಮದು ತದ್ವಿಪರೀತತೆಯಿಂ ಯವಂ ವಿಲ
ಗ್ನದೊ[1]ಳಖಿಲ[1]ಗ್ರಹಂ ನೆಲಸೆ ಸಪ್ತಮದೊಳ್ ಕಮಳಂ ಗ್ರಹಂಗಳಿ
ಲ್ಲದೆ ಬಱಿದಾಗೆ ಕೇಂದ್ರ[2]ಮ[2]ನಿತುಂ ದೊರೆಕೊಂ[3]ಡುದೆ ವಾಪಿ.ನಾಮದಿಂ[3] ೭

(ಯೂಪ ಇಷು ಶಕ್ತಿ ದಂಡಯೋಗಗಳು)

ಉದಯದಿನೆಯ್ದೆ ತುರ್ಯಧವನಂಬರೆಗಂ ಬರೆ ಯೂಪವಾ ಚತು
ರ್ಥದಿನಿ[4]ರೆ[4] ಸಪ್ತಮಂಬರೆಗವೋಳಿಯೆ [5]ತಾನಿಷು[5]ನಾಮ ಯೋಗ[6]ಮ
ಸ್ತ[6]ದಿನಿರೆ ಕರ್ಮರಾಶಿವರೆಗಂ ತರದಿಂದದು ಶಕ್ತಿ ಕರ್ಮದಿಂ
ದುದಯಗೃಹಂಬರಂ ಗ್ರಹಮನಂತರವೊಂದಿರೆ ದಂಡಸಂಜ್ಞಕಂ ೮

---

ನೌ ಕೂಟ ಛತ್ರ ಚಾಪ ಅರ್ಧಚಂದ್ರ ಯೋಗಗಳು ವೀಣಾಯೋಗದ ಒಂದು ಭೇದ. ಸಮುದ್ರ ಚಕ್ರಯೋಗಗಳು ದಾಮ ಯೋಗದ ಒಂದುಭೇದ. ಈ ಕ್ರಮದಲ್ಲಿ ಆಕೃತಿ ಮತ್ತು ಸಂಖ್ಯಾ ಯೋಗಗಳೆರಡೂ ಸಂಭವಿಸಿದಾಗ ಸಂಖ್ಯಾ ಯೋಗವನ್ನು ಬಿಟ್ಟು ಆಕೃತಿಯೋಗವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಬೇಕು. ಸಂಖ್ಯಾಯೋಗಫಲ ೧೫, ೧೭ನೇ ಪದ್ಯಗಳಲ್ಲಿದೆ.

೭. ಲಗ್ನ ಮತ್ತು ಸಪ್ತಮಸ್ಥಾನಗಳಲ್ಲಿ ಶುಭಗ್ರಹಗಳೂ ಚತುರ್ಥ ಮತ್ತು ದಶಮಸ್ಥಾನಗಳಲ್ಲಿ ಪಾಪಗ್ರಹಗಳೂ ಇದ್ದರೆ ವಜ್ರಯೋಗ (ಆಕೃತಿ ೮). ಇದಕ್ಕೆ ವಿಪರೀತವಾದರೆ ಎಂದರೆ ಲಗ್ನ ಮತ್ತು ಸಪ್ತಮಸ್ಥಾನಗಳಲ್ಲಿ ಪಾಪ ಗ್ರಹಗಳೂ ಚತುರ್ಥ ಮತ್ತು ದಶಮಸ್ಥಾನಗಳಲ್ಲಿ ಶುಭಗ್ರಹಗಳೂ ಇದ್ದರೆ ಯವಯೋಗ (ಆಕೃತಿ ೯). ಏಳುಗ್ರಹಗಳೂ ನಾಲ್ಕುಕೇಂದ್ರಗಳಲ್ಲಿದ್ದರೆ ಕಮಲಯೋಗ (ಆಕೃತಿ ೧೦). ನಾಲ್ಕು ಕೇಂದ್ರಗಳಲ್ಲೂ ಗ್ರಹವಿಲ್ಲದೆ ನಾಲ್ಕು ಪಣಫರಗಳಲ್ಲಾಗಲೀ ನಾಲ್ಕು ಆಪೋಕ್ಲಿಮ ರಾಶಿಗಳಲ್ಲಾಗಲೀ ಎಲ್ಲ ಗ್ರಹಗಳೂ ಇದ್ದರೆ ವಾಪೀಯೋಗ (ಆಕೃತಿ ೧೧).

ವಿ–ಕಮಲ ಮತ್ತು ವಾಪೀಯೋಗಗಳ ಪೂರ್ಣವಿವರ ಪದ್ಯದಲ್ಲಿಲ್ಲ. ಬೃಹಜ್ಜಾತಕದಲ್ಲಿರುವಂತೆ ಟೀಕಿನಲ್ಲಿ ಈ ಯೋಗಗಳ ವಿವರವನ್ನು ಕೊಟ್ಟಿದೆ. ಈ ಯೋಗಗಳ ಫಲಗಳು ೧೭ನೇ ಪದ್ಯದಲ್ಲಿವೆ.

೮. ಜನನಕಾಲದಲ್ಲಿ ಎಲ್ಲ ಗ್ರಹಗಳೂ ಲಗ್ನದಿಂದ ನಾಲ್ಕುಸ್ಥಾನ ಗಳೊಳಗೆ ಇದ್ದರೆ ಯೂಪಯೋಗ (ಆಕೃತಿ ೧೨). ನಾಲ್ಕನೆಯ ಸ್ಥಾನದಿಂದ ನಾಲ್ಕುಸ್ಥಾನಗಳೊಳಗೆ (ಏಳನೆಯ ಸ್ಥಾನಪರ್ಯಂತ) ಇದ್ದರೆ ಇಷುಯೋಗ (ಆಕೃತಿ ೧೩). ಏಳನೆಯ ಸ್ಥಾನದಿಂದ ಹತ್ತನೆಯ ಸ್ಥಾನಪರ್ಯಂತ (ನಾಲ್ಕು ಸ್ಥಾನ

---

[1] ಳ್ ಶುಭ (ಕ) ಳೇಳ್ ಶುಭ (ಗ) [2] ಮಿ (ಕ) ಮೆ (ಗ) [3] ಡದೆ ವಾಪಿನಾಮದಿಂ (ಕ) ಡದೆ ವಾಪಿಮಾಂಬಿರಂ (ಗ) [4] ರೆ (ಕ) [5] ತಾನಿಷ (ಕ) [6] ಸಪ್ತ (ಕ).

(ನೌ ಕೂಟ ಛತ್ರ ಚಾಪ ಯೋಗಗಳು)

ಉದಯಾದ್ಯಸ್ತಗೃಹಂಬರಂ ನೆಲಸೆ ವೇಲಾಯೋಗಮಕ್ಕುಂ ಚತು
ರ್ಥದಿನತ್ತಲ್ ದಶಮಂಬರಂ ನೆಲಸೆ ಕೂಟಂ ಯೋಗಮಸ್ತಾದಿಯಿಂ
ಬುದಯಂತಾಪಿನವೋಳಿಯಿಂ ನೆಲಸೆ ಛತ್ರಂ ಯೋಗಮುದ್ಯೋಗಗೇ
ಹದಿನಾ ತುರ್ಯಗೃಹಂಬರಂ ನೆಲಸೆ ಚಾಪಂ ಯೋಗಮಕ್ಕುಂ ಗ್ರಹಂ ೮

---

ಗಳೊಳಗೆ) ಇದ್ದರೆ ಶಕ್ತಿಯೋಗ (ಆಕೃತಿ ೧೪). ಹತ್ತನೆಯ ಸ್ಥಾನದಿಂದ ಲಗ್ನ ಭಾವಪೂರ್ತಿ (ನಾಲ್ಕು ಸ್ಥಾನಗಳೊಳಗೆ) ಇದ್ದರೆ ದಂಡಯೋಗ (ಆಕೃತಿ ೧೫).

ವಿ—ಈ ನಾಲ್ಕುಯೋಗಗಳೂ ಶುಕ್ಲಾಷ್ಟಮಿಯಿಂದ ಕೃಷ್ಣಾಷ್ಟಮಿಯೊಳಗೆ ಹುಟ್ಟಿರುವವರಿಗೆ ಮಾತ್ರ ಸಂಭವಿಸುತ್ತವೆ. ಪದ್ಯದಲ್ಲಿ 'ತುರ್ಯಭವನಂ ಬರೆಗಂ' 'ಸಪ್ತಮಂ ಬರೆಗಂ' ಎಂದಿರುವುದರಿಂದ ಲಗ್ನದಿಂದ ನಾಲ್ಕನೆಯ ರಾಶಿಯವರೆಗೆ ನಾಲ್ಕರಿಂದ ಏಳನೆಯ ರಾಶಿಯವರೆಗೆ ಎಂದು ಅರ್ಥವಾಗುವುದರಿಂದ ಮೂರು ರಾಶಿಗಳಲ್ಲೇ ಗ್ರಹವಿರಬೇಕೆಂದು ತಿಳಿದುಬರುತ್ತದೆ. ಆದರೆ ಲಘುಜಾತಕದಲ್ಲಿ 'ಚತುರ್ಗೃಹಾವಸ್ಥಿತೈಃ' ಎಂದು ಹೇಳಿರುವುದರಿಂದ ನಾಲ್ಕುರಾಶಿಗಳಲ್ಲಿ ಎಂದು ಅರ್ಥಮಾಡಿದೆ. ಈ ಯೋಗಗಳ ಫಲ ೧೮ನೇ ಪದ್ಯದಲ್ಲಿದೆ.

೮. ಲಗ್ನದಿಂದ ಮೊದಲುಮಾಡಿ ಏಳುರಾಶಿಗಳಲ್ಲೂ ಗ್ರಹವಿದ್ದರೆ ನೌಯೋಗ (ಆಕೃತಿ ೧೬). ನಾಲ್ಕನೆಯ ರಾಶಿಯಿಂದ ಹತ್ತನೆಯ ರಾಶಿಯವರೆಗಿರುವ ಏಳುರಾಶಿಗಳಲ್ಲೂ ಗ್ರಹವಿದ್ದರೆ ಕೂಟಯೋಗ (ಆಕೃತಿ ೧೭). ಏಳನೆಯ ರಾಶಿಯಿಂದ ಲಗ್ನದವರೆಗಿರುವ ಏಳುರಾಶಿಗಳಲ್ಲೂ ಗ್ರಹವಿದ್ದರೆ ಛತ್ರಯೋಗ. (ಆಕೃತಿ ೧೮). ಹತ್ತನೆಯ ರಾಶಿಯಿಂದ ನಾಲ್ಕನೆಯ ರಾಶಿಯವರೆಗಿರುವ ಏಳು ರಾಶಿಗಳಲ್ಲೂ ಗ್ರಹವಿದ್ದರೆ ಚಾಪಯೋಗ (ಆಕೃತಿ ೧೯).

ವಿ—ನೌ ಯೋಗದಲ್ಲಿ ಎಲ್ಲ ಗ್ರಹಗಳೂ ಸಾಲಾಗಿ ಅದೃಶ್ಯಚಕ್ರಾರ್ಧದಲ್ಲಿರುತ್ತವೆ. ಛತ್ರಯೋಗದಲ್ಲಿ ಎಲ್ಲ ಗ್ರಹಗಳೂ ಸಾಲಾಗಿ ದೃಶ್ಯಚಕ್ರಾರ್ಧದಲ್ಲಿರುತ್ತವೆ. ಉಳಿದೆರಡು ಯೋಗಗಳಲ್ಲಿ ದೃಶ್ಯಾದೃಶ್ಯ ಚಕ್ರಗಳೆರಡರಲ್ಲೂ ಗ್ರಹಗಳಿರುತ್ತವೆ. ಈ ಯೋಗಗಳ ಫಲ ೧೮ನೇ ಪದ್ಯದಲ್ಲಿದೆ. ವೈಜಯಂತೀ ಕೋಶದಲ್ಲಿ 'ಉಡಪಂ ತು ಪ್ಲವೋ ಭೇಲಃ' ಎಂದು ಜಲಾಧ್ಯಾಯದಲ್ಲಿ 'ನೌ'ಗೆ 'ಭೇಲಃ' ಎಂದು ಪರ್ಯಾಯಪದವಿದೆ. ಶ್ರೀಧರನು 'ಭೇಲಃ' ಎನ್ನುವುದನ್ನೇ 'ವೇಲಾ' ಎಂದು 'ನೌ' ಗೆ ಪರ್ಯಾಯಪದವಾಗಿ ಪ್ರಯೋಗಿಸಿರಬಹುದು.

(ಸರ್ಪ ಮಾಲಾ ಯೋಗಗಳು)

ಕ್ರೂರತ್ರಯಮಿರೆ ಕೇಂದ್ರಾ
ಗಾರತ್ರಿತಯದೊಳ್[1] ಸರ್ಪಯೋಗಂ ಕೇಂದ್ರಾ
ಗಾರತ್ರಿತಯಂಗಳೊಳ
ಕ್ರೂರತ್ರಯವೊಂದಿದಂದು ಮಾಲಾಯೋಗಂ ೯

(ಅರ್ಧಚಂದ್ರ ಯೋಗ)

ಉದಯದ ಪಣಫರದಿಂದ
ಸ್ತ್ರದೆಡೆವರಂ ನಿಂದೊಡಂ ವಿಲಗ್ನಾಪೋಕ್ಲೀ
ಬದಿನಸ್ತ್ರದೆಡೆವರಂ ನೆಲ
ಸಿದೊಡಂ ಗ್ರಹವೇಳುಮರ್ಧಚಂದ್ರಂ ಯೋಗಂ ೧೦

---

೯. ಮೂರುಪಾಪಗ್ರಹಗಳು ಮೂರುಕೇಂದ್ರಸ್ಥಾನಗಳಲ್ಲಿದ್ದರೆ ಸರ್ಪ ಯೋಗ (ದಲ ೧). ಮೂರುಕೇಂದ್ರಸ್ಥಾನಗಳಲ್ಲಿ ಮೂರು ಶುಭಗ್ರಹಗಳಿದ್ದರೆ ಮಾಲಾಯೋಗ (ದಲ ೨).

ವಿ–ಸರ್ಪಯೋಗದಲ್ಲಿ ಶುಭಗ್ರಹ ಕೇಂದ್ರದಲ್ಲಿರಕೂಡದು. ಮಾಲಾ ಯೋಗದಲ್ಲಿ ಪಾಪಗ್ರಹ ಕೇಂದ್ರದಲ್ಲಿರಕೂಡದು. ಈ ಅಂಶವು ಬಾದರಾಯಣ ವಚನದಿಂದ ತಿಳಿದುಬರುತ್ತದೆ. ಈ ದಲಯೋಗಗಳ ಫಲ ೧೯ನೇ ಪದ್ಯ ದಲ್ಲಿದೆ.

೧೦. ಲಗ್ನಕ್ಕೆ ಎರಡನೆಯ ಸ್ಥಾನ (ಫಣಪರ)ದಿಂದ ಏಳುಸ್ಥಾನ ಗಳಲ್ಲಾಗಲೀ ಮೂರನೆಯ ಸ್ಥಾನ(ಆಪೋಕ್ಲೀಬ)ದಿಂದ ಏಳುಸ್ಥಾನಗಳಲ್ಲಾಗಲೀ ಏಳುಗ್ರಹಗಳೂ ಇದ್ದರೆ ಅರ್ಧಚಂದ್ರಯೋಗ (ಆಕೃತಿ ೨೦).

ವಿ–೨, ೩, ೪, ೫, ೬, ೭, ೮ ಈ ಏಳುಸ್ಥಾನಗಳಲ್ಲಿ ಅಥವಾ ೩, ೪, ೫, ೬, ೭, ೮, ೯ ಈ ಏಳುಸ್ಥಾನಗಳಲ್ಲಿ ಗ್ರಹವಿದ್ದರೆ ಅರ್ಧಚಂದ್ರಯೋಗವೆಂದು ಪದ್ಯದಿಂದ ತಿಳಿದುಬರುತ್ತದೆ. ಇದರಂತೆಯೇ ಉಳಿದ ಫಣಪರ ಅಥವಾ ಆಪೋಕ್ಲೀಬಸ್ಥಾನದಿಂದ ಮೊದಲುಮಾಡಿ ಏಳುಸ್ಥಾನಗಳಲ್ಲೂ ಗ್ರಹವಿದ್ದರೆ ಅರ್ಧಚಂದ್ರಯೋಗವೆಂದು ಬೃಹಜ್ಜಾತಕ ಮೊದಲಾದ ಗ್ರಂಥಕಾರರ ಅಭಿಪ್ರಾಯ. ಈ ಯೋಗದ ಫಲ ೧೯ನೇ ಪದ್ಯದಲ್ಲಿದೆ.

---

[1] ಳು (ಕ ಗ).

(ರಜ್ಜು ಮುಸಲಯೋಗ ಫಲ)

ಅಸಹಿಷ್ಣುವಧ್ವಗಮನ
ವ್ಯಸನಂ ಪರದೇಶಕಾಂಕ್ಷಿ ರಜ್ಜುಪ್ರಭವಂ
ಮುಸಲಭವಂ ಧನ್ಯಂ ಮಾ
ನಸಮೇತಂ ಬಹುವಿಧಕ್ರಿಯಾಶಕ್ತನವಂ ೧೧

(ನಳ ಗದಾಯೋಗಫಲ)

ಧನಪತಿ ಪದುಳಿದನೂನಾಂ
ಗಿ ನಿಪುಣಮತಿ ನಳಸಮುದ್ಭವಂ ಯಜಮಾನಂ
[1]ಧ[1]ನಭಾಗಿ ವಿತ್ತಕಾಂಕ್ಷಿತ
ನೆನೆ ವರ್ತಿಸುಗುಂ ಗದಾಸಮುದ್ಭೂತನರಂ ೧೨

(ಶಕಟ ಶೃಂಗಾಟಕ ಹಲಯೋಗಫಲ)

ಶಕಟಭವಂ [2]ತದುದಿತ[2]ಭೋ
ಕ್ತ್ರಾ ಕುತ್ಸಿತಸ್ತ್ರೀಯುತಂ ಸರೋಗಂ ಶೃಂಗಾ
ಟಕ ಸಂಭವನನವರತಂ
ಸುಖಮಿರ್ಪಂ ಹಲಸಮುದ್ಭವಂ ಕೃ[3]ಷಿ[3]ಗೆಯ್ವಂ ೧೩

---

೧೧. ರಜ್ಜುಯೋಗದಲ್ಲಿ ಹುಟ್ಟಿದವನು ಇತರರ ಶ್ರೇಯಸ್ಸನ್ನು ಸಹಿಸುವುದಿಲ್ಲ ದಾರಿ ನಡೆಯುವುದರಲ್ಲಿ ವ್ಯಸನಿ (ಅಭಿಲಾಷೆಯುಳ್ಳವ) ದೇಶಾಂತರದಲ್ಲಿ ವಾಸಿಸಲು ಇಚ್ಛೆಪಡುತ್ತಾನೆ. ಮುಸಲ ಯೋಗದಲ್ಲಿ ಹುಟ್ಟಿದವನು ಧನಿಕ ಮಾನಿಷ್ಠ ಮತ್ತು ಅನೇಕವಿಧ ಕೆಲಸ ಮಾಡುವುದರಲ್ಲಿ ಶಕ್ತ.

೧೨. ನಳಯೋಗದಲ್ಲಿ ಹುಟ್ಟಿದವನು ಶ್ರೀಮಂತ ಸುಖಿ ಅಂಗಹೀನ ಮತ್ತು ಜಾಣ. ಗದಾಯೋಗದಲ್ಲಿ ಹುಟ್ಟಿದವನು ಯಾಗಶೀಲ ಧನವಂತ ಮತ್ತು ಧನೇಚ್ಛೆಯುಳ್ಳವನಂತೆ ವರ್ತಿಸುತ್ತಾನೆ.

೧೩. ಶಕಟಯೋಗದಲ್ಲಿ ಹುಟ್ಟಿದವನು ಬಂಡಿಯಿಂದ ಹಣಸಂಪಾದಿಸಿ ಜೀವಿಸುತ್ತಾನೆ ದುಷ್ಟಹೆಂಡತಿಯುಳ್ಳವ ರೋಗಿಷ್ಠ. ಶೃಂಗಾಟಕಯೋಗದಲ್ಲಿ ಹುಟ್ಟಿದವನು ಸದಾ ಸುಖಿ. ಹಲಯೋಗದಲ್ಲಿ ಹುಟ್ಟಿದವನು ವ್ಯವಸಾಯ ಮಾಡುತ್ತಾನೆ.

---

[1] ವ (ಗ) [2] ತರುರ್ಷಿ (ಕ) ತರರ್ಷಿ (ಗ) [3] ಪೆ (ಕ ಗ).

(ಚಕ್ರ ಸಮುದ್ರ ವಿಹಗಯೋಗಫಲ)

ವಸುಧಾಪತಿ ವಿ[1]ನ[1]ತಂ ಚ
ಕ್ರಸಂಭವಂ ನೃಪಸಮಂ [2]ಭು[2]ಜಾರ್ಥಂ ವಾರ್ಧಿ
ಪ್ರಸವಂ ಚರನಟನಂ ಕಲ
ಹಸಮೇತಂ ವಿಹಗಯೋಗದೊಳ್ ಪುಟ್ಟಿದವಂ ೧೪

(ಗೋಳ ಯುಗ ಶೂಲ ಕೇದಾರಯೋಗಫಲ)

ಧನಹೀನಂ ಮಲಿನಂ ಕುಶಿಲ್ಪಿ ವಿಗತಜ್ಞಾನಾತ್ಮಕಂ ಗೋಳಜಾ
ತನೆನಿಕ್ಕುಂ ಯುಗಯೋಗಜಾತನಧನಂ* ಪಾಷಂಡಿ ಶೂಲೋದ್ಭವಂ
ಧನದೂರಂ ವರಶೀಲಶೌರ್ಯನಿಧಿ ಕೇದಾರಪ್ರಸೂತಂ ಪ್ರಯೋ
ಜನಭೂತಂ [3]ಪಲ[3]ರ್ಗಂ ಕೃಷಿಕ್ಷಮನವಂ ಸಮ್ಯಕ್ಸ್ವರತ್ನಾಕರಾ ೧೫

(ಪಾಶ ದಾಮ ವಲ್ಲಕೀಯೋಗಫಲ)

ಧನಸಂವರ್ಧನಶೀಲ ಭೃತ್ಯಸುಹೃದಾಢ್ಯಂ ಪಾಶಜಂ ದಾಮ ಸಂ
ಜನಿತಂ ದಾನಿ ಪರೋಪಕಾರಿ ಪಶುಪಾಲಂ ವಲ್ಲಕೀಯೋಗಜಾ
ತನರಂ ಗಾಯಕ ನರ್ತಕ ಪ್ರಿಯತಮಂ ನಿಷ್ಣಾತನಿಂತೀ ಫಲಂ
ಜನಿಯಿಕ್ಕುಂ ಸತತಂ ವರೇಣ್ಯಫಲಮೆಯ್ತಿಕ್ಕುಂ ದಶಾಕಾಲದೊಳ್ ೧೬

---

೧೪. ಚಕ್ರಯೋಗದಲ್ಲಿ ಹುಟ್ಟಿದವನು ರಾಜಪೂಜ್ಯನಾಗುತ್ತಾನೆ. ಸಮುದ್ರಯೋಗದಲ್ಲಿ ಹುಟ್ಟಿದವನು ರಾಜನಿಗೆ ಸಮನೂ ಭೋಗಿಯೂ ಆಗುತ್ತಾನೆ. ವಿಹಗಯೋಗದಲ್ಲಿ ಹುಟ್ಟಿದವನು ಸೇವಕನೂ ಸ್ವೇಚ್ಛೆಯಾಗಿ ತಿರುಗುವವನೂ ಜಗಳಗಂಟನೂ ಆಗುತ್ತಾನೆ.

೧೫. ಗೋಳಯೋಗದಲ್ಲಿ ಹುಟ್ಟಿದವನು ನಿರ್ಧನಿಕ ಕೊಳಕ ನಿಂದ್ಯ-ಶಿಲ್ಪಿ ಮೂರ್ಖ. ಯುಗಯೋಗದಲ್ಲಿ ಜನಿಸಿದವನು ಹಣವಿಲ್ಲದವ ವೇದದಾಪ್ಯ. ಶೂಲಯೋಗದಲ್ಲಿ ಹುಟ್ಟಿದವನು ದರಿದ್ರ ಗುಣಿ ಶೂರ. ಕೇದಾರಯೋಗದಲ್ಲಿ ಹುಟ್ಟಿದವನು ಬಹುಜನೋಪಕಾರಿ ವ್ಯವಸಾಯದಲ್ಲಿ ಸಮರ್ಥ.

೧೬. ಪಾಶಯೋಗದಲ್ಲಿ ಹುಟ್ಟಿದವನು ಹಣವನ್ನು ಅಭಿವೃದ್ಧಿಪಡಿಸುವ ಸ್ವಭಾವವುಳ್ಳವನೂ ಸೇವಕರು ಮತ್ತು ಸ್ನೇಹಿತರಿಂದ ಕೂಡಿರುವವನೂ ಆಗುತ್ತಾನೆ. ದಾಮಯೋಗದಲ್ಲಿ ಜನಿಸಿದವನು ದಾನಿ ಪರೋಪಕಾರಿ ಮತ್ತು ಪಶುಗಳನ್ನು ಕಾಪಾಡುತ್ತಾನೆ. ವಲ್ಲಕೀಯೋಗದಲ್ಲಿ ಹುಟ್ಟಿದವನು ಸಂಗೀತಗಾರರು ಮತ್ತು ನರ್ತಕರಿಗೆ ಪ್ರೀತಿಪಾತ್ರನೂ ಆ ವಿದ್ಯೆಗಳಲ್ಲಿ ನಿಪುಣನೂ ಆಗುತ್ತಾನೆ. ಈ ಫಲಗಳು ಎಲ್ಲ ಕಾಲಗಳಲ್ಲೂ ಆಗುತ್ತವೆ. ಉತ್ತಮಫಲಗಳು ಯೋಗಪ್ರದ ಗ್ರಹಗಳ ದಶಾಕಾಲದಲ್ಲಿ ಸಂಭವಿಸುತ್ತವೆ.

ವಿ— 'ಇಂತೀ ಫಲಂ ಜನಿಯಿಕ್ಕುಂ ಸತತಂ' ಎಂದು ಎಲ್ಲ ಸಾಧನ ಯೋಗಗಳ ಫಲವನ್ನುದ್ದೇಶಿಸಿ ಶ್ರೀಧರನು ಹೇಳಿರುತ್ತಾನೆ.

---

[1] ನು (ಗ) [2] ಪ (ಕ) [3] ಫಲದ (ಕ)

* (ಗ) ಪ್ರತಿಯಲ್ಲಿ ಇಲ್ಲಿಂದ ಮುಂದಕ್ಕೆ ಅಧಿಕಾರ ಮುಗಿರ್ವ ಗ್ರಂಥವಿಲ್ಲ.

(ವಜ್ರ ಯವ ಕಮಲ ವಾಪೀಯೋಗಫಲ)

ಮನುಜಂ ವಜ್ರಸಮುದ್ಭವಂ ಶಿಶುತೆಯೊಳ್ ವೃದ್ಧತ್ವದೊಳ್ ಸೌಖ್ಯಭಾ
ಜನನಕ್ಕುಂ ಯವಯೋಗಜಂ ಶಿಶುತೆಯೊಳ್ ವೃದ್ಧತ್ವದೊಳ್ ದುಃಖಭಾ
ಜನನಕ್ಕುಂ ಕಮಲೋದ್ಭವಂ ಸಧನನಕ್ಕುಂ ಸ್ವಲ್ಪಸೌಖ್ಯಕ್ಕೆ ಭಾ
ಜನನಕ್ಕುಂ ಬಹುಯೋಗದೊಳ್ ನೆಗಟ್ಟ ವಾಪೀಯೋಗದೊಳ್ ಪುಟ್ಟಿದಂ ೧೭

(ಯೂಪ ಇಷು ಶಕ್ತಿ ದಂಡ ನೌ ಕೂಟ ಛತ್ರ ಚಾಪಯೋಗಫಲ)

ಅತಿಶಯದಾನಿ ಯೂಪಜನಿತಂ [1]ವಧಶೀಲವಿಷೂದ್ಭವಂ ಸಮು
ಜ್ಝಿತಧನರಾಶಿ ಶಕ್ತಿಜನಿತಂ ವಿಯುತ[1]ಪ್ರಿಯಬಂಧು ದಂಡಜಂ
ವಿತತಯಶೋ[2]ರ್ಥಿ ನೌ[2]ಭವನಸತ್ಯವಚೋನ್ವಿತ ಕೂಟಸಂಭವಂ
ಹಿತಕರನಾತ್ಮಬಾಂಧವಗೆ[3] ಛತ್ರಭವಂ ಕಲಿ ಕಾರ್ಮುಕೋದ್ಭವಂ ೧೮

೧೭. ವಜ್ರಯೋಗದಲ್ಲಿ ಹುಟ್ಟಿದವನು ಶೈಶವ ಮತ್ತು ಮುದಿತನದಲ್ಲಿ ಸುಖಪಡುತ್ತಾನೆ. ಯವಯೋಗದಲ್ಲಿ ಹುಟ್ಟಿದವನು ಶೈಶವ ಮತ್ತು ವಾರ್ಧಕ್ಯದಲ್ಲಿ ದುಃಖಪಡುತ್ತಾನೆ; ಅಂದರೆ ಮಧ್ಯವಯಸ್ಸಿನಲ್ಲಿ ಸುಖಪಡುತ್ತಾನೆ. ಕಮಲಯೋಗದಲ್ಲಿ ಹುಟ್ಟಿದವನು ಧನಿಕನಾಗುತ್ತಾನೆ. ವಾಪೀಯೋಗದಲ್ಲಿ ಹುಟ್ಟಿದವನು ಅಲ್ಪಸುಖಿಯಾಗುತ್ತಾನೆ.

ವಿ—ಕಮಲಯೋಗದಲ್ಲಿ ಹುಟ್ಟಿದವನು ವಿಖ್ಯಾತಕೀರ್ತಿ ಅಧಿಕಸೌಖ್ಯ ಮತ್ತು ಅಧಿಕಗುಣವುಳ್ಳವನಾಗುತ್ತಾನೆ. ವಾಪೀಯೋಗದಲ್ಲಿ ಹುಟ್ಟಿದವನು ಅಲ್ಪಸ್ಥಿರ ಸೌಖ್ಯವುಳ್ಳವನೂ ಭೂಮಿಯಲ್ಲಿ ಧನನಿಕ್ಷೇಪಮಾಡುವವನೂ ಲೋಭಿಯೂ ಆಗುತ್ತಾನೆ ಎಂದು ಬೃಹಜ್ಜಾತಕದಲ್ಲಿದೆ.

೧೮. ಯೂಪಯೋಗದಲ್ಲಿ ಜನಿಸಿದವನು ಹೆಚ್ಚುದಾನಮಾಡುತ್ತಾನೆ. ಇಷುಯೋಗದಲ್ಲಿ ಹುಟ್ಟಿದವನು ಕೊಲೆಗಾರನಾಗುತ್ತಾನೆ. ಶಕ್ತಿಯೋಗದಲ್ಲಿ ಹುಟ್ಟಿದವನು ಹಣವಿಲ್ಲದವನಾಗುತ್ತಾನೆ. ದಂಡಯೋಗದಲ್ಲಿ ಹುಟ್ಟಿದವನು ಇಷ್ಟರಿಂದಲೂ ಬಂಧುಗಳಿಂದಲೂ ತ್ಯಕ್ತನಾಗುತ್ತಾನೆ. ನೌ ಯೋಗದಲ್ಲಿ ಹುಟ್ಟಿದವನು ಕೀರ್ತಿವಂತನಾಗುತ್ತಾನೆ. ಕೂಟಯೋಗದಲ್ಲಿ ಹುಟ್ಟಿದವನು ಅನೃತವಾದಿಯಾಗುತ್ತಾನೆ. ಛತ್ರಯೋಗದಲ್ಲಿ ಹುಟ್ಟಿದವನು ತನ್ನ ಬಂಧುಗಳಿಗೆ ಅನುಕೂಲ ಮಾಡುತ್ತಾನೆ. ಚಾಪಯೋಗದಲ್ಲಿ ಹುಟ್ಟಿದವನು ಪರಾಕ್ರಮಿಯಾಗುತ್ತಾನೆ.

ವಿ—ಯೂಪಯೋಗಜನು ಯಾಗಮಾಡುತ್ತಾನೆ. ಇಷುಯೋಗಜನು ಕಾರಾಗೃಹಾಧಿಕಾರಿಯೂ ಶರಾಭ್ಯಾಸಿಯೂ ಆಗುತ್ತಾನೆ. ಶಕ್ತಿಯೋಗಜನು ನೀಚನೂ ಅಲಸನೂ ಸುಖಧನಹೀನನೂ ಆಗುತ್ತಾನೆ. ದಂಡಯೋಗಜನು ಇಷ್ಟಜನ ವಿವರ್ಜಿತನೂ ಅಧಮವೃತ್ತಿಯುಳ್ಳವನೂ ಆಗುತ್ತಾನೆ. ನೌಯೋಗಜನು ಕೀರ್ತಿವಂತನೂ ಲೋಭಿಯೂ ಮತ್ತು ಕೆಲವುಕಾಲ ಸುಖ ಕೆಲವುಕಾಲ ದುಃಖ

[1] ವರಶೀಲವಿಷೋದ್ಭವಂ ಸಮುಯುತ ಧನಾರಾಶಿ ಶಕ್ತಜನಿತಂ ಯುವತಿ (ಕ) [2] ತ್ರಿನೋ (ಕ) [3] ಗೆ (ಕ)]

(ಸರ್ಪ ಮಾಲಾ ಅರ್ಧಚಂದ್ರಯೋಗಫಲ)

[1]ಅಸುಖ[1]ಯೆನಿಕ್ಕುಂ ಸರ್ಪ
ಪ್ರಸವನರಂ ಸುಖಸಮೇತನೆನಿಕುಂ ಮಾಲಾ
ಪ್ರಸವನರನರ್ಧಚಂದ್ರ
ಪ್ರಸವನರಂ ಸುಭಗ[2]ನೆ[2]ನಿಸುಗುಂ ಬುಧಮಿತ್ರಾ　　೧೯

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ನಾಭಸಯೋಗಪ್ರಕರಣ ವರ್ಣನಂ ತ್ರಯೋದಶಾಧಿಕಾರಂ

---

ವುಳ್ಳವನೂ ಆಗುತ್ತಾನೆ. ಛತ್ರಯೋಗಜನು ತನ್ನವರಿಗೆ ಪ್ರಿಯವನ್ನು ಮಾಡುವವನೂ ಮುದಿತನದಲ್ಲಿ ಸುಖಪಡುವವನೂ ಆಗುತ್ತಾನೆ. ಧನುರ್ಯೋಗಜನು ಶೂರನೂ ಬಾಲ್ಯ ಮತ್ತು ಮುಪ್ಪಿನಲ್ಲಿ ಸುಖಿಯೂ ಆಗುತ್ತಾನೆ ಎಂದು ಬೃಹಜ್ಜಾತಕದಲ್ಲಿದೆ.

೧೯. ಸರ್ಪಯೋಗದಲ್ಲಿ ಹುಟ್ಟಿದವನು ಸೌಖ್ಯಪಡುವುದಿಲ್ಲ. ಮಾಲಾ ಯೋಗದಲ್ಲಿ ಹುಟ್ಟಿದವನು ಸೌಖ್ಯದಿಂದಿರುತ್ತಾನೆ. ಅರ್ಧಚಂದ್ರಯೋಗದಲ್ಲಿ ಹುಟ್ಟಿದನನು ಸರ್ವಜನಪ್ರಿಯನಾಗುತ್ತಾನೆ.

ವಿ—ಅರ್ಧಚಂದ್ರಯೋಗಜನು ಸರ್ವಜನಪ್ರಿಯನೂ ಸುಂದರನೂ ಪ್ರಧಾನನೂ ಆಗುತ್ತಾನೆಂದು ಬೃಹಜ್ಜಾತಕದಲ್ಲಿದೆ,

ಈ ಅಧಿಕಾರದಲ್ಲಿ ಹೇಳಿರುವ ೩೨ ನಾಭಸಯೋಗಗಳಲ್ಲಿ ರಜ್ಜು ಶಕಟ ವಿಹಗ ಗೋಳ ಯುಗ ಶೂಲ ವಾಪಿ ಇಷು ಶಕ್ತಿ ದಂಡ ಕೂಟ ಸರ್ಪ ಈ ಹನ್ನೆರಡು ಅಶುಭ ಫಲಪ್ರದ ಯೋಗಗಳು; ಹಲ ವಜ್ರ ಯವ ಈ ಮೂರು ಶುಭಾಶುಭಫಲ ಪ್ರದಯೋಗಗಳು; ಉಳಿದ ಮುಸಲ ನಳ ಗದಾ ಶೃಂಗಾಟಕ ಚಕ್ರ ಸಮುದ್ರ ಕೇದಾರ ಪಾಶ ದಾಮ ವಲ್ಲಕೀ ಕಮಲ ಯೂಪ ನೌ ಛತ್ರ ಚಾಪ ಮಾಲಾ ಅರ್ಧಚಂದ್ರ ಈ ಹದಿನೇಳು ಶುಭಫಲಪ್ರದಯೋಗಗಳು.

---

# ಚತುರ್ದಶಾಧಿಕಾರಂ

## ಚಾಂದ್ರ್ಯಯೋಗ ಪ್ರಕರಣಂ

(ಸುನಫಾ ಅನಫಾ ದುರುಧುರಾ ಕೇಮದ್ರುಮ ಯೋಗಗಳು)

ಇನವರ್ಜ್ಯಂ ಕ್ಷಿತಿಜಾದಿಗಳ್ ಹಿಮಮಯೂಖಂಗಂತ್ಯದೊಳ್ ಕೂಡಿದಂ
ದನಫಾಯೋಗಮದಕ್ಕುಮೊಂದಿ ನಿಲೆ ಮತ್ತಂ ತದ್ದ್ವಿತೀಯರ್ಕ್ಷದೊಳ್
ಸುನಫಾಯೋಗ*ಮನಂತರಂ ದು[1]ರುಧು[1]ರಾಯೋಗಂ ದ್ವಿಪಾರ್ಶ್ವಸ್ಥಮ
ನ್ಯನಿವಾಸಸ್ಥಿತಮಾದ ಯೋಗಮದು ದರ್ ಕೇಮದ್ರುಮಂ ನಾಮದಿಂ ೧

ದಿನಪನೆ ನಿಲೆ ಪೇಳ್ದೆಡೆಗಳೊ*
[2]ಳ[ನಫಾದಿ ತ್ರಯದೊಳ][2] ರ್ಕನನ್ಯಗ್ರಹಯು
ಕ್ತನೆನಿಪ್ಪೊಡೆ ತತ್ಸ್ಥಾನದೊ
ಳನಫಾದಿ ತ್ರಿತಯ ಕೂಡುಗುಂ ಬುಧಮಿತ್ರಾ ೨

---

೧. ಸೂರ್ಯನನ್ನು ಬಿಟ್ಟು ಕುಜಾದಿ ಐದು ತಾರಾಗ್ರಹಗಳಲ್ಲೊಂದು ಚಂದ್ರನಿಗೆ ಹನ್ನೆರಡನೆಯ ಸ್ಥಾನದಲ್ಲಿದ್ದರೆ ಅನಫಾಯೋಗ; ಎರಡನೆಯ ಸ್ಥಾನದಲ್ಲಿದ್ದರೆ ಸುನಫಾಯೋಗ; ಎರಡು ಪಾರ್ಶ್ವಗಳಲ್ಲೂ (೨ ಮತ್ತು ೧೨ನೇ ಸ್ಥಾನಗಳಲ್ಲಿ) ಗ್ರಹವಿದ್ದರೆ ದುರುಧುರಾಯೋಗ; ತಾರಾಗ್ರಹಗಳೈದೂ (೨ ಮತ್ತು ೧೨ನೇ ಸ್ಥಾನಗಳನ್ನು ಬಿಟ್ಟು) ಉಳಿದ ಸ್ಥಾನಗಳಲ್ಲಿದ್ದರೆ ಕೇಮದ್ರುಮಯೋಗ.

೨. ಸೂರ್ಯನೇ ಅನಫಾದಿ ಮೂರು ಯೋಗಗಳಲ್ಲಿ ಹೇಳಿರುವ (೨–೧೨ನೇ) ಸ್ಥಾನಗಳಲ್ಲಿದ್ದಾಗ ಇತರ ಗ್ರಹದೊಡನೆ ಇದ್ದರೆ ಮಾತ್ರ ಈ ಅನಫಾದಿ ಮೂರು ಯೋಗಗಳು ಸಂಭವಿಸುತ್ತವೆ.

ವಿ–ಚಂದ್ರಸ್ಥಿತಿ ಮತ್ತು ಚಂದ್ರನಿಂದ ಇತರ ಗ್ರಹಸ್ಥಿತಿ ಇವುಗಳಿಂದುಂಟಾಗುವ ಯೋಗಗಳನ್ನು ಈ ಅಧಿಕಾರದಲ್ಲಿ ಶ್ರೀಧರನು ವಿವರಿಸಿರುತ್ತಾನೆ. ಸೂರ್ಯನು ಮಾತ್ರ ೨–೧೨ನೇ ಸ್ಥಾನಗಳಲ್ಲಿದ್ದರೆ ಸುನಫಾ ಮತ್ತು ಅನಫಾ ಯೋಗಕಾರಕನಾಗುವುದಿಲ್ಲ. ಇದೇ ಸ್ಥಾನಗಳಲ್ಲಿ ತಾರಾಗ್ರಹಗಳೊಡನಿದ್ದರೆ ಯೋಗಭಂಗಕಾರಕನೂ ಆಗುವುದಿಲ್ಲ. ಚಂದ್ರನಿಗೆ ಚತುರ್ಥಕೇಂದ್ರದಲ್ಲಿ ಗ್ರಹವಿದ್ದರೆ ಸುನಫಾಯೋಗವೂ ದಶಮಕೇಂದ್ರದಲ್ಲಿ ಗ್ರಹವಿದ್ದರೆ ಅನಫಾಯೋಗವೂ ಚತುರ್ಥ ದಶಮ ಕೇಂದ್ರಸ್ಥಾನಗಳೆರಡರಲ್ಲೂ ಗ್ರಹವಿದ್ದರೆ ದುರುಧುರಾ ಯೋಗವೂ ಸಂಭವಿಸುತ್ತದೆಂದು ಶ್ರುತಕೀರ್ತಿಯ ಅಭಿಪ್ರಾಯ. ಚಂದ್ರನಿರುವ ನವಾಂಶರಾಶಿಯ ಹಿಂದಿನ ಮತ್ತು ಮುಂದಿನ ನವಾಂಶರಾಶಿಗಳಲ್ಲಿ ತಾರಾಗ್ರಹಗಳಿದ್ದರೆ ಈ ಯೋಗಗಳು ಸಂಭವಿಸುತ್ತವೆಂದು ಜೀವಶರ್ಮನ ಅಭಿಪ್ರಾಯ. ಶ್ರುತಕೀರ್ತಿ ಜೀವಶರ್ಮರ ಅಭಿಪ್ರಾಯವು ಪೂರ್ವಜ್ಯೋತಿಷಾಚಾರ್ಯರಿಗೆ

---

[1] ರಧ (ಗ) [2] ದೊವ (ಕ) ಳವ (ಗ) * ಈ ಭಾಗ (ಕ) ಪ್ರತಿಯಲ್ಲಿಲ್ಲ.

(ಸುನಫಾ ಅನಫಾ ದುರುಧುರಾ ಯೋಗಗಳ ಫಲ)

ಅನಫಾಸಂಭವನಿಂದ್ರಿಯಾರ್ಥಸುಖಿ ವಿಖ್ಯಾತಂ ಪ್ರಧಾನಂ ಸುಶೀ
ಲನೆನಿಕ್ಕುಂ ಸುನಫಾಪ್ರಸೂತನರನಾತ್ಮೋಪಾರ್ಜಿತೈಶ್ವರ್ಯ ಧೀ
[1]ಧನ[1]ಕೀರ್ತ್ಯಾನ್ವಿತನಕ್ಕು[2]ಮಾ[2] ದುರುಧುರಾಜಂ ಸಂತತೋದ್ವೇಗ[3]ಚಿ[3]
ತ್ತನೆನಿಕ್ಕುಂ ಬಹುಭೃತ್ಯಪೋಷಣಕುಟುಂಬಾರಂಭದಿಂದೊಂದುಗುಂ ೩

(ಕೇಮದ್ರುಮ ಯೋಗಫಲ)

ಸಮನಿಸಿ ಬರ್ಕುಂ ಕೇಮ
ದ್ರುಮಯೋಗ ಸಮುದ್ಭವಂಗೆ ಪರಜನಭೃ[4]ತ[4]ಕ
ತ್ವಮುಮಧನತ್ವಮುಮಸುಖಿ
ತ್ವಮುಂ ಧರಾಧೀಶವಂಶದೊಳ್[6] ಪುಟ್ಟಿ[5][ರೆಯುಂ][5] ೪

---

ಸಮ್ಮತವಲ್ಲದ ಕಾರಣ ಅದು ಗ್ರಾಹ್ಯವಲ್ಲವೆಂಬ ವರಾಹಮಿಹಿರಾಚಾರ್ಯರ ಮತವನ್ನು ಭಟ್ಟೋತ್ಪಲರು ಸ್ಪಷ್ಟಪಡಿಸಿರುತ್ತಾರೆ. ಸುನಫಾಯೋಗವು ೩೧ ಪ್ರಕಾರದಲ್ಲೂ ಅನಫಾಯೋಗವು ೩೧ ಪ್ರಕಾರದಲ್ಲೂ ದುರುಧುರಾಯೋಗವು ೧೮೦ ಪ್ರಕಾರದಲ್ಲೂ ಸಂಭವಿಸುತ್ತದೆ.

೩. ಅನಫಾಯೋಗದಲ್ಲಿ ಹುಟ್ಟಿದವನು ವಿಷಯಸುಖಿ ಕೀರ್ತಿವಂತ ಮುಖ್ಯಸ್ಥ ಸದ್ಗುಣವಂತ; ಸುನಫಾಯೋಗದಲ್ಲಿ ಹುಟ್ಟಿದವನು ತಾನೇ ಗಳಿಸಿದ ಧನವುಳ್ಳವ ಬುದ್ಧಿವಂತ ಖ್ಯಾತಿವಂತ ; ದುರುಧುರಾ ಯೋಗದಲ್ಲಿ ಹುಟ್ಟಿದವನು ಸರ್ವದಾ ಖಿನ್ನಮನಸ್ಕ ಅನೇಕ ಸೇವಕರುಳ್ಳವ ಬಹಳಮಂದಿಯನ್ನು ಕಾಪಾಡುವವ ಬಹುಕುಟುಂಬಿ ಅನೇಕ ಕಾರ್ಯಗಳನ್ನು ಮಾಡಲು ಆರಂಭಿಸುತ್ತಾನೆ.

ವಿ–ದುರುಧುರಾ ಯೋಗಜನು ಬಹುವಿಧ ಸುಖಾನುಭವಿ ಧನವಂತ ವಾಹನವಂತ ಮತ್ತು ದಾನಶೀಲನೆಂದು ಬೃಹಜ್ಜಾತಕದಲ್ಲಿದೆ.

೪. ಕೇಮದ್ರುಮ ಯೋಗದಲ್ಲಿ ಹುಟ್ಟಿದವನಿಗೆ ರಾಜವಂಶದಲ್ಲಿ ಜನಿಸಿದ್ದರೂ ಪರಜನ ದಾಸತ್ವವೂ ದಾರಿದ್ರ್ಯವೂ ದುಃಖವೂ ಉಂಟಾಗುತ್ತದೆ.

ವಿ–ರಾಜವಂಶದಲ್ಲಿ ಹುಟ್ಟಿದವರಿಗೇ ಈ ವಿಧವಾದ ಫಲಗಳು ಸಂಭವಿಸುವಾಗ ಕೇಮದ್ರುಮ ಯೋಗದಲ್ಲಿ ಹುಟ್ಟಿರುವ ಉಳಿದ ಸಾಮಾನ್ಯ ಜನರಿಗೆ ಅಶುಭ ಫಲ ಸಂಭವಿಸುತ್ತದೆಂದು ಹೇಳುವ ಆವಶ್ಯಕತೆ ಇಲ್ಲ. ಕೇಮದ್ರುಮ ಯೋಗಕ್ಕೆ ಮುಂದಿನ ಪದ್ಯದಲ್ಲಿ ತಿಳಿಸಿರುವಂತೆ ಭಂಗವಿದ್ದರೆ ಈ ಅಶುಭಫಲಗಳು ಸಂಭವಿಸುವುದಿಲ್ಲ.

---

[1] ರನು (ಕ) ... (ಗ) [2] ವಾ (ತ ಗ) [3] ಮ (ಕ) ... (ಗ) [4] ಷ (ಕ ಗ) [5] ದಾವಂ (ಚ) ... (ಗ).

(ಕೇಮದ್ರುಮ ಯೋಗ ಭಂಗ)

ಉಡುರಾಜಂ ಗ್ರಹಯುತನಾ
ದೊಡೆ ಮೇಣಲ್ಲದೊಡೆ [1]ಕೇಂದ್ರಗ್ರ[1]ಹದೊಳ್ ಗ್ರಹಮಿ
ರ್ದೊಡೆ ಕೇಮದ್ರುಮದಶುಭಂ
ಕಿಡುಗುಂ ರುಜೆ ಕಿಡುವ ತೆಱದಿ [2]ವೀರ್ಯೌ[2]ಷಧಿಯಿಂ ೬

(ಅನಫಾದಿ ಯೋಗಗಳಲ್ಲಿ ಕುಜಾದಿ ಗ್ರಹಫಲ)

ಅನಫಾದಿತ್ರಯದಲ್ಲಿ ನಿಂದ ಕುಜನಿಂ ಚೋರಂ ಪ್ರಚಂಡಂ ಸುರೇ
ಜ್ಯನಿನುರ್ವೀಪತಿ ಪೂಜ್ಯನುತ್ತಮಗುಣಂ ದೈತ್ಯಾಧಿಪಾಮಾತ್ಯನಿಂ
ಧನವಂತಂ ಸುಖಿ ಸೌಮ್ಯನಿಂ ನಿಪುಣನಾಢ್ಯಂ ಜ್ಞಾನಿ ಮಾರ್ತಂಡನಂ
ದನನಿಂದಂ ಬಹುಪೋಷಕಂ ಬಹುಗುಣಾರಂಭಾಢ್ಯನಕ್ಕುಂ ನರಂ ೭

---

೬. ಚಂದ್ರ ತಾರಾಗ್ರಹದೊಡನಿದ್ದರೆ ಅಥವಾ ಕೇಂದ್ರ [೧, ೪, ೭, ೧೦] ಸ್ಥಾನದಲ್ಲಿ ಗ್ರಹವಿದ್ದರೆ ಬಲವತ್ತರ ಔಷಧಿಯಿಂದ ರೋಗವು ನಶಿಸುವಂತೆ ಕೇಮದ್ರುಮಯೋಗದಿಂದುಂಟಾಗುವ ಅಶುಭಫಲಗಳು ನಶಿಸುತ್ತವೆ (ಉಂಟಾಗುವುದಿಲ್ಲ).

ವಿ—'ಕೇಂದ್ರ ಗ್ರಹದೊಳ್' ಎಂದರೆ ಲಗ್ನಾದಿ ಕೇಂದ್ರಸ್ಥಾನಗಳಲ್ಲಿ ಎಂದು ಅರ್ಥ ಮಾಡುವುದೇ ಅನೇಕ ಜ್ಯೌತಿಷಾಚಾರ್ಯರ ಅಭಿಪ್ರಾಯ. ಇದಕ್ಕೆ ಮೂಲಭೂತವಾದ 'ಕೇಂದ್ರೇ ಶೀತಕರೇಽಥವಾ ಗ್ರಹಯುತೇ' ಎನ್ನುವ ವರಾಹಮಿಹಿರಾಚಾರ್ಯರ ವಚನಕ್ಕೆ ಅಭಿಪ್ರಾಯಭೇದಗಳು ಕಂಡು ಬರುತ್ತವೆ. (೧) ಲಗ್ನಾದಿ ಕೇಂದ್ರಗಳಲ್ಲಿ ಗ್ರಹವಿದ್ದರೆ (೨) ಚಂದ್ರನಿಗೆ ಕೇಂದ್ರದಲ್ಲಿ ಗ್ರಹವಿದ್ದರೆ (೩) ಕೇಂದ್ರದಲ್ಲಿ ಚಂದ್ರನ ಕೂಡ ಗ್ರಹವಿದ್ದರೆ ಕೇಮದ್ರುಮ ಯೋಗಫಲವಿರುವುದಿಲ್ಲ. ಈ ಮೂರು ಅಭಿಪ್ರಾಯಗಳಲ್ಲಿ ಮೊದಲನೆಯ ಅಭಿಪ್ರಾಯವೇ ಸರ್ವಸಮ್ಮತ ಮತ್ತು ವಾದಿಕೆಯಲ್ಲದ.

೭. ಅನಫಾ ಸುನಫಾ ದುರುಧುರಾ ಈ ಮೂರುಯೋಗಗಳಲ್ಲೂ ಕುಜ ಯೋಗಕಾರಕನಾದರೆ ಜಾತಕನು ಕಳ್ಳ ಕ್ರೂರಿ, ಗುರು ಯೋಗಕಾರಕನಾದರೆ ರಾಜಪೂಜ್ಯ ಗುಣವಂತ, ಶುಕ್ರ ಯೋಗಕಾರಕನಾದರೆ ಧನವಂತ ಸುಖಿ, ಬುಧ ಯೋಗಕಾರಕನಾದರೆ ನಿಪುಣ ಶ್ರೀಮಂತ ಜ್ಞಾನಿ, ಶನಿ ಯೋಗಕಾರಕನಾದರೆ ಬಹುಪೋಷಕ ಬಹುಗುಣಿ ಮತ್ತು ಬಹುಕಾರ್ಯಾರಂಭಿಯಾಗುತ್ತಾನೆ.

---

[1] ತದ್ಗ್ರ (ಗ) [2] ವಿದ್ಯಾ (ಕ) ... (ಗ).

ಅನಘಾದಿಗಳೊಳ್ ಕೂಡಿದ
ಕನಕಾದಿಗಳಿಂ ಯುತ ಗ್ರಹಾಕೃತಿ ಸಾರ್ಗುಂ
ಜನಿಶಂಗಾ ಪೇೞ್ದ ಗ್ರಹ
ಮನಿತುಂ ಕೂಡಿದೊಡೆ ಸಬಲನಾಕೃತಿ ಸಾರ್ಗುಂ ೭

(ಚರ ಸ್ಥಿರ ರಾಶಿಸ್ಥಿತ ಚಂದ್ರಫಲ)

ಚರದೊಳ್ ಕೂಡಿರೆ ಚಂದ್ರನರ್ಥಚಯಮುಂ ಮಿತ್ರತ್ವಮುಂ ನಿಲ್ಲದ
ಸ್ಥಿರನಕ್ಕುಂ ನಿಯಮಸ್ಥನಾಗಿಯುಮದಂ ಮಾಣ್ಗುಂ ತೊಟಲ್ಗುಂ ನರಂ
ಸ್ಥಿರದೊಳ್ ತದ್ವಿಪರೀತಮಪ್ಪ ಗುಣಮಂ ಕೆಯ್ಕೊಳ್ಗುಮೇತರ್ಕಮಾ
ತುರನಲ್ಲಂ ಸ್ಥಿರನುಂ ಕ್ಷಮಾಪರನೆನಿಕ್ಕುಂ ಪದ್ಮವಿದ್ಯಾಧರಾ ೮

(ದ್ವಿಶರೀರ ರಾಶಿಸ್ಥಿತ ಚಂದ್ರಫಲ)

[1]ಕೃತಮಱಿವಂ[1] ಸ್ವಾರ್ಥಮನಾ
ವ ತೆಱದೊಳಂ ತೀರ್ಚಿಕೊಳ್ವನುತ್ಸಾಹಪರಂ
ವಿತರಣಯುತನೆನಿಸುಗುಮುದು
ಪತಿ ಯುಗ್ಮೋದಯದೊಳೊಂದಿ ನಿಲೆ ಪುಟ್ಟಿದವಂ ೯

---

೭. ಅನಘಾದಿಯೋಗಗಳಲ್ಲಿ ಅಂಗಾರಕ ಮೊದಲಾದ ಯೋಗಕಾರಕ ಗ್ರಹದ ಆಕಾರವು ಜಾತಕನಿಗೆ ಇರುತ್ತದೆ. ಎಲ್ಲ ಗ್ರಹಗಳೂ ಯೋಗಕಾರಕ ರಾದರೆ ಬಲಿಷ್ಠಗ್ರಹದ ಆಕಾರವು ಆತನಿಗಿರುತ್ತದೆ.

ವಿ—ತಾರಾಗ್ರಹಗಳೈದೂ ಯೋಗಕಾರಕರಾದಾಗ ಬಲಿಷ್ಠಗ್ರಹಕ್ಕೆ ಹೇಳಿರುವ ಫಲವು ಜಾತಕನಿಗೆ ಉಂಟಾಗುತ್ತದೆ.

೮. ಚರರಾಶಿಯಲ್ಲಿ ಚಂದ್ರನಿದ್ದರೆ ಜಾತಕನ ಸಂಪತ್ತು ಮತ್ತು ಸ್ನೇಹ ಶಾಶ್ವತವಾಗಿರುವುದಿಲ್ಲ; ಕಟ್ಟಳೆಯನ್ನರಿತವನಾದರೂ ಅದನ್ನು ಬಿಡುತ್ತಾನೆ; ಹೆಚ್ಚಾಗಿ ಸುತ್ತುತ್ತಾನೆ. ಸ್ಥಿರರಾಶಿಯಲ್ಲಿ ಚಂದ್ರನಿದ್ದರೆ ಚರರಾಶಿಗೆ ಹೇಳಿರುವ ಗುಣಗಳಿಗೆ ವಿರುದ್ಧವಾದ ಗುಣಗಳು ಜಾತಕನಿಗಿರುತ್ತವೆ; ಆತನು ಯಾವ ಕೆಲಸವನ್ನೂ ಆತುರದಿಂದ ಮಾಡುವುದಿಲ್ಲ; ದೃಢಚಿತ್ತನೂ ಕ್ಷಮಾಪರನೂ ಆಗುತ್ತಾನೆ.

೯. ಚಂದ್ರ ದ್ವಿಸ್ವಭಾವರಾಶಿಯಲ್ಲಿದ್ದಾಗ ಹುಟ್ಟಿದವನು ಕೃತಘ್ನ, ಸ್ವಾರ್ಥವನ್ನು ಯಾವರೀತಿಯಿಂದಲಾದರೂ ಸಾಧಿಸಿಕೊಳ್ಳುತ್ತಾನೆ ಉತ್ಸಾಹಿ ಮತ್ತು ದಾನಿ.

---

[1] ಕೃತಮಾತಿವಂ (ಕ) ಕೃತಮಱುವಂ (ಗ)

(ಅಧಿಯೋಗ ಮತ್ತು ಫಲ)

ಉಡುಪಂ ನಿಂದೆಡೆಯಿಂದಮೇೞಱುಡೆಯೊಳ್ ಸೌಮ್ಯಗ್ರಹಂ ಕೂಡಿ ನಿಂ
ದೊಡೆ ಸೇನಾಪತಿಯಕ್ಕುಮಾ ಹಿಮಗುವಿಂದಾಱೇೞಱೊಳ್ ಸೌಮ್ಯರಿ
ರ್ದೊಡವಂ ಪೆರ್ಗಡೆಯಕ್ಕುಮಾ ಶಶಿಯಿನಾಱೇೞೆಂಟಱೊಳ್ ಸೌಮ್ಯರಿ
ರ್ದೊಡೆ ಧಾತ್ರೀಪತಿಯಕ್ಕುಮಿಂ*ತಿವಧಿಯೋಗಂ ಪದ್ಯವಿದ್ಯಾಧರಾ* ೧೦

† ದೊರೆಕೊಂಡಂದಧಿಯೋಗಂ
ನರಪತಿ ದೀರ್ಘಾಯು ವಿಭವಸಂಯುತನ'ಘ'ಯಂ ೧೧
ನಿರುಜಂ ಸುಖಾನ್ವಿತಂ ಜಿತ
ವಿರೋಧಿ ತಾನೆನಿಸಿ ವರ್ತಿಕುಂ ಬುಧಮಿತ್ರಾ

---

೧೦. ಚಂದ್ರನಿರುವ ಸ್ಥಾನದಿಂದ ಏಳನೆಯ ಸ್ಥಾನದಲ್ಲಿ ಸೌಮ್ಯಗ್ರಹಗಳಿದ್ದರೆ ಜಾತಕನು ಸೇನಾಪತಿಯಾಗುತ್ತಾನೆ; ಚಂದ್ರನಿಂದ ಆರು ಏಳನೆಯ ಸ್ಥಾನಗಳಲ್ಲಿ ಶುಭಗ್ರಹಗಳಿದ್ದರೆ ಮಂತ್ರಿಯಾಗುತ್ತಾನೆ; ಚಂದ್ರನಿಂದ ಆರು ಏಳು ಎಂಟನೆಯ ಸ್ಥಾನಗಳಲ್ಲಿ ಶುಭಗ್ರಹಗಳಿದ್ದರೆ ರಾಜನಾಗುತ್ತಾನೆ; ಈ ಮೂರೂ ಅಧಿಯೋಗಗಳು.

ವಿ—ಅಧಿಯೋಗವಿಚಾರದಲ್ಲಿ ಶ್ರೀಧರನಿಗೂ ಇತರ ಜ್ಯೋತಿಷಾಚಾರ್ಯರಿಗೂ ಅಭಿಪ್ರಾಯ ಭೇದವಿದೆ. ಭಟ್ಟೋತ್ಪಲರು ಬೃಹಜ್ಜಾತಕ ವ್ಯಾಖ್ಯಾನದಲ್ಲಿ ತಿಳಿಸಿರುವಂತೆ ಅಧಿಯೋಗ ಏಳುವಿಧ. ಚಂದ್ರನಿಂದ ಬುಧ ಗುರು ಶುಕ್ರರು (೧) ಆರನೆಯ ಸ್ಥಾನದಲ್ಲಿರುವುದು (೨) ಏಳನೆಯ ಸ್ಥಾನದಲ್ಲಿರುವುದು (೩) ಎಂಟನೆಯ ಸ್ಥಾನದಲ್ಲಿರುವುದು (೪) ಆರು ಏಳನೆಯ ಸ್ಥಾನಗಳಲ್ಲಿರುವುದು (೫) ಆರು ಎಂಟನೆಯ ಸ್ಥಾನಗಳಲ್ಲಿರುವುದು (೬) ಏಳು ಎಂಟನೆಯ ಸ್ಥಾನಗಳಲ್ಲಿರುವುದು (೭) ಆರು ಏಳು ಎಂಟನೆಯ ಸ್ಥಾನಗಳಲ್ಲಿರುವುದು ; ಈ ಏಳುವಿಧ ಯೋಗಗಳಿಗೂ ಫಲ ಒಂದೇ. ಬುಧ ಗುರು ಶುಕ್ರರು ಬಲಿಷ್ಠರಾಗಿದ್ದರೆ ಈ ಯೋಗದಲ್ಲಿ ಹುಟ್ಟಿದವನು ರಾಜನಾಗುತ್ತಾನೆ. ಮಧ್ಯಮವೀರ್ಯರಾಗಿದ್ದರೆ ಮಂತ್ರಿಯಾಗುತ್ತಾನೆ. ದುರ್ಬಲರಾಗಿದ್ದರೆ ಸೇನಾಧಿಪತಿಯಾಗುತ್ತಾನೆ.

೧೧. ಅಧಿಯೋಗವಿರುವಾಗ ಹುಟ್ಟಿದವನು ರಾಜನೂ ಆಯುಷ್ಮಂತನೂ ಐಶ್ವರ್ಯವಂತನೂ ಧೈರ್ಯಶಾಲಿಯೂ ರೋಗಿಷ್ಠನಲ್ಲದವನೂ ಸುಖಿಯೂ ಶತ್ರುಗಳನ್ನು ಜಯಿಸುವವನೂ ಆಗುತ್ತಾನೆ.

---

1 ಭಧಿ (ಕ) * ಈ ಭಾಗ (ಗ) ಪ್ರತಿಯಲ್ಲಿಲ್ಲ. † ಈ ಪದ್ಯ (ಗ) ಪ್ರತಿಯಲ್ಲಿಲ್ಲ.

(ಸೂರ್ಯನಿಂದ ಕೇಂದ್ರ ಪಣಫರ ಆಪೋಕ್ಲೀಬದಲ್ಲಿರುವ ಚಂದ್ರಫಲ)

ರವಿಯಿಂ ಕೇಂದ್ರದೊಳಿಂದು ಕೂ[1]ಡೆ[1] ವಿನಯ ಜ್ಞಾನಾ[2]ರ್ಥ[2]ನೈಪುಣ್ಯ ಬು
ದ್ಧಿವಿಹೀನಂ [3]ನರನಿಂದು ತತ್ಪಣಫರ[3]ಕ್ಷೇತ್ರಂಗಳೊಳ್ ನಿಂದೊಡಂ
ತವಜೊಳ್ ಮಧ್ಯಮನಿಂದು ನಿಂದೊಡ[4]ದಪ್ಪಾ[4]ಪೋಕ್ಲೀಬದೊಳ್ ಧಾವಿ[5]ಪಂ[5]
ದವಜೊಳ್ ತನ್ಮನುಜಂ ಸಮಗ್ರನೆನಿಕುಂ ಸಮ್ಯಕ್ತ್ವರತ್ನಾಕರಾ ೧೨

(ನವಾಂಶಫಲ)

ತರದಿಂ ಧಾವಿಸುವಂದು ಕಳ್ಳ[6]ನುಣ್[6]ಲುಳ್ಳಂ ಬುದ್ಧಿವಂತಂ ಧನೇ
ಶ್ವರನುರ್ವೀಪತಿ ಪೇಡಿ ಮೆಯ್ಗುಲ ದರಿದ್ರಂ ದುರ್ಜನಂ ಪಾಪಿ ನಿ
ಷ್ಠುರನುತ್ಕೃಷ್ಟಗುಣಾತಿ[7]ರ[7]ಕ್ತನೆನಿಕುಂ ಮೇಷಾದಿ ಲಗ್ನಾಂಶಕಂ
ಬರೆ ಚಂದ್ರೋಪಗತಾಂ[8]ಶಮುಂ[8] ಬರೆ ಬಲೋಪೇತಾಂಶದೊಳ್ ಪುಟ್ಟಿದಂ ೧೩

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ಚಾಂದ್ರಯೋಗಪ್ರಕರಣವರ್ಣನಂ ಚತುರ್ದಶಾಧಿಕಾರಂ

---

೧೨. ಜನನಕಾಲದಲ್ಲಿ ಸೂರ್ಯನಿಗೆ ಕೇಂದ್ರ (೧, ೪, ೭, ೧೦ನೇ) ಸ್ಥಾನಗಳಲ್ಲಿ ಚಂದ್ರನಿದ್ದರೆ ವಿನಯ ಜ್ಞಾನ ಧನ ಜಾಣತನ ಬುದ್ಧಿ ಇವು ಜಾತಕನಿಗಿರುವುದಿಲ್ಲ; ಪಣಫರ (೨, ೫, ೮, ೧೧ನೇ) ಸ್ಥಾನಗಳಲ್ಲಿ ಚಂದ್ರನಿದ್ದರೆ ಮೇಲೆ ತಿಳಿಸಿರುವ ಗುಣಗಳು ಮಧ್ಯಮವಾಗಿರುತ್ತವೆ; ಆಪೋಕ್ಲೀಬ (೩, ೬, ೯, ೧೨ನೇ) ಸ್ಥಾನಗಳಲ್ಲಿ ಚಂದ್ರನಿದ್ದರೆ ಈ ಗುಣಗಳು ಜಾತಕನಿಗ ಪೂರ್ಣವಾಗಿರುತ್ತವೆ.

೧೩. ಲಗ್ನನವಾಂಶ ಅಥವಾ ಚಂದ್ರನಿರುವ ನವಾಂಶ ಮೇಷವಾದರೆ ಜಾತಕನು ಕಳ್ಳ ವೃಷಭವಾದರೆ ಭೋಕ್ತೃ [ಉಣಲಿರುವವ] ಮಿಥುನವಾದರೆ ಬುದ್ಧಿವಂತ ಕರ್ಕಟಕನಾದರೆ ಧನಿಕ ಸಿಂಹವಾದರೆ ರಾಜ ಕನ್ಯೆಯಾದರೆ ಪೇಡಿ ತುಲಾ ಆದರೆ ಶೂರ ವೃಶ್ಚಿಕವಾದರೆ ದರಿದ್ರ ಧನುಸ್ಸಾದರೆ ದುಷ್ಟ ಮಕರವಾದರೆ ಪಾಪಿ ಕುಂಭವಾದರೆ ನಿಷ್ಠುರ ಮೀನವಾದರೆ ಶ್ರೇಷ್ಠಗುಣವಂತ; ಲಗ್ನ ನವಾಂಶ ಚಂದ್ರನವಾಂಶ ಇವೆರಡೂ ಭಿನ್ನಭಿನ್ನವಾದರೆ ಬಲಿಷ್ಠನವಾಂಶದ ಫಲವು ಜಾತಕನಿಗುಂಟಾಗುತ್ತದೆ.

---

[1] ಡಿ (ಗ) [2] ಥರ್ (ಚ) ಧರ್ (ಗ) [3] ನರನಿಂದು ತತ್ಪಣಫರ (ಚ) [illegible] ತತ್ಪಣಫರ (ಗ) [4] ದಪ್ಪಾ (ಚ) ದಲ್ಪಾ (ಗ) [5] ಬಿಂ (ಚ ಗ) [6] [illegible] (ಗ) [7] [illegible] (ಚ) [8] [illegible] (ಚ) [illegible] (ಗ).

# ಪಂಚದಶಾಧಿಕಾರಂ

## ದ್ವಿ ತ್ರಿ ಗ್ರಹಯೋಗ ಪ್ರಕರಣಂ

(ರವಿ ಗ್ರಹಯೋಗಫಲ)

ದಿವಸಾಧೀಶನೊಳೊಂದಿ ನಿಂದ ಶಶಿಯಿಂ ಯಂತ್ರಂಗಳಂ ಬಲ್ಲ[1]ನ್ನೆಂ[1]
ದವನಿಂದಂ ನಿಪುಣಂ ದಿನೇಶಸುತನಿಂದಂ ಧಾತುವಾದಪ್ರಿಯಂ
ಕವಿಯಿಂದಾಯುಧಜೀ[2]ವಿ[2] ದೇವಗುರುವಿಂ ಕ್ರೂರಾತ್ಮನುರ್ವೀತನೂ ೧
ಭವನಿಂದಂ ಪರದಾರ[3]ಶೀಲನೆ[3]ನಿಕುಂ ತದ್ಯೋಗದೊಳ್ ಪುಟ್ಟಿದಂ

(ಚಂದ್ರ ಗ್ರಹಯೋಗಫಲ)

ರಜನೀನಾಥನೊಳೊಂದಿ ನಿಂದ ಸಿತನಿಂ ವಸ್ತ್ರಂಗಳಂ ಮಾಱುವಂ
ಕುಜನಿಂ ಕೂಟವಿಧಾನವೇದಿ ಗುರುವಿಂ ವರ್ಗೋತ್ತಮಂ ಭಾಸ್ಕರಾ
ತ್ಮಜನಿಂದಂ ಮಱುವಾಱ ತಾಯ ಬಸಿಱೊಳ್ ಬಂದಂ ವಿನೀತಂ ಶಶಾಂ ೨
ಕಜನಿಂದೀ ಗ್ರಹಯೋಗಸಂಭವನೆನಿಕ್ಕುಂ ಪದ್ಯವಿದ್ಯಾಧರಾ

---

೧. ಜನನಕಾಲದಲ್ಲಿ ಸೂರ್ಯನೊಡನಿರುವ ಚಂದ್ರನಿಂದ ಜಾತಕನು ಯಂತ್ರಗಳ ವಿಚಾರವನ್ನು ತಿಳಿದವನೂ ಬುಧನಿಂದ ಚತುರನೂ ಶನಿಯಿಂದ ಧಾತುವಾದಪ್ರಿಯನೂ ಶುಕ್ರನಿಂದ ಶಸ್ತ್ರಜೀವಿಯೂ ಗುರುವಿಂದ ಕ್ರೂರಿಯೂ ಕುಜನಿಂದ ಪರದಾರಶೀಲನೂ ಆಗುತ್ತಾನೆ.

ವಿ—ಸೂರ್ಯನೊಡನೆ ಬುಧನಿದ್ದರೆ ಬುದ್ಧಿ ಸೌಖ್ಯ ಕೀರ್ತಿಗಳಿಂದ ಕೂಡಿರುತ್ತಾನೆಂದು ಬೃಹಜ್ಜಾತಕದಲ್ಲಿದೆ.

೨. ಜನನಕಾಲದಲ್ಲಿ ಚಂದ್ರನೊಡನಿರುವ ಶುಕ್ರನಿಂದ ಜಾತಕನು ವಸ್ತ್ರಗಳನ್ನು ಮಾರುವವನೂ ಕುಜನಿಂದ ಕೂಟವಿಧಾನವನ್ನು ತಿಳಿದವನೂ ಗುರುವಿಂದ ಬಂಧುವರ್ಗದಲ್ಲಿ ಶ್ರೇಷ್ಠನೂ ಶನಿಯಿಂದ ವಿಧವೆಯಾಗಿ ಪುನಃ ಮದುವೆಮಾಡಿಕ್ಕೊಂಡಿರುವವಳಿಗೆ ಹುಟ್ಟಿದವನೂ ಬುಧನಿಂದ ವಿನಯವುಳ್ಳವನೂ ಆಗುತ್ತಾನೆ.

ವಿ—ಚಂದ್ರನೊಡನೆ ಅಂಗಾರಕನಿದ್ದರೆ ಜಾತಕನು ಕನ್ಯೆ ಮದ್ಯ ಮಡಿಕೆಗಳನ್ನು ಮಾರುತ್ತಾನೆ ಮತ್ತು ತಾಯಿಗೆ ಅಮಂಗಳಕರನಾಗುತ್ತಾನೆ; ಬುಧನಿದ್ದರೆ ಸೌಭಾಗ್ಯ ಮತ್ತು ಕೀರ್ತಿಯುತನೂ ಅರ್ಥನಿಪುಣನೂ ಆಗುತ್ತಾನೆ; ಗುರುವಿದ್ದರೆ ಪರಾಕ್ರಮಿಯೂ ಧನವಂತನೂ ಚಪಲಸ್ವಭಾವದವನೂ ಆಗುತ್ತಾನೆಂದು ಬೃಹಜ್ಜಾತಕದಲ್ಲಿದೆ.

---

1 ನೆಂ (ಕ ಗ) 2 ವ (ಕ ಗ) 3 ಸಿಗಳ (ಕ).

(ಕುಜ ಗ್ರಹಯೋಗಫಲ)

ಕ್ಷಿತಿಜನೊಳೊಂದಿದ ಗುರುವಿಂ
[1][ನೇತಾರಂ][1] ಮಿತ್ರಪುತ್ರನಿಂ [2]ದುಃಖಿ ನಿಶಾ[2]
ಪತಿಸುತನಿಂ ಮಲ್ಲಂ ಭೃಗು
ಸುತನಿಂ ಪರದಾರಶೀಲನೆನಿಕುಂ ಮನುಜಂ ೩

(ಬುಧ ಗ್ರಹಯೋಗಫಲ)

ಚಾಂದ್ರಿಯೊಳೊಡಗೂಡಿದ ದಿವ
ಸೇಂದ್ರಾತ್ಮಜನಿಂ ಮಹೇಂದ್ರಜಾಲಜ್ಞಂ ದೈ
ತ್ಯೇಂದ್ರಗುರುವಿಂದೆ ವಾಗ್ಮಿ ಸು
ರೇಂದ್ರಾರ್ಚಿತನಿಂದೆ [3]ಗೀತಿ[3]ವಿದನಕ್ಕುಮವಂ ೪

೩. ಜನನಕಾಲದಲ್ಲಿ ಅಂಗಾರಕನೊಡನಿರುವ ಗುರುವಿಂದ ಜಾತಕನು ಯಜಮಾನನೂ ಶನಿಯಿಂದ ದುಃಖಿಯೂ ಬುಧನಿಂದ ಬಾಹುಯುದ್ಧಮಾಡುವವನೂ ಶುಕ್ರನಿಂದ ಪಾರದರನೂ ಆಗುತ್ತಾನೆ.

ವಿ–ಅಂಗಾರಕನೊಡನೆ ಬುಧನಿದ್ದರೆ ಹೂವು ಕಾಯಿ ಹಣ್ಣು ಎಣ್ಣೆ ಮತ್ತು ಕೃತ್ರಿಮದ್ರವ್ಯಗಳ ವ್ಯಾಪಾರಿಯೂ ಗುರುವಿದ್ದರೆ ಗ್ರಾಮಾಧ್ಯಕ್ಷ ಅಥವಾ ರಾಜನೂ ಧನಿಕನೂ ಶುಕ್ರನಿದ್ದರೆ ಪಶುಪಾಲಕನೂ ಮಲ್ಲನೂ ಸಮರ್ಥನೂ ಜೂಜುಗಾರನೂ ಶನಿಯಿದ್ದರೆ ಸುಳ್ಳುಗಾರನೂ ನಿಂದಿತನೂ ಆಗುತ್ತಾನೆಂದು ಬೃಹಜ್ಜಾತಕದಲ್ಲಿದೆ.

೪. ಜನನಕಾಲದಲ್ಲಿ ಬುಧನೊಡನಿರುವ ಶನಿಯಿಂದ ಜಾತಕನು ಕಣ್ಣುಕಟ್ಟುವ ವಿದ್ಯೆಯನ್ನು ತಿಳಿದವನೂ ಶುಕ್ರನಿಂದ ವಾಕ್ಚಾತುರ್ಯವುಳ್ಳವನೂ ಗುರುವಿಂದ ಸಂಗೀತವನ್ನು ತಿಳಿದವನೂ ಆಗುತ್ತಾನೆ.

ವಿ–ಬುಧನೊಡನೆ ಗುರುವಿದ್ದರೆ ರಂಗಚರನೂ (ರಾಜಕಾರಣಿ ಅಥವಾ ವೇಷಧಾರಿ ಅಥವಾ ಗರಡೀ ಸಾಧನೆ ಮಾಡುವವ) ನಾಟ್ಯವಿದನೂ ಸಂಗೀತ ಪ್ರಿಯನೂ ಶುಕ್ರನಿದ್ದರೆ ಭೂಮಿ ಮತ್ತು ಜನಸಮೂಹಕ್ಕೆ ಅಧಿಪತಿಯೂ ಶನಿಯಿದ್ದರೆ ಪರವಂಚನೆಯಲ್ಲಿ ಸಮರ್ಥನೂ ಗುರುವಚನೋಲ್ಲಂಘನೆ ಮಾಡುವವನೂ ಆಗುತ್ತಾನೆಂದು ಬೃಹಜ್ಜಾತಕದಲ್ಲಿದೆ.

[1] ದೇವಾರಂ (ಕ ಗ) [2] ದುಃಖಿತಾ (ಕ) ದುಃಖದಾತಾ (ಗ) [3] ಗೀತ (ಕ) ನೀತಿ (ಗ).

(ಗುರು-ಶುಕ್ರ-ಶನಿಯೋಗಫಲ)

ಅನಿಮಿಷಮಂತ್ರಿಯೊಳೊಂದಿದ
ಶನಿಯಿಂದಂ ಮಡಕೆ ಮಾ[1]ಟ್ಬನಡಲುಂ ಬಲ್ಲಂ[1] ೫
ದನುಜೇಜ್ಯನಿಂ ಗುಣಾಢಿಕ
ನೆನಿ[2]ಕುಮದೀ[2]ಯೋಗಸಂಭವಂ ಬುಧಮಿತ್ರಾ

(ಶುಕ್ರ-ಶನಿಯೋಗಫಲ)

ದಶಾಹಿತಮಂತ್ರಿಯೊಳೊಂ
ದಿದ ಶನಿಯಿಂ ಸ್ತ್ರೀಧನಾನ್ವಿತಂ ದ್ವಿಗ್ರಹಯೋ ೬
ಗದೊ[3]ಳಂತಾ[3] ತ್ರಿಗ್ರಹಯೋ
ಗದೊಳಂ ತಂತಮ್ಮ ಫಲಮನಾಗ್ರಹಮಾಗುಂ

೫. ಜನನಕಾಲದಲ್ಲಿ ಗುರುವಿನೊಡನಿರುವ ಶನಿಯಿಂದ ಜಾತಕನು ಕುಂಬಾರನೂ ಅಡಿಗೆಮಾಡಲು ಬಲ್ಲವನೂ ಶುಕ್ರನಿಂದ ಗುಣಾಢ್ಯನೂ ಆಗುತ್ತಾನೆ.

ವಿ–ಗುರುವಿನೊಡನೆ ಶುಕ್ರನಿದ್ದರೆ ಒಳ್ಳೆಯ ವಿದ್ಯಾವಂತನೂ ಧನಿಕನೂ ಕಳತ್ರವಂತನೂ ಶೂರನೂ ಆಗುತ್ತಾನೆ; ಶನಿಯಿದ್ದರೆ ನಾಪಿತನಾಗುತ್ತಾನೆ ಎಂದು ಬೃಹಜ್ಜಾತಕದಲ್ಲಿದೆ.

೬. ಜನನಕಾಲದಲ್ಲಿ ಶುಕ್ರನೊಡನಿರುವ ಶನಿಯಿಂದ ಜಾತಕನು ಸ್ತ್ರೀಧನವುಳ್ಳವನಾಗುತ್ತಾನೆ. ದ್ವಿಗ್ರಹಯೋಗದಲ್ಲಾಗಲೀ ತ್ರಿಗ್ರಹಯೋಗದಲ್ಲಾಗಲೀ ಗ್ರಹಗಳು ತಮ್ಮತಮ್ಮ ಫಲಗಳನ್ನು ಕೊಡುತ್ತವೆ.

ವಿ–ಶನಿ ಶುಕ್ರನೊಡನಿದ್ದರೆ ಅಲ್ಪದೃಷ್ಟಿಯೂ ಲಿಪಿ ಪುಸ್ತಕ ಚಿತ್ರ ಇವುಗಳ ವಿಚಾರವನ್ನು ತಿಳಿದಿರುತ್ತಾನೆಂದೂ ಬೃಹಜ್ಜಾತಕದಲ್ಲಿದೆ. ಮೂರು ಗ್ರಹಗಳು ಒಂದೇ ರಾಶಿಯಲ್ಲಿದ್ದರೆ ಮೂರು ದ್ವಿಗ್ರಹಯೋಗಗಳ ಫಲಗಳನ್ನೂ ಆ ಗ್ರಹಗಳು ಕೊಡುತ್ತವೆ. ಇದರಂತೆಯೇ ಎಷ್ಟುಗ್ರಹಗಳು ಕೂಡ ಇದ್ದರೂ ಸಂಭವವಿರುವಷ್ಟು ದ್ವಿಗ್ರಹಯೋಗಗಳ ಫಲಗಳನ್ನು ಗ್ರಹಗಳು ಕೊಡುತ್ತವೆ.

---

1 ಶನನೊಡಲು ಬಲಂ (ಕ)...ನೆರಲುಂ ಬಲ್ಲಂ (ಗ) 2 ಕುಂಮದಿ (ಕ ಗ) 3 ಳು ಧಾ (ಕ) ರಗೆ ಧಾ (ಗ).

# ದ್ವಿತ್ರಿ ಗ್ರಹಯೋಗ ಪ್ರಕರಣಂ

## (ಸ್ವಗೃಹಸ್ಥಿತ ಗ್ರಹಫಲ)

೧೫] ಕುಲ[1]ಸಾಮ್ಯಂ[1] ಗ್ರಹವೊಂದು ಕೂಡೆ ಕುಲಸಂಭೂತಾಧಿಕಂ ದ್ವಿಗ್ರಹಂ
ನಿರೆ ಮೂಱುಗ್ರಹವೊಂದೆ ಬಂಧುರತನರ್ಥಸ್ವಾಮಿ ನಾಲ್ಕುಂ ಗ್ರಹಂ ೭
ನಿರೆ ಪಂಚಗ್ರಹವೊಂದೆ ಭೋಗನಿರತಂ ಧಾಥ್ರ್ಯ[2]ತ್ಸ[2]ಮಂ ಷಡ್ಗ್ರಹಂ
ನಿರೆ ಸಪ್ತಗ್ರಹವೊಂದೆ ಭೂಪನೆನಿಕುಂ ತಂತಮ್ಮ ಗೇಹಂಗಳೊಳ್

ಗ್ರಹಸಪ್ತಕ[3]ಮುಂ ನಿರೆ ಸ
ದ್ಗ್ರಹೋ[3]ಚ್ಚದೊಳ್ ತತ್ಫಲಕ್ಕೆ ಕಂಟಿನ್ನ್ಯೂನಂ ೮
ಸುಹೃದಾಲಯೋಚ್ಚದೊಳ್ ತ
ದ್ಗ್ರಹಮೇೞುಂ ನಿಂದೊಡಾ ಫಲಂ ದೊರೆಕೊಳ್ಗುಂ

## (ಶತ್ರು ನೀಚಕ್ಷೇತ್ರಸ್ಥಿತ ಗ್ರಹಫಲ)

ಅರಿ ನೀಚರ್ಕ್ಷದೊಳೊಂ[4]ದು[4] ನಿಂದೊಡೆ ದರಿದ್ರಂ ದ್ವಿಗ್ರಹಂ [5]ಬಂದು ಕೂ[5] ೯
ಡಿರೆ ದುಃಖಾನ್ವಿತನಲ್ಲಿ ಮೂಱು ನಿರೆ ಮೂಢಂ ನಾಲ್ಕು ನಿಂದಂದು ಘೋ
ರರುಜಾಪೀಡಿತದೇಹನೈದು ನಿರೆ ನಾನಾಬಂಧನಪ್ರಾಪ್ತನಾ
[6]ಜ್ಯ[6]ರೆ ಸಂತಪ್ತಮನಸ್ಕನೇೞು ನಿರೆ [7]ಶಸ್ತ್ರಾ[7]ಘಾತದಿಂ ಪೊಂದುಗುಂ

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ದ್ವಿತ್ರಿಗ್ರಹಯೋಗಪ್ರಕರಣವರ್ಣನಂ ಪಂಚದಶಾಧಿಕಾರಂ.

---

೭. ಜನನಕಾಲದಲ್ಲಿ ಸ್ವಕ್ಷೇತ್ರದಲ್ಲಿ ಒಂದು ಗ್ರಹವಿದ್ದರೆ ತನ್ನ ಕುಲಕ್ಕೆ ಸದೃಶನೂ ಎರಡು ಗ್ರಹಗಳಿದ್ದರೆ ಸ್ವಕುಲಾಧಿಕನೂ ಮೂರು ಗ್ರಹಗಳಿದ್ದರೆ ಬಂಧುರತನೂ ನಾಲ್ಕು ಗ್ರಹಗಳಿದ್ದರೆ ಧನವಂತನೂ ಐದು ಗ್ರಹಗಳಿದ್ದರೆ ಭೋಗಿಯೂ ಆರು ಗ್ರಹಗಳಿದ್ದರೆ ರಾಜನಿಗೆ ಸಮಾನನೂ ಏಳು ಗ್ರಹಗಳಿದ್ದರೆ ರಾಜನೂ ಆಗುತ್ತಾನೆ.

ವಿ–ಏಳು ಗ್ರಹಗಳೂ ಸ್ವಕ್ಷೇತ್ರದಲ್ಲಿರುವ ಯೋಗವು ಸಿಂಹಮಾಸ ಕೃಷ್ಣ ಪಕ್ಷದ ಕೊನೆಯ ಭಾಗದಲ್ಲಿ ಸಂಭವಿಸುತ್ತದೆ.

೮. ಏಳು ಗ್ರಹಗಳೂ ಶುಭಗ್ರಹದ ಉಚ್ಚಕ್ಷೇತ್ರದಲ್ಲಿದ್ದರೆ ಸ್ವಕ್ಷೇತ್ರದಲ್ಲಿ ರುವಾಗ ಹೇಳಿರುವ ಫಲಕ್ಕೆ ಸ್ವಲ್ಪ ಕಡಿಮೆಯೂ ಮಿತ್ರಕ್ಷೇತ್ರ ಅಥವಾ ಮಿತ್ರಗ್ರಹದ ಉಚ್ಚಕ್ಷೇತ್ರದಲ್ಲಿ ಆ ಏಳು ಗ್ರಹಗಳೂ ಇದ್ದರೆ ಅದೇ ಫಲವೂ ಉಂಟಾಗುತ್ತದೆ.

೯. ಜನನಕಾಲದಲ್ಲಿ ಶತ್ರು ಅಥವಾ ನೀಚಕ್ಷೇತ್ರದಲ್ಲಿ ಒಂದು ಗ್ರಹವಿದ್ದರೆ ಜಾತಕನು ದರಿದ್ರನಾಗುತ್ತಾನೆ; ಎರಡು ಗ್ರಹಗಳಿದ್ದರೆ ದುಃಖಿ; ಮೂರು ಗ್ರಹ

---

1 ಸಾಮ್ಯ (ಕ ಗ) 2 ತ್ಸ (ಕ ಗ) 3 [illegible] (ಕ) 4 [illegible] (ಗ) 5 [illegible]
6 ಗ (ಕ) 7 ಶಸ್ತ್ರಾ (ಕ ಗ).

ಗಳಿದ್ದರೆ ಮೂಢ; ನಾಲ್ಕುಗ್ರಹಗಳಿದ್ದರೆ ಘೋರವ್ಯಾಧಿಪೀಡಿತಶರೀರ; ಐದು ಗ್ರಹಗಳಿದ್ದರೆ ಅನೇಕ ಬಂಧನಗಳಿಗೆ ಒಳಗಾಗುತ್ತಾನೆ; ಆರುಗ್ರಹಗಳಿದ್ದರೆ ಸಂತಾಪ ದಿಂದ ಕೂಡಿದ ಮನಸ್ಸುಳ್ಳವನಾಗುತ್ತಾನೆ; ಏಳುಗ್ರಹಗಳಿದ್ದರೆ ಶಸ್ತ್ರಘಾತದಿಂದ ಸಾಯುತ್ತಾನೆ.

ವಿ–ದ್ವಿತ್ರಿಗ್ರಹಯೋಗವೆಂದರೆ ಸಾಮಾನ್ಯವಾಗಿ ಎರಡು ಮೂರು ಗ್ರಹಗಳು ಸೇರಿರುವಿಕೆ ಎಂದು ಅರ್ಥವಾಗುತ್ತದೆ; ಆದರೆ ಈ ಪ್ರಕರಣದ ಕೊನೆಯಲ್ಲಿ ಹೇಳಿರುವ ೭,೮,೯ನೇ ಪದ್ಯಗಳನ್ನು ನೋಡಿದರೆ ಒಂದೇ ವಿಧವಾದ ಸ್ಥಿತಿ ಎರಡು ಅಥವಾ ಮೂರು ಗ್ರಹಗಳಿರುವ ಯೋಗವನ್ನೂ ದ್ವಿತ್ರಿಗ್ರಹಯೋಗವೆಂದು ಶ್ರೀಧರನು ಅಭಿಪ್ರಾಯಪಟ್ಟಿರಬಹುದೆಂದು ತಿಳಿದುಬರುತ್ತದೆ.

---

ದ್ವಿಗ್ರಹಯೋಗ ಫಲಚಕ್ರ

| ಗ್ರಹ | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ |
|---|---|---|---|---|---|---|
| ಚಂದ್ರ | ಯಂತ್ರಜ್ಞ | ... | ಕೂಟ ವೇದಿ | ವಿನೀತ | ಬಂಧು ಶ್ರೇಷ್ಠ | ವಸ್ತ್ರ ವಿಕ್ರಯಿ |
| ಕುಜ | ಪರದಾರ ಶೀಲ | ಕೂಟ ವೇದಿ | ... | ಮಲ್ಲ | ಯಜಮಾನ | ಪರದಾರ ಶೀಲ |
| ಬುಧ | ನಿಪುಣ | ವಿನೀತ | ಮಲ್ಲ | ... | ಗೀತಿವಿದ | ವಾಗ್ಮಿ |
| ಗುರು | ಕ್ರೂರಾತ್ಮ | ಬಂಧು ಶ್ರೇಷ್ಠ | ಯಜಮಾನ | ಗೀತಿವಿದ | ... | ಗುಣಾಢ್ಯ |
| ಶುಕ್ರ | ಆಯುಧ ಜೀವಿ | ವಸ್ತ್ರ ವಿಕ್ರಯಿ | ಪರದಾರ ಶೀಲ | ವಾಗ್ಮಿ | ಗುಣಾಢ್ಯ | ... |
| ಶನಿ | ಧಾತು ವಾದ ಪ್ರಿಯ | ಪುನರ್ಭೂ ಪುತ್ರ | ದುಃಖ | ಇಂದ್ರ ಜಾಲಜ್ಞ | ಕುಂಬಾರ | ಸ್ತ್ರೀ ಧನಾನ್ವಿತ |

# ಷೋಡಶಾಧಿಕಾರಂ

---

## ಪ್ರವ್ರಜ್ಯಾಯೋಗ ಪ್ರಕರಣಂ

ಚತುರಾದಿ ಗ್ರಹಮಿರ್ದೊಡೊಂದೆ ಗೃಹದೊಳ್ ತನ್ಮಧ್ಯದೊಳ್ ವೀರ್ಯಸಂ
ಯುತನಪ್ಪ ಗ್ರಹದೊಂದು ದೀಕ್ಷೆ ದೊರೆಕೊಳ್ಗುಂ ನೋಡ್ಪೊಡೆಲ್ಲಂ ಬಲಾ
ನ್ವಿತರಾದಂದನಿತುಂ ತಪಂ ಸಮನಿಕುಂ ಮುಂಕೊ[1]ಡ ಬಕರ್ಗಂ[1] ಬಲಾ
ಢ್ಯತಮುಂಗಪ್ಪ ತಪಂ ಪಲರ್ ವಿಬಲರಾದಂ[2]ದಾ[2]ಗದೊಂದುಂ ತಪಂ ೧

---

೧. ಜನನಕಾಲದಲ್ಲಿ ನಾಲ್ಕು ಅಥವಾ ಅದಕ್ಕಿಂತ ಹೆಚ್ಚುಗ್ರಹಗಳು ಒಂದೇ ರಾಶಿಯಲ್ಲಿದ್ದರೆ ಆ ಗ್ರಹಗಳಲ್ಲಿ ಬಲಿಷ್ಠಗ್ರಹಕ್ಕೆ ಹೇಳಿರುವ ವಿಧದ ಸಂನ್ಯಾಸ ದೀಕ್ಷೆ ಜಾತಕನಿಗೆ ಉಂಟಾಗುತ್ತದೆ. ಎಲ್ಲರೂ ಬಲಿಷ್ಠರಾಗಿದ್ದರೆ ಆ ಎಲ್ಲಗ್ರಹ ಗಳಿಗೆ ಉಕ್ತವಾಗಿರುವಷ್ಟು ವಿಧ ತಪಸ್ಸೂ ಆತನಿಗುಂಟಾಗುತ್ತದೆ. ಅದರಲ್ಲಿ ಹೆಚ್ಚು ಬಲಾಢ್ಯಗ್ರಹದ ತಪಸ್ಸು ಮೊದಲು ಸಂಭವಿಸುತ್ತದೆ. ಗ್ರಹಗಳು ದುರ್ಬಲ ರಾಗಿದ್ದರೆ ಯಾವ ವಿಧವಾದ ತಪಸ್ಸೂ ಉಂಟಾಗುವುದಿಲ್ಲ ಎಂದರೆ ಸಂನ್ಯಾಸಿ ಯಾಗುವುದಿಲ್ಲ.

ವಿ–ಪ್ರತಿಗ್ರಹಕ್ಕೂ ಒಂದೊಂದು ಸಂನ್ಯಾಸದೀಕ್ಷೆಯನ್ನು ಈ ಪ್ರಕರಣದಲ್ಲಿ ಹೇಳಿದೆ. ಹೆಚ್ಚುಗ್ರಹಗಳು ಬಲಾಧಿಕರಾಗಿದ್ದರೆ ಬಲಿಷ್ಠಗ್ರಹಗಳ ಸಂಖ್ಯಾನು ಗುಣವಾಗಿ ದೀಕ್ಷೆಗಳುಂಟಾಗುತ್ತವೆ. ಗ್ರಹಗಳ ಬಲತಾರತಮ್ಯ ಮತ್ತು ದಶಾ ಕ್ರಮವನ್ನನುಸರಿಸಿ ದೀಕ್ಷೆಗಳ ಪೌರ್ವಾಪರ್ಯಕ್ರಮವನ್ನು ನಿರ್ಧರಿಸಬೇಕು. ಒಂದೇ ಗ್ರಹ ಬಲಿಷ್ಠವಾಗಿದ್ದರೆ ಯಾವಜ್ಜೀವವೂ ಆ ಗ್ರಹದ ದೀಕ್ಷೆಯೇ ಜಾತಕನಿಗಿರುತ್ತದೆ. ಮೂರುಗ್ರಹಗಳು ಒಂದುರಾಶಿಯಲ್ಲಿ ಸೇರಿದ್ದರೆ ಅಥವಾ ಒಂದೇ ರಾಶಿಯಲ್ಲಿರುವ ನಾಲ್ಕುಗ್ರಹಗಳೂ ಬಲಿಷ್ಠರಾಗಿದ್ದರೆ ಜಾತಕನಿಗೆ ಸಂನ್ಯಾಸಯೋಗವಿರುವುದಿಲ್ಲ.

[1] ತೆ ಬಲರ್ಗಂ (ಅ) [2] ಗಾ (ಅ).

(ದೀಕ್ಷಾ ಭೇದಗಳು)

ಇನನಿಂದಂ ಗೊರವಂ ತುಷಾರಕರನಿಂ ಕಾಪಾಲಿಕಂ ಭೂಮಿನಂ
ದನನಿಂ ಬೌದ್ಧತಪಸ್ವಿ ಸೋಮಸುತನಿಂದಂ ಜೀವನೋಪಾಯಿ ಜೀ
ವನಿನಾರಣ್ಯನಿವಾಸಿ ದೈತ್ಯಗುರುವಿಂದಂ *ಗೌಳ*ದೀಕ್ಷಾನ್ವಿತಂ
ಶನಿಯಿಂದಂ ಜಿನಯೋಗಿಯಪ್ಪ ತಪಮಂ ಕೆಯ್ಕೊಳ್ಗುಮಾ ಮಾನವಂ ೧

ದೊರೆಕೊಳೆ ಸೋಲದಾ ಬಲಯುತಗ್ರಹಪಕ್ಷದೆ ದೀಕ್ಷೆ ಕೂಡಿಯುಂ
ನರನ[1]ದು[1]ವಂ ಬಿಸು[2]ಟ್ಟು ವಿ[2]ನಬಿಂಬದೊಳಸ್ತಮಯಗ್ರಹಂಗಳಾ
ಗಿರೆ ತಪವೊಂದುಮಾಗದವಱೊಳ್ ಬಲವದ್ಗ್ರಹಧರ್ಮಮಾರ್ಗತ
ತ್ಪರನೆನಿಕುಂ ವಿಹೀನಬಲರೆಲ್ಲರುಮಾಗಿರೆ ಶೂನ್ಯದೈವತಂ ೨

---

೧. ಸೂರ್ಯನಿಂದ ಗೊರವ (ಶೈವಭಿಕ್ಷು) ಚಂದ್ರನಿಂದ ಕಾಪಾಲಿಕ ಅಂಗಾರಕನಿಂದ ಬೌದ್ಧತಪಸ್ವಿ (ಭಿಕ್ಷು) ಬುಧನಿಂದ ಜೀವನೋಪಾಯದ ಸಂನ್ಯಾಸ ಗುರುವಿಂದ ಅರಣ್ಯವಾಸ ಶುಕ್ರನಿಂದ ಗೌಳದೀಕ್ಷೆ ಶನಿಯಿಂದ ಜಿನದೀಕ್ಷೆ; ಜಾತಕನು ಗ್ರಹಬಲಾನುಗುಣವಾಗಿ ಈ ದೀಕ್ಷೆಗಳನ್ನು ಸ್ವೀಕರಿಸುತ್ತಾನೆ.

ವಿ—ಸೂರ್ಯ—ವಾನಪ್ರಸ್ಥ, ಚಂದ್ರ—ವೃದ್ಧಶ್ರಾವಕ, ಕುಜ—ಕೆಂಪುವಸ್ತ್ರಧಾರಿ, ಬುಧ—ಆಜೀವಏಕದಂಡೀ, ಗುರು—ತ್ರಿದಂಡೀಭಿಕ್ಷು, ಶುಕ್ರ—ಚಕ್ರಧರ, ಶನಿ—ಕ್ಷಪಣಕ; ಈ ದೀಕ್ಷೆಗಳನ್ನು ಗ್ರಹಗಳು ಉಂಟುಮಾಡುತ್ತವೆಂದು ಲಘುಜಾತಕದಲ್ಲಿದೆ.

೨. ಪ್ರವ್ರಜ್ಯಾಯೋಗಕಾರಕ ಗ್ರಹಗಳಲ್ಲಿ ಬಲಿಷ್ಠಗ್ರಹ ಯುದ್ಧದಲ್ಲಿ ಸೋತಿದ್ದರೆ ಆ ಗ್ರಹಕ್ಕೆ ಹೇಳಿರುವ ದೀಕ್ಷೆಯನ್ನು ಜಾತಕನು ಸ್ವೀಕರಿಸಿ ಅನಂತರ ಅದನ್ನು ಬಿಡುತ್ತಾನೆ. ಪ್ರವ್ರಜ್ಯಾಯೋಗಕಾರಕ ಗ್ರಹಗಳು ಅಸ್ತಂಗತರಾಗಿದ್ದರೆ ಜಾತಕನು ಯಾವದೀಕ್ಷೆಯನ್ನೂ ಸ್ವೀಕರಿಸುವುದಿಲ್ಲ; ಬಲಿಷ್ಠಗ್ರಹಕ್ಕೆ ಹೇಳಿರುವ ದೀಕ್ಷಾ ಧರ್ಮಮಾರ್ಗತತ್ಪರನಾಗುತ್ತಾನೆ. ಎಲ್ಲ ಗ್ರಹಗಳೂ ದುರ್ಬಲರಾದರೆ ಶೂನ್ಯದೈವತನಾಗುತ್ತಾನೆ.

ವಿ—ದೀಕ್ಷೆಯು ಯೋಗಕಾರಕ ಗ್ರಹದ ದಶಾಭುಕ್ತಿಗಳಲ್ಲಿ ಜಾತಕನಿಗೆ ಸಂಭವಿಸುತ್ತದೆ. ಯೋಗಕಾರಕರು ಬಲಿಷ್ಠರಾಗದಿದ್ದರೆ ಜಾತಕನಿಗೆ ದೀಕ್ಷೆಯಲ್ಲಿ ಇಚ್ಛೆ ಅಥವಾ ಸಂನ್ಯಾಸಿಗಳಲ್ಲಿ ಪ್ರೀತಿ ಅಥವಾ ವಿರಕ್ತಿ ಉಂಟಾಗುತ್ತದೆ.

---

[1] ದ (ಕ ಗ) [2] ಳ್ಗಂ ಯ (ಕ) ದ್ದು ಇ (ಗ) * 'ಕೌಲ' ಎಂದಿರಬಹುದು?

(ಶನಿಯಿಂದ ಪ್ರವ್ರಜ್ಯಾಯೋಗ)

ಇನಜನ್ಮಂ ಬಲಹೀನ ಜನ್ಮಪತಿಯಂ ನೋಟ್ಪಂದು ಮೇಣ್ ಜನ್ಮನಾ
ಥನನನ್ಯರ್ ನಡೆ ನೋಡದಿರ್ದೊಡಿನಜಂ ನೋಟ್ಪಂದು ಮೇಣ್ [1][ಸೌರ][1] ಧಾ
ಮನವಾಂಶಂಗಳೊಳೊಂದಿ ನಿಂದೊಡಿನಜ ದ್ರೇಕ್ಕಾಣ[2]ಮಂ[2]ತಲ್ಲಿ ಚಂ
ದ್ರ[3]ನುಮೊಂ[3]ದಿರ್ದೊಡೆ ನೋ[4]ಡಿ[4]ದಂದು ಶ[5]ನಿ[5] ದೀಕ್ಷಾಮಾತ್ರಮಂ [6]ಪೊರ್दು[6]ಗುಂ ೪

---

೪. ಜನನಕಾಲದಲ್ಲಿ ಶನಿ ದುರ್ಬಲಜನ್ಮರಾಶ್ಯಧಿಪತಿಯನ್ನು ನೋಡಿದರೆ ಅಥವಾ ಜನ್ಮರಾಶ್ಯಧಿಪತಿಯನ್ನು ಇತರರು ನೋಡದೆ ಶನಿ ನೋಡಿದರೆ ಅಥವಾ ಶನಿ ಅಂಗಾರಕ ಇವರ ನವಾಂಶಗಳಲ್ಲಿ ಶನಿದ್ರೇಕ್ಕಾಣವೂ ಕೂಡಿರುವಾಗ ಅಲ್ಲಿ ಚಂದ್ರನಿದ್ದು ಶನಿ ನೋಡಿದರೆ ಜಾತಕನು ದೀಕ್ಷೆಯನ್ನು ಮಾತ್ರ ಸ್ವೀಕರಿಸುತ್ತಾನೆ.

ವಿ—ಮೊದಲಿನ ಎರಡುಯೋಗಗಳಲ್ಲೂ ಜನ್ಮರಾಶ್ಯಧಿಪತಿಗೆ ಶನಿದೃಷ್ಟಿ ಇರಬೇಕೆಂದು ಶ್ರೀಧರನು ಹೇಳಿರುತ್ತಾನೆ. ಎರಡನೆಯ ಯೋಗವು ಒಂದೊಂದು ಗ್ರಂಥದಲ್ಲಿ ಒಂದೊಂದು ವಿಧವಾಗಿದೆ. ಸಾರಾವಳಿಯಲ್ಲಿ ‘ಜನ್ಮಾಧಿಪಃ ಸೂರ್ಯಸುತೇನ ದೃಷ್ಟಃ ಶೇಷೈರದೃಷ್ಟಃ’ ಎಂದು ಕಲ್ಯಾಣವರ್ಮನು ಹೇಳಿರುವ ಅಭಿಪ್ರಾಯವನ್ನೇ ಶ್ರೀಧರನೂ ಹೇಳಿರುತ್ತಾನೆ. ಇದೇ ಯೋಗವು ಜಾತಕ ಪಾರಿಜಾತದಲ್ಲಿ ‘ನ ವೀಕ್ಷಿತಶ್ಚೇದಿತರಗ್ರಹೇಂದ್ರೈರ್ಲಗ್ನಾಧಿಪಃ ಪಶ್ಯತಿ ಭಾನುಪುತ್ರಂ’ [ಲಗ್ನಾಧಿಪತಿ ಇತರಗ್ರಹಗಳಿಂದ ವೀಕ್ಷಿತನಾಗದೆ ಶನಿಯನ್ನು ನೋಡಿದರೆ] ಎಂದೂ ಬೃಹಜ್ಜಾತಕದಲ್ಲಿ ‘ಜನ್ಮೇಶೋಽನ್ಯೈರ್ಯದ್ಯದೃಷ್ಟೋಽರ್ಕಪುತ್ರಂ ಪಶ್ಯತಿ’ [ಜನ್ಮರಾಶ್ಯಧಿಪತಿ ಇತರಗ್ರಹಗಳಿಂದ ದೃಷ್ಟನಾಗದೆ ಶನಿಯನ್ನು ನೋಡಿದರೆ] ಎಂದೂ ಇದೆ. ಈ ಅಭಿಪ್ರಾಯಗಳು ಶ್ರೀಧರನಿಗೆ ಸಮ್ಮತವಲ್ಲ. ಮೂರನೆಯ ಯೋಗವೂ ಬೇರೆ ಬೇರೆ ರೀತಿಯಲ್ಲಿದೆ. ಸಾರಾವಳಿಯಲ್ಲಿ ‘ಶಶೀ ದೃಗಾಣೇ ರವಿಜಸ್ಯ ಸಂಸ್ಥಿತಃ ಕುಜಾರ್ಕಿದೃಷ್ಟಃ ಪ್ರಕರೋತಿ ತಾಪಸಂ। ಕುಜಾಂಶಕೇ ವಾ ರವಿಜೇನ ದೃಷ್ಟೋ ನವಾಂಶತುಲ್ಯಾಂ ಕಥಯಂತಿ ತಾಂ ಬುಧಾಃ॥’ [ಚಂದ್ರ ಶನಿಯ ದ್ರೇಕ್ಕಾಣದಲ್ಲಿದ್ದು ಅಂಗಾರಕ ಶನಿಗಳು ನೋಡಿದರೆ ತಪಸ್ವಿಯಾಗುತ್ತಾನೆ; ಅಥವಾ ಅಂಗಾರಕ ನವಾಂಶದಲ್ಲಿರುವ ಚಂದ್ರನನ್ನು ಶನಿಯು ನೋಡಿದರೆ ಅಂಗಾರಕನಿಗೆ ಹೇಳಿರುವ ದೀಕ್ಷೆಯನ್ನು ಸ್ವೀಕರಿಸುತ್ತಾನೆ] ಎಂದಿದೆ. ಜಾತಕಪಾರಿಜಾತದಲ್ಲಿ ‘ಚಂದ್ರೇ ಭಾನುಸುತೇಕ್ಷಿತೇ ರವಿಸುತದ್ರೇಕ್ಕಾಣ ಯಾತೇ ತಥಾ। ಭಿಕ್ಷುರ್ಮಂದನಿರೀಕ್ಷಿತೇ ರವಿಸುತ ಕ್ಷೋಣೀಸುತಾಂಶೇ ಯಥಾ॥’ [ಚಂದ್ರ ಶನಿಯಿಂದ ವೀಕ್ಷಿತನಾಗಿ ಶನಿಯ ದ್ರೇಕ್ಕಾಣದಲ್ಲಿದ್ದರೆ ಅಂತೆಯೇ ಶನಿ ಅಂಗಾರಕ ನವಾಂಶಗಳಲ್ಲಿರುವ ಚಂದ್ರ ಶನಿಯಿಂದ ವೀಕ್ಷಿತನಾದರೆ ಭಿಕ್ಷುವಾಗುತ್ತಾನೆ] ಎಂದಿದೆ.

---

[1] ಭಾನು (ಚ) ಬಾ. (ಗ) [2] ನಂ (ಕ ಗ) [3] [illegible] (ಚ). [illegible] (ಗ) [4] ದ (ಕ ಗ).
[5] ನ (ಚ) [6] [illegible] (ಗ).

ಅತಿಶಯಬಲನೆನಿಸಿ ಪರಾ
ಜಿತನಾಗಿರ್ದಾ[1] ಗ್ರಹಂ ಪರಗ್ರಹ ಬಲವೀ
ಕ್ಷಿತನಾಗಿರೆ ತದ್ಗ್ರಹದೊಂ
ದು ತಪಮನೋರಂತೆ ಬುದ್ಧಿಯಿಂ ಪಡೆಯನವಂ ೫

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ಪ್ರವ್ರಜ್ಯಾಯೋಗ ಪ್ರಕರಣವರ್ಣನಂ ಷೋಡಶಾಧಿಕಾರಂ

---

ಬೃಹಜ್ಜಾತಕದಲ್ಲಿ 'ದೀಕ್ಷಾಂ ಪ್ರಾಪ್ನೋತ್ಯಾರ್ಕಿದೃಕ್ಕಾಣ ಸಂಸ್ಥೇ ಭೌಮಾರ್ಕ್ಯಂಶೇ ಸೌರದೃಷ್ಟೇ ಚ ಚಂದ್ರೇ' ಎಂದಿರುವುದಕ್ಕೆ ಭಟ್ಟೋತ್ಪಲರು ವ್ಯಾಖ್ಯಾನಮಾಡಿರುವ ಅಭಿಪ್ರಾಯವನ್ನೇ ಶ್ರೀಧರನೂ ತನ್ನ ಗ್ರಂಥದಲ್ಲಿ ಉಲ್ಲೇಖಿಸಿರುತ್ತಾನೆ. ವಿವರಣ ಮತ್ತು ಸುಬೋಧಿನೀ ಎಂಬ ಬೃಹಜ್ಜಾತಕದ ವ್ಯಾಖ್ಯಾನಗಳಲ್ಲೂ ಈ ಅಭಿಪ್ರಾಯವೇ ಇದೆ. ಒಂದುಯೋಗವನ್ನೇ ಎರಡಾಗಿ ಬಿಡಿಸಿ ಹೇಳಿರುವ ಜಾತಕಪಾರಿಜಾತಗ್ರಂಥದ ಅಭಿಪ್ರಾಯವು ಶ್ರೀಧರನಿಗೆ ಸಮ್ಮತವಲ್ಲ. ಈ ಯೋಗಗಳು ಶನಿ ಮತ್ತು ಜನ್ಮರಾಶ್ಯಧಿಪತಿ ಇವರಿಬ್ಬರಲ್ಲಿ ಬಲಿಷ್ಠನಾದವನ ದಶಾಕಾಲದಲ್ಲಿ ಸಂಭವಿಸುತ್ತವೆ.

೫. ಸಂನ್ಯಾಸಯೋಗಕಾರಕ ಗ್ರಹಗಳಲ್ಲಿ ಅತ್ಯಂತ ಬಲಿಷ್ಠನಾದ ಗ್ರಹ ಯುದ್ಧದಲ್ಲಿ ಪರಾಜಿತನಾಗಿದ್ದು ಮತ್ತೊಂದು ಗ್ರಹದಿಂದ ವೀಕ್ಷಿತನಾದರೆ ಆ ಗ್ರಹ ದೀಕ್ಷೆಯಲ್ಲಿ ಇಚ್ಛೆಯಿದ್ದರೂ ಬುದ್ಧಿಪೂರ್ವಕವಾಗಿ ಅದನ್ನು ಸ್ವೀಕರಿಸುವುದಿಲ್ಲ.

---

[1] ರ್ದ (ಗ).

# ಸಪ್ತದಶಾಧಿಕಾರಂ

---

## ರಾಶಿ ಪ್ರಕರಣಂ

(ಮೇಷರಾಶಿಸ್ಥಿತ ಚಂದ್ರಫಲ)

ಚಲ[1]ಚಿತ್ತಂ ಬಲಹೀನಜಾನು ಚಪಲಂ ಕಾಂತಾಪ್ರಿಯಂ ಕಾಮುಕಂ
ಕಲ ವೃತ್ತಾರುಣನೇತ್ರನುಷ್ಣಲಘುಶಾಕಾಹಾರಿ ಸೇವಾವಿದಂ
ಜಲಭೀತಂ ಸಹಜಾಗ್ರಜಂ ಕುನಖಿ [2][ಶಕ್ತ್ಯಂಕಂ][2] ಶಿರೋಭಾಗದೊಳ್
ಕಲೆಯುಳ್ಳಂ ಭ್ರಮಣಾರ್ಥಿ ವೇಗವರಸೆವಂ ಮಾನಾನ್ವಿತಂ ಮೇಷಜಂ ೧

---

೧. ಮೇಷರಾಶಿಯಲ್ಲಿ ಹುಟ್ಟಿದವನು ಸ್ಥಾಯಿಯಿಲ್ಲದ ಧನ ದುರ್ಬಲ ಮೊಳಕಾಲುಗಳು ಮತ್ತು ಚಪಲಸ್ವಭಾವವುಳ್ಳವ ಅಂಗನಾವಲ್ಲಭ ಕಾಮಿ ಕ್ರೂರ ಉರುಟಾದ ಕೆಂಪುಕಣ್ಣುಳ್ಳವ ಅಲ್ಪವಾಗಿ ಬಿಸಿಯಾದ ಆಹಾರವನ್ನು ಸೇವಿಸು ತ್ತಾನೆ ಶಾಕಭೋಜಿ ಸೇವಾಚತುರ ಜಲಭೀರು ಸಹೋದರರಲ್ಲಿ ಹಿರಿಯ (ಮುಂದಾಳು) ವಿಕಾರವಾದ ಉಗುರು ಶಕ್ತಿರೇಖೆ ಮತ್ತು ತಲೆಯಲ್ಲಿ ಕಲೆಯುಳ್ಳವ ಅಲೆದಾಡುವ ಸ್ವಭಾವದವ ವೇಗಪ್ರಸನ್ನನಾಗುತ್ತಾನೆ (ಅಲ್ಪಸಂತುಷ್ಟ) ಮತ್ತು ಮಾನಿಷ್ಠ.

ವಿ—ಅಶ್ವಿನಿ ಭರಣಿ ಕೃತ್ತಿಕಾ ೧ನೇ ಪಾದದಲ್ಲಿ ಹುಟ್ಟಿದವನಿಗೆ ಈ ಗುಣ ಗಳು ಇರುತ್ತವೆ. ಮೇಷಲಗ್ನದಲ್ಲಿ ಹುಟ್ಟಿದವನಿಗೂ ಈ ಗುಣಗಳಿರುತ್ತವೆಂದು ಕೆಲವರ ಅಭಿಪ್ರಾಯ. ಈ ರಾಶಿಯಲ್ಲಿ ಜನಿಸಿದವನಿಗೆ ಮೇಷ (ಕುರಿ)ದ ಮತ್ತು ಅಂಗಾರಕನ ಸ್ವಭಾವವಿರುತ್ತದೆಂದು ಪದ್ಯದಲ್ಲಿರುವ ಶಬ್ದದ ಅರ್ಥದಿಂದ ತಿಳಿದು ಬರುತ್ತದೆ.

---

[1] ಚ (ಕ ಗ) [2] ಗೀತಕ್ಷ್ಯಂ (ಕ) ಪೀತಕ್ಷ್ಯಂ (ಗ).

(ವೃಷಭರಾಶಿಸ್ಥಿತ ಚಂದ್ರಫಲ)

ಕಮನೀಯಯಂ ಪ್ರಥು [1]ಕೇಳಿ[1]ಗಾಮಿ ಸುಭಗಂ ಪೀನೋರುವಕ್ತ್ರಂ [2]ತೃಷೀ[2]
[3]ಕ್ಷ[3]ಮನಾ[4]ದ್ಯಾ [ತ್ಮಜ] ಬಂಧು[4] ವಿತ್ತರಹಿತಂ ಪಾರ್ಶ್ವಾ[5]ಸ್ಯ[5]ಪೃಷ್ಠಾಂಕಿತಂ
ಪ್ರಮದಾವಲ್ಲಭನಂ[6]ತ[6]ಮಧ್ಯಸುಖಿ ಪುಷ್ಟಂ ತ್ಯಾಗಿ ಕನ್ಯಾಪ್ರಜಂ
[7][ಶ್ರಮಸಹ್ಯಂ][7] ಸ್ಥಿರಮಿತ್ರನುಚ್ಚಕಕುದಂ ಶ್ಲೇಷ್ಮಾಧ್ಯನುಕ್ಷೋದ್ಭವಂ ೨

(ಮಿಥುನರಾಶಿಸ್ಥಿತ ಚಂದ್ರಫಲ)

ಮತಿವಂತಂ ಪರ[8]ಚಿತ್ತಕಾಂಕ್ಷಿ ಬ[ಲುಮೆಲ್ಪಂ][8] ಗೀತ ನೃತ್ಯಜ್ಞನು
ನ್ನತನಾ[9]ಸಂ ರತಿ[9]ವೇದಿ ಶಾಸ್ತ್ರಕುಶಲಂ ಜೂದಾಳಿ ಚೆಲ್ವಂ ನಿಕುಂ
ಚಿತಕೇಶಂ ಪ್ರಿಯವಾದಿ ಕುಬ್ಜತನು ರಾಜದ್ವಾರಯೋಗ್ಯಂ ಮುಖಾಂ
ಕಿತನಾತಾಮ್ರವಿಲೋಲನೇತ್ರನಬಲೋಪೇತಂ ನೃಯುಗ್ಮೋದ್ಭವಂ ೩

---

೨. ವೃಷಭರಾಶಿಯಲ್ಲಿ ಹುಟ್ಟಿದವನು ಸುಂದರ ಸಮರ್ಥ ಒಯ್ಯಾರದಿಂದ ನಡೆಯುತ್ತಾನೆ ಅದೃಷ್ಟಶಾಲಿ ದೊಡ್ಡ ತೊಡೆ ಮತ್ತು ವಿಶಾಲ ಮುಖವುಳ್ಳವ ಆಹಾರಕ್ಕೆ ಹಾತೊರೆಯುತ್ತಾನೆ ಕ್ಷಮಾಪರ ಮೊದಲಮಗ ಬಂಧು ಮತ್ತು ಹಣ ಇವುಗಳಿಂದ ವಿರಹಿತ ಪಕ್ಕೆ ಮುಖ ಮತ್ತು ಬೆನ್ನಿನಲ್ಲಿ ಮಚ್ಚೆಯುಳ್ಳವ ಸ್ತ್ರೀಪ್ರಿಯ ಪ್ರಾಯ ಮತ್ತು ಮುಪ್ಪಿನಲ್ಲಿ ಸುಖಪಡುತ್ತಾನೆ ಪುಷ್ಟ ಉದಾರಿ ಹೆಣ್ಣು ಮಕ್ಕಳುಳ್ಳವ, ಕ್ಲೇಶಸಹಿಷ್ಣು ಸ್ಥಿರಮಿತ್ರರುಳ್ಳವ ಎತ್ತರವಾದ ಹೆಗಲು (ಹೆಗಲುಬಲ) ಮತ್ತು ಹೆಚ್ಚು ಕಫದಿಂದ ಕೂಡಿರುತ್ತಾನೆ.

ವಿ–ಕೃತ್ತಿಕಾ ೨–೩–೪ನೇ ಪಾದಗಳು ರೋಹಿಣಿ ಮತ್ತು ಮೃಗಶಿರ ೧–೨ ನೇ ಪಾದಗಳಲ್ಲಿ ಹುಟ್ಟಿದವನಿಗೆ ಈ ಪದ್ಯದಲ್ಲಿ ಹೇಳಿರುವ ಗುಣಗಳಿರುತ್ತವೆ. ರಾಶಿಯ ಗುಣಗಳೇ ಆ ಲಗ್ನದಲ್ಲಿ ಹುಟ್ಟಿರುವವನಿಗೆ ಇರುತ್ತವೆಂದು ಕೆಲವರ ಅಭಿಪ್ರಾಯ. ವೃಷಭರಾಶಿಯಲ್ಲಿ ಹುಟ್ಟಿದವನಿಗೆ ವೃಷಭದ (ಎತ್ತಿನ) ಕೆಲವು ಗುಣಗಳೂ ರಾಶ್ಯಧಿಪತಿಯಾದ ಶುಕ್ರನ ಗುಣಗಳೂ ಇರುತ್ತವೆಂದು ಪದ್ಯದಲ್ಲಿ ಹೇಳಿರುವ ಫಲಗಳ ವಿಮರ್ಶೆಯಿಂದ ತಿಳಿದುಬರುತ್ತದೆ. ಉಳಿದ ರಾಶಿಗಳ ಫಲಗಳನ್ನೂ ಇದರಂತೆಯೇ ಊಹಿಸಿಕೊಳ್ಳಬಹುದು.

೩. ಮಿಥುನರಾಶಿಯಲ್ಲಿ ಹುಟ್ಟಿದವನು ಬುದ್ಧಿವಂತ ಇಂಗಿತಜ್ಞ ಬಹ್ವಾಶಿ ಸಂಗೀತ ನೃತ್ಯಗಳನ್ನು ತಿಳಿದವ ಉನ್ನತವಾದ ಮೂಗುಳ್ಳವ ಕಾಮಶಾಸ್ತ್ರ ಕುಶಲ ಶಾಸ್ತ್ರಜ್ಞ (ಪಂಡಿತ) ಜೂಜಾಡುವವ ನೋಡಲು ಸುಂದರ ಗುಂಗುರು ಕೂದಲುಳ್ಳವ ಪ್ರಿಯಭಾಷಿ ಕುಬ್ಜಶರೀರಿ ರಾಜಸೇವಕ ಮುಖದಲ್ಲಿ ಗುರುತನ್ನೂ ತಾಮ್ರದಂತೆ ಕೆಂಪಾಗಿರುವ ಚಂಚಲವಾದ ಕಣ್ಣ(ದೃಷ್ಟಿ)ನ್ನೂ ಉಳ್ಳವ ಸ್ತ್ರೀಲೋಲ.

---

1 ಕೆಳೆ (ಕ) ಕೇಳಿ (ಗ) 2 ಕೃಪಿ (ಕ) ಕೃ (ಗ) 3 ಕ್ರ (ಕ) 4 ದ್ಯಾಕ್ಷಿಕ ಬಂಧು (ಕ) ದ್ಯುತಿಕ ಬಂಧ (ಗ) 5 ನ್ಯ (ಕ ಗ) 6 ತ (ಕ ಗ) 7 ಸಮರೇತಂ (ಕ ಗ) 8 ವಿತ್ತಕಾಂಕ್ಷೆ ಬಳಮಿತ್ರಂ (ಕ) ವಿತ್ತಕಾಂಕ್ಷ ಬಳಮಿತ್ರಂ (ಗ) 9 ಶಂ ರತ (ಕ ಗ).

(ಕರ್ಕಟಕರಾಶಿಸ್ಥಿತ ಚಂದ್ರಫಲ)

ವನಜಲಕೇಳಿಯರ್ಥಿಯೊಡೆಯುಂ ನಯಸಾಧ್ಯನಧೋವಲೋಕನಂ
ವನಿತೆಗೆ ಭೀರು ದೈವವಿದನಂಗನೆಯೊಳ್ ಕೆಳೆಗೊಳ್ವವಂ ಸುಹೃ
ಜ್ಜನದಯಿತಂ ಬೃಹನ್ನಿಗರಣಂ ಕ್ಷಯವೃದ್ಧಿಧನಾನ್ವಿತಂ ನಿಕೇ
ತನಚಯನಾಥನುಚ್ಚಕಟಿ ಕುಬ್ಜಶರೀರಿ ಕುಳೀರಸಂಭವಂ ೪

(ಸಿಂಹರಾಶಿಸ್ಥಿತ ಚಂದ್ರಫಲ)

ಕ್ರೂರಂ ಸ್ಥೂಲಹನುದ್ವಯಂ ಕಲಿ ಮನಂ ಕುಕ್ಷಿ ಕ್ಷುಧಾ ದಂತ ತೃ
[1]ಷ್ಣಾ[1]ರುಕ್ಪೀಡಿತ ದೇಹನಾತ್ಮಜನನೀಧಕ್ತಂ ಸಪಿಂಗೇಕ್ಷಣಂ
ನಾರೀದ್ವೇಷಿ ಸುಬುದ್ಧಿ ಭೋ[2]ಗಿ[2] ವಿಪುಲಾಸ್ಯಂ ಗ[3]ರ್ವಿ[3]ತಂ ಮಾಂಸಶೈ
ಲಾರಣ್ಯಪ್ರಿಯನಲ್ಪಸೂನುವನಿಮಿತ್ತಕ್ರೋಧಿ ಸಿಂಹೋದ್ಭವಂ ೫

---

ವಿ—ಬೃಹಜ್ಜಾತಕದಲ್ಲಿ 'ಮುಖಾಂಕಿತ' ಎನ್ನುವುದಿಲ್ಲ; 'ಹಾಸ್ಯವಿತ್' 'ಕ್ಲೀಬೈರ್ಯಾತಿ ರತಿಂ' [ಹಾಸ್ಯಜ್ಞ ಷಂಡರೊಡನೆ ಕ್ರೀಡಿಸುತ್ತಾನೆ] ಎನ್ನುವುದು ಅಧಿಕವಾಗಿದೆ.

೪. ಕರ್ಕಟಕರಾಶಿಯಲ್ಲಿ ಹುಟ್ಟಿದವನು ಉದ್ಯಾನ ಮತ್ತು ಜಲಕ್ರೀಡೆಗಳಲ್ಲಿ ಆಸಕ್ತಿಯುಳ್ಳವ ಉಪಾಯದಿಂದ ವಶವಾಗುತ್ತಾನೆ ಕೆಳನೋಟವುಳ್ಳವ ಸ್ತ್ರೀಯರಿಗೆ ಅಂಜುತ್ತಾನೆ ದೈವಜ್ಞ ಹೆಂಗಸರೊಡನೆ ಗೆಳೆತನವಮಾಡುತ್ತಾನೆ ಮಿತ್ರಜನಾನುರಾಗಿ ಮಾಂಸಪುಷ್ಟವಾದ ಕತ್ತು ಮತ್ತು ಕ್ಷಯ ವೃದ್ಧಿಗಳಿಂದ ಕೂಡಿದ ಹಣವುಳ್ಳವ ಮನೆಗಳ ಸಮೂಹಕ್ಕೆ ಒಡೆಯನಾಗುತ್ತಾನೆ ಮೇಲೆದ್ದಿರುವ ಸೊಂಟ ಮತ್ತು ಕುಬ್ಜಶರೀರವನ್ನುಳ್ಳವ.

ವಿ—'ದೈವವಿದನಂಗನೆಯೊಳ್ ಕೆಳೆಗೊಳ್ವವಂ' ಎಂಬುದನ್ನು 'ದೈವವಿದನೊಳ್ಳಿದರೊಳ್ ಕೆಳೆಗೊಳ್ವವಂ' ಎಂದು ಸರಿಪಡಿಸಿದರೆ 'ಸತ್ಸುಹೃತ್' ಎಂದು ಬೃಹಜ್ಜಾತಕದಲ್ಲಿರುವ ಫಲವೂ ಸೇರಿದಂತಾಗುತ್ತದೆ.

೫. ಸಿಂಹರಾಶಿಯಲ್ಲಿ ಹುಟ್ಟಿದವನು ಕ್ರೂರ ಗಟ್ಟಿದ ದವಡೆಗಳುಳ್ಳವ ಪರಾಕ್ರಮಿ ಮನೋವ್ಯಾಧಿ ಉದರಬಾಧೆ ಹಸಿವು ಹಲ್ಲುನೋವು ಮತ್ತು ಬಾಯಾರಿಕೆ ಈ ಬಾಧೆಗಳಿಂದ ಪೀಡಿತನಾಗುತ್ತಾನೆ ತಾಯಿಗೆ ವಿಧೇಯ ಪಿಂಗಳವರ್ಣದ ಕಣ್ಣುಳ್ಳವ ಸ್ತ್ರೀದ್ವೇಷಿ ಬುದ್ಧಿವಂತ ಸುಖಿ ಅಗಲವಾದ ಮುಖವುಳ್ಳವ ಅಹಂಕಾರಿ ಮಾಂಸ ಪರ್ವತ ಕಾಡುಗಳನ್ನು ಪ್ರೀತಿಸುತ್ತಾನೆ ಅಲ್ಪಸಂತಾನ ಮತ್ತು ಅಕಾರಣ ಕೋಪಿ.

---

[1-1] ಷ್ಣೋ (ಕ ಗ) [2] ಗ (ಕ) [3] ಘ (ಕ)

(ಕನ್ಯಾರಾಶಿಸ್ಥಿತ ಚಂದ್ರಫಲ)

ಸುರತಜ್ಞಂ ಪರದೇಶಗಾಮಿ ಪರ[1]ಗೇ[1]ಹೋಪಾರ್ಜಿತಾರ್ಥಂ ಘನೇ
ತರ [2][ಬಾಹ್ವಂಸನ][2]ನಲ್ಪಬುದ್ಧಿ ಸುಖಿ ಧರ್ಮಿಷ್ಠಂ ಕಲಾವೇದಿ ಸ
ತ್ಯರತಂ ಶಾಸ್ತ್ರವಿದಂ ಪ್ರಿಯಂವದನ[3]ಲಂ ಪುಂ[3]ಸೂತಿ ಕನ್ಯಾಪ್ರಜಂ
ಸ್ಥಿರಲಜ್ಜಾನ್ವಿತಚಾರುದೃಷ್ಟಿಗಮನಂ ಕನ್ಯಾನಿವಾಸೋದ್ಭವಂ ೬

(ತುಲಾರಾಶಿಸ್ಥಿತ ಚಂದ್ರಫಲ)

ಧನವಂತಂ [4]ಶುಚಿ ವಿಕ್ರಯಕ್ಕೆ[4] ಕುಶಲಂ ಮೇಧಾವಿ [5]ರೋ[5]ಗಾನ್ವಿತಂ
ವನಿತಾ[6]ನಿರ್ಜಿತನಂಗಹೀನ[6]ನಟನಂ ಸದ್ವಿಪ್ರ ಶಿಷ್ಟಾಮರಾ
ರ್ಚನ ಶೀಲಂ ನಿಡಿಯಂ ಚಲತ್ಕೃಶಶರೀರಂ ತುಂಗನಾಸಂ ಸ್ವಬಂ
ಧುನಿಕಾಯಕ್ಕುಪಕಾರಿ ತೆತ್ತಿಗನೆನಿಕ್ಕುಂ ತೌಲಗೇಹೋದ್ಭವಂ ೭

---

೬. ಕನ್ಯಾರಾಶಿಯಲ್ಲಿ ಹುಟ್ಟಿದವನು ಸುರತಪ್ರಿಯ ಪರದೇಶಕ್ಕೆ ಹೋಗುತ್ತಾನೆ ಮತ್ತೊಬ್ಬರ ಮನೆ ಮತ್ತು ಅನ್ಯಾರ್ಜಿತ ಧನದಿಂದ ಕೂಡಿರುತ್ತಾನೆ ಜಗುಳಿದ ಬಾಹು ಭುಜಗಳುಳ್ಳವ ಮೇಧಾವಿ ಸುಖಿ ಧಾರ್ಮಿಕ ನೃತ್ಯ ಗೀತಾದಿ ಕಲಾನಿಪುಣ ಸತ್ಯಭಾಷಿ ಶಾಸ್ತ್ರಜ್ಞ ಪ್ರಿಯಭಾಷಿ ಅಲ್ಪಾತ್ಮಜ ಹೆಣ್ಣು ಮಕ್ಕಳುಳ್ಳವ ಲಜ್ಜೆ ಮತ್ತು ಮನೋಹರ ನೋಟದಿಂದ ಕೂಡಿದ ಮಂದಗಾಮಿ.

೭. ತುಲಾರಾಶಿಯಲ್ಲಿ ಹುಟ್ಟಿದವನು ಧನಿಕ ಪರಿಶುದ್ಧ ಕ್ರಯವಿಕ್ರಯಗಳಲ್ಲಿ (ವ್ಯಾಪಾರದಲ್ಲಿ) ಕುಶಲ ಬುದ್ಧಿವಂತ ರೋಗಿಷ್ಠ ಸ್ತ್ರೀವಶವರ್ತಿಯಾಗುತ್ತಾನೆ ಅಂಗಹೀನ ಅಲೆದಾಡುತ್ತಾನೆ ಸದ್ಬ್ರಾಹ್ಮಣರು ಸತ್ಪುರುಷರು ಮತ್ತು ದೇವತೆಗಳನ್ನು ಪೂಜಿಸುತ್ತಾನೆ ಎತ್ತರವಾದ ಚಲಿಸುವ ಕೃಶಶರೀರ ಮತ್ತು ಉಬ್ಬಿರುವ ಮೂಗಿನಿಂದ ಕೂಡಿರುತ್ತಾನೆ ಬಂಧುವರ್ಗಕ್ಕೆ ಉಪಕಾರಿ ಮತ್ತು ಸೇವೆಮಾಡುತ್ತಾನೆ.

---

[1] ದೇ (ಕ) [2] ಬಾಹುದ್ವಯಾ (ಕ ಗ) [3] ರೋಮಂ (ಕ ಗ) [4] ಸುಖ ಕ್ರೈಕ್ಯಕ್ಕೆ (ಕ) ಸುಖ ಕ್ರೈಕರಕ್ಕೆ (ಗ) [5] ರಾ (ಕ ಗ) [6] ವರ್ಜಿತ ಕಾರ್ಯವಾದಿ (ಕ) ವರ್ಜಿತನಂಗಹೀನ ಕಾರ್ಯವಾದಿ (ಗ).

(ವೃಶ್ಚಿಕರಾಶಿಸ್ಥಿತ ಚಂದ್ರಫಲ)

ಪಿತೃ ಗುರು ವಿಪ್ರಯೋಗ [1]ವಿಯು[1]ತಸ್ಥಿತಿ ಶೈಶವಕಾಲರೋಗಪೀ
ಡಿತತನು ಗುಪ್ತಪಾಪಿ ಝಷ [2][ವಜ್ರ][2]ಖಗಾಂಕಿತಪಾಣಿ ಪಿಂಗಳ
ದ್ಯುತಿ ಪೃಥುಳಾನನಂ ಬೃಹ[3]ದುರ[3]ಸ್ಸ್ಥೂಳ ವೃತ್ತತರೋರು ಜಂಘನು
ಗ್ರತಮನಿಳಾಧಿಪಪ್ರಣುತನೆಂಬುದು ವೃಶ್ಚಿಕಗೇಹಜಾತಕಂ ೮

(ಧನೂರಾಶಿಸ್ಥಿತ ಚಂದ್ರಫಲ)

ಬ[4]ಸ[4]ವಾಯುಂ ಕವಿ ವಾಗ್ಮಿ ದೀರ್ಘಮುಖಕಂಠಂ ಧಾರ್ಮಿಕಂ ತ್ಯಾಗಿ ವೀ
ರ್ಯಸಮೇತಂ ಬಹುಶಿಲ್ಪಿ ಪೀನಭುಜದಂತಂ ಬಂಧುವರ್ಗಾಹಿತಂ
ಬ[4]ಸ[4]ಮೂಗಂ ಪಿತೃವಿತ್ತಭೋಗಿ ಕುನಖಂ ಮೆಲ್ಪಿಂದೆ ಬಲ್ಪಿಂದೆ ಸಾ
ಧಿಸೆ ಸಾಧ್ಯಂ ನಿಪುಣಂ ಮಹೋದ್ಯಮಿ [5]ನಿಗೂ[5]ಢಾಂಸಂ ಧನುರ್ಗೇಹಜಂ ೯

---

೮. ವೃಶ್ಚಿಕರಾಶಿಯಲ್ಲಿ ಹುಟ್ಟಿದವನು ತಂದೆ ಗುರು ವಿಪ್ರರನ್ನು ಬಿಟ್ಟಿರುತ್ತಾನೆ ಶೈಶವಾವಸ್ಥೆಯಲ್ಲಿ ವ್ಯಾಧಿಪೀಡಿತನಾಗುತ್ತಾನೆ ಪ್ರಚ್ಛನ್ನಪಾಪಿ ಆತನ ಕೈಯಲ್ಲಿ ಮತ್ಸ್ಯ ವಜ್ರ ಪಕ್ಷಿ ರೇಖೆಗಳಿರುತ್ತವೆ ಕಂದುಬಣ್ಣ ಅಗಲವಾದ ಮುಖ ವಿಸ್ತಾರವಾದ ಎದೆ ದುಂಡಗಿರುವ ತೊಡೆ ಮತ್ತು ಕಣಕಾಲುಗಳಿಂದ ಕೂಡಿರುತ್ತಾನೆ ಕ್ರೂರಿ ಮತ್ತು ರಾಜಪೂಜ್ಯನಾಗುತ್ತಾನೆ.

ವಿ—ಬೃಹಜ್ಜಾತಕದಲ್ಲಿ 'ಪೃಥುಲನಯನ ವಕ್ಷಾ' ಎಂದಿರುವುದರಿಂದ ಈ ಪದ್ಯದಲ್ಲಿ 'ಪೃಥುಳಾನನಂ' ಎಂದಿರುವುದನ್ನು 'ಪೃಥುಳೇಕ್ಷಣಂ' ಎಂದು ವ್ಯತ್ಯಾಸಮಾಡಬಹುದು.

೯. ಧನುರ್ಧರರಾಶಿಯಲ್ಲಿ ಹುಟ್ಟಿದವನು ದಪ್ಪತುಟಿಯುಳ್ಳವ ಕವಿ ವಾಚಾಳಿ ನೀಳವಾದ ಮುಖ ಮತ್ತು ಕುತ್ತಿಗೆಯುಳ್ಳವ ಧರ್ಮಶೀಲ ಧಾರಾಳಿ ಶೂರ ಶಿಲ್ಪಶಾಸ್ತ್ರಜ್ಞ ಸ್ಥೂಲವಾದ ಭುಜ ಮತ್ತು ಹಲ್ಲುಗಳುಳ್ಳವ ಬಂಧುದ್ವೇಷಿ ದಪ್ಪಮೂಗುಳ್ಳವ ಪಿತ್ರಾರ್ಜಿತ ಹಣವನ್ನು ಅನುಭವಿಸುತ್ತಾನೆ ವಕ್ರವಾದ [illegible]ರುಗಳುಳ್ಳವ ನಯ ಮತ್ತು [illegible] [illegible]ನಾಗುತ್ತಾನೆ [illegible] ಉದ್ಯೋಗಶೀಲ ಮತ್ತು ಗುರುತಾದ ಹೆಗಲಿನಿಂದ ಕೂಡಿರುತ್ತಾನೆ.

---

[1] ವಿಮು (ಕ ಗ) [2] ಚಕ್ರ (ಕ ಗ) [3] [illegible] (ಗ) [4] [illegible] (ಗ) [5] [illegible]

(ಮಕರರಾಶಿಸ್ಥಿತ ಚಂದ್ರಫಲ)

ವನಿತಾ ಪುತ್ರರತಂ ವಿಲಜ್ಜನಲಸಂ ಧರ್ಮಧ್ವಜಂ ಶೀತಭೀ
ತನಧೋಭಾಗಕೃಶಂ ವಿಹೀನಕಟಿ ವಿಸ್ಪಷ್ಟೇಂದ್ರಿಯಂ ಲೋಭಿ ಸ
ಜ್ಜನಮಾನ್ಯಂ ಸುಭಗಂ ಮಹಾಕವಿ [1]ತೋಟಲ್ವಂ[1] ನಿರ್ದಯಂ ಮಾತುಗೇ
ಳ್ವನು[2]ಮರ್ಲ್ವಾಂ[2]ಗನೆ ವೃದ್ಧೆಯಿಂ[3]ಬಿವರೊಳೋತಿ[3]ರ್ಪಂ ಮೃಗಪ್ರೋದ್ಭವಂ ೧೦

(ಕುಂಭರಾಶಿಸ್ಥಿತ ಚಂದ್ರಫಲ)

ತೊಡೆ ಬೆನ್ ಕಾಲ್ ಕಟಿ ವಕ್ತ್ರಮೆಂಬಿವಿನಿತುಂ ದೊಡ್ಡಂಗಳಕ್ಕುಂ ಧನಂ
ಕಿಡುಗುಂ ಪೊರ್ದುಗುಮೊಂದುಗುಂ [4]ಕೆಳೆ ಸುಗಂಧ[4] ಸ್ರಗ್ವಿರೇಪಾರ್ಥಿಯೊಳ್
ನಿಡಿಯಂ ಕರ್ಕಶ[5]ರೋಮ[5]ನಧ್ವಸಹನನ್ಯಸ್ತ್ರೀ ಧನಾಂಹೋರತಂ
ನಿಡುಗೋಣಂ ಶಠನಂಗನಿರ್ಗತ[6]ಶಿರಾ[6]ಜಾಲಂ ಘಟಪ್ರೋದ್ಭವಂ ೧೧

---

೧೦. ಮಕರ ರಾಶಿಯಲ್ಲಿ ಹುಟ್ಟಿದವನು ತನ್ನ ಹೆಂಡತಿ ಮತ್ತು ಮಕ್ಕಳ ಲಾಲನೆಯಲ್ಲಿ ನಿರತನಾಗುತ್ತಾನೆ ನಾಚಿಕೆಗೇಡಿ ಸೋಮಾರಿ ಧರ್ಮಮಾಡುತ್ತೇನೆಂದು ಸುಳ್ಳುಹೇಳಿ ಧನಾರ್ಜನೆಮಾಡುತ್ತಾನೆ (ಸೋಗಿನ ಸಂನ್ಯಾಸಿ) ಶೀತಭೀರು (ಶೀತಾಲು) ಕೃಶವಾದ ತೊಡೆ ಕಾಲುಗಳು ನಡು ಮತ್ತು ಸ್ಫುಟವಾದ ಕಣ್ಣುಗಳನ್ನು ಹೊಂದಿರುತ್ತಾನೆ ಜಿಪುಣ ಸತ್ಪುರುಷರಿಂದ ಮನ್ನಣೆ ಪಡೆಯುತ್ತಾನೆ ಅದೃಷ್ಟವಂತ ಮಹಾಕವಿ ಹೆಚ್ಚಾಗಿ ಸುತ್ತುತ್ತಾನೆ ನಿಷ್ಕರುಣಿ ಮಾತುಕೇಳುತ್ತಾನೆ (ಉಕ್ತಗ್ರಾಹಕ–ಹೇಳಿದ ಕೂಡಲೇ ಗ್ರಹಿಸುತ್ತಾನೆ) ಕೀಳ್ಮಟ್ಟದ ಹೆಂಗುಸು ಮತ್ತು ಮುದುಕಿ ಇವರಲ್ಲಿ ಅನುರಕ್ತನಾಗುತ್ತಾನೆ.

೧೧. ಕುಂಭ ರಾಶಿಯಲ್ಲಿ ಹುಟ್ಟಿದವನಿಗೆ ತೊಡೆ ಬೆನ್ನು ಕಾಲು ಸೊಂಟ ಮುಖ ಇವು ದೊಡ್ಡದಾಗಿರುತ್ತವೆ. ಆತನಲ್ಲಿರುವ ಧನವು ಕ್ಷಯಿಸುತ್ತದೆ ಮತ್ತೆ ಅಭಿವೃದ್ಧಿಯಾಗುತ್ತದೆ. ಆತನು ಸ್ನೇಹ ಮತ್ತು ಸ್ರಕ್ ಚಂದನಾದಿಗಳನ್ನು ಅಪೇಕ್ಷಿಸುತ್ತಾನೆ. ಎತ್ತರವಾದ ಆಕಾರ ಮತ್ತು ಒರಟಾದ ಕೂದಲುಗಳಿಂದ ಕೂಡಿರುತ್ತಾನೆ. ಮಾರ್ಗಾಯಾಸವನ್ನು ಸಹಿಸುತ್ತಾನೆ. ಪರಸ್ತ್ರೀ ಪರ ಧನ ಮತ್ತು ಪಾಪಕಾರ್ಯಗಳಲ್ಲಿ ಆಸಕ್ತನಾಗುತ್ತಾನೆ. ಒಂಟೆಯಂತೆ ದೀರ್ಘ ಕಂಠನೂ ಮೂರ್ಖನೂ ಎದ್ದ ರಕ್ತನಾಳಗಳುಳ್ಳವನೂ (ಶಿರಾಲುವೂ) ಆಗುತ್ತಾನೆ.

---

1 ಕಲ್ಪ ಕುಜಂ (ಗ) 2 ವಲ್ಲಿಂ (ಕ ಗ) 3 ವಿವರಾಳು ತಿ (ಕ) ಬವರೊಳೊತ್ತಿ (ಗ)
4 ಳಸುಗಂಧಿ (ಕ ಗ) 5 ಸೌಮ್ಯ (ಕ ಗ) 6 ಶಿರೋ (ಕ ಗ).

(ಮೀನರಾಶಿಸ್ಥಿತ ಚಂದ್ರಫಲ)

ಜಲದೊಳ್ ಪುಟ್ಟಿದ ವಸ್ತುವಿಂ ಪೆಱರ ಪೊನ್ನಿಂ ಭೋಗಿ ಸಾಪತ್ನರಂ
ಗೆಲಲಾರ್ಪಂ ಸಮಸುಂದರಾಂಗನಬಲಾ[1]ವಸ್ತ್ರ[1]ಪ್ರಿಯಂ ಪಂಡಿತಂ
ಲಲ[2]ನಾವಶ್ಯ ಸುದೃಷ್ಟಿ[2]ಪೀನಶಿರನುಚ್ಚಪ್ರಾಣನುದ್ವೃತ್ತಧಾ
ನಿಲಯಂ ವಿತ್ತ ನಿಧಾನ[3]ಭೋ[3]ಗಿಯೆನಿಕುಂ ಮೀನಾಲಯಪ್ರೋದ್ಭವಂ ೧೨

(ರಾಶಿಫಲ ತಾರತಮ್ಯ)

ನಿಳಯಂ ತನ್ನಿಳಯೇಶನಿಂ[4]ದುವಿನಿತುಂ[4] ವೀರ್ಯಾಢ್ಯಮಾದಂದು ತ
ತ್ಫಲಮೆಲ್ಲಂ ದೊರೆಕೊಳ್ಗುಮೊಂದೆರಡು ಮೇಣ್ ವೀರ್ಯಾಢ್ಯ[5]ಮಾ[5]ಗಿರ್ದೊಡಾ
ಫಲದೊಳ್ ಕುಂದನುಪಾತದಿಂ ಸಮನಿಕುಂ ಪದ್ಮಪ್ರಿಯಾದಿ ಗ್ರಹಾ
ವಳಿಗಂ ಪೇ[6]ಳ್ವ[6] ಫಲಂಗಳಾ[7]ಪ[7]ತೇಜದಿಂ ವೀರ್ಯಾಢ್ಯದಿಂ ಕೂಡುಗುಂ ೧೩

---

೧೨. ಮೀನರಾಶಿಯಲ್ಲಿ ಹುಟ್ಟಿದವನು ಮುತ್ತು ಮೊದಲಾದ ಜಲದಲ್ಲಿ ಉತ್ಪನ್ನವಾದ ವಸ್ತುಗಳಿಂದ ಮತ್ತು ಅನ್ಯರ ಹಣದಿಂದ ಸುಖಪಡುತ್ತಾನೆ ಶತ್ರುಗಳನ್ನು ಗೆಲ್ಲಲು ಸಮರ್ಥ. ಸಮ ಸುಂದರಾಂಗ, ಸ್ತ್ರೀಯರು ಮತ್ತು ವಸ್ತ್ರಗಳನ್ನು ಪ್ರೀತಿಸುತ್ತಾನೆ ವಿದ್ವಾಂಸ, ಸ್ತ್ರೀಯರಿಗೆ ವಶವಾಗುತ್ತಾನೆ ಸುಂದರವಾದ ಕಣ್ಣುಗಳು ದಪ್ಪತಲೆ ಮತ್ತು ಎತ್ತರವಾದ (ಮುಂದಕ್ಕೆ ಚಾಚಿರುವ) ಮೂಗು ಇವುಗಳಿಂದ ಕೂಡಿರುತ್ತಾನೆ ಹೊರಹೊಮ್ಮುವ ಕಾಂತಿಗೆ ಆಗರನೂ ಧನ ಮತ್ತು ನಿಕ್ಷೇಪಗಳನ್ನು ಅನುಭವಿಸುವವನೂ ಆಗುತ್ತಾನೆ.

೧೩. ಜನನಕಾಲದಲ್ಲಿ ಚಂದ್ರನಿರುವ ರಾಶಿ ಅದರ ಅಧಿಪತಿ ಮತ್ತು ಚಂದ್ರ ಈ ಮೂರೂ ಬಲದಿಂದ ಕೂಡಿದ್ದಾಗ ಹಿಂದೆ ಹೇಳಿರುವ ಎಲ್ಲ ಫಲಗಳೂ ಉಂಟಾಗುತ್ತವೆ. ಒಂದು ಅಥವಾ ಎರಡು ಬಲಿಷ್ಠವಾಗಿದ್ದರೆ ಆ ಫಲದಲ್ಲಿ ಅನುಪಾತದಿಂದ ಬರುವಷ್ಟು ಕಡಿಮೆಯಾಗುತ್ತವೆ. ಸೂರ್ಯನೇ ಮೊದಲಾದ ಇತರಗ್ರಹಗಳಿಗೂ ಮುಂದೆ ಹೇಳುವ ಫಲಗಳು ಬಲಿಷ್ಠರಾದ ಆ ಗ್ರಹಗಳಿಂದ ಸಾಧ್ಯವಾದಷ್ಟು ಉಂಟಾಗುತ್ತವೆ.

ವಿ–ಜನನಕಾಲದಲ್ಲಿ ಗ್ರಹವಿರುವ ರಾಶಿ ಆ ರಾಶ್ಯಧಿಪತಿ ರಾಶಿಯಲ್ಲಿರುವ ಗ್ರಹ ಈ ಮೂರೂ ಬಲಿಷ್ಠವಾಗಿದ್ದರೆ ಗ್ರಹವಿರುವ ರಾಶಿಯ ಫಲಗಳು ಜಾತಕನಿಗೆ ಪೂರ್ಣವಾಗಿ ಉಂಟಾಗುತ್ತವೆ. ಎರಡು ಬಲಯುಕ್ತವಾಗಿದ್ದರೆ ಹೇಳಿರುವ ಫಲ ಮಧ್ಯಮ; ಒಂದು ಮಾತ್ರ ಬಲಿಷ್ಠವಾಗಿದ್ದರೆ ಫಲ ಅಲ್ಪ; ಮೂರೂ ದುರ್ಬಲವಾದರೆ ರಾಶಿಫಲಗಳಲ್ಲಿ ಯಾವುದೂ ಇರುವುದಿಲ್ಲ.

---

[1] ವಸ್ತ್ರ (ಕ ಗ) [2] [illegible] (ಲ) [illegible] [3] [illegible]
[4] [illegible] (ಕ ಗ) [5] [illegible] (ಕ ಗ) [6] [illegible] (ಕ ಗ) [7] [illegible]

(ಮೇಷ ವೃಷಭರಾಶಿ ಸ್ಥಿತ ಸೂರ್ಯಫಲ)

ಚದುರಂ ಸ್ವಲ್ಪಧನಂ ಪ್ರಸಿದ್ಧನ[1]ಟನಂ[1] ಶಸ್ತ್ರಕ್ರಿಯಾವೇದಿ ಮೇ
ಷದೊಳರ್ಕಂ ನಿಲೆ ಧನ್ಯನಲ್ಲಿ ಪರಮೋಚ್ಚಸ್ಥಾನದೊಳ್ ನಿಂದೊಡು
ಕ್ಷದೊಳಿರ್ದಂದು ಸುಗಂಧ ವ[2]ಸ್ತ್ರ[2]ಚಯದಿಂದಂ ಜೀವನೋಪಾಯಿ ಗೀ
ತದೊಳಂ ವಾದ್ಯದೊಳಂ ಕರಂ ಪರಿಣತಂ ಸ್ತ್ರೀಶತ್ರುವಕ್ಕುಂ ನರಂ ೧೪

(ಮಿಥುನ ಕರ್ಕಟಕ ಸಿಂಹರಾಶಿ ಸ್ಥಿತ ಸೂರ್ಯಫಲ)

ದಿನನಾಥಂ ಮಿಥುನರ್ಕ್ಷದೊಳ್ ನೆಲಸೆ ವಿದ್ಯಾಪಾರಗಂ ಜ್ಞಾನಿ ಧ
ನ್ಯನೆನಿಕ್ಕುಂ ನಿಲೆ ಕರ್ಕಿಯೊಳ್ ಪರಜನಪ್ರೇಷ್ಯಂ ಖಳಂ ದ್ರವ್ಯಹೀ
ನನತಿಕ್ಲೇಶಪ[3]ಥ[3]ಶ್ರಮಾಕುಲನೆನಿಕ್ಕುಂ ಸಿಂಹದೊಳ್* ಕೂಡೆ ಗೋ
[4]ವನ[4]ಶೈಲಾಗ್ರ[5]ರತಂ[5] ಪ್ರಭಾವನತಿಮೇಧಾಯುಕ್ತನಕ್ಕುಂ ನರಂ* ೧೫

---

೧೪. ಸೂರ್ಯನು ಮೇಷರಾಶಿಯಲ್ಲಿರುವಾಗ ಹುಟ್ಟಿದವನು ಜಾಣ ಸ್ವಲ್ಪ ಹಣವುಳ್ಳವ ಪ್ರಖ್ಯಾತ ಹೆಚ್ಚು ಸಂಚರಿಸುತ್ತಾನೆ ಶಸ್ತ್ರಗಳ ಪ್ರಯೋಗ ವನ್ನು ತಿಳಿದಿರುತ್ತಾನೆ; ಪರಮೋಚ್ಚ ಭಾಗ (ಮೇಷರಾಶಿಯಲ್ಲಿ ೧೦ನೇ ಅಂಶ) ದಲ್ಲಿದ್ದರೆ ಭಾಗ್ಯವಂತನಾಗುತ್ತಾನೆ; ವೃಷಭರಾಶಿಯಲ್ಲಿದ್ದರೆ ಸುಗಂಧದ್ರವ್ಯಗಳು ಮತ್ತು ವಸ್ತ್ರಗಳ ವ್ಯಾಪಾರದಿಂದ ಜೀವಿಸುತ್ತಾನೆ; ಸಂಗೀತದಲ್ಲೂ ವಾದ್ಯದಲ್ಲೂ ನಿಷ್ಣಾತ ಮತ್ತು ಸ್ತ್ರೀದ್ವೇಷಿ.

ವಿ—ಸೂರ್ಯನಿಗೆ ಮೇಷವು ಉಚ್ಚರಾಶಿ ಮತ್ತು ಮಿತ್ರಕ್ಷೇತ್ರ; ಆದುದರಿಂದ ಈ ರಾಶಿಯಲ್ಲಿ ಸಂಚರಿಸುವಾಗ ಆತನು ಶುಭಫಲಗಳನ್ನೇ ಅಧಿಕ ವಾಗಿ ಕೊಡುತ್ತಾನೆ. ಸೂರ್ಯನು ಒಂದೊಂದು ರಾಶಿಯಲ್ಲೂ ಒಂದೊಂದು ತಿಂಗಳ ಕಾಲ ಸಂಚರಿಸುತ್ತಾನೆ. ಮೇಷ ವೃಷಭ ಮೊದಲಾದ ರಾಶಿಗಳಲ್ಲಿ ಸೂರ್ಯನಿರುವಾಗ ಹೇಳಿರುವ ಫಲಗಳು ಆಯಾ ರಾಶಿಯ ಹೆಸರಿನ ಮಾಸದಲ್ಲಿ ಹುಟ್ಟಿದವರಿಗೆಲ್ಲ ಸಂಭವಿಸುತ್ತವೆ. ಆ ಫಲಗಳು ಆತನ ದಶಾಭುಕ್ತಿ ಕಾಲಗಳಲ್ಲಿ ಫಲಿಸುತ್ತವೆ.

೧೫. ಸೂರ್ಯನು ಮಿಥುನರಾಶಿಯಲ್ಲಿರುವಾಗ ಹುಟ್ಟಿದವನು ವಿದ್ವಾಂಸ ಜ್ಞಾನಿ (ಜ್ಯೋತಿಶ್ಶಾಸ್ತ್ರವನ್ನು ಬಲ್ಲವ) ಮತ್ತು ಭಾಗ್ಯಶಾಲಿಯಾಗುತ್ತಾನೆ; ಕರ್ಕಟಕ ರಾಶಿಯಲ್ಲಿದ್ದರೆ ಪರಜನಸೇವಕನೂ ಕ್ರೂರಿಯೂ ದರಿದ್ರನೂ ದುಃಖಿಯೂ ಯಾವಾಗಲೂ ದಾರಿನಡೆಯುವ ಶ್ರಮದಿಂದ ವ್ಯಾಕುಲಿತನೂ ಆಗುತ್ತಾನೆ; ಸಿಂಹ ರಾಶಿಯಲ್ಲಿದ್ದರೆ ಗೋವ್ರಜ ಕಾಡು ಮತ್ತು ಬೆಟ್ಟ ಈ ಪ್ರದೇಶಗಳಲ್ಲಿ ವಾಸಮಾಡಲು ಆಸಕ್ತಿಯುಳ್ಳವನೂ ಪ್ರತಾಪಶಾಲಿಯೂ ಮೇಧಾವಿಯೂ ಆಗುತ್ತಾನೆ.

---

[1] ದಟಂ (ಕ ಗ) [2]ಸ್ತ್ರ (ಕ) (ಗ) [3] ಥಂ (ಕ ಗ) [4] ಧನ (ಗ) [5] ತರಂ (ಗ) *ಈ ಭಾಗ (ಕ) ಪ್ರತಿಯಲ್ಲಿಲ್ಲ.

(ಕನ್ಯಾ ತುಲಾ ವೃಶ್ಚಿಕರಾಶಿಸ್ಥಿತ ಸೂರ್ಯಫಲ)

*ದಿವಸೇಂದ್ರಂ ಕನ್ನೆಯೊಳ್* ಕೂಡಿರೆ ಲಿಪಿ ಗಣಿತಾಲೇಖ್ಯ ಕಾವ್ಯಪ್ರವೀಣಂ
ಯುವತೀರೂಪೋಪಮಂ ತೊಳೆಯೊಳಿರೆ ಗಮನಾ[1]ಸಕ್ತ[1]ಚಿತ್ತಂ ಸುವರ್ಣ
ವ್ಯವಹಾರಂ [2]ಮ[2]ದ್ಯಕಾರಂ ಖಳಕೃ[3]ತಿ[3]ನಿರತಂ ವೃಶ್ಚಿಕಕ್ಷೇತ್ರದೊಳ್ ಕೂ
ಡೆ ವಿಷಾರ್ಥಾರ್ಜೀವನಂ ಸಾಹಸಿಗನಖಿಳಶಾಸ್ತ್ರಜ್ಞನ[4]ತ್ಯು[4]ಗ್ರನಕ್ಕುಂ ೧೬

---

ವಿ–ಬೃಹಜ್ಜಾತಕದಲ್ಲಿ 'ಸಿಂಹಸ್ಥೇ ವನಶೈಲಗೋಕುಲರತಿಃ ವೀರ್ಯಾನ್ವಿತೋ ಜ್ಞಃ ಪುಮಾನ್' ಎಂದಿದೆ. ಇಲ್ಲಿ ಭಟ್ಟೋತ್ಪಲರು 'ಅಜ್ಞಃ' ಎಂದು ಪದವಿಭಾಗ ಮಾಡಿ 'ಅಜ್ಞಃ–ಮೂರ್ಖಃ' ಎಂದು ಅರ್ಥವನ್ನು ಬರೆದಿರುತ್ತಾರೆ. ಇದರಂತೆ ಸಿಂಹರಾಶಿಯಲ್ಲಿ ಸೂರ್ಯನಿದ್ದರೆ ಜಾತಕನು 'ಮೂರ್ಖನಾಗುತ್ತಾನೆ' ಎಂದು ಅರ್ಥವಾಗುತ್ತದೆ. ಆದರೆ ಸಿಂಹರಾಶಿಯು ಸೂರ್ಯನಿಗೆ ಸ್ವಕ್ಷೇತ್ರ ಮತ್ತು ಮೂಲತ್ರಿಕೋಣವಾಗಿರುವುದರಿಂದ ಈ ಫಲವು ಸರಿಯಲ್ಲ. ಆದುದರಿಂದ 'ಜ್ಞಃ' ಎಂದೇ ಪದವಿಭಾಗ ಮಾಡುವುದು ಸರಿಯಾಗಿದೆ. ಇದನ್ನನುಸರಿಸಿಯೇ ಶ್ರೀಧರನು 'ಅತಿಮೇಧಾಯುಕ್ತಂ' ಎಂದು ಫಲವನ್ನು ಹೇಳಿರುತ್ತಾನೆ.

೧೬. ಜನನಕಾಲದಲ್ಲಿ ಸೂರ್ಯನು ಕನ್ಯಾರಾಶಿಯಲ್ಲಿದ್ದರೆ ಜಾತಕನು ಅಕ್ಷರವಿನ್ಯಾಸ ಗಣಿತಮಾಡುವುದು ಚಿತ್ರಬರೆಯುವುದು ಮತ್ತು ಕಾವ್ಯರಚನೆ ಇವುಗಳಲ್ಲಿ ಪ್ರವೀಣನೂ ಯುವತಿಯರಿಗೆ ಸದೃಶವಾದ ರೂಪವುಳ್ಳವನೂ ಆಗುತ್ತಾನೆ; ತುಲಾರಾಶಿಯಲ್ಲಿದ್ದರೆ ದಾರಿನಡೆಯುವುದರಲ್ಲಿ ಹೆಚ್ಚು ಆಸಕ್ತಿಯುಳ್ಳವನೂ ಚಿನ್ನದ ವ್ಯಾಪಾರಮಾಡುವವನೂ ಮದ್ಯವನ್ನು ತಯಾರಿಸುವವನೂ ಕೆಟ್ಟಕೆಲಸಗಳಲ್ಲಿ ಆಸಕ್ತನೂ ಆಗುತ್ತಾನೆ; ವೃಶ್ಚಿಕ ರಾಶಿಯಲ್ಲಿದ್ದರೆ ವಿಷಪ್ರಯೋಗದಿಂದ ಹಣಸಂಪಾದಿಸಿ ಜೀವಿಸುವವನೂ ಯುಕ್ತಾಯುಕ್ತ ವಿವೇಚನೆಯಿಲ್ಲದೆ ಕೆಲಸಮಾಡುವವನೂ ಎಲ್ಲ ಶಾಸ್ತ್ರಗಳನ್ನು ತಿಳಿದವನೂ ಅತಿಕ್ರೂರಿಯೂ ಆಗುತ್ತಾನೆ.

ವಿ–ವೃಶ್ಚಿಕವು ಅಂಗಾರಕನ ರಾಶಿ; ಸೂರ್ಯನು ಈ ರಾಶಿಯಲ್ಲಿರುವಾಗ ಹುಟ್ಟಿದವನು 'ಅಖಿಳಶಾಸ್ತ್ರಜ್ಞ'ನಾಗುತ್ತಾನೆ ಎಂದು ಪದ್ಯದಲ್ಲಿರುವುದನ್ನು 'ಅಖಿಳ ಶಸ್ತ್ರಜ್ಞ' ಎಂದು ವ್ಯಾಖ್ಯಾನ ಮಾಡುವುದರಿಂದ '[illegible]' ಎಂದು ವರಾಹಮಿಹಿರರು ಹೇಳಿರುವ ಫಲಕ್ಕೆ ಸರಿಯಾಗುತ್ತದೆ. ಸೂರ್ಯನು ಅಂಗಾರಕನ ರಾಶಿಯಾದ ಮೇಷದಲ್ಲಿರುವಾಗ '[illegible]' ಎಂದು ಹೇಳಿರುವಂತೆ ವೃಶ್ಚಿಕರಾಶಿಯಲ್ಲಿರುವಾಗಲೂ '[illegible]' ಎಂದು ಹೇಳುವುದೇ ಸರಿಯಾದ ಫಲವು.

---

[1] ಶಕ್ತ (ಆ) ಶಸ್ತ (ಗ) [2] [illegible] (ಆ ಗ) [3] [illegible] [4] [illegible]
* ಈ ಭಾಗ (ಆ) ಪ್ರತಿಯಲ್ಲಿಲ್ಲ.

(ಧನುಸ್ಸು ಮಕರ ಕುಂಭ ಮೀನ ರಾಶಿಸ್ಥಿತ ಸೂರ್ಯಫಲ)

ರವಿ ಚಾಪಕ್ಷೇತ್ರದೊಳ್ ನಿಂದೊಡೆ [1]ಧ[1]ನಪತಿ [2]ಸ[2]ತ್ಪೂಜಿತಂ ದಾರುಣಂ ವೈ
ದ್ಯವಿದಂ [3]ತಕ್ಷೋ[3]ಪಜೀವ್ಯಂ ಮಕರದೊಳಿರೆ ಮೂರ್ಖಂ ಖಳಂ ಲೋಭಿ ನೀಚ
ವ್ಯವಹಾರಂ ಸ್ವಲ್ಪವಿತ್ತಂ ಪರವಿಧವಯುತಂ ಕುಂಭದೊಳ್ ಕೂಡೆ [4]ದೇಹೋ[4]
ದ್ಭವ[5]ಭಾಗ್ಯೋತ್ಸೃಷ್ಟನಸ್ವಂ[5] ಝುಷದೊಳಿರೆ ವಧೂಪ್ರೀತನ[6]ಬ್ದ್ರವ್ಯ ಪಣ್ಯಂ[6] ೧೭

(ಮೇಷ ವೃಷಭ ತುಲಾ ವೃಶ್ಚಿಕ ರಾಶಿಸ್ಥಿತ ಕುಜಫಲ)

ಕನಕಂ ವೃಶ್ಚಿಕ ಮೇಷದೊಳ್ ನಿಲೆ ಚಮೂನಾಥಂ ಸುಕರ್ಮಾಟನಂ
ಧನಿ ಭೂಪಂ ವ್ಯಸನಾಧಿಕಂ ಪರದುಗೆಯ್ವಂ ತಸ್ಕರಂ ಕ್ಷೀಣ[7]ದೇ[7]
ಹನೆನಿಕ್ಕುಂ ವೃಷ ತೌಲಿಯೊಳ್ ನಿಲೆ ಸು[8]ವೇಷಂ[8] ಸ್ತ್ರೀಜಿತಂ ಮಿತ್ರವಂ
ಚನಶೀಲಂ ಕುಹಕಪ್ರಿಯಂ ಪರುಷವಾಕ್ಯಂ ಪಂದೆ ಪಾಣ್ಬಂ ನರಂ ೧೮

---

೧೭. ಜನನಕಾಲದಲ್ಲಿ ಸೂರ್ಯ ಧನುಸ್ಸಿನಲ್ಲಿದ್ದರೆ ಜಾತಕನು ಧನಿಕನೂ ಸತ್ಪೂಜ್ಯನೂ ಕ್ರೂರಿಯೂ ಚಿಕಿತ್ಸಕನೂ ಮರಗೆಲಸ ಮಾಡಿ ಜೀವಿಸುವವನೂ ಆಗುತ್ತಾನೆ; ಮಕರದಲ್ಲಿದ್ದರೆ ಮೂರ್ಖನೂ ದುಷ್ಟನೂ ಜಿಪುಣನೂ ಹೀನ ಕೆಲಸಗಳನ್ನು ಮಾಡುವವನೂ ಸ್ವಲ್ಪಹಣವಿರುವವನೂ ಪರದ್ರವ್ಯಯುತನೂ ಆಗುತ್ತಾನೆ; ಕುಂಭದಲ್ಲಿದ್ದರೆ ಮಕ್ಕಳಿಂದ ಮತ್ತು ಭಾಗ್ಯದಿಂದ ತ್ಯಕ್ತನೂ ದರಿದ್ರನೂ ಆಗುತ್ತಾನೆ; ಮೀನದಲ್ಲಿದ್ದರೆ ಅಂಗನಾಪ್ರೀತನೂ ಮುತ್ತು ಮೊದಲಾದ ಜಲದ್ರವ್ಯವ್ಯಾಪಾರಿಯೂ ಆಗುತ್ತಾನೆ.

ವಿ–ಜನನಕಾಲದಲ್ಲಿ ಸೂರ್ಯ ಚಂದ್ರರಿಬ್ಬರೂ ಒಟ್ಟಿಗೆ ಒಂದೇರಾಶಿಯಲ್ಲಿದ್ದರೆ ಆ ರಾಶಿಯು ಕಾಲಪುರುಷನ ಅಂಗವಿಭಾಗದಲ್ಲಿ ಯಾವ ಅವಯವವಾಗುತ್ತದೆಯೋ ಆ ಅವಯವದಲ್ಲಿ ಜಾತಕನಿಗೆ ಮಚ್ಚೆಯಿರುತ್ತದೆ ಎಂದು ಬೃಹಜ್ಜಾತಕದಲ್ಲಿದೆ.

೧೮. ಜನನಕಾಲದಲ್ಲಿ ಅಂಗಾರಕನು ವೃಶ್ಚಿಕ ಅಥವಾ ಮೇಷರಾಶಿಯಲ್ಲಿದ್ದರೆ ಜಾತಕನು ಸೇನಾನಾಯಕನೂ ಸತ್ಕಾರ್ಯಗಳನ್ನು ಮಾಡುವವನೂ ಸಂಚಾರಶೀಲನೂ ಧನಿಕನೂ ಭೂಪತಿಯೂ ಹೆಚ್ಚು ವಿಷಯಾಸಕ್ತನೂ ವ್ಯಾಪಾರಿಯೂ ಕಳ್ಳನೂ ಕ್ಷೀಣಶರೀರಿಯೂ ಆಗುತ್ತಾನೆ; ವೃಷಭ ಅಥವಾ ತುಲಾ ರಾಶಿಯಲ್ಲಿದ್ದರೆ ಒಳ್ಳೆಯ ಬಟ್ಟೆಗಳನ್ನು ಧರಿಸುವವನೂ ಸ್ತ್ರೀವಿಧೇಯನೂ ಸ್ನೇಹಿತರನ್ನು ಮೋಸಮಾಡುವ ಶೀಲವುಳ್ಳವನೂ ಕಪಟಿಯೂ ಕ್ರೂರವಾಗಿ ಮಾತಾಡುವವನೂ ಹೇಡಿಯೂ ಜಾರನೂ ಆಗುತ್ತಾನೆ.

ವಿ–ಗ್ರಹಗಳಿಗೆ ಒಂದೇರಾಶಿಯಲ್ಲಿ ಶುಭಾಶುಭಫಲಗಳೆರಡನ್ನೂ ಹೇಳಿದೆ. ಇದರಲ್ಲಿ ಅಸ್ತವಾಗದ ಶತ್ರುಗ್ರಹದೃಷ್ಟವಾಗದ ಬಲಿಷ್ಠವಾದ ಗ್ರಹದಿಂದ ಶುಭ

---

[1] ಜ (ಕ ಗ) [2] ತ (ಕ ಗ) [3] ಕಷ್ಟೋ (ಕ) ಕೋಷ್ಣೋ (ಗ) [4] ಧರ್ಮೋ (ಗ) [5] ಭಾಗ್ಯಂ ನಿಸ್ವನಾಗ್ರಂ (ಕ ಗ) [6] ದ್ರವ್ಯಪಣ್ಯಂ (ಕ ಗ) [7] ಗೇ (ಕ ಗ) [8] ಕೇಶಂ (ಕ ಗ).

(ಮಿಥುನ ಕರ್ಕಟಕ ಕನ್ಯಾ ರಾಶಿಸ್ಥಿತ ಕುಜಫಲ)

ನಿರೆ ಕುಜನಂಗನಾಮಿಥುನದೊಳ್ ರಣ ಗೀತವಿದಂ ಸು[1]ತಾ[1]ನ್ವಿತಂ
ಕಲಿಯಸಹಿಷ್ಣು ಮಿತ್ರರಹಿತಂ ಕೃಪಣಂ ಕೃತವೇದಿ ಯಾಚಕಂ
ನೆಲಸೆ ಕುಳೀರಮಂದಿರದೊಳರ್ಥಯುತಂ ವಿಕಲೇಕ್ಷಣಂ ಬುಧಂ
ಜಲನಿಧಿಯಾನಲಬ್ಧಧನನಕ್ಕುಮವಂ ಕವಿರಾಜಬಾಂಧವಾ ೧೯

(ಸಿಂಹ ಧನುಸ್ಸು ಕುಂಭ ಮೀನ ರಾಶಿಸ್ಥಿತ ಕುಜಫಲ)

ಇರೆ ಧಾತ್ರೀತನಯಂ ದಿನೇಶಗೃಹದೊಳ್ ಸ್ವಲ್ಪಾಂಗನಾಸೂನು ದು
ರ್ಗರತಂ ಕ್ಲೇಶಸಹಿಷ್ಣು ನಿಸ್ವನೆನಿಕುಂ ಚಾಪಾನಿಮೇಷಸ್ಥನಾ
ಗಿರೆ ವಿಖ್ಯಾತನ[2]ನೇಕ[2]ಶತ್ರು ಸಚಿವಂ ಸ್ವಲ್ಪಾತ್ಮಜಂ ಶೂರನೆಂ
ದಿರೆ ಕುಂಭೋದಯದೊಳ್ ತೊಲಲ್ವನ[3]ಥ[3]ನಂ ದುಃಖಾರ್ತನುಗ್ರಂ ಶ[4]ಠಂ[4] ೨೦

---

ಫಲವುಂಟಾಗುತ್ತದೆ. ಗ್ರಹಗಳ ಬಲಕ್ಕನುಗುಣವಾಗಿ ಉಳಿದ ಫಲಗಳು ಸಂಭವಿಸುತ್ತವೆ.

೧೯. ಜನನಕಾಲದಲ್ಲಿ ಕುಜನು ಕನ್ಯಾ ಅಥವಾ ಮಿಥುನರಾಶಿಯಲ್ಲಿದ್ದರೆ ಜಾತಕನು ಯುದ್ಧ ಮತ್ತು ಸಂಗೀತವನ್ನು ತಿಳಿದವನೂ (ಇವುಗಳಲ್ಲಿ ಕುಶಲನೂ) ಪುತ್ರವಂತನೂ ಪರಾಕ್ರಮಿಯೂ ಅನ್ಯರಿಗೆ ಸಹಿಸಲಾರದವನೂ (ತೇಜಸ್ವಿಯೂ) ಸ್ನೇಹಿತರಿಲ್ಲದವನೂ ಜಿಪುಣನೂ ಕೃತಜ್ಞನೂ ಯಾಚಕನೂ ಆಗುತ್ತಾನೆ. ಕರ್ಕಟಕರಾಶಿಯಲ್ಲಿದ್ದರೆ ಧನಿಕನೂ ಹೀನದೃಷ್ಟಿಯುಳ್ಳ ವಿದ್ವಾಂಸನೂ ಸಮುದ್ರಯಾನ ಮಾಡಿ ಹಣವನ್ನು ಸಂಪಾದಿಸುವವನೂ ಆಗುತ್ತಾನೆ.

೨೦. ಜನನಕಾಲದಲ್ಲಿ ಅಂಗಾರಕನು ಸಿಂಹರಾಶಿಯಲ್ಲಿದ್ದರೆ ಜಾತಕನು ಸ್ವಲ್ಪಪತ್ನೀಪುತ್ರವಂತನೂ ಅರಣ್ಯದಲ್ಲಿ ಆಸಕ್ತಿಯುಳ್ಳವನೂ ಕಷ್ಟಗಳನ್ನು ಸಹಿಸುವವನೂ ದರಿದ್ರನೂ ಆಗುತ್ತಾನೆ. ಧನುಸ್ಸು ಅಥವಾ ಮೀನರಾಶಿಯಲ್ಲಿದ್ದರೆ ಪ್ರಸಿದ್ಧಪುರುಷನೂ ಅನೇಕಮಂದಿ ಶತ್ರುಗಳುಳ್ಳವನೂ ಮಂತ್ರಿಯೂ ಅಲ್ಪ ಸಂತತಿಯುಳ್ಳವನೂ ಪರಾಕ್ರಮಿಯೂ ಆಗುತ್ತಾನೆ; ಕುಂಭರಾಶಿಯಲ್ಲಿದ್ದರೆ ಹೆಚ್ಚು ಅಲೆದಾಡುವವನೂ ದರಿದ್ರನೂ ದುಃಖಿತನೂ ಕ್ರೂರಿಯೂ ಮೋಸಗಾರನೂ ಆಗುತ್ತಾನೆ.

---

[1] ಜಾ (ಅ.ಗ) [2] ಜಾತ (ಅ.ಗ) [3] ವ (ಅ) [4] [illegible] (ಅ.ಗ)

(ಧನುಸ್ಸು ಮಕರ ಕುಂಭ ಮೀನ ರಾಶಿಸ್ಥಿತ ಸೂರ್ಯಫಲ)

ರವಿ ಚಾಪಕ್ಷೇತ್ರದೊಳ್ ನಿಂದೊಡೆ [1]ಧ[1]ನಪತಿ [2]ಸ[2]ತ್ಪೂಜಿತಂ ದಾರುಣಂ ವೈ
ದ್ಯವಿದಂ [3]ತಕ್ಷೋ[3]ಪಜೀವ್ಯಂ ಮಕರದೊಳಿರೆ ಮೂರ್ಖಂ ಖಳಂ ಲೋಭಿ ನೀಚ
ವ್ಯವಹಾರಂ ಸ್ವಲ್ಪವಿತ್ತಂ ಪರವಿಧವಯುತಂ ಕುಂಭದೊಳ್ ಕೂಡೆ [4]ದೇಹೋ[4]
ದ್ಭವ[5]ಭಾಗ್ಯೋತ್ಸೃಷ್ಟನಸ್ವಂ[5] ಝುಷದೊಳಿರೆ ವಧೂಪ್ರೀತನ[6]ಬ್ದ್ರವ್ಯ ಪಣ್ಯಂ[6] ೧೭

(ಮೇಷ ವೃಷಭ ತುಲಾ ವೃಶ್ಚಿಕ ರಾಶಿಸ್ಥಿತ ಕುಜಫಲ)

ಕನಕಂ ವೃಶ್ಚಿಕ ಮೇಷದೊಳ್ ನಿಲೆ ಚಮೂನಾಥಂ ಸುಕರ್ಮಾಟನಂ
ಧನಿ ಭೂಪಂ ವ್ಯಸನಾಧಿಕಂ ಪರದುಗೆಯ್ವಂ ತಸ್ಕರಂ ಕ್ಷೀಣ[7]ದೇ[7]
ಹನೆನಿಕ್ಕುಂ ವೃಷ ತೌಲಿಯೊಳ್ ನಿಲೆ ಸು[8]ವೇಷಂ[8] ಸ್ತ್ರೀಜಿತಂ ಮಿತ್ರವಂ
ಚನಶೀಲಂ ಕುಹಕಪ್ರಿಯಂ ಪರುಷವಾಕ್ಯಂ ಪಂದೆ ಪಾಣ್ಬಂ ನರಂ ೧೮

---

೧೭. ಜನನಕಾಲದಲ್ಲಿ ಸೂರ್ಯ ಧನುಸ್ಸಿನಲ್ಲಿದ್ದರೆ ಜಾತಕನು ಧನಿಕನೂ ಸತ್ಪೂಜ್ಯನೂ ಕ್ರೂರಿಯೂ ಚಿಕಿತ್ಸಕನೂ ಮರಗೆಲಸ ಮಾಡಿ ಜೀವಿಸುವವನೂ ಆಗುತ್ತಾನೆ; ಮಕರದಲ್ಲಿದ್ದರೆ ಮೂರ್ಖನೂ ದುಷ್ಟನೂ ಜಿಪುಣನೂ ಹೀನ ಕೆಲಸಗಳನ್ನು ಮಾಡುವವನೂ ಸ್ವಲ್ಪಹಣವಿರುವವನೂ ಪರದ್ರವ್ಯಯುತನೂ ಆಗುತ್ತಾನೆ; ಕುಂಭದಲ್ಲಿದ್ದರೆ ಮಕ್ಕಳಿಂದ ಮತ್ತು ಭಾಗ್ಯದಿಂದ ತ್ಯಕ್ತನೂ ದರಿದ್ರನೂ ಆಗುತ್ತಾನೆ; ಮೀನದಲ್ಲಿದ್ದರೆ ಅಂಗನಾಪ್ರೀತನೂ ಮುತ್ತು ಮೊದಲಾದ ಜಲದ್ರವ್ಯವ್ಯಾಪಾರಿಯೂ ಆಗುತ್ತಾನೆ.

ವಿ–ಜನನಕಾಲದಲ್ಲಿ ಸೂರ್ಯ ಚಂದ್ರರಿಬ್ಬರೂ ಒಟ್ಟಿಗೆ ಒಂದೇರಾಶಿಯಲ್ಲಿದ್ದರೆ ಆ ರಾಶಿಯು ಕಾಲಪುರುಷನ ಅಂಗವಿಭಾಗದಲ್ಲಿ ಯಾವ ಅವಯವವಾಗುತ್ತದೆಯೋ ಆ ಅವಯವದಲ್ಲಿ ಜಾತಕನಿಗೆ ಮಚ್ಚೆಯಿರುತ್ತದೆ ಎಂದು ಬೃಹಜ್ಜಾತಕದಲ್ಲಿದೆ.

೧೮. ಜನನಕಾಲದಲ್ಲಿ ಅಂಗಾರಕನು ವೃಶ್ಚಿಕ ಅಥವಾ ಮೇಷರಾಶಿಯಲ್ಲಿದ್ದರೆ ಜಾತಕನು ಸೇನಾನಾಯಕನೂ ಸತ್ಕಾರ್ಯಗಳನ್ನು ಮಾಡುವವನೂ ಸಂಚಾರಶೀಲನೂ ಧನಿಕನೂ ಭೂಪತಿಯೂ ಹೆಚ್ಚು ವಿಷಯಾಸಕ್ತನೂ ವ್ಯಾಪಾರಿಯೂ ಕಳ್ಳನೂ ಕ್ಷೀಣಶರೀರಿಯೂ ಆಗುತ್ತಾನೆ; ವೃಷಭ ಅಥವಾ ತುಲಾ ರಾಶಿಯಲ್ಲಿದ್ದರೆ ಒಳ್ಳೆಯ ಬಟ್ಟೆಗಳನ್ನು ಧರಿಸುವವನೂ ಸ್ತ್ರೀವಿಧೇಯನೂ ಸ್ನೇಹಿತರನ್ನು ಮೋಸಮಾಡುವ ಶೀಲವುಳ್ಳವನೂ ಕಪಟಿಯೂ ಕ್ರೂರವಾಗಿ ಮಾತಾಡುವವನೂ ಹೇಡಿಯೂ ಜಾರನೂ ಆಗುತ್ತಾನೆ.

ವಿ–ಗ್ರಹಗಳಿಗೆ ಒಂದೇರಾಶಿಯಲ್ಲಿ ಶುಭಾಶುಭಫಲಗಳೆರಡನ್ನೂ ಹೇಳಿದೆ. ಇದರಲ್ಲಿ ಅಸ್ತವಾಗದ ಶತ್ರುಗ್ರಹದೃಷ್ಟವಾಗದ ಬಲಿಷ್ಠವಾದ ಗ್ರಹದಿಂದ ಶುಭ

---

[1] ಜ (ಕ ಗ) [2] ತ (ಕ ಗ) [3] ಕಷ್ಟೋ (ಕ) ಕೋಷ್ಠೋ (ಗ) [4] ಧರ್ಮೋ (ಗ)
[5] ಭಾಗ್ಯಂ ನಿಶ್ವನುಗ್ರಂ (ಕ ಗ) [6] ದ್ರವ್ಯಪಣ್ಯಂ (ಕ ಗ) [7] ಗೇ (ಕ ಗ) [8] ಕೇಶಂ (ಕ ಗ).

(ಮಿಥುನ ಕರ್ಕಟಕ ಕನ್ಯಾ ರಾಶಿಸ್ಥಿತ ಕುಜಫಲ)

ನಿರೆ ಕುಜನಂಗನಾಮಿಥುನದೊಳ್ ರಣ ಗೀತವಿದಂ ಸು[1]ತಾ[1]ನ್ವಿತಂ
ಕಲಿಯಸಹಿಷ್ಣು ಮಿತ್ರರಹಿತಂ ಕೃಪಣಂ ಕೃತವೇದಿ ಯಾಚಕಂ
ನೆಲಸೆ ಕುಳೀರಮಂದಿರದೊಳರ್ಥಯುತಂ ವಿಕಲೇಕ್ಷಣಂ ಬುಧಂ
ಜಲನಿಧಿಯಾನಲಬ್ಧಧನನಕ್ಕುಮವಂ ಕವಿರಾಜಬಾಂಧವಾ ೧೯

(ಸಿಂಹ ಧನುಸ್ಸು ಕುಂಭ ಮೀನ ರಾಶಿಸ್ಥಿತ ಕುಜಫಲ)

ಇರೆ ಧಾತ್ರೀತನಯಂ ದಿನೇಶಗೃಹದೊಳ್ ಸ್ವಲ್ಪಾಂಗನಾಸೂನು ದು
ರ್ಗರತಂ ಕ್ಲೇಶಸಹಿಷ್ಣು ನಿಸ್ವನೆನಿಕುಂ ಚಾಪಾನಿಮೇಷಸ್ಥನಾ
ಗಿರೆ ವಿಖ್ಯಾತನ[2]ನೇಕ[2]ಶತ್ರು ಸಚಿವಂ ಸ್ವಲ್ಪಾತ್ಮಜಂ ಶೂರನೊಂ
ದಿರೆ ಕುಂಭೋದಯದೊಳ್ ತೊಟಲ್ವನ[3]ಥ[3]ನಂ ದುಃಖಾರ್ತನುಗ್ರಂ ಶ[4]ಠಂ[4] ೨೦

---

ಫಲವುಂಟಾಗುತ್ತದೆ. ಗ್ರಹಗಳ ಬಲಕ್ಕನುಗುಣವಾಗಿ ಉಳಿದ ಫಲಗಳು ಸಂಭವಿಸುತ್ತವೆ.

೧೯. ಜನನಕಾಲದಲ್ಲಿ ಕುಜನು ಕನ್ಯಾ ಅಥವಾ ಮಿಥುನರಾಶಿಯಲ್ಲಿದ್ದರೆ ಜಾತಕನು ಯುದ್ಧ ಮತ್ತು ಸಂಗೀತವನ್ನು ತಿಳಿದವನೂ (ಇವುಗಳಲ್ಲಿ ಕುಶಲನೂ) ಪುತ್ರವಂತನೂ ಪರಾಕ್ರಮಿಯೂ ಅನ್ಯರಿಗೆ ಸಹಿಸಲಾರದವನೂ (ತೇಜಸ್ವಿಯೂ) ಸ್ನೇಹಿತರಿಲ್ಲದವನೂ ಜಿಪುಣನೂ ಕೃತಜ್ಞನೂ ಯಾಚಕನೂ ಆಗುತ್ತಾನೆ; ಕರ್ಕಟಕರಾಶಿಯಲ್ಲಿದ್ದರೆ ಧನಿಕನೂ ಹೀನದೃಷ್ಟಿಯೂ ವಿದ್ವಾಂಸನೂ ಸಮುದ್ರ ಯಾನ ಮಾಡಿ ಹಣವನ್ನು ಸಂಪಾದಿಸುವವನೂ ಆಗುತ್ತಾನೆ.

೨೦. ಜನನಕಾಲದಲ್ಲಿ ಅಂಗಾರಕನು ಸಿಂಹರಾಶಿಯಲ್ಲಿದ್ದರೆ ಜಾತಕನು ಸ್ವಲ್ಪಪತ್ನೀಪುತ್ರವಂತನೂ ಅರಣ್ಯದಲ್ಲಿ ಆಸಕ್ತಿಯುಳ್ಳವನೂ ಕಷ್ಟಗಳನ್ನು ಸಹಿಸುವವನೂ ದರಿದ್ರನೂ ಆಗುತ್ತಾನೆ; ಧನುಸ್ಸು ಅಥವಾ ಮೀನರಾಶಿಯಲ್ಲಿದ್ದರೆ ಪ್ರಸಿದ್ಧಪುರುಷನೂ ಅನೇಕಮಂದಿ ಶತ್ರುಗಳನ್ನುಳ್ಳವನೂ ಮಂತ್ರಿಯೂ ಅಲ್ಪ ಸಂತತಿಯುಳ್ಳವನೂ ಪರಾಕ್ರಮಿಯೂ ಆಗುತ್ತಾನೆ; ಕುಂಭರಾಶಿಯಲ್ಲಿದ್ದರೆ ಹೆಚ್ಚು ಅಲೆದಾಡುವವನೂ ದರಿದ್ರನೂ ದುಃಖಿತನೂ ಕ್ರೂರಿಯೂ ಮೂರ್ಖನೂ ಆಗುತ್ತಾನೆ.

---

[1] ಬಾ (ಕ ಗ) [2] ಜಾತ (ಕ ಗ) [3] ರ (ಕ) [4] ತಂ (ಕ ಗ).

(ಮಕರ ರಾಶಿಸ್ಥಿತ ಕುಜಫಲ)

ಬಹುತನಯಂ ಬಹುವಿತ್ತಂ
ಮ[1]ಹೀ[1]ಶ್ವರಂ ಮೇಣ್ ಮಹೀಶ್ವರಾಧೀಶಸಮಂ
ಮಹಿತನಯಂ ನೆಲಸಿರೆ ಮೃಗ
ಗೃಹದೊಳ್ ತನ್ಮನುಜನೆನಿಸುಗುಂ ಬುಧಮಿತ್ರಾ ೨೧

(ಮೇಷ ವೃಷಭ ತುಲಾ ವೃಶ್ಚಿಕ ರಾಶಿಸ್ಥಿತ ಬುಧಫಲ)

ಧರಣೀಪುತ್ರನಿವಾಸದೊಳ್ ನಿರೆ ಬುಧಂ ಕೂಟಕ್ರಿಯಾವೇದಿ ತ
ಸ್ಕರನದ್ರವ್ಯನಸತ್ಯವಾದಿ ಕುವಧೂ[2]ಕಂ ದ್ಯೂತ[2] ನಾನಾನ್ನಪಾ
ನರತಂ ನಾಸ್ತಿಕನುಕ್ಷತೌಲಿಗಳೊಳಾಚಾರ್ಯಂ ಬಹುಸ್ತ್ರೀಸುತಂ
ಗುರುಭಕ್ತಂ [3]ಧನಿ[3] ಸತ್ಯವಾಕ್ಯನೆನಿಕುಂ ಸಮ್ಯಕ್ತ್ವರತ್ನಾಕರಾ ೨೨

(ಮಿಥುನ ಕನ್ಯಾ ರಾಶಿಸ್ಥಿತ ಬುಧಫಲ)

ನರಯುಗ್ಮೋದಯದೊಳ್ ಬುಧಂ ನೆಲಸೆ ವಾಚಾಳಂ ಕಲಾವೇದಿ ಸೌ
[4]ಖ್ಯ[4]ರತಂ ಶಾಸ್ತ್ರವಿದಂ ಪ್ರಿಯಂವದನೆನಿಕ್ಕುಂ ಕನ್ನೆಯೊಳ್ [5]ಚಾಂದ್ರಿ[5] ಕೂ
ಡಿರೆ ಮೇಧಾವಿ ಮಹಾಗುಣಾಂಬುನಿಧಿ [6][ಯುಕ್ತಿಜ್ಞಂ ವಿಭೀತಂ][6] ಕ್ಷಮಾ
ಪರನನ್ಯೋನ್ಯ ಸುಖಾನ್ವಿತಂ ವಿತರಣವ್ಯಾಪಾರಶೂರಂ ನರಂ ೨೩

---

೨೧. ಜನನಕಾಲದಲ್ಲಿ ಅಂಗಾರಕನು ಮಕರರಾಶಿಯಲ್ಲಿದ್ದರೆ ಜಾತಕನು ಬಹುಪುತ್ರವಂತನೂ ಬಹುಧನಿಕನೂ ರಾಜ ಅಥವಾ ರಾಜನಿಗೆ ಸಮನೂ ಆಗುತ್ತಾನೆ.

ವಿ–ಮಕರರಾಶಿಯು ಅಂಗಾರಕನಿಗೆ ಕುಂಭರಾಶಿಯಂತೆಯೇ ಸಮಶತ್ರು ಕ್ಷೇತ್ರವಾಗಿದ್ದರೂ ಉಚ್ಚಕ್ಷೇತ್ರವಾಗಿರುವುದರಿಂದ ಆತನು ಈ ರಾಶಿಯಲ್ಲಿರುವಾಗ ಶುಭಫಲವೇ ಉಕ್ತವಾಗಿದೆ.

೨೨. ಜನನಕಾಲದಲ್ಲಿ ಬುಧನು ಅಂಗಾರಕನ ಕ್ಷೇತ್ರ (ಮೇಷ ವೃಶ್ಚಿಕ) ಗಳಲ್ಲಿದ್ದರೆ ಜಾತಕನು ಮೋಸಗಾರನೂ ಕಳ್ಳನೂ ದರಿದ್ರನೂ ಅನೃತಭಾಷಿಯೂ ದುಷ್ಟಪತ್ನಿಯುಳ್ಳವನೂ ಜೂಜು ನಾನಾವಿಧವಾದ ಅನ್ನ ಮತ್ತು ಪಾನೀಯಗಳಲ್ಲಿ ಆಸಕ್ತನೂ ನಾಸ್ತಿಕನೂ ಆಗುತ್ತಾನೆ; ವೃಷಭ ತುಲಾರಾಶಿಗಳಲ್ಲಿದ್ದರೆ ಉಪ ದೇಶಕನೂ ಬಹುಮಂದಿ ಹೆಂಡಿರು ಮತ್ತು ಮಕ್ಕಳುಳ್ಳವನೂ ಗುರುಭಕ್ತನೂ ಹಣವಂತನೂ ಸತ್ಯಭಾಷಿಯೂ ಆಗುತ್ತಾನೆ.

೨೩. ಜನನಕಾಲದಲ್ಲಿ ಬುಧನು ಮಿಥುನರಾಶಿಯಲ್ಲಿದ್ದರೆ ಜಾತಕನು ವಾಚಾಳಿಯೂ ಕಲಾವಿದನೂ ಸುಖದಲ್ಲಿ ಆಸಕ್ತನೂ ಶಾಸ್ತ್ರಜ್ಞನೂ ಪ್ರಿಯ ಭಾಷಿಯೂ ಆಗುತ್ತಾನೆ; ಕನ್ಯಾರಾಶಿಯಲ್ಲಿ ಬುಧನಿದ್ದರೆ ಬುದ್ಧಿವಂತನೂ ಮಹಾ ಗುಣಸಾಗರನೂ ಯುಕ್ತಿಕುಶಲನೂ ಧೈರ್ಯಶಾಲಿಯೂ ತಾಳ್ಮೆಯುಳ್ಳವನೂ

---

[1] ಹೇ (ಕ ಗ) [2] ತ (ಕ) ಕಂ ದೂತ (ಗ) [3] ದಾನಿ (ಕ) [4] ರ್ಯ (ಕ ಗ) [5] ಬಂಧು (ಕ ಗ) [6] ಯುಕ್ತದ್ರವ್ಯಯುಕ್ತಂ (ಕ) ಯುಕ್ತ ದ್ರವ್ಯಯುಕ್ತಂ (ಗ).

(ಕರ್ಕಟಕ ಧನುಸ್ಸು ಸಿಂಹರಾಶಿಸ್ಥಿತ ಬುಧಫಲ)

ದಿವಸೇಂದ್ರಾಲಯದೊಳ್ ಬುಧಂ ನೆಲಸೆ [1]ನಿಸ್ವಂ ಸೌಖ್ಯಪುತ್ರೋಜ್ಝಿತಂ[1]
ಯುವತೀಲೋಲುಪನಂಗನಾರಿಪು ತೊಟಲ್ವಂ ಜ್ಞಾನಹೀನಂ ಪರಾ
ಭವಯುಕ್ತಂ ಶಶಿಗೇಹದೊಳ್ ನೆಲಸೆ ಬಂಧುದ್ವೇಷಿ ತೋಯೋದ್ಭವ
ದ್ರವಿಣಂ ಚಾಪದೊಳ್[2]ರ್ದೊಡಾಪ್ತ[2]ವಚನಗ್ರಾಹಂ [3]ಕಾಥ್ಯ[3]ದ್ವಲ್ಲಭಂ ೨೪

(ಮಕರ ಕುಂಭ ಮೀನರಾಶಿಸ್ಥಿತ ಬುಧಫಲ)

ಶನಿಗೃಹದೊಳ್ ಬುಧನಿರೆ ಋಣಿ[4]
ಧನಹೀನಂ ಶಿಲ್ಪಿ [5]ಶಾಪ[5]ನಾರ್ಥಿ ಪರಪ್ರೇ
ಷ್ಯನೆನಿಕ್ಕುಂ ಝುಷದೊಳ್ ಧನು
ವಿನೊಳ್[6]ರಲಂ[6]ತ್ಯಜನಶಿಲ್ಪಿ ಸೇವಕನೆನಿಕುಂ ೨೫

---

ಸ್ನೇಹ ಸೌಖ್ಯಗಳಿಂದ ಕೂಡಿರುವವನೂ ತ್ಯಾಗಮಾಡುವುದರಲ್ಲಿ ಶೂರನೂ ಆಗುತ್ತಾನೆ.

ವಿ—ಮಿಥುನ ಕನ್ಯಾರಾಶಿಗಳೆರಡೂ ಬುಧನ ಕ್ಷೇತ್ರವಾಗಿದ್ದರೂ ಕನ್ಯಾರಾಶಿಯು ಬುಧನಿಗೆ ಉಚ್ಚಕ್ಷೇತ್ರವಾಗಿರುವುದರಿಂದ ಈ ಎರಡುರಾಶಿಗಳಿಗೂ ಪ್ರತ್ಯೇಕವಾಗಿ ಫಲಗಳನ್ನು ಬೃಹಜ್ಜಾತಕದಲ್ಲಿ ಹೇಳಿರುವಂತೆ ಶ್ರೀಧರನೂ ಪ್ರತ್ಯೇಕವಾಗಿಯೇ ಫಲಗಳನ್ನು ಹೇಳಿರುತ್ತಾನೆ.

೨೪. ಜನನಕಾಲದಲ್ಲಿ ಬುಧನು ಸಿಂಹರಾಶಿಯಲ್ಲಿದ್ದರೆ ಜಾತಕನು ದರಿದ್ರನೂ ಸುಖ ಮತ್ತು ಪುತ್ರರಿಂದ ತ್ಯಕ್ತನೂ ಸ್ತ್ರೀಲಂಪಟನೂ ಸ್ತ್ರೀದ್ವೇಷಿಯೂ ಸಂಚಾರಶೀಲನೂ ಮೂರ್ಖನೂ ಅಪಮಾನಿತನೂ ಆಗುತ್ತಾನೆ; ಕರ್ಕಟಕರಾಶಿಯಲ್ಲಿದ್ದರೆ ಬಂಧುವೈರಿಯೂ ಜಲೋತ್ಪನ್ನದ್ರವ್ಯವುಳ್ಳವನೂ ಆಗುತ್ತಾನೆ; ಧನುಸ್ಸಿನಲ್ಲಿದ್ದರೆ ಆಪ್ತವಚನವನ್ನು ಗ್ರಹಿಸುವವನೂ ರಾಜಪ್ರಿಯನೂ ಆಗುತ್ತಾನೆ.

೨೫. ಜನನಕಾಲದಲ್ಲಿ ಶನಿಕ್ಷೇತ್ರ (ಮಕರ ಅಥವಾ ಕುಂಭ) ದಲ್ಲಿ ಬುಧನಿದ್ದರೆ ಜಾತಕನು ಸಾಲಗಾರನೂ ದರಿದ್ರನೂ ಶಿಲ್ಪಿಯೂ ಇತರರಿಗೆ ಆಜ್ಞೆಮಾಡುವವನೂ ಸೇವಕನೂ ಆಗುತ್ತಾನೆ; ಧನುಸ್ಸು ಅಥವಾ ಮೀನರಾಶಿಯಲ್ಲಿದ್ದರೆ ಕೀಳುಜನರ ಶಿಲ್ಪಿಯೂ ಸೇವಕನೂ ಆಗುತ್ತಾನೆ.

ವಿ—ಧನುಸ್ಸು ಮೀನ ಈ ಎರಡೂ ಗುರುವಿನ ಕ್ಷೇತ್ರವಾಗಿದ್ದರೂ ಮೀನವು ಬುಧನಿಗೆ ನೀಚಕ್ಷೇತ್ರವಾಗಿರುವುದರಿಂದ ಆ ರಾಶಿಯಲ್ಲಿ ಬುಧನಿರುವಾಗ ಆಗುವ ಫಲಗಳನ್ನು ವರಾಹಮಿಹಿರರು ಪ್ರತ್ಯೇಕವಾಗಿ ಹೇಳಿರುತ್ತಾರೆ. ಅದರಂತೆಯೇ ಬುಧನು ಧನುಸ್ಸಿನಲ್ಲಿರುವಾಗ ಆಗುವ ಫಲಗಳನ್ನು ಪ್ರತ್ಯೇಕವಾಗಿ ೨೪ನೇ ಪದ್ಯದಲ್ಲಿ ಹೇಳಿ ೨೫ನೇ ಪದ್ಯದಲ್ಲಿ ಮೀನರಾಶಿಯ ಫಲಗಳನ್ನು ಶ್ರೀಧರನು ಹೇಳಿರುತ್ತಾನೆ. ಆದರೆ ಮೀನರಾಶಿಯಲ್ಲಿರುವಾಗ ಹೇಳಿರುವ ಫಲಗಳು ಧನುಸ್ಸಿನಲ್ಲಿರುವಾಗಲೂ ಆಗುವುದೆಂದು ಆತನು ಹೇಳಿರುವುದು ವರಾಹಮಿಹಿರರಿಗೆ ಸಮ್ಮತವಲ್ಲ.

---

[1] ವಿಶ್ವಂ ಸೌಖ್ಯಯುಕ್ತೋದ್ಭವಂ (ಕ) ವಿಶ್ವಂ ಸೌಖ್ಯಯುಕ್ತೋದ್ಭವಂ (ಗ) [2] ದುರ್ದಾತ್ತ (ಕ) ದುರ್ದಾತ್ತ (ಗ) [3] ಸಾಹ್ಯ (ಕಗ) [4] ಣ (ಕಗ) [5] ಶಾಪ (ಕ) ಶಾಪ್ಯ (ಗ) [6] ರ ತಾಂ (ಕಗ).

(ಮೇಷ ವೃಶ್ಚಿಕ ಧನುಸ್ಸು ಮೀನರಾಶಿಸ್ಥಿತ ಗುರುಫಲ)

ಅಮರೇಜ್ಯಂ ಕುಜಗೇಹದೊಳ್ ನಿಲೆ ಬಹುಸ್ತ್ರೀ ಪುತ್ರವಿತ್ತಾನ್ವಿತಂ
ಕ್ಷಮಿ ತೇಜೋನಿಳಯಂ ಸುಭೃತ್ಯ[1]ಪತಿ ಸೇನಾ[1]ನಾಯಕಂ ತ್ಯಾಗಶೀ
ಲಮಹೌದಾರ್ಯಗುಣಂ ಗುಣಾಢ್ಯನೆನಿಕುಂ ಸ್ವಕ್ಷೇತ್ರದೊಳ್ ಕೂಡಿದಂ
ದು ಮಹೀಭೃತ್ಸಚಿವಂ ಚಮೂಪತಿ ಧನಾಢ್ಯಂ ಮಂಡಲಾಧೀಶ್ವರಂ ೨೬

(ವೃಷಭ ಮಿಥುನ ಕನ್ಯಾ ತುಲಾ ಮಕರ ರಾಶಿಸ್ಥಿತ ಗುರುಫಲ)

ಸುರವಂದ್ಯಂ ವೃಷತೌಲಿಯೊಳ್ ನಿತೆ ಸುಹೃತ್ಪುತ್ರಾಧಿಕಂ ತ್ಯಾಗಿ ಸುಂ
ದರರೂಪಂ ಸಕಲಪ್ರಿಯಂ ಸುಖಿ ಧನಾಢ್ಯಂ ಕೂಡೆ [2]ಶಾಶಾಂಕಿ[2] ಮಂ
ದಿರದೊಳ್ ಪೂರ್ಣಸುಹೃತ್ತನೂಜ ಪರಿವಾರಂ ಸೌಖ್ಯಯುಕ್ತಂ ಮಹ
ತ್ತರನಿರ್ದಂದು ಮೃಗರ್ಕ್ಷದೊಳ್ ಸುಖಿ ನಿಕೃಷ್ಟಂ ಸ್ವಲ್ಪವಿತ್ತಂ ನರಂ ೨೭

---

೨೬. ಜನನಕಾಲದಲ್ಲಿ ಗುರು ಅಂಗಾರಕನ ಕ್ಷೇತ್ರದಲ್ಲಿ (ಮೇಷ ವೃಶ್ಚಿಕಗಳಲ್ಲಿ) ಇದ್ದರೆ ಜಾತಕನು ಬಹುಮಂದಿ ಹೆಂಡಿರು ಮತ್ತು ಗಂಡು ಮಕ್ಕಳುಳ್ಳವನೂ ಧನಿಕನೂ ಕ್ಷಮಾಶೀಲನೂ ತೇಜಸ್ವಿಯೂ ಒಳ್ಳೆಯ ಸೇವಕರುಳ್ಳವನೂ ಸೇನಾಧಿಪತಿಯೂ ದಾನಿಯೂ ಉದಾರಗುಣವುಳ್ಳವನೂ ಗುಣಾಢ್ಯನೂ ಆಗುತ್ತಾನೆ; ಸ್ವಕ್ಷೇತ್ರದಲ್ಲಿ (ಧನುರ್ಮೀನಗಳಲ್ಲಿ)ದ್ದಾಗ ಮಂತ್ರಿಯೂ ಸೇನಾನಾಯಕನೂ ಧನಿಕನೂ ರಾಜನೂ ಆಗುತ್ತಾನೆ.

೨೭. ಜನನಕಾಲದಲ್ಲಿ ಗುರು ವೃಷಭ ತುಲಾ ರಾಶಿಗಳಲ್ಲಿದ್ದರೆ ಜಾತಕನು ಹೆಚ್ಚುಮಂದಿ ಸ್ನೇಹಿತರುಳ್ಳವನೂ ಪುತ್ರರುಳ್ಳವನೂ ದಾನಿಯೂ ಸುಂದರನೂ ಎಲ್ಲರಿಗೂ ಪ್ರೀತಿಪಾತ್ರನೂ ಸುಖಿಯೂ ಧನಿಕನೂ ಆಗುತ್ತಾನೆ; ಮಿಥುನ ಕನ್ಯಾರಾಶಿಗಳಲ್ಲಿದ್ದರೆ ಸ್ನೇಹಿತರು ಮಕ್ಕಳಿಂದ ಕೂಡಿರುವವನೂ ಸುಖಿಯೂ ಶ್ರೇಷ್ಠನೂ ಆಗುತ್ತಾನೆ; ಮಕರರಾಶಿಯಲ್ಲಿದ್ದರೆ ಸುಖಿಯೂ ನೀಚನೂ ಸ್ವಲ್ಪ ಹಣವುಳ್ಳವನೂ ಆಗುತ್ತಾನೆ.

ವಿ—ಮಕರರಾಶಿಯು ಗುರುವಿಗೆ ನೀಚಕ್ಷೇತ್ರವಾಗುತ್ತದೆ. ಆದುದರಿಂದ ಗುರುವು ಮಕರರಾಶಿಯಲ್ಲಿದ್ದರೆ ಜಾತಕನು ಸುಖಪಡುತ್ತಾನೆ ಎಂದು ಹೇಳಿರುವುದು ಸರಿಯಲ್ಲ. 'ಮಕರೇ ನೀಚೋಽಲ್ಪವಿತ್ತೋಽಸುಖೀ' ಎಂದು ಭಟ್ಟೋತ್ಪಲರೇ ಮೊದಲಾದ ವ್ಯಾಖ್ಯಾನಕಾರರು ಒಪ್ಪಿಕೊಂಡಿರುವ ಬೃಹಜ್ಜಾತಕದ ಪಾಠದಂತೆ ಗುರುವು ಮಕರದಲ್ಲಿದ್ದರೆ ಜಾತಕನು ಅಸುಖಿಯಾಗುತ್ತಾನೆ ಎಂದು ಹೇಳುವುದೇ ನ್ಯಾಯವಾಗಿದೆ.

---

1 ಪರಸೇವಾ (ಗ) 2 ಶಶಾಂಕಿ (ಕ) ಶಸ್ತ್ರಾಂಕ (ಗ).

(ಕರ್ಕಟಕ ಸಿಂಹ ಕುಂಭರಾಶಿಸ್ಥಿತ ಗುರುಫಲ)

ಹಿಮಾಂಶುಗೃಹದೊಳ್ ಸುರೇಜ್ಯನಿರೆ ಪುತ್ರವಿತ್ತಾಂಗನಾ
ಸಮು[1]ತ್ಥ[1]ವಿಭವಂ ಸುಬುದ್ಧಿ ಸುಖಿ ಕುಂಭದೊಳ್ ಕೂಡೆ ತ
ತ್ಸಮಾನ ಫಲಭಾಗಿ ಕೂಡಿರೆ ದಿನಾಧಿಪಕ್ಷೇತ್ರದೊಳ್
ಚಮೂಪತಿ ಕುಳೀರಸಂಸ್ಥ[2]ಫಲಭಾಗಿಯಂತಾ[2] ನರಂ ೨೮

(ಮೇಷ ವೃಷಭ ಮಿಥುನ ತುಲಾ ವೃಶ್ಚಿಕ ರಾಶಿಸ್ಥಿತ ಶುಕ್ರಫಲ)

ದನುಜೇಜ್ಯಂ ಕುಜಗೇಹದೊಳ್ ನಿಲೆ ಪರಸ್ತ್ರೀಲೋಲನಾಳಾಪದಿಂ
ಧನನಾಶಂ ಕುಲದೂಷಣಂ ಸ್ವಗೃಹದೊಳ್ ಸ್ವೋಪಾರ್ಜಿತಾರ್ಥಂ ಪ್ರಸಿ
ದ್ಧನಿಳಾನಾಥನುತಂ ಸ್ವಬಂಧುಪತಿ ಶೂರಂ ದಂಪತಿಕ್ಷೇತ್ರದೊಳ್
ಧನವಂತಂ ಧರಣೀಶಕಾರ್ಯಭರಧುರ್ಯಂ ಸತ್ಕಳಾಕೋವಿದಂ ೨೯

(ಕರ್ಕಟಕ ಸಿಂಹ ಕನ್ಯಾ ರಾಶಿಸ್ಥಿತ ಶುಕ್ರಫಲ)

ಕವಿ ಕನ್ಯಾನಿಳಯಸ್ಥನಾಗೆ ಖ[3]ಳ[3]ಕರ್ಮೋಪಾರ್ಜಿತಂ ರೋಹಿಣೀ
[4]ಧವ ಗೇಹಸ್ಥಿತ[4]ನಾಗೆ ಭೀರು ಪೆಱರಂ ಬೇಟ್ಪಂ ಮದ[5]ಶ್ರೋದ್ಧತಂ[5]
ಯುವತೀಯುಗ್ಮ[6]ವ[6]ರಂ ಪಯೋಜಸಖಗೇಹಸ್ಥಾಯಿಯಾದಂದು ಸ
ದ್ಯುವತೀನಾಯಕನಂಗನಾರ್ಜಿತಧನಂ ಮಂದಾತ್ಮಜಂ ತನ್ನರಂ ೩೦

---

೨೮. ಜನನಕಾಲದಲ್ಲಿ ಗುರು ಕರ್ಕಟಕರಾಶಿಯಲ್ಲಿದ್ದರೆ ಜಾತಕನು ಪುತ್ರರು ಧನ ಮತ್ತು ಹೆಂಡತಿ ಇವರಿಂದ ಕೂಡಿ ವೈಭವಶಾಲಿಯೂ ಬುದ್ಧಿವಂತನೂ ಸುಖಿಯೂ ಆಗುತ್ತಾನೆ; ಕುಂಭದಲ್ಲಿದ್ದರೆ ಕರ್ಕಟಕರಾಶಿಗೆ ಹೇಳಿರುವ ಫಲಗಳನ್ನು ಅನುಭವಿಸುತ್ತಾನೆ; ಸಿಂಹರಾಶಿಯಲ್ಲಿದ್ದರೆ ಸೇನಾನಾಯಕನೂ ಕರ್ಕಟಕ ರಾಶಿಯಲ್ಲಿರುವಾಗ ಹೇಳಿರುವ ಫಲಗಳನ್ನು ಹೊಂದುವವನೂ ಆಗುತ್ತಾನೆ.

೨೯. ಜನನಕಾಲದಲ್ಲಿ ಶುಕ್ರನು ಅಂಗಾರಕನ ಕ್ಷೇತ್ರ (ಮೇಷ ವೃಶ್ಚಿಕ) ದಲ್ಲಿದ್ದರೆ ಜಾತಕನು ಅನ್ಯಸ್ತ್ರೀಲಂಪಟನೂ ಅವರ ಮಾತಿನಿಂದ ಹಣವನ್ನು ನಾಶ ಮಾಡುವವನೂ ಕುಲಕಳಂಕನೂ ಆಗುತ್ತಾನೆ; ಸ್ವಕ್ಷೇತ್ರ(ವೃಷಭ ತುಲಾ)ದಲ್ಲಿದ್ದರೆ ತಾನೇ ಸಂಪಾದಿಸಿದ ಹಣವುಳ್ಳವನೂ ಪ್ರಖ್ಯಾತನೂ ರಾಜವಲ್ಲಭನೂ ಬಂಧುಪ್ರಧಾನನೂ ಪರಾಕ್ರಮಿಯೂ ಆಗುತ್ತಾನೆ; ಮಿಥುನರಾಶಿಯಲ್ಲಿದ್ದರೆ ಧನಿಕನೂ ರಾಜಕಾರ್ಯಗಳನ್ನು ನಡಸುವುದರಲ್ಲಿ ಸಮರ್ಥನೂ ಕಲೆಗಳಲ್ಲಿ ವಿದ್ವಾಂಸನೂ ಆಗುತ್ತಾನೆ.

೩೦. ಜನನಕಾಲದಲ್ಲಿ ಶುಕ್ರನು ಕನ್ಯಾರಾಶಿಯಲ್ಲಿದ್ದರೆ ಜಾತಕನು ನೀಚಕೃತ್ಯದಿಂದ ಸಂಪಾದಿಸುತ್ತಾನೆ; ಕರ್ಕಟಕರಾಶಿಯಲ್ಲಿದ್ದರೆ ಅಂಜುಬುಳಿಯೂ ಮತ್ತೊಬ್ಬರನ್ನು ಬೇಡುವವನೂ ಮದಾಂಧನೂ ಇಬ್ಬರು ಹೆಂಡಿರುಳ್ಳವನೂ ಆಗುತ್ತಾನೆ; ರವಿಯ ಕ್ಷೇತ್ರ (ಸಿಂಹ)ದಲ್ಲಿದ್ದರೆ ಸದ್ಗೃಹಿಣಿ ಸ್ತ್ರೀಧನ ಮತ್ತು ಅಲ್ಪಸಂತಾನವುಳ್ಳವನಾಗುತ್ತಾನೆ.

---

[1] ತ್ರ (ಕ ಗ) [2] ಪನಾಗಿಯುಂ (ಕ) ಪನಾಗಿಯುಂ (ಗ) [3] ರ (ಗ) [4] ಪನ ಗೇಹಸ್ಥ (ಕ) ಪನ ಗೇಹಸ್ಥಿತ (ಗ) [5] ಪ್ರೋದ್ಧೃತಂ (ಕ) ಪ್ರಾದುತಂ (ಗ) [6] ಧ (ಗ).

(ಧನುಸ್ಸು ಮಕರ ಕುಂಭ ಮೀನರಾಶಿಸ್ಥಿತ ಶುಕ್ರಫಲ)

ಮೃಗ ಕುಂಭಂಗಳೊಳೊಂದಿದಂದು ಭೃಗುಜಂ ಕುಸ್ತ್ರೀರತಂ[1] ತನ್ನ ಕಾಂ
ತೆಗೆ ಭೀತಂ ಸುಭಗಂ ಧನುರ್ಧವನದೊಳ್ ನಿಂದಂದುವಾಢ್ಯಂ ಸ್ವಬಂ
ಧು[2]ಗು[2]ಣಾಧ್ಯರ್ಚಿತನೊಂದಿದಂದು [3]ಝಷದೊಳ್ ಮೇಧಾವಿ ವಿತ್ತಾಧಿಕಂ
ಜಗತೀಭೃತ್ಕುಲವೈಭವಂ ಸುಭಗನುರ್ವೀಪೂಜ್ಯನಕ್ಕುಂ ನರಂ ೩೧

(ಮೇಷ ವೃಷಭ ಮಿಥುನ ಕನ್ಯಾರಾಶಿಸ್ಥಿತ ಶನಿಫಲ)

ಇನಜಂ ಮೇಷದೊಳೊಂದಿದಂದು ಕಪಟಂ ಮೂರ್ಖಂ[4] ತೊಟಲ್ವಂ ಸುಹೃ
ಜ್ಜನದೂರಂ ವೃಷರಾಶಿಯೊಳ್ ನೆಲಸೆ ವರ್ಜ್ಯಂ ಸ್ವಲ್ಪವಿತ್ತಂ ವಧೂ
ಜನಮಿತ್ರಂ ಬಹುಭಾರ್ಯನೊಂದಿ ನಿಲೆ ಸೌಮ್ಯಕ್ಷೇತ್ರದೊಳ್ ದುಃಖಿತಂ
ಧನಹೀನಂ ಸ್ಖಲಿತಾಂತರಂಗನಸುತಂ ನಿರ್ಲಜ್ಜಕಂ ರಕ್ಷಕಂ ೩೨

---

ವಿ–ಕನ್ಯಾರಾಶಿಯು ಮಿಥುನರಾಶಿಯಂತೆಯೇ ಬುಧಕ್ಷೇತ್ರವಾಗಿದ್ದರೂ ಶುಕ್ರನಿಗೆ ನೀಚಕ್ಷೇತ್ರವಾಗಿರುವುದರಿಂದ ಆ ರಾಶಿಯಲ್ಲಿ ಶುಕ್ರನು ಶುಭಫಲ ಪ್ರದನಲ್ಲ.

೩೧. ಜನನಕಾಲದಲ್ಲಿ ಶುಕ್ರನು ಮಕರ ಕುಂಭ ರಾಶಿಗಳಲ್ಲಿದ್ದರೆ ಜಾತಕನು ಕೆಟ್ಟ ಹೆಂಗುಸಿನಲ್ಲಿ ಆಸಕ್ತನೂ ತನ್ನ ಹೆಂಡತಿಗೆ ಹೆದರುವವನೂ ಸರ್ವಜನವಲ್ಲಭನೂ ಆಗುತ್ತಾನೆ; ಧನುಸ್ಸಿನಲ್ಲಿದ್ದರೆ ಶ್ರೀಮಂತನೂ ಹಣ ಬಂಧು ಮತ್ತು ಗುಣ ಇವುಗಳಿಂದ ಪೂಜಿತನೂ ಆಗುತ್ತಾನೆ; ಮೀನರಾಶಿಯಲ್ಲಿದ್ದರೆ ಪ್ರತಿಭಾವಂತನೂ ಹೆಚ್ಚು ಧನವಂತನೂ ರಾಜಪೂಜಿತನೂ ಜನವಲ್ಲಭನೂ ಲೋಕ ಪೂಜ್ಯನೂ ಆಗುತ್ತಾನೆ.

ವಿ–ಮೀನರಾಶಿಯು ಶುಕ್ರನಿಗೆ ಉಚ್ಚಕ್ಷೇತ್ರವಾಗಿರುವುದರಿಂದ ಆ ರಾಶಿಯಲ್ಲಿರುವಾಗ ಆತನು ಉತ್ಕೃಷ್ಟಫಲಗಳನ್ನು ಕೊಡುತ್ತಾನೆ.

೩೨. ಜನನಕಾಲದಲ್ಲಿ ಶನಿ ಮೇಷರಾಶಿಯಲ್ಲಿದ್ದರೆ ಜಾತಕನು ಮೋಸಗಾರನೂ ಅವಿವೇಕಿಯೂ ಹೆಚ್ಚು ಅಲೆದಾಡುವವನೂ ಸ್ನೇಹಿತರಿಲ್ಲದವನೂ ಆಗುತ್ತಾನೆ; ವೃಷಭರಾಶಿಯಲ್ಲಿದ್ದರೆ ತ್ಯಾಗಾರ್ಹನೂ ಸ್ವಲ್ಪಹಣವುಳ್ಳವನೂ ಗೆಳತಿಯರನ್ನುಳ್ಳವನೂ ಬಹುಮಂದಿ ಪತ್ನಿಯರನ್ನುಳ್ಳವನೂ ಆಗುತ್ತಾನೆ; ಬುಧನ ಕ್ಷೇತ್ರ (ಮಿಥುನ ಕನ್ಯಾ)ಗಳಲ್ಲಿದ್ದರೆ ದುಃಖಿತನೂ ದರಿದ್ರನೂ ಸ್ಖಲಿತಹೃದಯನೂ ಪುತ್ರರಹಿತನೂ ನಾಚಿಕೆಯಿಲ್ಲದವನೂ ಕಾವಲುಗಾರನೂ ಆಗುತ್ತಾನೆ.

ವಿ–ಮೇಷ ವೃಶ್ಚಿಕಗಳೆರಡೂ ಅಂಗಾರಕನ ರಾಶಿಗಳು; ಆದರೂ ಮೇಷವು ಶನಿಗೆ ನೀಚಕ್ಷೇತ್ರವಾಗಿರುವುದರಿಂದ ಆ ರಾಶಿಯ ಫಲವನ್ನೇ ಪ್ರತ್ಯೇಕವಾಗಿ ಹೇಳಿದೆ.

---

[1] ನತಂ (ಕ) ವತಂ (ಗ) [2] ಗ (ಗ) [3] ತಪ (ಗ) [4] ಟಾಯೋಕಂ (ಕ) ಟಾಯೋಗಂ (ಗ).

(ಕರ್ಕಟಕ ತುಲಾ ವೃಶ್ಚಿಕ ಮಕರ ಕುಂಭ ರಾಶಿಸ್ಥಿತ ಶನಿಫಲ)

[1]ರವಿಜಂ[1] ವೃಶ್ಚಿಕಸಂಸ್ಥನಾಗೆ ಚಪಲಾಂಗಂ ನಿರ್ದಯಂ ಪ್ರಾಪ್ತಬಂ
[2]ಧ[2]ವಧಂ ತೌಲಿಯೊಳಿರ್ದೊಡರ್ಥಪತಿ ವಿಖ್ಯಾತಂ ಬಲಗ್ರಾಮ ಬಂ
ಧುವಿನೂತಂ ನಿರೆ ಕರ್ಕಿಯೊಳ್ ವಿಕಲ[3]ದಂತಂ[3] ಮಾತೃವಿತ್ತಾತ್ಮಜಾ
ತವಿಹೀನಂ ಶನಿಗೇಹದೊಳ್ ನಿರೆ ಮಳಿಷ್ಠಂ ಭೋಕ್ತ್ರ ಸಸ್ವಂ ಧನಂ ೩೩

(ಸಿಂಹ ಧನುಸ್ಸು ಮೀನ ರಾಶಿಸ್ಥಿತ ಶನಿಫಲ)

ಶನಿ ಶಕ್ರೇಜ್ಯಗೃಹಸ್ಥನಾಗೆ ನೃಪರಿಂ ಶುದ್ಧಾತ್ಮಕಂ ಮಂದದೃ
ಷ್ಟಿ ನಿಜಸ್ತ್ರೀಸುತವೈಭವಂ ಸುಖಯಶಃಪ್ರಾಪ್ತಂ ಪುರಗ್ರಾಮಪ
ತ್ತನ ಸೇನಾಶ್ರಿತನಲ್ಲಿ ಮತ್ತಧಿಕನಕ್ಕುಂ ಸಿಂಹದೊಳ್ ಕೂಡಿದಂ
ದನಪತ್ಯಂ ಬಹುವಿ[4]ತ್ತನುಜ್ಝಿ[4]ತಸುಖಂ ಕಷ್ಟಾತ್ಮನಕ್ಕುಂ ನರಂ ೩೪

---

೩೩. ಜನನಕಾಲದಲ್ಲಿ ಶನಿ ವೃಶ್ಚಿಕರಾಶಿಯಲ್ಲಿದ್ದರೆ ಜಾತಕನು ಚಂಚಲನೂ ನಿಷ್ಕರುಣಿಯೂ ಬಂಧಿತನೂ ತಾಡಿತನೂ ಆಗುತ್ತಾನೆ; ತುಲಾರಾಶಿಯಲ್ಲಿದ್ದರೆ ಧನಿಕನೂ ಪ್ರಸಿದ್ಧನೂ ಸೈನ್ಯ ಗ್ರಾಮ ಮತ್ತು ಬಂಧು ಇವುಗಳಿಂದ ಪೂಜ್ಯನೂ ಆಗುತ್ತಾನೆ; ಕರ್ಕಟಕರಾಶಿಯಲ್ಲಿದ್ದರೆ ವಿಕಲದಂತನೂ ತಾಯಿ ಹಣ ಮತ್ತು ಮಕ್ಕಳು ಇವುಗಳಿಂದ ರಹಿತನೂ ಆಗುತ್ತಾನೆ; ಶನಿಕ್ಷೇತ್ರ (ಮಕರ ಕುಂಭ)ಗಳಲ್ಲಿದ್ದರೆ ಹೆಚ್ಚುಕೊಳಕನೂ ಭೋಗಿಯೂ ಭಾಗ್ಯವಂತನೂ ಧನಿಕನೂ ಆಗುತ್ತಾನೆ.

ವಿ–ತುಲಾರಾಶಿಯು ಶನಿಗೆ ಉಚ್ಚಕ್ಷೇತ್ರವಾಗಿರುವುದರಿಂದ ಶುಕ್ರನ ರಾಶಿಯಾದರೂ ಆತನು ಶುಭಫಲಪ್ರದನು.

೩೪. ಜನನಕಾಲದಲ್ಲಿ ಶನಿ ಗುರುವಿನ ಕ್ಷೇತ್ರ(ಧನುಸ್ಸು ಮೀನ)ದಲ್ಲಿದ್ದರೆ ಜಾತಕನು ರಾಜರ ವಿಶ್ವಾಸಕ್ಕೆ ಪಾತ್ರನೂ ಮಂದದೃಷ್ಟಿಯೂ ಹೆಂಡತಿ ಮಕ್ಕಳೊಡನಿರುವವನೂ ಐಶ್ವರ್ಯವಂತನೂ ಸುಖಿಯೂ ಯಶಸ್ವಿಯೂ ಊರು ಗ್ರಾಮ ಪಟ್ಟಣ ಸೇನೆ ಇವುಗಳಲ್ಲಿ ಗಣ್ಯನೂ ಆಗುತ್ತಾನೆ; ಸಿಂಹರಾಶಿಯಲ್ಲಿದ್ದರೆ ಮಕ್ಕಳಿಲ್ಲದವನೂ ಧನಿಕನೂ ಸುಖವಿಲ್ಲದವನೂ ಕಷ್ಟಜೀವಿಯೂ ಆಗುತ್ತಾನೆ.

---

[1] ಇನಜಂ (ಕ ಗ) [2] ಧು (ಕ ಗ) [3] ದತ್ತಂ (ಕ ಗ) [4] ದ್ಯನೂರ್ಜಿ (ಕ ಗ).

(ಲಗ್ನಫಲ ನಿರ್ಣಯ)

ಹಿಮಕರನಿರ್ದ ರಾಶಿಯ ಫಲಂ ಜನನೋದಯರಾಶಿಗಕ್ಕುಮಾ
ಹಿಮಕರನಂ ನಿರೀಕ್ಷಿಸೆ ಕುಜಾದಿಗಳಾ ಫಲಮಕ್ಕುಮಾ ವಿಲ
ಗ್ನಮನವರೀಕ್ಷಿಪಂದುದಯ[1]ಮುಂ[1] ತದಧೀಶ್ವರನುಂ ಸಮಸ್ತಗೇ
ಹಮುಮಿನಿತುಂ ಬಲಾಢ್ಯಮೆನೆ ಭಾವಫಲಂ ದೊರೆಕೊಳ್ಗುಮಾವಗಂ ೩೫

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ರಾಶಿಪ್ರಕರಣವರ್ಣನಂ ಸಪ್ತದಶಾಧಿಕಾರಂ

---

೩೫. ಚಂದ್ರನಿರುವ (ಜನ್ಮ) ರಾಶಿಯ ಫಲ ಜನನಲಗ್ನಕ್ಕೂ ಉಂಟಾಗುತ್ತದೆ; ಚಂದ್ರನನ್ನು ಕುಜಾದಿಗ್ರಹಗಳು ನೋಡುವುದರ ಫಲ ಲಗ್ನವನ್ನು ಆ ಗ್ರಹಗಳು ನೋಡಿದಾಗಲೂ ಸಂಭವಿಸುತ್ತದೆ; ಲಗ್ನ ಲಗ್ನಾಧಿಪತಿ ಮತ್ತು ರಾಶಿಗಳು ಬಲಾಢ್ಯವಾಗಿದ್ದರೆ ಭಾವಫಲಗಳು ಪೂರ್ಣವಾಗಿ ಫಲಿಸುತ್ತವೆ.

ವಿ–ಗ್ರಹಗಳ ದೃಷ್ಟಿಫಲ ೨ನೇ ಅಧಿಕಾರದಲ್ಲಿದೆ; ಚಂದ್ರನಂತೆಯೇ ಲಗ್ನಕ್ಕೂ ರಾಶಿಫಲವುಂಟಾಗುತ್ತದೆ; ಭಾವಫಲಗಳನ್ನು ರಾಶಿ ಅಧಿಪತಿ ಇತರ ಗ್ರಹದೃಷ್ಟಿ ಇವುಗಳ ಬಲಾಬಲವಿಮರ್ಶೆಯಿಂದ ತಿಳಿಯಬೇಕು.

---

[1] ಮಾಂ (ಗ).

# ಅಷ್ಟಾದಶಾಧಿಕಾರಂ

---

## ಲಗ್ನಾದಿಭಾವ ಪ್ರಕರಣಂ

(ರವಿಭಾವಫಲ)

ಉದಯಸ್ಥಂ ದಿನನಾಥ[1]ನಾಗೆ[1] ವಿಕಲಾಕ್ಷಂ ನಿರ್ಧಯಂ ನಿರ್ದಯಂ
ಸದನಂ ಸಿಂಹವಿಲಗ್ನದೊಳ್ ನಿಲೆ [2]ನಿಶಾಂಧಂ[2] ಮೇಷಲಗ್ನಕ್ಕೆ ಪೊ
ರ್ದಿದೊಡಾಢ್ಯಂ ತಿಮಿರಾಕ್ಷನಿಂದುಗೃಹಲಗ್ನಸ್ಥಾಯಿಯಾದಂದು ಬು
ದ್ಬುದನೇತ್ರಂ ವಣಿಜೋದಯಸ್ಥನೆನೆ ನಿರ್ದ್ರವ್ಯಂ ವಿನಷ್ಟೇಕ್ಷಣಂ ೧

ದಿನನಾಥಂ ಜನನೋದಯಕ್ಕೆರಡಱೊಳ್ ನಿಂದಂದು ತನ್ಮಾನವಂ
ಧನವಂತಂ ನೃಪರಿಂ ಕವರ್ತೆವಡು[3]ಗುಂ ವಕ್ತ್ರಾಮಯಾ[4]ರ್ತಂ[4] ತೃತೀ
ಯನಿವಾಸಸ್ಥಿತನಾಗೆ ಶೌರ್ಯಮತಿಯುಕ್ತಂ ನಾಲ್ಕಱೊಳ್ ನಿಂದೊಡಾ
[5]ಜನಪಾಣ್ಮಂ[5] ಸುಖಹೀನನೈದಱೊಳಿ[6]ರಲ್ ನಿರ್ನಂದನಂ[6] ನಿರ್ಧನಂ ೨

---

೧. ಜನನಕಾಲದಲ್ಲಿ ಸೂರ್ಯ ಲಗ್ನದಲ್ಲಿದ್ದರೆ ನೇತ್ರರೋಗಿಯೂ ಧೈರ್ಯಶಾಲಿಯೂ ನಿಷ್ಕರುಣಿಯೂ ಆಗುತ್ತಾನೆ; ಸಿಂಹರಾಶಿ ಲಗ್ನವಾಗಿ ಅಲ್ಲಿ ಸೂರ್ಯನಿದ್ದರೆ ರಾತ್ರಿಯಲ್ಲಿ ಕಣ್ಣುಕಾಣದವನೂ ಮೇಷಲಗ್ನದಲ್ಲಿದ್ದರೆ ಧನಿಕನೂ ಮಂದದೃಷ್ಟಿಯೂ ಕರ್ಕಟಕಲಗ್ನದಲ್ಲಿದ್ದರೆ ಹೂ(ಗುಳ್ಳೆ)ಗಣ್ಣನೂ ತುಲಾಲಗ್ನದಲ್ಲಿದ್ದರೆ ಬಡವನೂ ಕುರುಡನೂ ಆಗುತ್ತಾನೆ.

ವಿ–ಮೊದಲು ಸಾಮಾನ್ಯವಾಗಿ ಲಗ್ನಭಾವಸ್ಥ ರವಿಫಲವನ್ನು ಹೇಳಿ ಪುನಃ ಮೇಷ ಕರ್ಕಟಕ ಸಿಂಹ ತುಲಾ ಲಗ್ನಗಳಲ್ಲಿ ಸೂರ್ಯನಿರುವಾಗ ಪ್ರತ್ಯೇಕವಾಗಿ ವಿಶೇಷಫಲವನ್ನು ತಿಳಿಸಿರುವುದರಿಂದ ಈ ನಾಲ್ಕು ಲಗ್ನಗಳನ್ನು ಬಿಟ್ಟು ಉಳಿದ ಲಗ್ನಗಳಲ್ಲಿ ಸೂರ್ಯನಿರುವಾಗ ಸಾಮಾನ್ಯವಾಗಿ ಮೊದಲು ತಿಳಿಸಿರುವ ಫಲವುಂಟಾಗುತ್ತದೆ. ಯಾವರಾಶಿ ಲಗ್ನವಾಗಿದ್ದರೂ ಸೂರ್ಯನು ಲಗ್ನದಲ್ಲಿದ್ದರೆ ಜಾತಕನಿಗೆ ಕಣ್ಣಿನಲ್ಲಿ ದೋಷವಿರುತ್ತದೆ; ಎಂದು ಸಾಮಾನ್ಯವಾಗಿ ತಿಳಿಯಬಹುದು.

೨. ಜನನಕಾಲದಲ್ಲಿ ಸೂರ್ಯ ಲಗ್ನಕ್ಕೆ ಎರಡನೆಯ ಸ್ಥಾನದಲ್ಲಿದ್ದರೆ ಜಾತಕನು ಧನಿಕನೂ ರಾಜರಿಂದ ಅಪಹೃತಧನನೂ ಮುಖರೋಗದಿಂದ ಪೀಡಿತನೂ ಆಗುತ್ತಾನೆ; ಮೂರನೆಯ ಸ್ಥಾನದಲ್ಲಿದ್ದರೆ ಶೂರನೂ ಬುದ್ಧಿವಂತನೂ ಆಗುತ್ತಾನೆ; ನಾಲ್ಕನೆಯ ಸ್ಥಾನದಲ್ಲಿದ್ದರೆ ಹೆಚ್ಚು ಪೀಡಿತನೂ ದುಃಖಿತನೂ ಆಗುತ್ತಾನೆ; ಐದನೆಯ ಸ್ಥಾನದಲ್ಲಿದ್ದರೆ ಗಂಡುಮಕ್ಕಳಿಲ್ಲದವನೂ ದರಿದ್ರನೂ ಆಗುತ್ತಾನೆ.

ವಿ–ಪದ್ಯದಲ್ಲಿ 'ನಾಲ್ಕಱೊಳ್ ನಿಂದೊಡಾ ಜನಪಾಣ್ಮಂ ಸುಖಹೀನಂ' ಎಂದಿದೆ. ಬೃಹಜ್ಜಾತಕದಲ್ಲಿ 'ವಿಸುಖಃ ಪೀಡಿತಮಾನಸಶ್ಚತುರ್ಥೇ' ಎಂದಿದೆ.

---

[1] ಗೇಹಿ (ಕ ಗ) [2] ವಿಶಾದು (ಗ) [3] ತೆ (ಗ) [4] ರ್ಥ (ಕ) ರ್ಥಂ (ಗ) [5] ಜನಂಣ್ಮಂ (ಕ)
[6] ರಲ್ಪ್ಯನಧನಂ (ಕ) ರಲ್ಕಣನಂದನಂ (ಗ).

ರವಿ ಲಗ್ನಾವಸಥಕ್ಕೆ ಷಷ್ಠಗೃಹದೊಳ್ ನಿಂದಂದಖಿಲ್ಯಂ ಪರಾ
ಭವ ಭಾ[1]ಜಂ[1] ನೆಲಸಿರ್ದೊಡಸ್ತಗೃಹದೊಳ್ ಸ್ತ್ರೀದೋಷದಿಂದಂ ಪರಾ
ಭವ ಭಾ[2]ಜಂ[2] ನಿಧನಸ್ಥನಾಗೆ ವಿಕ[3]ಲಾ[3]ಕ್ಷಂ ಸ್ವಲ್ಪಪುತ್ರಾನ್ವಿತಂ
ನವಮರ್ಕ್ಷಸ್ಥಿತನಾಗೆ ಪುತ್ರಸುಖವಿತ್ತೋಪೇತನಕ್ಕುಂ ನರಂ ೩

---

ಲೇಖಕನ ಪ್ರಮಾದದಿಂದ 'ಪೀಡಿತ ಮಾನಸಃ' ಎನ್ನುವ ಅರ್ಥಕೊಡುವ ಪದ 'ಜನಪಾಣ್ಮಂ' ಎಂದಾಗಿರಬಹುದು. 'ನಿಂದೊಡಾಧಿನಿಷಣ್ಣಂ' ಎಂದು ವ್ಯತ್ಯಾಸಮಾಡಿದರೆ 'ಪೀಡಿತಮಾನಸಃ' ಎನ್ನುವ ಅರ್ಥ ಬರುತ್ತದೆ.

೩. ಜನನಕಾಲದಲ್ಲಿ ಸೂರ್ಯ ಲಗ್ನಕ್ಕೆ ಆರನೆಯ ಸ್ಥಾನದಲ್ಲಿದ್ದರೆ ಜಾತಕನು ಹೇಡಿಯೂ ಅವಮಾನಿತನೂ ಆಗುತ್ತಾನೆ; ಏಳನೆಯ ಸ್ಥಾನದಲ್ಲಿದ್ದರೆ ಹೆಂಗುಸಿನ ದೋಷದಿಂದ ಅಪಮಾನಿತನಾಗುತ್ತಾನೆ; ಎಂಟನೆಯ ಸ್ಥಾನದಲ್ಲಿದ್ದರೆ ದೃಷ್ಟಿದೋಷವುಳ್ಳವನೂ ಹೆಚ್ಚು ಗಂಡುಮಕ್ಕಳಿಲ್ಲದವನೂ ಆಗುತ್ತಾನೆ; ಒಂಬತ್ತನೆಯ ಸ್ಥಾನದಲ್ಲಿದ್ದರೆ ಪುತ್ರ ಸೌಖ್ಯ ಮತ್ತು ಧನವುಳ್ಳವನಾಗುತ್ತಾನೆ.

ವಿ—ಷಷ್ಠದಲ್ಲಿ ಸೂರ್ಯನಿದ್ದಾಗ ಬಲಿಷ್ಠನೂ ಜಿತಶತ್ರುವೂ ಆಗುತ್ತಾನೆಂದು ಬೃಹಜ್ಜಾತಕದಲ್ಲಿದೆ. ಸತ್ಯಾಚಾರ್ಯರ ಮತದಂತೆ ಪಾಪಗ್ರಹಗಳು ಷಷ್ಠದಲ್ಲಿ ಶುಭಫಲಪ್ರದರು. ಯವನ ಮತದಂತೆ ಅಶುಭಗ್ರಹಗಳು ಷಷ್ಠದಲ್ಲಿ ಶುಭಫಲಗಳನ್ನು ಕೊಡುವುದಿಲ್ಲ. ಯವನ ಮತದಂತೆಯೇ ಶ್ರೀಧರನೂ ರವಿಯು ಷಷ್ಠದಲ್ಲಿರುವಾಗ 'ಅಖಿಲ್ಯಂ ಪರಾಭವಭಾಜಂ' ಎಂದು ಅಶುಭಫಲವನ್ನೇ ಇಲ್ಲಿ ಹೇಳಿರುತ್ತಾನೆ. ಆದರೆ ಇದೇ ಅಧಿಕಾರದ ೧೭ನೇ ಪದ್ಯದಲ್ಲಿ 'ನಿಲೆ ಷಷ್ಠರಾಶಿಯೆಡೆಯೊಳ್ ಪಾಪಗ್ರಹಂ ಶತ್ರುನಾಶನಂ' ಎಂದು ಹೇಳಿರುವುದರಿಂದ ಒಂದೇ ಸ್ಥಾನದಲ್ಲಿರುವಾಗ ವಿರುದ್ಧಫಲವನ್ನು ಹೇಳಿದಂತಾಗುತ್ತದೆ. ರವಿಯಂತೆಯೇ ಕುಜ ಶನಿಗಳೂ ಷಷ್ಠಭಾವದಲ್ಲಿ ಫಲಪ್ರದರೆಂದು ಹೇಳಿರುವುದರಿಂದ ೧೭ನೇ ಪದ್ಯದಲ್ಲಿ ಹೇಳಿರುವ ಪಾಪಗ್ರಹ ಎನ್ನುವುದಕ್ಕೆ ಸೂರ್ಯನನ್ನು ಬಿಟ್ಟು ಉಳಿದ ಪಾಪಗ್ರಹಗಳು ಎಂದರೆ ಕ್ಷೀಣಚಂದ್ರ ಮತ್ತು ಪಾಪಗ್ರಹದೊಡನಿರುವ ಬುಧ ಎಂದು ಅರ್ಥಮಾಡಬೇಕು. ಚಂದ್ರನಿಗೆ ಷಷ್ಠಸ್ಥಾನದಲ್ಲಿ ಅಶುಭಫಲವು ಉಕ್ತವಾಗಿರುವುದರಿಂದ ಮತ್ತು ಪಾಪಗ್ರಹದೊಡನಿರುವ ಬುಧನು ಷಷ್ಠಸ್ಥಾನದಲ್ಲಿದ್ದರೆ ಶತ್ರುನಾಶನನಾಗುತ್ತಾನೆ ಎಂದು ಅರ್ಥಮಾಡುವುದರಿಂದ ವಿರೋಧ ಪರಿಹಾರವಾಗುತ್ತದೆ. ಅಥವಾ ವರಾಹಮಿಹಿರರು ಲಘುಬೃಹಜ್ಜಾತಕಗಳಲ್ಲಿ ಹೇಳಿರುವ ಪರಸ್ಪರ ವಿರುದ್ಧವಾದ ಯವನ ಸತ್ಯಾಚಾರ್ಯರ ಮತಗಳನ್ನು ಶ್ರೀಧರನೂ ತನ್ನ ಗ್ರಂಥದಲ್ಲಿ ಸಂಗ್ರಹಿಸಿ ಹೇಳಿರಬಹುದು. ಸೂರ್ಯನು ಒಂಬತ್ತನೆಯ ಸ್ಥಾನದಲ್ಲಿಯೂ ಶುಭಫಲಪ್ರದನಲ್ಲವೆಂದು ಕೆಲವು ಜ್ಯೋತಿಷಾಚಾರ್ಯರ ಅಭಿಪ್ರಾಯ.

---

[1] ಗಂ (ಕ ಗ) [2] ರಂ (ಕ ಗ) [3] ಟಾ (ಕ) ದ (ಗ).

ದಿನಪನುದಯಕ್ಕೆ ನಿರೆ ಪ
ತ್ತನೆಯೆಡೆಯೊಳ್ ಸುಖಸಮನ್ವಿತಂ ರವಿ ಪನ್ನೊಂ
ದನೆಯೆಡೆಯೊಳ್ ಧನಿ ಪನ್ನೆರ
ಡನೆಯೆಡೆಯೊಳ್ ದಕ್ಷಿಣಾಕ್ಷಿರಹಿತಂ ಪತಿತಂ ೪

(ಚಂದ್ರಭಾವಫಲ)

ಅಮೃತಕರಂ ಗ್ರಾ[1]ಮ್ಯಾ[1]ರ
ಣ್ಯ ಮಿ[2]ಶ್ರ[2]ಜಲಚರ ವಿಲಗ್ನದೊಳ್ ನೆಲ[3]ಸಿರೆ ಜಾ
ತ[3]ಮನುಷ್ಯಂ ತತ್ಪ್ರಿಯನ
ಕ್ಕುಮನ್ಯಗೇಹಾಶ್ರಯಕ್ಕೆ ಭೀರುವೆನಿಕ್ಕುಂ ೫

---

೪. ಜನನಕಾಲದಲ್ಲಿ ಸೂರ್ಯ ಲಗ್ನಕ್ಕೆ ಹತ್ತನೆಯ ಸ್ಥಾನದಲ್ಲಿದ್ದರೆ ಜಾತಕನು ಸುಖಿಯೂ ಹನ್ನೊಂದನೆಯ ಸ್ಥಾನದಲ್ಲಿದ್ದರೆ ಧನಿಕನೂ ಹನ್ನೆರಡನೆಯ ಸ್ಥಾನದಲ್ಲಿದ್ದರೆ ಬಲಗಣ್ಣಿಲ್ಲದವನೂ ಮತ್ತು ಕರ್ಮ(ಜಾತಿ)ಭ್ರಷ್ಟನೂ ಆಗುತ್ತಾನೆ.

ವಿ—ಸೂರ್ಯ ಹನ್ನೆರಡನೆಯ ಸ್ಥಾನದಲ್ಲಿದ್ದರೆ ಬಲಗಣ್ಣಿರುವುದಿಲ್ಲ ಎನ್ನುವ ಫಲ ಬೃಹಜ್ಜಾತಕದಲ್ಲಿಲ್ಲ. ಲಘುಜಾತಕದಲ್ಲಿ 'ಕಾಣೋ ವ್ಯಯಗೇ' ಎಂದು ಹೇಳಿರುವ ಫಲವನ್ನು ಶ್ರೀಧರನು ಇಲ್ಲಿ ಸೇರಿಸಿ ಹೇಳಿರುತ್ತಾನೆ.

೫. ಜನನಕಾಲದಲ್ಲಿ ಚಂದ್ರ ಗ್ರಾಮ್ಯ ಅರಣ್ಯ ಗ್ರಾಮ್ಯಾರಣ್ಯ ಜಲಚರ ರಾಶಿಯ ಲಗ್ನದಲ್ಲಿದ್ದರೆ ಜಾತಕನು ಆಯಾ ರಾಶಿಗೆ ಹೇಳಿರುವುದನ್ನು ಪ್ರೀತಿಸುವವನೂ ಉಳಿದ ರಾಶಿಗಳಿಗೆ ಹೇಳಿರುವುದಕ್ಕೆ ಹೆದರುವವನೂ ಆಗುತ್ತಾನೆ.

ವಿ—ಗ್ರಾಮ್ಯಾರಣ್ಯ ರಾಶಿವಿಭಾಗದ ವಿವರ ಒಂದನೆಯ ಅಧಿಕಾರದ ೩೨ನೇ ಪದ್ಯದಲ್ಲಿದೆ. ಗ್ರಾಮ್ಯರಾಶಿ ಲಗ್ನವಾಗಿ ಅಲ್ಲಿ ಚಂದ್ರನಿದ್ದರೆ ಜಾತಕನು ಗ್ರಾಮಪ್ರಿಯನೂ ಅರಣ್ಯ ಮತ್ತು ಜಲಭೀರುವೂ ಆಗುತ್ತಾನೆ. ಅರಣ್ಯರಾಶಿ ಲಗ್ನವಾಗಿ ಅಲ್ಲಿ ಚಂದ್ರನಿದ್ದರೆ ಜಾತಕನು ಅರಣ್ಯಪ್ರಿಯನೂ ಗ್ರಾಮ ಮತ್ತು ಜಲಭೀರುವೂ ಆಗುತ್ತಾನೆ. ಜಲಚರರಾಶಿ ಲಗ್ನವಾಗಿ ಅಲ್ಲಿ ಚಂದ್ರನಿದ್ದರೆ ಜಾತಕನು ಜಲಪ್ರಿಯನೂ ಗ್ರಾಮ ಮತ್ತು ಅರಣ್ಯ ಇವುಗಳಿಂದ ಭೀರುವೂ ಆಗುತ್ತಾನೆ. ಗ್ರಾಮ್ಯಾರಣ್ಯ ರಾಶಿ ಲಗ್ನವಾಗಿ ಅಲ್ಲಿ ಚಂದ್ರನಿದ್ದರೆ ಜಾತಕನು ಗ್ರಾಮಪ್ರಿಯನೂ ಅರಣ್ಯಪ್ರಿಯನೂ ಆಗುತ್ತಾನೆ.

---

[1] ಮಾ (ಕ ಗ) [2] ತ್ರ (ಕ ಗ) [3] ನೆಲಜಾತನ (ಗ)

ಉಡುರಾಜಂ ನಿರೆ ಲಗ್ನದೊಳ್ ಕಿವು[1]ಡನುನ್ಮತ್ತಂ[1] ಪರಪ್ರೇಷಿತಂ
ಜಡನಂಧಂ ವಿಕಟಾಂಗಿ ಮೂ[2]ಕನಜತುಂ[2]ಗಾತ್ಮೋದಯಸ್ಥಾಯಿಯಾ
ದೊಡೆ ಧನ್ಯಂ ಬಹುನಂದನಂ ನೆಲಸೆ ವಿತ್ತಸ್ಥಾನದೊಳ್ ವಿತ್ತಮಂ
ಪಡೆಗುಂ [3]ಬ್ಯಂ[3]ದಿಗನಕ್ಕುವೊಂದಿರೆ ತೃತೀಯಸ್ಥಾನದೊಳ್ ವಂಚಕಂ ೭

ಇರೆ ಲಗ್ನಕ್ಕೆ ಚತುರ್ಥದೊಳ್ ಹಿಮಕರಂ ಸತ್ಪುತ್ರವಿತ್ತಾಢ್ಯನೊಂ
ದಿರೆ ತತ್ಪಂಚಮದೊಳ್ ಬಹುಪ್ರಜನರಾತಿಸ್ಥಾನದೊಳ್ ಕೂಡೆ ನಿ
ಷ್ಠುರನಾಲಸ್ಯಸಮನ್ವಿತಂ ಮೃದುವಪುಃಕಾ[4]ಮಾಗ್ನಿ ನಾ[4]ನಾರಿ ಕೂ
ಡಿರೆ ತತ್ಸಪ್ತಮದೊಳ್ ಮದಾ[5]ರ್ದಿ[5]ತನಸಹ್ಯಂ ತದ್ವಿಲಗ್ನೋದ್ಭವಂ ೮

೭. ಜನನಕಾಲದಲ್ಲಿ ಚಂದ್ರ ಲಗ್ನದಲ್ಲಿದ್ದರೆ ಜಾತಕನು ಕಿವುಡನೂ ಉನ್ಮತ್ತನೂ ಸೇವಕನೂ ಚಟುವಟಿಕೆಯಿಲ್ಲದವನೂ ಕುರುಡನೂ ಕುರೂಪಿಯೂ ಮೂಗನೂ ಆಗುತ್ತಾನೆ. ಮೇಷ ಉಚ್ಚಕ್ಷೇತ್ರ (ವೃಷಭ) ಸ್ವಕ್ಷೇತ್ರ (ಕರ್ಕಟಕ) ಈ ಲಗ್ನಗಳಲ್ಲಿ ಚಂದ್ರನಿರುವಾಗ ಧನಿಕನೂ ಹೆಚ್ಚು ಪುತ್ರರನ್ನುಳ್ಳವನೂ ಆಗುತ್ತಾನೆ ; ಎರಡನೆಯ ಸ್ಥಾನದಲ್ಲಿದ್ದರೆ ಧನವಂತನೂ ಕುಟುಂಬಿಯೂ ಮೂರನೆಯ ಸ್ಥಾನದಲ್ಲಿದ್ದರೆ ಮೋಸಗಾರನೂ ಆಗುತ್ತಾನೆ.

ವಿ—ಕ್ಷೀಣಚಂದ್ರನಾದರೆ ಅಶುಭಫಲ ಪೂರ್ಣವಾಗಿ ಫಲಿಸುತ್ತದೆ ; ಚಂದ್ರನು ಮೇಷಲಗ್ನದಲ್ಲಿದ್ದರೆ ಅಧಿಕಪುತ್ರವಂತನೂ ವೃಷಭ ಅಥವಾ ಕರ್ಕಟಕ ಲಗ್ನದಲ್ಲಿದ್ದರೆ ಧನಿಕನೂ ಆಗುತ್ತಾನೆಂದು ಬೇರೆ ಬೇರೆ ಫಲವನ್ನು ಭಟ್ಟೋತ್ಪಲರು ಹೇಳಿರುತ್ತಾರೆ.

೮. ಜನನಕಾಲದಲ್ಲಿ ಚಂದ್ರ ಲಗ್ನಕ್ಕೆ ನಾಲ್ಕನೆಯ ಸ್ಥಾನದಲ್ಲಿದ್ದರೆ ಜಾತಕನು ಸತ್ಪುತ್ರವಂತನೂ ಧನಿಕನೂ ಐದನೆಯ ಸ್ಥಾನದಲ್ಲಿದ್ದರೆ ಹೆಚ್ಚು ಸಂತಾನವುಳ್ಳವನೂ ಆರನೆಯ ಸ್ಥಾನದಲ್ಲಿದ್ದರೆ ನಿಷ್ಠುರಸ್ವಭಾವವುಳ್ಳವನೂ ಅಲಸನೂ ಸುಕುಮಾರ ಶರೀರವುಳ್ಳವನೂ ಹೆಚ್ಚು ಕಾಮವಿಲ್ಲದವನೂ ಮಂದಾಗ್ನಿಯೂ ಬಹುಶತ್ರುವೂ ಏಳನೆಯ ಸ್ಥಾನದಲ್ಲಿದ್ದರೆ ಅತಿಕಾಮುಕನೂ ಈರ್ಷ್ಯಾಳುವೂ ಆಗುತ್ತಾನೆ.

---

[1] ಡಂನ್ಮತಂ (ಕ) ಡನಾಂನತಂ (ಗ) [2] ಗ ನಿಜ ತಾಂ (ಕ) ಗಜಾತಾಂ (ಗ) [3] ಧ್ಯಂ (ಕ ಗ) [4] ಯಾಗ್ನಿ ಭಾ (ಕ ಗ) [5] ದ್ರಿ (ಕ ಗ).

ಉದಯಕ್ಕೆಂಟಱೊಳಿಂದು ಕೂಡೆ ಸರುಜಂ ಕಾಮಾಧಿಕಂ [1]ತ್ರಿ[1]ತ್ರಿಕೋ
ಣದೊಳಾಢ್ಯಂ ಸುಭಗಂ ಸುಹೃತ್ತನಯು ಬಂಧೂಪೇತನುದ್ಯೋಗಗೇ
ಹದೊಳೊಳ್ಪಂ ನೆಱೆ ಶೌರ್ಯವಂ ಸುಮತಿ ಶೂರಂ ಲಾಭಸಂಸ್ಥಾನದೊಳ್
ವಿದಿತಾತ್ಮಂ ಪಡೆಪಾಳಿ ರಿಃಫದೊಳಸತ್ಯಂ ವಾಮನೇತ್ರಾಂಧಕಂ ೮

(ಕುಜಭಾವ ಫಲ)

ಕನಕನಿರೆ ಲಗ್ನದೊಳ್ ಕ್ಷತ
ತನು ವಿತ್ತಸ್ಥಾನದೊಳ್ ಕದನ್ನಭುಜಂ ಧ
ರ್ಮನಿವಾಸದೊಳಘಕರನ
ನ್ಯನಿಲಯದೊಳ್ ರವಿಗೆ ಪೇೞ್ದ ಫಲಮಂ ಪಡೆಗುಂ ೯

---

೮. ಜನನಕಾಲದಲ್ಲಿ ಚಂದ್ರ ಲಗ್ನಕ್ಕೆ ಎಂಟನೆಯ ಸ್ಥಾನದಲ್ಲಿದ್ದರೆ ಜಾತಕನು ರೋಗಿಷ್ಠನೂ ಅತಿಕಾಮಿಯೂ ಆಗುತ್ತಾನೆ; ಒಂಬತ್ತನೆಯ ಸ್ಥಾನದಲ್ಲಿದ್ದರೆ ಶ್ರೀಮಂತನೂ ಜನಪ್ರಿಯನೂ ಸ್ನೇಹಿತರು ಮಕ್ಕಳು ಮತ್ತು ಬಂಧುಗಳಿಂದ ಕೂಡಿರುವವನೂ ಆಗುತ್ತಾನೆ; ಹತ್ತನೆಯ ಸ್ಥಾನದಲ್ಲಿದ್ದರೆ ತನ್ನ ಸಾಮರ್ಥ್ಯವನ್ನು ಸಮಗ್ರವಾಗಿ ಉಪಯೋಗಿಸಿ ಕಾರ್ಯವನ್ನು ಸಾಧಿಸುವವನೂ ಬುದ್ಧಿವಂತನೂ ಪರಾಕ್ರಮಿಯೂ ಆಗುತ್ತಾನೆ; ಹನ್ನೊಂದನೆಯ ಸ್ಥಾನದಲ್ಲಿದ್ದರೆ ಪ್ರಖ್ಯಾತನೂ ಲಾಭವನ್ನು ಪಡೆಯುವವನೂ ಆಗುತ್ತಾನೆ; ಹನ್ನೆರಡನೆಯ ಸ್ಥಾನದಲ್ಲಿದ್ದರೆ ಸುಳ್ಳುಹೇಳುವವನೂ ಎಡಗಣ್ಣು ಕುರುಡನೂ ಆಗುತ್ತಾನೆ.

ವಿ–ಎಂಟನೆಯ ಸ್ಥಾನದಲ್ಲಿ ಚಂದ್ರನಿದ್ದರೆ 'ಬಹುಮತಿಃ'—ಚಪಲಚಿತ್ತನಾಗುತ್ತಾನೆಂದು ಬೃಹಜ್ಜಾತಕದಲ್ಲಿದೆ. ಹನ್ನೆರಡನೆಯ ಸ್ಥಾನದಲ್ಲಿ ಚಂದ್ರನಿದ್ದರೆ 'ವಾಮನೇತ್ರಾಂಧ'ನಾಗುತ್ತಾನೆನ್ನುವ ಫಲ ಬೃಹಜ್ಜಾತಕದಲ್ಲಿಲ್ಲ. ಲಘುಜಾತಕದಲ್ಲಿರುವ ಈ ಫಲವನ್ನು ಶ್ರೀಧರನು ಇಲ್ಲಿ ಸಂಗ್ರಹಿಸಿರುತ್ತಾನೆ.

೯. ಜನನಕಾಲದಲ್ಲಿ ಅಂಗಾರಕ ಲಗ್ನದಲ್ಲಿದ್ದರೆ ಜಾತಕನು ಗಾಯದಿಂದ ಕೂಡಿದ ಶರೀರವುಳ್ಳವನೂ ಎರಡನೆಯ ಸ್ಥಾನದಲ್ಲಿದ್ದರೆ ಕೆಟ್ಟ ಅನ್ನವನ್ನು ತಿನ್ನುವವನೂ ಒಂಬತ್ತನೆಯ ಸ್ಥಾನದಲ್ಲಿದ್ದರೆ ಪಾಪಕೃತ್ಯಗಳನ್ನು ಮಾಡುವವನೂ ಉಳಿದ (೩–೪–೫–೬–೭–೮–೧೦–೧೧–೧೨ನೇ) ಸ್ಥಾನಗಳಲ್ಲಿದ್ದರೆ ಸೂರ್ಯನಿಗೆ ಈ ಸ್ಥಾನಗಳಲ್ಲಿರುವಾಗ ಹೇಳಿರುವ ಫಲಗಳನ್ನು ಪಡೆಯುವವನೂ ಆಗುತ್ತಾನೆ.

---

[1] ತ (ಗ).

(ಬುಧಭಾವ ಫಲ)

ವನಜದ್ವಿಟ್ಸುತನೊಂದಿದೆಂದುದಯದೊಳ್ ಪ್ರಾಜ್ಞಂ ಧನಸ್ಥಾನದೊಳ್
ಧನಿ ಲಗ್ನಕ್ಕೆ ತೃತೀಯದೊಳ್ ಖಳನವಂ ತುರ್ಯರ್ಕ್ಷದೊಳ್ ಪಂಡಿತಂ
ತನಯಸ್ಥಾನದೊಳಾತ್ಮಮಂತ್ರಿ ರಿಪುವೊಳ್ ನಿಶ್ಶತ್ರು ಜಾಮಿತ್ರಕೇ
ತನದೊಳ್ ಧರ್ಮಗುಣಾನ್ವಿತಂ ಪೆಱವಱೊಳ್ ಸೂರ್ಯೋಕ್ತಭಾವಾನ್ವಿತಂ ೧೦

(ಗುರುಭಾವ ಫಲ)

ದಿವಿಜೇಜ್ಯಂ ನಿರೆ ಜನ್ಮಲಗ್ನ ಗೃಹದೊಳ್ *ಪ್ರಾಜ್ಞಂ ದ್ವಿತೀಯರ್ಕ್ಷದೊಳ್
ಸುವಚಂ ಮೂಱಱೊಳರ್ಥ[1]ಲೋ[1]ಭಿ ಸುಖದೊಳ್ ಸೌಖ್ಯಾನುರಕ್ತಂ ತನೂ
ಭವದೊಳ್ ನಿಶ್ಚಯಬುದ್ಧನಾಱಱೆಯೊಳ್* ನಿಶ್ಶತ್ರು ಜಾಮಿತ್ರದೊಳ್
[2][ಸುವಿದಂ][2] ತಂದೆಯಿನೆಂಟಱೊಳ್ ಖಳನೆನಿಕ್ಕುಂ ಧರ್ಮದೊಳ್ ದೀಕ್ಷಿತಂ ೧೧

ಸುರಗುರು ಹೋರೆಗೆ [3]ದಶಮದೊ[3]
ಳಿರೆ ವಿತ್ತಸಮೃದ್ಧನೆಂಗೆ ಪನ್ನೊಂದಱೊಳೊಂ
ದಿರೆ ಪಡೆಯಲಱಿವನೆಂಗ
[4]ನ್ತ್ಯ[4]ರಾಶಿಯೊಳ್ ನೆಲಸೆ ನೀಚನೆಂ[5]ಗಾ ನರನಂ[5] ೧೨

---

೧೦. ಜನನಕಾಲದಲ್ಲಿ ಬುಧ ಲಗ್ನದಲ್ಲಿದ್ದರೆ ಜಾತಕನು ಪಂಡಿತನೂ ಎರಡನೆಯ ಸ್ಥಾನದಲ್ಲಿದ್ದರೆ ಧನಿಕನೂ ಮೂರನೆಯ ಸ್ಥಾನದಲ್ಲಿದ್ದರೆ ದುಷ್ಟನೂ ನಾಲ್ಕನೆಯ ಸ್ಥಾನದಲ್ಲಿದ್ದರೆ ವಿದ್ವಾಂಸನೂ ಐದನೆಯ ಸ್ಥಾನದಲ್ಲಿದ್ದರೆ ಮಂತ್ರಿಯೂ ಆರನೆಯ ಸ್ಥಾನದಲ್ಲಿದ್ದರೆ ಶತ್ರುವಿಲ್ಲದವನೂ ಏಳನೆಯ ಸ್ಥಾನದಲ್ಲಿದ್ದರೆ ಧರ್ಮಜ್ಞನೂ ಗುಣವಂತನೂ ಆಗುತ್ತಾನೆ; ಉಳಿದ (೮–೯–೧೦ ೧೧–೧೨)ನೇ ಸ್ಥಾನಗಳಲ್ಲಿರುವಾಗ ಸೂರ್ಯಭಾವಫಲದಂತೆ ಫಲಗಳನ್ನನುಭವಿಸುತ್ತಾನೆ.

೧೧. ಜನನಕಾಲದಲ್ಲಿ ಗುರು ಲಗ್ನದಲ್ಲಿದ್ದರೆ ಜಾತಕನು ವಿದ್ವಾಂಸನೂ ಎರಡನೆಯ ಸ್ಥಾನದಲ್ಲಿದ್ದರೆ ಒಳ್ಳೆಯ ಮಾತನಾಡುವವನೂ ಮೂರನೆಯ ಸ್ಥಾನದಲ್ಲಿದ್ದರೆ ಜಿಪುಣನೂ ನಾಲ್ಕನೆಯ ಸ್ಥಾನದಲ್ಲಿದ್ದರೆ ಸುಖಿಯೂ ಐದನೆಯ ಸ್ಥಾನದಲ್ಲಿದ್ದರೆ ಬುದ್ಧಿವಂತನೂ ಆರನೆಯ ಸ್ಥಾನದಲ್ಲಿದ್ದರೆ ಶತ್ರುವಿಲ್ಲದವನೂ ಏಳನೆಯ ಸ್ಥಾನದಲ್ಲಿದ್ದರೆ ತಂದೆಗಿಂತ ಹೆಚ್ಚು ತಿಳಿದವನೂ ಎಂಟನೆಯ ಸ್ಥಾನದಲ್ಲಿದ್ದರೆ ದುಷ್ಟನೂ ಒಂಬತ್ತನೆಯ ಸ್ಥಾನದಲ್ಲಿದ್ದರೆ ದೀಕ್ಷಿತನೂ ಆಗುತ್ತಾನೆ.

೧೨. ಜನನಕಾಲದಲ್ಲಿ ಗುರು ಲಗ್ನಕ್ಕೆ ಹತ್ತನೆಯ ಸ್ಥಾನದಲ್ಲಿದ್ದರೆ ಜಾತಕನು ಹೆಚ್ಚುಹಣವುಳ್ಳವನೂ ಹನ್ನೊಂದನೆಯ ಸ್ಥಾನದಲ್ಲಿದ್ದರೆ ಲಾಭವನ್ನುಗಳಿಸಲು ತಿಳಿದವನೂ ಹನ್ನೆರಡನೆಯ ಸ್ಥಾನದಲ್ಲಿದ್ದರೆ ನೀಚನೂ ಆಗುತ್ತಾನೆ.

---

* ಈ ಭಾಗ (ಗ) ಪ್ರತಿಯಲ್ಲಿಲ್ಲ [1] ಲಾ (ಕ) [2] ವಿನುತಂ (ಕ ಗ) [3] ಹತ್ತರೊ (ಕ) [4] ನ್ಯ (ಕ ಗ) [5] ಗಾ ನರಂ (ಕ) ದಾಗ ನರಂ (ಗ).

(ಶುಕ್ರಭಾವ ಫಲ)

ದನುಜೇಜ್ಯಂ ನಿಲೆ ಲಗ್ನದೊಳ್ ಸುರತನಿಷ್ಣಾತಂ ಸುಖಾನ್ವೀತನ
ಸ್ತ್ನನಿಕೇತಸ್ಥಿತನಾಗೆ ಕಾಮಿ ಕಲಹೋದ್ಯುಕ್ತಂ [1]ವ್ಯಯ[1]ಕ್ಷೇತ್ರದೊಳ್
ಧನವಂತಂ ಸುತಗೇಹದೊಳ್ ಸುಖಿಯೆನಿಕ್ಕುಂ ಭಾವಿಪಂದಂಗಿರ
ಸ್ಸನ ಜಾತೋಕ್ತಫಲಂಗಳನ್ಯಗೃಹದೊಳ್ ತಲ್ಲಗ್ನಜಂಗೊಂದುಗುಂ ೧೩

(ಶನಿಭಾವ ಫಲ)

ಖರ[2]ರುಚ್ಛಿಂದ[2]ನನೊಂದಿದಂದುದಯದೊಳ್ [3]ರೋ[3]ಗಾನ್ವಿತಂ ಬಾ[4]ಲ್ಯ[4]ಕಾ
ಲರುಜಾ[5]ರ್ತಂ[5] ಮಲಿನಂ ಸಕಾಮನಲಸಂ ಪಾ[6]ರತ್ರಿಕವ್ಯಾ[6]ಪ್ತಿ ತ
ತ್ಪರನಕ್ಕುಂ ಧನಸಂಸ್ಥನಾ[7]ಗಧನ[7]ನಕ್ಕುಂ ತ್ರಿತ್ರಿಕೋಣಸ್ಥನಾ
ಗಿರೆ ಪಾ[8]ಪಾವ[8]ಹನಕ್ಕಿ[9]ಮರ್ಕ[9]ಫಲವನ್ಯಕ್ಷೇತ್ರದೊಳ್ ಕುಡುಗುಂ ೧೪

---

೧೩. ಜನನಕಾಲದಲ್ಲಿ ಶುಕ್ರ ಲಗ್ನದಲ್ಲಿದ್ದರೆ ಜಾತಕನು ಕಾಮಕೇಳಿಯಲ್ಲಿ ನಿಪುಣನೂ ಸುಖಿಯೂ ಏಳನೆಯ ಸ್ಥಾನದಲ್ಲಿದ್ದರೆ ಕಾಮಿಯೂ ಕಲಹಪ್ರಿಯನೂ ಹನ್ನೆರಡನೆಯ ಸ್ಥಾನದಲ್ಲಿದ್ದರೆ ಧನಿಕನೂ ಐದನೆಯ ಸ್ಥಾನದಲ್ಲಿದ್ದರೆ ಸುಖಿಯೂ ಆಗುತ್ತಾನೆ; ಉಳಿದ (೨–೩–೪–೬–೮–೯–೧೦–೧೧ನೇ) ಸ್ಥಾನಗಳಲ್ಲಿದ್ದರೆ ಹಿಂದೆ ಗುರುವಿಗೆ ಈ ಸ್ಥಾನಗಳಲ್ಲಿ ಹೇಳಿರುವ ಫಲಗಳು ಜಾತಕನಿಗೆ ಉಂಟಾಗುತ್ತವೆ.

೧೪. ಜನನಕಾಲದಲ್ಲಿ ಶನಿ ಲಗ್ನದಲ್ಲಿದ್ದರೆ ಜಾತಕನು ರೋಗಿಷ್ಠನೂ ಶೈಶವಾವಸ್ಥೆಯಲ್ಲಿ ರೋಗಪೀಡಿತನೂ ಕೊಳಕನೂ ಕಾಮಿಯೂ ಸೋಮಾರಿಯೂ ಮೋಕ್ಷಾಪೇಕ್ಷಿಯೂ ಆಗುತ್ತಾನೆ; ಎರಡನೆಯ ಸ್ಥಾನದಲ್ಲಿದ್ದರೆ ದರಿದ್ರನೂ ಒಂಬತ್ತನೆಯ ಸ್ಥಾನದಲ್ಲಿದ್ದರೆ ಪಾಪಿಷ್ಠನೂ ಉಳಿದ (೩–೪–೫–೬–೭–೮–೧೦–೧೧–೧೨ನೇ) ಸ್ಥಾನಗಳಲ್ಲಿದ್ದರೆ ಹಿಂದೆ ಸೂರ್ಯನಿಗೆ ಆ ಸ್ಥಾನಗಳಲ್ಲಿ ಹೇಳಿರುವ ಫಲಗಳನ್ನು ಅನುಭವಿಸುವವನೂ ಆಗುತ್ತಾನೆ.

ವಿ–ಶನಿ ಲಗ್ನದಲ್ಲಿದ್ದರೆ 'ಅದೃಷ್ಟಾರ್ಥಃ' ಎಂದು ಬೃಹಜ್ಜಾತಕದಲ್ಲಿ ಫಲ ಹೇಳಿದೆ. ವಿವೃತಿ ಮತ್ತು ಸುಬೋಧಿನೀ ಎಂಬ ಬೃಹಜ್ಜಾತಕ ಟೀಕೆಗಳಲ್ಲಿ 'ಅದೃಷ್ಟಾರ್ಥಃ' ಎನ್ನುವುದಕ್ಕೆ 'ನಿತ್ಯದರಿದ್ರಃ' ಎಂದು ಅರ್ಥವಿದೆ. ಹೋರಾವಿವರಣ ಟೀಕೆಯಲ್ಲಿ ಮೊದಲು ಇದೇ ಅರ್ಥವಿದ್ದು ಕೊನೆಯಲ್ಲಿ 'ಶನೇಶ್ಚೇಷ್ಟಾಬಲಾದಿ ಯೋಗೇ ಸತಿ ಪಾರತ್ರಿಕಪ್ರಯೋಜನ ಇತಿ ಚ ಅದೃಷ್ಟಾರ್ಥ ಶಬ್ದೇನ ದ್ಯೋತ್ಯತೇ । ತಥಾಚ ಅದೃಷ್ಟಾರ್ಥಃ ಮುಮುಕ್ಷುರಿತ್ಯರ್ಥಃ' ಎಂದೂ 'ಏವಂ ಬಲಿನಿ ಶನೌ ಯೋಜ್ಯಂ । ಬಲಹೀನೇ ಪೂರ್ವೋಕ್ತ

---

[1] ಧನ (ಕ ಗ) [2] ದುದ್ವಂಧ (ಕ) ದುಗ್ವಂಧ (ಗ) [3] ರಾ (ಕ) [4] ಲ (ಕ ಗ) [5] ರ್ಥಂ (ಕ ಗ) [6] ತತ್ರಿಕದ್ವಾ (ಕ) ತತ್ರಿಕವ್ಯಾ (ಗ) [7] ಗೆ ಬುಧ (ಕ ಗ) [8] ಪಾಪ (ಕ) ಪ (ಗ) [9] ವರ್ಥ (ಕ ಗ).

(ಸ್ವ ಉಚ್ಚ ಗುರುಕ್ಷೇತ್ರ ಲಗ್ನಸ್ಥಿತ ಶನಿಫಲ)

ಅಮರೇಜ್ಯಗೃಹಂ ಮೇಣಾ
ತ್ಮಮಂದಿರಂ ಸ್ವೋಚ್ಚಮುದಯಮಾಗಿರೆ ಶನಿ ಸಂ
ಕ್ರಮಿಸಿದೊಡೆ ನರಂ ನರಪತಿ
ಸಮನಕ್ಕುಂ ಗ್ರಾಮ ಪುರ ಜನಾಧಿಪನಕ್ಕುಂ ೧೫

(ಕ್ಷೇತ್ರವಿಶೇಷದಿಂದ ಭಾವಫಲ ಜ್ಞಾನ)

ಮಿತ್ರಾ[1]ರಿ[1] ಪರೋ[2]ಚ್ಚ[2]ಸ್ವ
ಕ್ಷೇತ್ರಸ್ಥಿತರಾಗೆ ಶುಭ ಶುಭಾನ್ಯರ್ ಲಗ್ನ
ಕ್ಷೇತ್ರಾ[3]ದಿ ಭಾ[3]ವಫಲಮಂ
ಸೂತ್ರಾರ್ಥೋಕ್ತಿ[4]ಯೊಳ್[4] ಮುಂದನಱುವುದು [5]ತಜ್ಜ್ಞಂ[5] ೧೬

---

ಮೇವ ಫಲಂ ವಾಚ್ಯಂ' ಎಂದೂ ಇದೆ. ಈ ಟೀಕಾಕಾರರ ಅಭಿಪ್ರಾಯದಂತೆ ಶನಿ ಬಲಿಷ್ಠನಾಗಿರುವಾಗ ಉಂಟಾಗುವ ಫಲವನ್ನೂ ಶ್ರೀಧರನು ತನ್ನ ಈ ಗ್ರಂಥದಲ್ಲಿ ಹೇಳಿರುತ್ತಾನೆ. ಮುಂದಿನ ಪದ್ಯದಲ್ಲಿ ತುಲಾ ಧನುಸ್ಸು ಮಕರ ಕುಂಭ ಮೀನಲಗ್ನಗಳಲ್ಲಿರುವಾಗ ಶನಿಗೆ ಪ್ರತ್ಯೇಕವಾಗಿ ಫಲವನ್ನು ಹೇಳಿರುವುದರಿಂದ ಆ ಲಗ್ನಗಳನ್ನು ಬಿಟ್ಟು ಉಳಿದ ಲಗ್ನಗಳಲ್ಲಿರುವಾಗ ಈ ಪದ್ಯದಲ್ಲಿರುವ ಫಲವನ್ನು ತಿಳಿಯಬೇಕು.

೧೫. ಗುರುವಿನ ಕ್ಷೇತ್ರ (ಧನುಸ್ಸು ಮೀನ) ಅಥವಾ ಸ್ವಕ್ಷೇತ್ರ (ಮಕರ ಕುಂಭ) ಅಥವಾ ಉಚ್ಚಕ್ಷೇತ್ರ (ತುಲಾ) ಈ ರಾಶಿಗಳಲ್ಲೊಂದು ಲಗ್ನವಾಗಿ ಅಲ್ಲಿ ಶನಿ ಇದ್ದರೆ ಜಾತಕನು ರಾಜನಿಗೆ ಸಮನೂ ಗ್ರಾಮ ಅಥವಾ ಪಟ್ಟಣಕ್ಕೆ ಮುಖ್ಯಾಧಿಕಾರಿಯೂ ಆಗುತ್ತಾನೆ.

೧೬. ಹಿಂದಣ ಪದ್ಯಗಳಲ್ಲಿ ಹೇಳಿರುವ ಮಿತ್ರಕ್ಷೇತ್ರ ಶತ್ರುಕ್ಷೇತ್ರ ಉದಾಸೀನಕ್ಷೇತ್ರ ಉಚ್ಚಕ್ಷೇತ್ರ ಸ್ವಕ್ಷೇತ್ರ ಇವುಗಳಲ್ಲಿ ಶುಭಾಶುಭಗ್ರಹಗಳಿರುವಾಗ ಉಂಟಾಗುವ ಲಗ್ನಾದಿ ದ್ವಾದಶಭಾವಗಳ ಫಲಗಳನ್ನು ಮುಂದೆ ತಿಳಿಸಿರುವಂತೆ ತಿಳಿದುಕೊಳ್ಳುವುದು.

ವಿ–ಗ್ರಹ ಮಿತ್ರ ಉಚ್ಚ ಸ್ವಕ್ಷೇತ್ರಗಳಲ್ಲಿದ್ದರೆ ಭಾವಫಲವೃದ್ಧಿಯೂ ಶತ್ರು ನೀಚಕ್ಷೇತ್ರಗಳಲ್ಲಿದ್ದರೆ ಭಾವಫಲಹಾನಿಯೂ ಉದಾಸೀನ ಕ್ಷೇತ್ರದಲ್ಲಿದ್ದರೆ ಸಾಮಾನ್ಯಫಲವೂ ಉಂಟಾಗುತ್ತದೆ. ಯಾವ ಭಾವಫಲವನ್ನು ನಿರ್ಣಯಿಸಬೇಕಾದರೂ ಆ ಭಾವವನ್ನೇ ಲಗ್ನವೆಂದು ಭಾವಿಸಿ ಆಯಾ ಭಾವದ ಫಲವನ್ನು ವಿವರವಾಗಿ ತಿಳಿಯಬೇಕು.

---

[1] ರಿ (ಕ ಗ) [2] ಚ್ಚಂ (ಕ ಗ) [3] ವಿಭಾರ್ಗ (ಗ) [4] ಯೊಳ್ (ಕ) ಯೊಳು (ಗ) [5] ಪ್ರಜ್ಞಂ (ಕ).

ತನುವಿತ್ತಾದಿ ವಿಲಗ್ನಭಾವಫಲದೊಳ್ ಸೌಮ್ಯಗ್ರಹಂ ನಿಂದೊಡಂ
ತನಿತುಂ ಭಾವಫಲಕ್ಕೆ ಪುಷ್ಟಿ[1]ಫಲದಂ ಪಾಪಗ್ರಹಂ ಕೂಡೆ ಕೇ
ಡನೆ ಮಾಳ್ಕುಂ ನಿರೆ ಷಷ್ಠರಾಶಿಯೆಡೆಯೊಳ್ ಪಾಪಗ್ರಹಂ ಶತ್ರುನಾ
ಶನಮಂತ್ಯಾ[2]ಷ್ಟಮದೊಳ್[2] ಶುಭಾಶುಭದೊಳಾರುಂ ನಿಂದೊಡಂ ನಿಂದಿತಂ ೧೭

೧೭. ಲಗ್ನ ದ್ವಿತೀಯ ಮೊದಲಾದ ಭಾವಗಳ ಫಲಗಳನ್ನು ನಿರ್ಣಯಿಸುವಾಗ ಯಾವ ಭಾವದಲ್ಲೇ ಆಗಲಿ ಶುಭಗ್ರಹವಿದ್ದರೆ ಆ ಭಾವಫಲಕ್ಕೆ ವೃದ್ಧಿಯೂ ಪಾಪಗ್ರಹವಿದ್ದರೆ ಆ ಭಾವಫಲಕ್ಕೆ ಕುಂದೂ ಉಂಟಾಗುತ್ತದೆ. ಆರನೆಯ ಸ್ಥಾನದಲ್ಲಿ ಪಾಪಗ್ರಹವಿದ್ದರೆ ಶತ್ರುನಾಶವೂ ಹನ್ನೆರಡು ಮತ್ತು ಎಂಟನೆಯ ಸ್ಥಾನಗಳಲ್ಲಿ ಶುಭಾಶುಭ ಗ್ರಹಗಳಲ್ಲಾವುದಿದ್ದರೂ ಅಶುಭಫಲವೇ ಉಂಟಾಗುತ್ತದೆ.

ವಿ—ಷಷ್ಠವು ಉಪಚಯಸ್ಥಾನವಾದುದರಿಂದ ಅಲ್ಲಿ ಗ್ರಹವಿದ್ದಾಗ ಶತ್ರುನಾಶವುಂಟಾಗುತ್ತದೆ. ಹನ್ನೆರಡು ಮತ್ತು ಎಂಟು ಈ ಎರಡು ಸ್ಥಾನಗಳಲ್ಲಿ ಯಾವ ಗ್ರಹವೂ ಶುಭಫಲಪ್ರದವಲ್ಲ. ವರಾಹಮಿಹಿರಾಚಾರ್ಯರಿಗೆ ಸಮ್ಮತವಾದ ಲಘುಜಾತಕದಲ್ಲಿರುವ ಅಭಿಪ್ರಾಯವನ್ನು ಶ್ರೀಧರನು ಈ ಪದ್ಯದಲ್ಲಿ ಹೇಳಿರುತ್ತಾನೆ. ಬೃಹಜ್ಜಾತಕದಲ್ಲಿ 'ಸತ್ಯಃ ಕಥಯತಿ ವಿಪರೀತಂ ರಿಃಫ ಷಷ್ಠಾಷ್ಟಮೇಷು' ಎಂದು ಸತ್ಯಾಚಾರ್ಯರ ಅಭಿಪ್ರಾಯವಿದೆ. ಇದರಂತೆ ಆರು ಎಂಟು ಹನ್ನೆರಡನೆಯ ಸ್ಥಾನಗಳಲ್ಲಿ ಶುಭಗ್ರಹಗಳಿದ್ದರೆ ಆ ಭಾವಫಲಗಳ ಹಾನಿಯೂ ಅಶುಭಗ್ರಹಗಳಿದ್ದರೆ ಆ ಭಾವಫಲಗಳ ವೃದ್ಧಿಯೂ ಉಂಟಾಗುತ್ತದೆ. ಎಂದರೆ ಎಂಟನೆಯ ಭಾವದಲ್ಲಿ ಶುಭಗ್ರಹವಿದ್ದರೆ ಮೃತ್ಯುಹಾನಿಯೂ ಅಶುಭಗ್ರಹವಿದ್ದರೆ ಮೃತ್ಯುವೃದ್ಧಿಯೂ ಅಂತೆಯೇ ಹನ್ನೆರಡನೆಯ ಭಾವದಲ್ಲಿ ಶುಭಗ್ರಹವಿದ್ದರೆ ವ್ಯಯಹಾನಿಯೂ ಅಶುಭಗ್ರಹವಿದ್ದರೆ ವ್ಯಯಾಧಿಕ್ಯವೂ ಉಂಟಾಗುತ್ತದೆ ಎಂದು ಸತ್ಯಾಚಾರ್ಯರ ಅಭಿಪ್ರಾಯ.

ಭಟ್ಟೋತ್ಪಲರ ವ್ಯಾಖ್ಯಾನದಲ್ಲಿ 'ಪಾಪಗ್ರಹಗಳು ಷಷ್ಠಸ್ಥಾನದಲ್ಲಿ ಶತ್ರುವೃದ್ಧಿಯನ್ನುಂಟುಮಾಡುತ್ತವೆ' ಎನ್ನುವುದು ಸತ್ಯಾಚಾರ್ಯರ ಅಭಿಪ್ರಾಯ ಎಂದಿದೆ. ಆದರೆ ಸತ್ಯಾಚಾರ್ಯರು 'ಷಷ್ಠೇ ರಿಪುರೋಗಶೋಕಘ್ನಃ' ಎಂದು ರವಿಗೆ ಷಷ್ಠಭಾವಫಲವನ್ನು ಹೇಳಿರುತ್ತಾರೆ. ಇದರಂತೆ ಪಾಪಗ್ರಹವು ಷಷ್ಠಭಾವದಲ್ಲಿ ಶುಭಫಲಗಳನ್ನು ಕೊಡುತ್ತದೆ ಎಂಬುದು ಅವರ ಭಾವ. ಆದುದರಿಂದ ಸತ್ಯಾಚಾರ್ಯರು ಹೇಳಿರುವುದಕ್ಕೆ ವಿರುದ್ಧವಾದ ಅಭಿಪ್ರಾಯವನ್ನೇ ಸತ್ಯಾಚಾರ್ಯರ ಮತವೆಂದು ಭಟ್ಟೋತ್ಪಲರು ವ್ಯಾಖ್ಯಾನದಲ್ಲಿ ಹೇಳಿರುವುದು ವಿಚಾರಣೀಯ.

---

[1] ಟ (ಕ ಗ) [2] ಯಮದೊಳು (ಕ) ಲಯಮದೊಳ್ (ಗ).

(ಭಾವಫಲ ತಾರತಮ್ಯ)

ಫಲದೊಳ್ ಪಾದಮನಾತ್ಮಮಿತ್ರಗೃಹದೊಳ್ ಸ್ವಕ್ಷೇತ್ರದೊಳ್ ನಿಂದೊಡಾ
ಫಲಪಾದದ್ವಯಮಂ ತ್ರಿಪಾದಫಲಮಂ ಮೂಲತ್ರಿಕೋಣಂಗಳೊಳ್
ಫಲಸಾ[1]ಮ್ಯತ್ವ[1]ಮನುಚ್ಚದೊ[2]ಳ್ ಕು[2]ಡುಗುಮನ್ಯಕ್ಷೇತ್ರದೊಳ್ ಸ್ವಲ್ಪಮಂ
ಫಲಮಂ ನೀಚದೊಳಸ್ತದೊಳ್ ವಿಫಲಮಂ ಲಗ್ನಾದಿ ಭಾವೋಕ್ತಮಂ ೧೮

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ಲಗ್ನಾದಿಭಾವಪ್ರಕರಣವರ್ಣನಂ ಅಷ್ಟಾದಶಾಧಿಕಾರಂ

---

೧೮. ಗ್ರಹ ತನ್ನ ಮಿತ್ರಕ್ಷೇತ್ರದಲ್ಲಿದ್ದರೆ ಲಗ್ನಾದಿಭಾವಫಲಗಳಲ್ಲಿ ಕಾಲು ಭಾಗವನ್ನೂ ಸ್ವಕ್ಷೇತ್ರದಲ್ಲಿದ್ದರೆ ಅರ್ಧಭಾಗವನ್ನೂ ಮೂಲತ್ರಿಕೋಣದಲ್ಲಿದ್ದರೆ ಮುಕ್ಕಾಲುಭಾಗವನ್ನೂ ಉಚ್ಚಕ್ಷೇತ್ರದಲ್ಲಿದ್ದರೆ ಹೇಳಿರುವಷ್ಟು ಪೂರ್ಣಫಲವನ್ನೂ ಶತ್ರುಕ್ಷೇತ್ರದಲ್ಲಿದ್ದರೆ ಅಲ್ಪ ಫಲವನ್ನೂ ನೀಚಕ್ಷೇತ್ರದಲ್ಲಿದ್ದರೆ ಅಥವಾ ಅಸ್ತಂಗತವಾಗಿದ್ದರೆ ಶೂನ್ಯಫಲವನ್ನೂ ಕೊಡುತ್ತದೆ.

ವಿ–ಭಾವಫಲ ಶುಭ ಅಶುಭ ಎಂದು ಎರಡುವಿಧ. ಗ್ರಹ ಉಚ್ಚಕ್ಷೇತ್ರದಲ್ಲಿದ್ದರೆ ಶುಭಫಲ ಪೂರ್ಣ ಅಶುಭಫಲ ಶೂನ್ಯ; ಮೂಲತ್ರಿಕೋಣದಲ್ಲಿದ್ದರೆ ಶುಭಫಲ ಮುಕ್ಕಾಲುಭಾಗ ಅಶುಭಫಲ ಕಾಲುಭಾಗ; ಸ್ವಕ್ಷೇತ್ರದಲ್ಲಿದ್ದರೆ ಶುಭಾಶುಭಫಲಗಳೆರಡೂ ಸಮಾನ; ಮಿತ್ರಕ್ಷೇತ್ರದಲ್ಲಿದ್ದರೆ ಕಾಲುಭಾಗ ಶುಭಫಲ ಮುಕ್ಕಾಲುಭಾಗ ಅಶುಭಫಲ; ಶತ್ರುಕ್ಷೇತ್ರದಲ್ಲಿದ್ದರೆ ಶುಭಫಲ ಅಲ್ಪ ಅಶುಭಫಲ ಅಧಿಕ; ನೀಚಕ್ಷೇತ್ರದಲ್ಲಿದ್ದರೆ ಅಥವಾ ಅಸ್ತಂಗತವಾಗಿದ್ದರೆ ಶುಭಫಲ ಶೂನ್ಯ ಅಶುಭಫಲ ಪೂರ್ಣ; ಈ ಕ್ರಮದಲ್ಲಿ ಜಾತಕನಿಗೆ ಶುಭಾಶುಭಫಲಗಳು ಉಂಟಾಗುತ್ತವೆ.

ಜಾತಕನಿಗೆ ಸಂಭವಿಸುವ ಫಲವಿಚಾರಗಳನ್ನು ನಿರ್ದಿಷ್ಟವಾಗಿ ತಿಳಿಸುವ ಸ್ಥಾನಗಳಿಗೆ ಭಾವಗಳೆಂದು ಹೆಸರು. ೧ನೇ ಅಧಿಕಾರದ ೩೩ನೇ ಪದ್ಯದಲ್ಲಿ ತಿಳಿಸಿರುವಂತೆ ಭಾವಗಳು ಹನ್ನೆರಡು. ಭಾವಗಳನ್ನು ಗಣಿತದಿಂದ ಆನಯನ ಮಾಡಿ ತಿಳಿಯಬೇಕು. ಗಣಿತಕ್ರಮವು ಶ್ರೀಪತಿಪದ್ಧತಿ ಮೊದಲಾದ ಪದ್ಧತಿ ಗ್ರಂಥಗಳಲ್ಲಿದೆ. ಒಂದೇ ಭಾವವು ಎರಡುರಾಶಿಗೆ ಸಂಬಂಧಿಸಿದಂತೆ ಇರಬಹುದು. ಆಗ ಭಾವಫಲವನ್ನು ಆ ಎರಡುರಾಶಿಗಳ ಫಲವಿಮರ್ಶೆಯಿಂದ ನಿಶ್ಚಯಿಸಬೇಕು. ಗ್ರಹ ಭಾವಮಧ್ಯದಲ್ಲಿದ್ದರೆ ಭಾವಫಲ ಪೂರ್ಣವಾಗಿಯೂ ಭಾವಾದಿಯಲ್ಲಿದ್ದರೆ ಫಲಾರಂಭವೂ ಉಂಟಾಗುತ್ತದೆ. ಭಾವದ ಕೊನೆಯಲ್ಲಿ ಗ್ರಹವಿದ್ದರೆ ಫಲ ಶೂನ್ಯ. ಉಳಿದಭಾಗಗಳಲ್ಲಿ ಅನುಪಾತದಿಂದ ಫಲವನ್ನು ತಿಳಿಯಬೇಕು.

---

[1] ಮಾನ್ಯನ್ವ (ಕ) ಮ್ಯನ್ವ (ಗ) [2] ಳ್ಕೂ (ಕ) ಳ್ ಕೊ (ಗ).

# ಏಕೋನವಿಂಶಾಧಿಕಾರಂ

## ದ್ರೇಕ್ಕಾಣ ಪ್ರಕರಣಂ

(ಮೇಷಾದಿ ದ್ರೇಕ್ಕಾಣ ಸ್ವರೂಪ)

ಧೃತಪರಶು ರಕ್ತನೇತ್ರ
ಧ್ವಿತಯಂ ಕೃಷ್ಣಾಂಗ[1]ರೋಚಿ[1] ಕಾಯಲ್ [2]ನೆಱುವಂ[2]
ಸಿತವಸ್ತ್ರಾವೃತಕಟಿ ರೌ
ದ್ರತರಂ ಭಾವಿಪ್ಪೊಡಜಾದಿಮದ್ರೇಕ್ಕಾಣಂ ೧

(ಮೇಷ ಮಧ್ಯಮ ದ್ರೇಕ್ಕಾಣ ಸ್ವರೂಪ)

ನಿಡುಮೊಗದವಳ್ ತೃಷಾತುರೆ
ತುಡಲು[3]ಣರಾಟಿಸುವ[3]ಳೊಂದೆ ಕಾಲೊಳ್ ನಿಲುವಳ್
ಕೊಡದನ್ನ[4]ಳ[4]ರುಣವಸ್ತ್ರಮ
ನುಡುವಳ್ [5]ತನ್ಮೇಷ[5] ಮಧ್ಯಮ ದ್ರೇಕ್ಕಾಣಂ ೨

---

೧. ಮೇಷರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ಪರಶುಧಾರಿಯೂ ಕೆಂಗಣ್ಣನೂ ಕಪ್ಪುಶರೀರವುಳ್ಳವನೂ ಕಾಪಾಡಲು ಸಮರ್ಥನೂ ಸೊಂಟದಲ್ಲಿ ಸುತ್ತಿದ ಶ್ವೇತವಸ್ತ್ರವುಳ್ಳವನೂ ಭಯಂಕರನೂ ಆಗಿರುವನು.

ವಿ–ಸಂಜ್ಞಾಧ್ಯಾಯದಲ್ಲಿ ದ್ರೇಕ್ಕಾಣಸ್ವರೂಪವನ್ನು ತಿಳಿಸಿಲ್ಲ. ಜಾತಕದ ಫಲಗಳನ್ನು ತಿಳಿಯುವಾಗ ರಾಶಿಸ್ವರೂಪದಂತೆ ದ್ರೇಕ್ಕಾಣಸ್ವರೂಪವೂ ಉಪಯುಕ್ತವಾಗುತ್ತದೆ. ಯಾತ್ರಾಫಲ ಮತ್ತು ಕಳ್ಳನ ಆಕಾರ ಇವುಗಳನ್ನು ತಿಳಿಯುವುದಕ್ಕೆ ದ್ರೇಕ್ಕಾಣ ಸ್ವರೂಪಜ್ಞಾನವು ಆವಶ್ಯಕ. ಮೇಷರಾಶಿಯ ಮೊದಲನೆಯ ದ್ರೇಕ್ಕಾಣವನ್ನು ಆಯುಧಧಾರಿಯಾದುದರಿಂದ ಆಯುಧ ದ್ರೇಕ್ಕಾಣವೆಂದೂ ಪುರುಷಾಕಾರವಾದುದರಿಂದ ಪುರುಷದ್ರೇಕ್ಕಾಣವೆಂದೂ ಕರೆಯುತ್ತಾರೆ. ಇದೇರೀತಿ ಸ್ವರೂಪಕ್ಕೆ ತಕ್ಕ ಹೆಸರುಗಳಿಂದ ದ್ರೇಕ್ಕಾಣಗಳನ್ನು ಜ್ಯೋತಿಷಾಚಾರ್ಯರು ತಮ್ಮ ತಮ್ಮ ಗ್ರಂಥಗಳಲ್ಲಿ ನಿರ್ದೇಶಮಾಡಿರುತ್ತಾರೆ.

೨. ಮೇಷರಾಶಿಯ ಮಧ್ಯಮ (ಎರಡನೆಯ) ದ್ರೇಕ್ಕಾಣದೇವತೆಯು ಕುದುರೆಯಂತೆ ಉದ್ದವಾದ ಮುಖವುಳ್ಳವಳೂ ಬಾಯಾರಿಕೆಯಿಂದ ಪೀಡಿತಳೂ ಅಲಂಕಾರ ಊಟಗಳಲ್ಲಿ ಅಭಿಲಾಷೆಯುಳ್ಳವಳೂ ಒಂದೇ ಕಾಲಿನಲ್ಲಿ ನಿಂತಿರುವವಳೂ ದೊಡ್ಡಹೊಟ್ಟೆಯುಳ್ಳವಳೂ ಕೆಂಪುವಸ್ತ್ರವನ್ನುಟ್ಟಿರುವವಳೂ ಆಗಿರುವಳು.

---

[1] ರಾಜಿ (ಕ ಗ) [2] ಮೆರೆವಂ (ಕ) ನೆಱುಯಂ (ಗ) [3] ಣರಾಟಿಸುವೊ (ಕ) ಪೊರಾಟಿಸುವ (ಗ) [4] ಬ (ಕ ಗ) [5] ತನುಕೇಶ (ಗ).

(ಮೇಷಾಂತ್ಯ ದ್ರೇಕ್ಕಾಣ ಸ್ವರೂಪ)

ಆರಕ್ತ [1]ಭೀಕರ[1]ವ್ಯಾ
ಪಾರಾ[2]ರ್ಥ[2] ಕಲಾಪ್ರವೀಣನುತ್ಥಿತದಂಡಂ
ಕ್ರೂರಾತ್ಮಂ ತ್ಯಕ್ತವ್ರತ
ನಾರ[ಕ್ತ]ಪಟಪ್ರಿಯನಜತ್ಯತಿಯತ್ರ್ಯಂಶಂ

(ವೃಷಭಾದಿ ದ್ರೇಕ್ಕಾಣ ಸ್ವರೂಪ)

ಪಸಿವು ತೃಷೆ ಕೊಯ್ದ ತಲೆ ಬೆಂ
ದಸೀರೆ ತೊಡುಗೆಗಳ ಬಯಕೆಯೆಂಬಿನಿತುಂ ಸಂ
ಧಿಸುಗುಂ [3]ತಾನುಂ[3] ಘಟದವೊ
ಲೆಸೆವಳ್ ವೃಷಗೇಹದಾದಿಮ ದ್ರೇಕ್ಕಾಣಂ

(ವೃಷಭ ಮಧ್ಯಮ ದ್ರೇಕ್ಕಾಣ ಸ್ವರೂಪ)

ಪಸಿ[4]ವೊ[4]ಡೆಯಂ ಹಲ ಶಕಟದ
ಬೆಸನಱಿವಂ ಕ್ಷೇತ್ರಧಾನ್ಯಗೃಹಧೇನುಕಲಾ
ಪ್ರಸರಜ್ಞನಜಮುಖಂ [5]ಮಲ
ವಸನಂ[5] ಸ್ಥೂಲಾಂ[6]ಸ[6]ನುಕ್ಷಮಧ್ಯತ್ರ್ಯಂಶಂ

೩. ಮೇಷರಾಶಿಯ ಮೂರನೆಯ ದ್ರೇಕ್ಕಾಣದೇವತೆಯು ರಕ್ತವರ್ಣನೂ ಭಯಂಕರನೂ ಕ್ರಿಯಾಶೀಲನೂ ಕಲಾಕುಶಲನೂ ದಂಡಾಯುಧಧಾರಿಯೂ ವಿಷ ಕ್ರೂರಸ್ವಭಾವವುಳ್ಳವನೂ ನಿಯಮಸ್ಖಲಿತನೂ ಕೆಂಪುವಸ್ತ್ರಪ್ರಿಯನೂ ಆಗಿರುವನು

೪. ವೃಷಭರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ಹಸಿ ಬಾಯಾರಿಕೆಗಳಿಂದ ಪೀಡಿತಳೂ ಕತ್ತರಿಸಿದ ತಲೆಗೂದಲುಳ್ಳವಳೂ ಸುಟ್ಟಿರುವ ಸೀರೆ ಯನ್ನುಟ್ಟಿರುವವಳೂ ಆಭರಣಗಳಿಗೆ ಆಸೆಪಡುವವಳೂ ಗಡಿಗೆಯಂತೆ ದೊಡ್ಡಹೊಟ್ಟೆ ಯುಳ್ಳವಳೂ ಆಗಿರುವಳು.

ವಿ–'ಲೂನಕಚಾ' ಎಂದು ಬೃಹಜ್ಜಾತಕದಲ್ಲಿರುವುದನ್ನು ಶ್ರೀಧರನ 'ಕೊಯ್ದತಲೆ' ಎಂದು ಕನ್ನಡಿಸಿದ್ದಾನೆ. ಆದುದರಿಂದ 'ಕೊಯ್ದತಲೆ' ಎನ್ನುವುದಕ್ಕೆ ಕತ್ತರಿಸಿದ ತಲೆಗೂದಲುಳ್ಳವಳೆಂದು ಅರ್ಥ ಬರೆದಿದೆ.

೫. ವೃಷಭರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ಹಸಿವಿನಿಂದ ಪೀಡಿತನೂ ನೇಗಿಲು ಬಂಡಿ ಇವುಗಳ ಕೆಲಸವನ್ನು ತಿಳಿದಿರುವವನೂ ಭೂಮಿ ಧಾನ್ಯ ಮನೆ ಹಸು ಕಲೆ ಇವುಗಳ ವಿಚಾರವನ್ನು ಬಲ್ಲವನೂ ಆಡಿನಂತೆ ಮುಖವುಳ್ಳವನೂ ಕೊಳಕುಬಟ್ಟೆಯನ್ನು ಧರಿಸಿರುವವನೂ ಎತ್ತಿನಂತೆ ದೊಡ್ಡ ಹೆಗಲುಳ್ಳವನೂ ಆಗಿರುವನು.

[1] ಪೀವರ (ಕ ಗ) [2] ರ್ಥ (ಕ ಗ) [3] ತಂನೊ (ಕ ಗ) [4] ರೂ (ಕ) [5] ಮದನನನಂ (ಕ) ಮದವಶನುಂ (ಗ) [6] ಗ (ಕ ಗ)

(ವೃಷಭಾಂತ್ಯ ದ್ರೇಕ್ಕಾಣ ಸ್ವರೂಪ)

ಸಿತ[1]ದಂಷ್ಟ್ರಂ[1] ಬೃಹದಂ[2][ಘ್ರಿ][2]
ದ್ವಿತಯಂ ಸ್ಥೂಲಾಂಗನಧಿಕರೋಮಂ ಪಿಂಗ
[3]ದ್ಯುತಿ[3]ಯುಕ್ತನಾಕುಲಾಂತ
ರ್ಗತನೆನಿಕುಂ ವೃಷಭದಂತಿಮ ದ್ರೇಕ್ಕಾಣಂ ೬

(ಮಿಥುನಾದಿ ದ್ರೇಕ್ಕಾಣ ಸ್ವರೂಪ)

ಅನಪತ್ಯೆ ಪತಿವ್ರತೆ ಕೈ
ಯನೆತ್ತಿದಳ್ ತೊಡುಗೆಗಳ್ಗೆ ಕರಮರ್ಥಿ[4]ನಿ[4] ರೂ
ಪಿನ ಕಣಿ [5]ಸೂಚೀಕರ್ಮಾ
ಯ್ತೆ[5] ನಿಪುಣೆ ಮಿಥುನಾಲಯಾದಿಮದ್ರೇಕ್ಕಾಣಂ ೭

(ಮಿಥುನ ಮಧ್ಯಮ ದ್ರೇಕ್ಕಾಣ ಸ್ವರೂಪ)

ಕವಚ[6]ಧ[6]ರಂ ಶೂರಂ ಬಿ
ಲ್ಲುವನಂಬುಮನಡವಿಯೊಳಗೆ ಪಿಡಿದಿರ್ಪಂ [7]ಪು[7]
ತ್ರವಿಹಾ[8]ರ[8]ಭೂಷಣಾಕಾಂ
ಕ್ಷಿ ವಿಹಗಪಾಸ್ಯಂ ನೃಯುಗ್ಮ ಮಧ್ಯತ್ರ್ಯಂಶಂ ೮

---

೬. ವೃಷಭರಾಶಿಯ ಕೊನೆಯ ದ್ರೇಕ್ಕಾಣದೇವತೆಯು ಬಿಳುಪು ಕೋರೆ ಹಲ್ಲು ಶರಭದಂತೆ ದೊಡ್ಡದಾದ ಎರಡು ಕಾಲುಗಳು ಆನೆಯಂತೆ ಸ್ಥೌಲ್ಯ ಹೆಚ್ಚು ರೋಮ ಕಂದುಹಳದಿ ಬಣ್ಣ ಇವುಗಳಿಂದ ಕೂಡಿರುವ ದೇಹವುಳ್ಳವನೂ ವ್ಯಾಕುಲ ಚಿತ್ತನೂ ಆಗಿರುವನು.

೭. ಮಿಥುನರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ಮಕ್ಕಳಿಲ್ಲದವಳೂ ಪತಿವ್ರತೆಯೂ ಎತ್ತಿದ ಕೈಯುಳ್ಳವಳೂ ಆಭರಣಗಳಿಗೆ ಹೆಚ್ಚು ಅಪೇಕ್ಷೆಯುಳ್ಳವಳೂ ಚೆಲುವಿನ ಗಣಿಯೂ (ಸುಂದರಿಯೂ) ಹೊಲಿಗೆಕೆಲಸವನ್ನು ತಿಳಿದಿರುವವಳೂ ನಿಪುಣೆಯೂ ಆಗಿರುವಳು.

ವಿ—'ಹೀನಪ್ರಜೋಚ್ಛ್ರಿತಭುಜರ್ತುಮತೀ' ಎಂದು ಬೃಹಜ್ಜಾತಕದಲ್ಲಿವೆ. ಇಲ್ಲಿ 'ಋತುಮತಿ' ಎನ್ನುವುದಕ್ಕೆ ಪ್ರತಿಯಾಗಿ 'ಪತಿವ್ರತೆ' ಎಂದು ಶ್ರೀಧರನು ಹೇಳಿರುತ್ತಾನೆ.

೮. ಮಿಥುನರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ಕವಚಧಾರಿಯೂ ಶೂರನೂ ಕಾಡಿನಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿರುವವನೂ ಪುತ್ರ ಕ್ರೀಡೆ ಆಭರಣ ಇವುಗಳಲ್ಲಿ ಆಕಾಂಕ್ಷೆಯುಳ್ಳವನೂ ಗರುಡನಂತೆ (ಪಕ್ಷಿಯಂತೆ) ಮುಖವುಳ್ಳವನೂ ಆಗಿರುವನು.

---

[1] ವನ್ನಂ (ಕ ಗ) [2] ತ (ಕ ಗ) [3] ವ್ರಿತ (ಕ ಗ) [4] ಗೆ (ಕ ಗ) [5] ಸೂಚಿ ಕರ್ಮಾನ್ವಿತಯಃ (ಕ) ಸೂಚಿಕರ್ಮ್ಮಯುತ (ಗ) [6] ಹಾ (ಕ) ಪ (ಗ) [7] ಮ (ಕ ಗ) [8] ೦ (ಕ ಗ).

(ಮಿಥುನಾಂತ್ಯ ದ್ರೇಕ್ಕಾಣ ಸ್ವರೂಪ)

ಕವಿ ಬಹುರತ್ನಾಢ್ಯಂ ನೃ
ತ್ಯವಾದ್ಯ[1]ಶಿ[1]ಲ್ಪಪ್ರವೀಣಮತಿ ಶರಧಿ ಧನುಃ
ಕವಚ[2]ಧ[2]ರಂ ಕೈಗೆಯ್ದಿ
ರ್ಪವನೆನಿಕುಂ ಮಿಥುನದಂತಿಮದ್ರೇಕ್ಕಾಣಂ ೯

(ಕರ್ಕಟಕಾದಿ ದ್ರೇಕ್ಕಾಣ ಸ್ವರೂಪ)

ತುರಗಗಳಂ ಕಾನನ ಮಲ
ಯರುಹಗತಂ ಪತ್ರ ಮೂಲ ಫಲಧಾರಿ ಬೃಹ
ಚ್ಚರಣಂ ಸ್ಥೂಲಾಂಗಂ ಸೂ
ಕರವದನಂ ಕರ್ಕಟಾದಿಮದ್ರೇಕ್ಕಾಣಂ ೧೦

(ಕರ್ಕಟಕ ಮಧ್ಯಮ ದ್ರೇಕ್ಕಾಣ ಸ್ವರೂಪ)

ಜಲರುಹಮನಿಟ್ಟು [3]ತಲೆ[3]ಯೊಳ್
ಪಲಾಶವಿಟಪಸ್ಥೆ ಕರ್ಕಶಾಂಗಿ ಭುಜಂಗಾ
ವಿಲೆ [4]ಬನದೊಳೊಳು[4]ತಿರ್ಪಳ್
ಲಲನೆಯೆನಿಕ್ಕುಂ ಕುಳೀರ ಮಧ್ಯತ್ರ್ಯಂಶಂ ೧೧

---

೯. ಮಿಥುನರಾಶಿಯ ಕೊನೆಯ ದ್ರೇಕ್ಕಾಣದೇವತೆಯು ಕವಿಯೂ ಹೆಚ್ಚು ರತ್ನವುಳ್ಳವನೂ ನೃತ್ಯ ವಾದ್ಯ ಶಿಲ್ಪ ಇವುಗಳಲ್ಲಿ ನಿಪುಣನೂ ಬತ್ತಳಿಕೆ ಧನುಸ್ಸು ಕವಚ ಇವುಗಳನ್ನು ಧರಿಸಿರುವವನೂ ಅಲಂಕೃತನೂ ಆಗಿರುವನು.

೧೦. ಕರ್ಕಟಕರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ಕುದುರೆಯಂತೆ ಉದ್ದವಾದ ಕತ್ತುಳ್ಳವನೂ ಕಾಡಿನಲ್ಲಿ ಚಂದನವೃಕ್ಷದ ಸಮೀಪದಲ್ಲಿರುವವನೂ ಎಲೆ ಬೇರು ಹಣ್ಣು ಇವುಗಳನ್ನು ಧರಿಸಿರುವವನೂ ಶರಭದಂತೆ ದೊಡ್ಡ ಕಾಲು ಆನೆಯಂತೆ ದೊಡ್ಡ ಶರೀರ ಹಂದಿಯಂತೆ ಮುಖ ಇವುಗಳನ್ನುಳ್ಳವನೂ ಆಗಿರುವನು.

೧೧. ಕರ್ಕಟಕರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ತಲೆಯಲ್ಲಿ ಕಮಲಪುಷ್ಪವನ್ನು ಧರಿಸಿ ಮುತ್ತುಗದ ಮರವನ್ನಾಶ್ರಯಿಸಿ ನಿಂತಿರುವವಳೂ ಯೌವನವತಿಯೂ ಸರ್ಪಯುತಳೂ ಅರಣ್ಯದಲ್ಲಿ ಕೂಗುವವಳೂ ಆಗಿರುವಳು.

ವಿ—ಬೃಹಜ್ಜಾತಕದಲ್ಲಿ 'ಪದ್ಮಾರ್ಚಿತಾ ಮೂರ್ಧನಿ ಭೋಗಿಯುಕ್ತಾ ಸ್ತ್ರೀ' ಎಂದಿದೆ. ಇದಕ್ಕೆ ವಿವರಣ ವ್ಯಾಖ್ಯಾನದಲ್ಲಿ 'ಪದ್ಮಾರ್ಚಿತಾ—ಪದ್ಮೈರಲಂಕೃತಾ। ಮೂರ್ಧನಿ ಭೋಗಿಯುಕ್ತಾ—ಶಿರಸಿ ಸರ್ಪೇಣ ಯುಕ್ತಾ,' ಎಂದು ಅರ್ಥ ಮಾಡಿರುತ್ತಾರೆ. ವಿವೃತಿವ್ಯಾಖ್ಯಾನಕಾರರಾದ ಭಟ್ಟೋತ್ಪಲರು 'ಮೂರ್ಧನಿ—

---

[1] ಸ್ವ (ಗ) [2] ಹ (ಗ) [3] ರಶಿ (ಗ) [4] ಬಿಲದೊಳಾಡು (ಕಗ).



(ಕರ್ಕಟಕಾಂತ್ಯ ದ್ರೇಕ್ಕಾಣ ಸ್ವರೂಪ)

ಉರಗಾವೃತಂ [1]ಸು[1]ವರ್ಣಾ
ಭರಣಂ ಜಲಯಾನವಾ[2]ಸಿತಂ ಚಿಪಿಟಾಸ್ಯಂ[2]
ತರುಣಿಯ ವಿಭೂಷಣಾರ್ಥದೆ
ಶರಧಿಗೆ [3]ಪೋ[3]ಪಂ ಕುಳೀರದಂತ್ಯತ್ರ್ಯಂಶಂ ೧೨

(ಸಿಂಹಾದಿ ದ್ರೇಕ್ಕಾಣ ಸ್ವರೂಪ)

ನರಿ ನಾಯ್' ಪರ್ದೆಂಬಿವಱ
ಸ್ವರೂಪದಿಂ ಶಾಲ್ಮಲೀ ಮಹೀರುಹದೊಳ್' ಮಾ
ತರಪಿತರರಂ ಬಿಸುಟ್ಟತಿ
ಭರದಿಂದೊಳ್ವಂ ಮೃಗಾಧಿಪಾದಿತ್ರ್ಯಂಶಂ ೧೩

(ಸಿಂಹ ಮಧ್ಯಮ ದ್ರೇಕ್ಕಾಣ ಸ್ವರೂಪ)

ತುರಗಾಕೃತಿ ಕೃಷ್ಣಾಜಿನ
ಪರೀವೃತಂ [4]ಕೋಲ[4]ಮೂಗನಿಷುಸಹಿತಧನು
ರ್ಧರನುಜ್ಜ್ವಲ ಕುಸುಮಧರಂ
ದುರಾಸದಂ ಸಿಂಹಮಧ್ಯಮದ್ರೇಕ್ಕಾಣಂ ೧೪

---

ಶಿರಸಿ, ಪದ್ಮೈಃ–ಕಮಲೈಃ, ಅರ್ಚಿತಾ–ಪೂಜಿತಾ, ಭೋಗಿಯುಕ್ತಾ–ಸಸರ್ಪಾ' ಎಂದು ಅರ್ಥಮಾಡಿರುತ್ತಾರೆ. ಶ್ರೀಧರನು ಭಟ್ಟೋತ್ಪಲರ ವ್ಯಾಖ್ಯಾನದಂತೆಯೇ ತಾನೂ 'ಜಲರುಹಮನಿಟ್ಟು ತಲೆಯೊಳ್' 'ಭುಜಂಗಾವಿಲೆ' ಎಂದು ತನ್ನ ಗ್ರಂಥದಲ್ಲಿ ಹೇಳಿರುತ್ತಾನೆ.

೧೨. ಕರ್ಕಟಕರಾಶಿಯ ಮೂರನೆಯ ದ್ರೇಕ್ಕಾಣದೇವತೆಯು ಸರ್ಪ ವೇಷ್ಟಿತನಾಗಿ ಚಿನ್ನದ ಆಭರಣಗಳನ್ನು ಧರಿಸಿ ದೋಣಿಯಲ್ಲಿ ಕುಳಿತು ತನ್ನ ಹೆಂಡತಿಗೆ ಆಭರಣಗಳನ್ನು ತರುವುದಕ್ಕಾಗಿ ಸಮುದ್ರಕ್ಕೆ ಹೋಗುವವನೂ ಚಪ್ಪಟೆ ಮುಖವುಳ್ಳವನೂ ಆಗಿರುವನು.

೧೩. ಸಿಂಹರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ನರಿ ನಾಯಿ ಹದ್ದು ಇವುಗಳ ಆಕಾರವುಳ್ಳವನಾಗಿ ಬೂರುಗದ ಮರದ ಮೇಲಿರುವವನೂ ತಾಯಿ ತಂದೆಗಳನ್ನು ಬಿಟ್ಟಿರುವವನೂ ರಭಸದಿಂದ ಕೂಗುವವನೂ ಆಗಿರುವನು.

೧೪. ಸಿಂಹರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ಕುದುರೆ ಯಂತೆ ಆಕಾರವುಳ್ಳವನೂ ಜಿಂಕೆಯ ಚರ್ಮವನ್ನು ಸುತ್ತಿಕೊಂಡಿರುವವನೂ ಹಂದಿ ಯಂತೆ ತುದಿಯಲ್ಲಿ ಬಗ್ಗಿರುವ ಮೂಗುಳ್ಳವನೂ ಬಾಣದಿಂದ ಕೂಡಿದ ಧನುಸ್ಸನ್ನು ಹಿಡಿದಿರುವವನೂ ಸ್ವಚ್ಛವಾದ ಹೂವನ್ನು ಧರಿಸಿರುವವನೂ ಹಗೆಗಳಿಗೆ ಕೈವಶವಾಗ ದವನೂ ಆಗಿರುವನು.

---

[1] ಸುರತ (ಕ) [2] ಚಿಪಿತಸ್ಯಾಮಂ (ಕ) ನಿಶಾಸ್ಯಾಮಂ (ಗ) [3] ಘೋ (ಕ ಗ) [4] ಕಾಳ (ಕ ಗ).

(ಮಿಥುನಾಂತ್ಯ ದ್ರೇಕ್ಕಾಣ ಸ್ವರೂಪ)

ಕವಿ ಬಹುರತ್ನಾಢ್ಯಂ ನೃ
ತ್ಯವಾದ್ಯ[1]ಶಿ[1]ಲ್ಪಪ್ರವೀಣಮತಿ ಶರಧಿ ಧನುಃ
ಕವಚ[2]ಧ[2]ರಂ ಕೈಗೆಯ್ದಿ
ರ್ಪವನೆನಿಕುಂ ಮಿಥುನದಂತಿಮದ್ರೇಕ್ಕಾಣಂ ೯

(ಕರ್ಕಟಕಾದಿ ದ್ರೇಕ್ಕಾಣ ಸ್ವರೂಪ)

ತುರಗಗಳಂ ಕಾನನ ಮಲ
ಯರುಹಗತಂ ಪತ್ರ ಮೂಲ ಫಲಧಾರಿ ಬೃಹ
ಚ್ಚರಣಂ ಸ್ಥೂಲಾಂಗಂ ಸೂ
ಕರವದನಂ ಕರ್ಕಟಾದಿಮದ್ರೇಕ್ಕಾಣಂ ೧೦

(ಕರ್ಕಟಕ ಮಧ್ಯಮ ದ್ರೇಕ್ಕಾಣ ಸ್ವರೂಪ)

ಜಲರುಹಮನಿಟ್ಟು [3]ತಲೆ[3]ಯೊಳ್
ಪರಾಶವಿಟಪಸ್ಥೆ ಕರ್ಕಶಾಂಗಿ ಭುಜಂಗಾ
ವಿಲೆ [4]ಬನದೊಳೂಳು[4]ತಿರ್ಪಳ್
ಲಲನೆಯೆನಿಕ್ಕುಂ ಕುಳೀರ ಮಧ್ಯತ್ರ್ಯಂಶಂ ೧೧

---

೯. ಮಿಥುನರಾಶಿಯ ಕೊನೆಯ ದ್ರೇಕ್ಕಾಣದೇವತೆಯು ಕವಿಯೂ ಹೆಚ್ಚು ರತ್ನವುಳ್ಳವನೂ ನೃತ್ಯ ವಾದ್ಯ ಶಿಲ್ಪ ಇವುಗಳಲ್ಲಿ ನಿಪುಣನೂ ಬತ್ತಳಿಕೆ ಧನುಸ್ಸು ಕವಚ ಇವುಗಳನ್ನು ಧರಿಸಿರುವವನೂ ಅಲಂಕೃತನೂ ಆಗಿರುವನು.

೧೦. ಕರ್ಕಟಕರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ಕುದುರೆಯಂತೆ ಉದ್ದವಾದ ಕತ್ತುಳ್ಳವನೂ ಕಾಡಿನಲ್ಲಿ ಚಂದನವೃಕ್ಷದ ಸಮೀಪದಲ್ಲಿರುವವನೂ ಎಲೆ ಬೇರು ಹಣ್ಣು ಇವುಗಳನ್ನು ಧರಿಸಿರುವವನೂ ಶರಭದಂತೆ ದೊಡ್ಡ ಕಾಲು ಆನೆಯಂತೆ ದೊಡ್ಡ ಶರೀರ ಹಂದಿಯಂತೆ ಮುಖ ಇವುಗಳನ್ನುಳ್ಳವನೂ ಆಗಿರುವನು.

೧೧. ಕರ್ಕಟಕರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ತಲೆಯಲ್ಲಿ ಕಮಲಪುಷ್ಪವನ್ನು ಧರಿಸಿ ಮುತ್ತುಗದ ಮರವನ್ನಾಶ್ರಯಿಸಿ ನಿಂತಿರುವವಳೂ ಯೌವನವತಿಯೂ ಸರ್ಪಯುತಳೂ ಅರಣ್ಯದಲ್ಲಿ ಕೂಗುವವಳೂ ಆಗಿರುವಳು.

ವಿ–ಬೃಹಜ್ಜಾತಕದಲ್ಲಿ 'ಪದ್ಮಾರ್ಚಿತಾ ಮೂರ್ಧನಿ ಭೋಗಿಯುಕ್ತಾ ಸ್ತ್ರೀ' ಎಂದಿದೆ. ಇದಕ್ಕೆ ವಿವರಣ ವ್ಯಾಖ್ಯಾನದಲ್ಲಿ 'ಪದ್ಮಾರ್ಚಿತಾ–ಪದ್ಮೈರಲಂಕೃತಾ। ಮೂರ್ಧನಿ ಭೋಗಿಯುಕ್ತಾ–ಶಿರಸಿ ಸರ್ಪೇಣ ಯುಕ್ತಾ,' ಎಂದು ಅರ್ಥ ಮಾಡಿರುತ್ತಾರೆ. ವಿವೃತಿವ್ಯಾಖ್ಯಾನಕಾರರಾದ ಭಟ್ಟೋತ್ಪಲರು 'ಮೂರ್ಧನಿ–

---

[1] ಸ್ವಃ (ಗ) [2] ಹ (ಗ) [3] ರಶಿ (ಗ) [4] ಬಿಲದೊಳಾಡು (ಕಗ).

(ಕರ್ಕಟಕಾಂತ್ಯ ದ್ರೇಕ್ಕಾಣ ಸ್ವರೂಪ)

ಉರಗಾವೃತಂ [1]ಸು[1]ವರ್ಣಾ
ಧರಣಂ ಜಲಯಾನವಾ[2]ಸಿತಂ ಚಿಪಿಟಾಸ್ಯಂ[2]
ತರುಣಿಯ ವಿಭೂಷಣಾರ್ಥದೆ
ಶರಧಿಗೆ [3]ಪೋ[3]ಪಂ ಕುಳೀರದಂತ್ಯತ್ರ್ಯಂಶಂ ೧೨

(ಸಿಂಹಾದಿ ದ್ರೇಕ್ಕಾಣ ಸ್ವರೂಪ)

ನರಿ ನಾಯ್ ಪರ್ದೆಂಬಿವಱ
ಸ್ವರೂಪದಿಂ ಶಾಲ್ಮಲೀ ಮಹೀರುಹದೊಳ್ ಮಾ
ತರಪಿತರರಂ ಬಿಸುಟ್ಟತಿ
ಭರದಿಂದೂಳ್ವಂ ಮೃಗಾಧಿಪಾದಿತ್ರ್ಯಂಶಂ ೧೩

(ಸಿಂಹ ಮಧ್ಯಮ ದ್ರೇಕ್ಕಾಣ ಸ್ವರೂಪ)

ತುರಗಾಕೃತಿ ಕೃಷ್ಣಾಜಿನ
ಪರೀವೃತಂ [4]ಕೋಲ[4]ಮೂಗನಿಷುಸಹಿತಧನು
ರ್ಧರನುಜ್ಜ್ವಲ ಕುಸುಮಧರಂ
ದುರಾಸದಂ ಸಿಂಹಮಧ್ಯಮದ್ರೇಕ್ಕಾಣಂ ೧೪

---

ಶಿರಸಿ, ಪದ್ಮೈಃ–ಕಮಲೈಃ, ಅರ್ಚಿತಾ–ಪೂಜಿತಾ, ಭೋಗಿಯುಕ್ತಾ–ಸಸರ್ಪಾ' ಎಂದು ಅರ್ಥಮಾಡಿರುತ್ತಾರೆ. ಶ್ರೀಧರನು ಭಟ್ಟೋತ್ಪಲರ ವ್ಯಾಖ್ಯಾನದಂತೆಯೇ ತಾನೂ 'ಜಲರುಹಮನಿಟ್ಟು ತಲೆಯೊಳ್' 'ಭುಜಂಗಾವಿಲೆ' ಎಂದು ತನ್ನ ಗ್ರಂಥದಲ್ಲಿ ಹೇಳಿರುತ್ತಾನೆ.

೧೨. ಕರ್ಕಟಕರಾಶಿಯ ಮೂರನೆಯ ದ್ರೇಕ್ಕಾಣದೇವತೆಯು ಸರ್ಪ ವೇಷ್ಟಿತನಾಗಿ ಚಿನ್ನದ ಆಭರಣಗಳನ್ನು ಧರಿಸಿ ದೋಣಿಯಲ್ಲಿ ಕುಳಿತು ತನ್ನ ಹೆಂಡತಿಗೆ ಆಭರಣಗಳನ್ನು ತರುವುದಕ್ಕಾಗಿ ಸಮುದ್ರಕ್ಕೆ ಹೋಗುವವನೂ ಚಪ್ಪಟೆ ಮುಖವುಳ್ಳವನೂ ಆಗಿರುವನು.

೧೩. ಸಿಂಹರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ನರಿ ನಾಯಿ ಹದ್ದು ಇವುಗಳ ಆಕಾರವುಳ್ಳವನಾಗಿ ಬೂರುಗದ ಮರದ ಮೇಲಿರುವವನೂ ತಾಯಿ ತಂದೆಗಳನ್ನು ಬಿಟ್ಟಿರುವವನೂ ರಭಸದಿಂದ ಕೂಗುವವನೂ ಆಗಿರುವನು.

೧೪. ಸಿಂಹರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ಕುದುರೆಯಂತೆ ಆಕಾರವುಳ್ಳವನೂ ಜಿಂಕೆಯ ಚರ್ಮವನ್ನು ಸುತ್ತಿಕೊಂಡಿರುವವನೂ ಹಂದಿಯಂತೆ ತುದಿಯಲ್ಲಿ ಬಗ್ಗಿರುವ ಮೂಗುಳ್ಳವನೂ ಬಾಣದಿಂದ ಕೂಡಿದ ಧನುಸ್ಸನ್ನು ಹಿಡಿದಿರುವವನೂ ಸ್ವಚ್ಛವಾದ ಹೂವನ್ನು ಧರಿಸಿರುವವನೂ ಹಗೆಗಳಿಗೆ ಕೈವಶವಾಗದವನೂ ಆಗಿರುವನು.

---

[1] ಸುರತ (ಕ) [2] ಶಿಪಿತಸ್ಯಾಮಂ (ಕ) ಸಿತಸ್ಯಾಮಂ (ಗ) [3] ಪೋ (ಕ ಗ) [4] ಕಾಳ (ಕ ಗ).

(ಸಿಂಹಾಂತ್ಯ ದ್ರೇಕ್ಕಾಣ ಸ್ವರೂಪ)

ಧೃತದಂಡ ಫಲಾಮಿಷ ಸಂ
[1]ಹತಿ ಖು[1]ಕ್ಷಮುಖಂ ಕ[2]ಪಿಸ್ವ[2]ಭಾವಂ ಬಹುಕುಂ
ಚಿತಕೇಶಪಾಶನಾಲಂ
ಬಿತಕೂರ್ಚಂ ಸಿಂಹದಂತಿಮದ್ರೇಕ್ಕಾಣಂ ೧೫

(ಕನ್ಯಾದಿ ದ್ರೇಕ್ಕಾಣ ಸ್ವರೂಪ)

ಕುಸುಮ [3]ಘಟಾ[3]ನ್ವಿತೆ ಕೊಳೆಗೊಂ
ಡ ಸೀರೆಯಂ ಪೊದೆ[4]ದು[4] ವಸ್ತ್ರಮಂ [5]ಧ[5]ನಮನಪೇ
ಕ್ಷಿಸಿ ಗುರುಕುಲಕ್ಕೆ ಮನಸಂ
ತಸದಿಂ ಪೋಪಳ್ ವಧೂಗೃಹಾದಿತ್ರ್ಯಂಶಂ ೧೬

(ಕನ್ಯಾ ಮಧ್ಯಮ ದ್ರೇಕ್ಕಾಣ ಸ್ವರೂಪ)

ಪ್ರವಿ[6]ಪುಲ[6] ಧನುರ್ಧರಂ ಶ್ಯಾ
ಮವರ್ಣನಾಯ ವ್ಯಯ ಕ್ರಿಯಾರುಚಿ ನಿ[7]ಜು[7]ಸು
ತ್ತುವನತಿರೋಮಂ ಲೆಕ್ಕಣಿ
ಕೆವಿಡಿ[8]ದ[8]ವಂ ಯುವತಿಮಧ್ಯಮ ದ್ರೇಕ್ಕಾಣಂ ೧೭

---

೧೫. ಸಿಂಹರಾಶಿಯ ಮೂರನೆಯ ದ್ರೇಕ್ಕಾಣದೇವತೆಯು ದಂಡಾಯುಧ ಹಣ್ಣು ಭೋಗ್ಯವಸ್ತು (ಅಥವಾ ಮಾಂಸ) ಇವುಗಳನ್ನು ಧರಿಸಿರುವವನೂ ಕರಡಿಯಂತೆ ಮುಖ ಕಪಿಯ ಸ್ವಭಾವ ವಕ್ರವಾದ ಕೂದಲು ಜೋಲಾಡುವ ಮೀಸೆ ಇವುಗಳುಳ್ಳವನೂ ಆಗಿರುವನು.

೧೬. ಕನ್ಯಾರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ಹೂವಿನಿಂದ ಕೂಡಿದ ಗಡಿಗೆಯುಳ್ಳವಳೂ ಕೊಳೆ ಸೀರೆಯನ್ನುಟ್ಟಿರುವವಳೂ ಬಟ್ಟೆ ಮತ್ತು ಹಣವನ್ನು ಪಡೆಯುವ ಇಚ್ಛೆಯಿಂದ ಗುರುಕುಲಕ್ಕೆ ಸಂತೋಷದಿಂದ ಹೋಗುವವಳೂ ಆಗಿರುವಳು.

೧೭. ಕನ್ಯಾರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ದೊಡ್ಡ ಧನುಸ್ಸನ್ನು ಹಿಡಿದುಕೊಂಡಿರುವವನೂ ಶ್ಯಾಮವರ್ಣನೂ ವರಮಾನ ವೆಚ್ಚಗಳನ್ನು ಲೆಕ್ಕಿಸುವವನೂ ರುಮಾಲು ಸುತ್ತಿರುವವನೂ ರೋಮಶಶರೀರಿಯೂ ಲೇಖನಿಯನ್ನು ಹಿಡಿದಿರುವವನೂ ಆಗಿರುವನು.

---

[1] ದತಿರು (ಕ) ದತಿವ್ಯ (ಗ) [2] ಟಿ ಶ್ರುತ ಪಶ್ಚಿ (ಕ) [3] ಗದಾ (ಗ) [4] ವ (ಕ ಗ) [5] ಡ (ಕ ಗ) [6] ಮಾಳ (ಗ) [7] ರೆ (ಕ ಗ) [8] ವ (ಕ ಗ).

(ಕನ್ಯಾಂತ್ಯ ದ್ರೇಕ್ಕಾಣ ಸ್ವರೂಪ)

ಮಳರಹಿ[1]ತ[1]ದುಕೂಲಾಂಬರ
ವಿಳಸಿತೆ ನಿಡಿಯಳ್ ಸಗೌರರುಚಿ ಘಟಮಂ ಚ
ಕ್ಕಳಮಂ ಪಿಡಿದಿರ್ಪಳ್ ಸುರ
ಕುಳಗಮನಾಸಕ್ತೆ ಕನ್ಯಕಾಂತ್ಯತ್ರ್ಯಂಶಂ ೧೮

(ತುಲಾದಿ ದ್ರೇಕ್ಕಾಣ ಸ್ವರೂಪ)

ಅಳೆಯಲ್ ತೂಗಲ್ ಪರಿಣತ
ನಳತೆಯ ಕೈ ಮಧ್ಯವಿಪಣಿಗಮನಂ [2]ಬಂ[2]ಡಂ
ಗಳ ಬೆಲೆಯಂ ಚಿಂತಿಸುವಂ
ತುಳಾಧರಂ ತೌಳಿನಿಳಯದಾದಿತ್ರ್ಯಂಶಂ ೧೯

---

೧೮. ಕನ್ಯಾರಾಶಿಯ ಕೊನೆಯ ದ್ರೇಕ್ಕಾಣ ದೇವತೆಯು ಕೊಳೆಯಿಲ್ಲದ ಬಟ್ಟೆಯನ್ನುಟ್ಟು ಪ್ರಕಾಶಿಸುವವಳೂ ಉದ್ದವಾದ ಬಿಳುಪು ಶರೀರವುಳ್ಳವಳೂ ಘಟವನ್ನೂ ಚಕ್ಕಳವನ್ನೂ ಹಿಡಿದುಕೊಂಡು ದೇವಾಲಯಕ್ಕೆ ಹೋಗಲು ಆಸಕ್ತಳೂ ಆಗಿರುವಳು.

ವಿ–ಬೃಹಜ್ಜಾತಕದಲ್ಲಿ 'ಕುಂಭ ಕಟಚ್ಛುಹಸ್ತಾ' ಎಂದಿರುವುದನ್ನು 'ಘಟಮಂ ಚಕ್ಕಳಮಂ ಪಿಡಿದಿರ್ಪಳ್' ಎಂದು ಶ್ರೀಧರನು ಹೇಳಿರುತ್ತಾನೆ. 'ಕಟಚ್ಛುಃ–ದರ್ವೀ ಪ್ರಸಿದ್ಧಾ ಗೃಹೋಪಯೋಗಿಕಂ ಲೋಹಭಾಂಡಂ' ಎಂದು ವಿವೃತಿವ್ಯಾಖ್ಯಾನದಲ್ಲೂ 'ಕಟಚ್ಛುಃ–ಲೋಹಭಾಂಡ ವಿಶೇಷಃ' ಎಂದು ವಿವರಣ ವ್ಯಾಖ್ಯಾನದಲ್ಲೂ ಅರ್ಥವಿದೆ. ನಾನಾರ್ಥರತ್ನಾಕರವೆಂಬ ಕನ್ನಡ ನಿಘಂಟುವಿನಲ್ಲಿ 'ಚಕ್ಕಳ' ಶಬ್ದವು 'ಕಟಾಹ' ಶಬ್ದಕ್ಕೆ ಪ್ರತಿಪದವೆಂದಿದೆ. 'ಕಟಾಹ' ಶಬ್ದಕ್ಕೆ 'ಪಾತ್ರವಿಶೇಷ' ಎಂಬ ಅರ್ಥವಿರುವುದರಿಂದ 'ಕಟಚ್ಛು' ಎನ್ನುವ ಸಂಸ್ಕೃತ ಪದಕ್ಕೆ ಪ್ರತಿಯಾಗಿ 'ಚಕ್ಕಳ' ಎನ್ನುವ ಕನ್ನಡ ಶಬ್ದವನ್ನು ಶ್ರೀಧರನು ಪ್ರಯೋಗಿಸಿರುತ್ತಾನೆ.

೧೯. ತುಲಾರಾಶಿಯ ಮೊದಲನೆಯ ದ್ರೇಕ್ಕಾಣ ದೇವತೆಯು ಅಳತೆ ಮತ್ತು ತೂಕ ಮಾಡುವುದರಲ್ಲಿ ನಿಪುಣನೂ ಕೈಯಲ್ಲಿ ಕಟ್ಟಳೆಯುಳ್ಳವನೂ ಮಾರ್ಗಮಧ್ಯದಲ್ಲಿರುವ ಅಂಗಡಿಗೆ ಹೋಗುವವನೂ ಪದಾರ್ಥಗಳ ಬೆಲೆಯನ್ನು ಚಿಂತಿಸುತ್ತಿರುವವನೂ ತಕ್ಕಡಿಯನ್ನು ಹಿಡಿದುಕೊಂಡಿರುವವನೂ ಆಗಿರುವನು.

---

[1] ತ (ಕ ಗ) [2] ಭಂ (ಕ) ಚಂ (ಗ).

(ತುಲಾ ಮಧ್ಯಮ ದ್ರೇಕ್ಕಾಣ ಸ್ವರೂಪ)

ಅತಿ[1]ತೃ[1]ಷಿತನುಂ ಬುಭುಕ್ಷಾ
ನ್ವಿತ[2]ನುಮ[2]ನರ್ ಬೀೞ್ವ ಕುಂ[3]ಭಮಂ[3] ಪಿಡಿದಂತ
ರ್ಗತದೊಳ್ ಬಗೆವಂ [4]ವನಿತಾ
ಸುತ(?) ಗೃಧ್ರಾ[4]ಸ್ಯಂ ತುಳಾರ್ಕ್ಷಮಧ್ಯತ್ರ್ಯಂಶಂ ೨೦

(ತುರಾಂತ್ಯ ದ್ರೇಕ್ಕಾಣ ಸ್ವರೂಪ)

ವನದೊಳಗೆ ರತ್ನಮೃಗಮಾ
ಗಿ ನಲ್[5]ಯುತಂ ಪೊನ್ನ ತನು[5]ತನುತ್ರಂ ಚಾಪಂ
ತನಗಮರೆ ಕಿನ್ನರಾಕೃತಿ
ಯಿನೆಸೆದು ತೋರ್ಪಂ ತುಲಾಂತಿಮದ್ರೇಕ್ಕಾಣಂ ೨೧

(ವೃಶ್ಚಿಕಾದಿ ದ್ರೇಕ್ಕಾಣ ಸ್ವರೂಪ)

ವಸನಾಭರಣ ವ್ಯತಿರಿ
ಕ್ತೆ ಸಮುದ್ರದ ತಡಿಯೊಳಿರ್ದು ನಿಜಪದದೊಳ್ ಬಂ
ಧಿಸುವಳ್ ಪಾವಂ [6]ನೆಲೆಯಂ[6]
ಬಿಸುಟತಿರಮಣೀಯೆ ವೃಶ್ಚಿಕಾದಿತ್ರ್ಯಂಶಂ ೨೨

---

೨೦. ತುಲಾ ರಾಶಿಯ ಎರಡನೆಯ ದ್ರೇಕ್ಕಾಣ ದೇವತೆಯು ಬಾಯಾರಿಕೆಯಿಂದ ಪೀಡಿತನೂ ಹಸಿದವನೂ ಕೆಳಕ್ಕೆ ಬೀಳುವಂತಿರುವವನೂ ಗಡಿಗೆಯನ್ನು ಹಿಡಿದುಕೊಂಡಿರುವವನೂ ಹೆಂಡತಿ ಮಕ್ಕಳನ್ನು ಸ್ಮರಿಸುತ್ತಿರುವವನೂ ಹದ್ದಿನಂತೆ ಮುಖವುಳ್ಳವನೂ ಆಗಿರುವನು.

೨೧. ತುಲಾ ರಾಶಿಯ ಕೊನೆಯ ದ್ರೇಕ್ಕಾಣ ದೇವತೆಯು ರತ್ನಾಲಂಕೃತನಾಗಿ ಕಾಡಿನಲ್ಲಿ ಜಿಂಕೆಯಂತೆ ನಲಿಯುವವನೂ ಚಿನ್ನದ ಕವಚ ಮತ್ತು ಧನುಸ್ಸನ್ನು ಧರಿಸಿರುವವನೂ ಕಿನ್ನರ (ಕುದುರೆಯ ಮುಖದ) ರೂಪದಿಂದ ಪ್ರಕಾಶಿಸುವವನೂ ಆಗಿರುವನು.

ವಿ–ಬೃಹಜ್ಜಾತಕದಲ್ಲಿ 'ರತ್ನಾಲಂಕೃತನೂ ಕಾಡಿನಲ್ಲಿ ಜಿಂಕೆಗಳನ್ನು ಅಂಜಿಸುತ್ತಿರುವವನೂ ಚಿನ್ನದ ಕವಚ ಮತ್ತು ಬತ್ತಳಿಕೆಗಳನ್ನು ಧರಿಸಿರುವವನೂ ಧನುರ್ಧರನೂ ಕಿನ್ನರರೂಪವುಳ್ಳವನೂ ಆಗಿರುವನು' ಎಂದಿದೆ.

೨೨. ವೃಶ್ಚಿಕ ರಾಶಿಯ ಮೊದಲನೆಯ ದ್ರೇಕ್ಕಾಣ ದೇವತೆಯು ವಸ್ತ್ರಾಭರಣಗಳಿಲ್ಲದವಳೂ ಸಮುದ್ರದ ತೀರದಲ್ಲಿರುವವಳೂ ತನ್ನ ಕಾಲಿನಲ್ಲಿ ಹಾವನ್ನು ಸುತ್ತಿಕೊಂಡಿರುವವಳೂ ಸ್ಥಾನಚ್ಯುತಳೂ ಮನೋಹರೆಯೂ ಆಗಿರುವಳು.

---

[1] ಕೃ (ಕ ಗ) [2] ತನುವೆ (ಕ) . . (ಗ) [3] ಭಂ (ಕ) [4] ವಿನತಾಸುತ ಗುರುದಾ (ಕ) ವಿನತಾಸುತ ಗುರುದಾ (ಗ) [5] ವುತಂ ಪೊಗೆ (ಕ) ಯುತಂ ಪೊಗೆತನು (ಗ) [6] ನತೆಯಂ (ಕ ಗ).

(ವೃಶ್ಚಿಕ ಮಧ್ಯಮ ದ್ರೇಕ್ಕಾಣ ಸ್ವರೂಪ)

ಉರಗಾನ್ವಿತೆ ಕಚ್ಛಪ ಕುಂ
ಭರೂಪೆ ನಿಜಪತಿನಿಮಿತ್ತಮೇಕಸ್ಥಾನಾಂ
ತರ ಸುಖಕಾಂಕ್ಷಿಣಿಯಕ್ಕುಂ
ವರ ವೃಶ್ಚಿಕಗೃಹದ ಮಧ್ಯಮದ್ರೇಕ್ಕಾಣಂ  ೨೩

(ವೃಶ್ಚಿಕಾಂತ್ಯ ದ್ರೇಕ್ಕಾಣ ಸ್ವರೂಪ)

*ಹರಿಣ ಕ್ರೋಷ್ಟುಕ [1][ಕುಕ್ಕುರ][1]
ವರಾಹ[2]ಭ[2]ಯದಾಯಿ ಕೂರ್ಮವದನಂ [3]ಮಲ[3]ಯಾ
ಕರಮಂ ರಕ್ಷಿಸುವಂ ಕೇ
ಸರಿರೂಪಂ ವೃಶ್ಚಿಕಾಂತಿಮದ್ರೇಕ್ಕಾಣಂ  ೨೪

(ಧನುರಾದಿ ದ್ರೇಕ್ಕಾಣ ಸ್ವರೂಪ)

ನರಮುಖನಶ್ವತನು ಧನು
ರ್ಧರ[4]ನಾ[4]ತ್ಮಾಶ್ರಮನಿವಾಸಿ ಯಜ್ಞದ್ರವ್ಯೋ
ತ್ಕರಮಂ ಮುನಿವರರಂ ಕೂ
ಡೆ ರಕ್ಷಿ[5]ಪಂ[5] ಧನುವಿನಾದಿಮದ್ರೇಕ್ಕಾಣಂ  ೨೫

---

೨೩. ವೃಶ್ಚಿಕರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ಹಾವನ್ನು ಸುತ್ತಿಕೊಂಡಿರುವವಳೂ ಆಮೆಯಂತೆ ಗುಂಡಾಗಿಯೂ ಕುಂಭದಂತೆ ದೊಡ್ಡದಾದ ಹೊಟ್ಟೆಯೂ ಇರುವ ಆಕಾರವುಳ್ಳವಳೂ ತನ್ನ ಗಂಡನಿಗಾಗಿ ಸ್ಥಾನ ಸೌಖ್ಯಗಳನ್ನು ಬಯಸುವವಳೂ ಆಗಿರುವಳು.

೨೪ ವೃಶ್ಚಿಕರಾಶಿಯ ಕೊನೆಯ ದ್ರೇಕ್ಕಾಣದೇವತೆಯು ಜಿಂಕೆ ನರಿ ನಾಯಿ ಹಂದಿ ಈ ಪ್ರಾಣಿಗಳಿಗೆ ಭಯಂಕರನೂ ಆಮೆಯಂತೆ ಮುಖವುಳ್ಳವನೂ ಚಂದನವನ್ನು ರಕ್ಷಿಸುವವನೂ ಸಿಂಹದಂತೆ ಆಕಾರವುಳ್ಳವನೂ ಆಗಿರುವನು.

ವಿ—ಈ ದ್ರೇಕ್ಕಾಣದೇವತೆಯು ಸ್ವರೂಪವು ಮನುಷ್ಯನ ಮುಖದಿಂದ ಕೂಡಿದ ಸಿಂಹದಂತಿರುತ್ತದೆ.

೨೫. ಧನೂರಾಶಿಯ ಮೊದಲನೆಯ ದ್ರೇಕ್ಕಾಣ ದೇವತೆಯು ಮನುಷ್ಯನ ಮುಖ ಮತ್ತು ಕುದುರೆಯ ಶರೀರವುಳ್ಳವನೂ ಧನುರ್ಧಾರಿಯೂ ತನ್ನ ಆಶ್ರಮದಲ್ಲೇ ಇರುವವನೂ ಯಾಗೋಪಯುಕ್ತ ಪದಾರ್ಥಗಳು ಮತ್ತು ತಪಸ್ವಿಗಳನ್ನು ಕಾಪಾಡುವವನೂ ಆಗಿರುವನು.

---

[1] ಶರಭಂ (ಕ) [2] ಚ (ಕ) [3] ಕಮಳ (ಕ) [4] ವಾ (ಕ) [5] ಪ್ರೇಂ (ಕ) * (ಗ) ಪ್ರತಿಯಲ್ಲಿ ಇಲ್ಲಿಂದ ಮುಂದೆ ೩೦ನೇ ಪದ್ಯ ಪೂರ್ತಿ ಗ್ರಂಥವಿಲ್ಲ.

(ಧನುರ್ಮಧ್ಯಮ ದ್ರೇಕ್ಕಾಣ ಸ್ವರೂಪ)

[1]ಶರನಿ[1]ಧಿಯ ರತ್ನಮಂ ಸಂ
ವರಿಪಳ್ [2]ಪೊಂಬಣ್ಣ[2]ಚಂಪಕಚ್ಛಾಯೆ ಮನೋ
ಹರ ಮಧ್ಯಮರೂಪೆ [3]ಸುವಿ
ಷ್ಟರೆಯೆ[3]ನಿಕುಂ ಚಾಪಮಧ್ಯಮದ್ರೇಕ್ಕಾಣಂ ೨೬

(ಧನುರಂತ್ಯ ದ್ರೇಕ್ಕಾಣ ಸ್ವರೂಪ)

ಅತಿರುಚಿ[4]ಕರಾಸನಸ್ಥಂ[4]
ಧೃತದಂಡಂ ಚಾರುಚಂಪಕಚ್ಛಾಯಂ ಲಂ
ಬಿತ ಕೂರ್ಚಂ [5]ಪಟ್ಟಾ[5]ಜಿನ
ಯುತನೆನಿಕುಂ ಚಾಪದಂತಿಮದ್ರೇಕ್ಕಾಣಂ ೨೭

(ಮಕರಾದಿ ದ್ರೇಕ್ಕಾಣ ಸ್ವರೂಪ)

ಧೃತ [ಯೋಕ್ತ್ರಕ] ಜಾಳ ನಿಗಳ
[6]ನತಿಭೀಮ[6]ಮುಖಂ ವರಾಹದೇಹಂ ಬಹುರೋ
ಮತನು ಮಕರಾಭದಂಷ್ಟ್ರ
ದ್ವಿತಯಂ ಮಕರಾಲಯಾದಿಮದ್ರೇಕ್ಕಾಣಂ ೨೮

---

೨೬. ಧನೂರಾಶಿಯ ಎರಡನೆಯ ದ್ರೇಕ್ಕಾಣ ದೇವತೆಯು ಸಮುದ್ರದಲ್ಲಿ ದೊರೆಯುವ ರತ್ನವನ್ನು ಅಣಿಮಾಡುವವಳೂ ಹೊಂಬಣ್ಣದ ಸಂಪಿಗೆ ಹೂವಿನಂತೆ ಕಾಂತಿಯುತಳೂ ಮನೋಹರೆಯೂ ಮಧ್ಯಮರೂಪವುಳ್ಳವಳೂ ಭದ್ರಾಸನದಲ್ಲಿ ಕುಳಿತಿರುವವಳೂ ಆಗಿರುವಳು.

೨೭. ಧನೂರಾಶಿಯ ಮೂರನೆಯ ದ್ರೇಕ್ಕಾಣದೇವತೆಯು ಸುಂದರವಾದ ಆಸನಾರೂಢನೂ ದಂಡಧಾರಿಯೂ ಮನೋಹರವಾದ ಸಂಪಿಗೆ ಹೂವಿನಂತೆ ಕಾಂತಿಯುತನೂ ಜೋಲಾಡುವ ಮೀಸೆಯುಳ್ಳವನೂ ಪಟ್ಟೆವಸ್ತ್ರ ಮತ್ತು ಜಿಂಕೆಯ ಚರ್ಮವನ್ನುಟ್ಟಿರುವವನೂ ಆಗಿರುವನು.

೨೮. ಮಕರರಾಶಿಯ ಮೊದಲನೆಯ ದ್ರೇಕ್ಕಾಣದೇವತೆಯು ಕಣ್ಣಿ ಬಲೆ ಸಂಕೋಲೆಗಳನ್ನು ಧರಿಸಿರುವವನೂ ಭಯಂಕರಮುಖನೂ ಹಂದಿಯಂತೆ ಶರೀರವುಳ್ಳವನೂ ರೋಮಶನೂ ಮೊಸಳೆಯಂತೆ ಎರಡು ಕೋರೆಹಲ್ಲುಗಳುಳ್ಳವನೂ ಆಗಿರುವನು.

---

[1] ಸುರವ (ಕ) [2] ಪೊರವಂಣ್ಗೆ (ಕ) [3] ಶುಚಿಶ್ವರೆ (ಕ) [4] ನಾನನಶ್ವಂ (ಕ) [5] ಪೇತ್ರಾ (ಕ) [6] ದಾನತಿಮಾಭ (ಕ).

(ಮಕರ ಮಧ್ಯಮ ದ್ರೇಕ್ಕಾಣ ಸ್ವರೂಪ)
ವಿವಿಧಾಭರಣಾಢ್ಯೆ ವಿಚಿ
ತ್ರವಸ್ತುಗಳನರಸುವಳ್ ಕಲಾವಿದೆ ಲೋಹ
ಶ್ರವಣೆ ಕಮಲಾಕ್ಷಿ [1]ಧೂಮ್ರಾ[1]
ಭವರ್ಣೆ ಮೃಗನಿಲಯಮಧ್ಯಮದ್ರೇಕ್ಕಾಣಂ ೨೯

(ಮಕರಾಂತ್ಯ ದ್ರೇಕ್ಕಾಣ ಸ್ವರೂಪ)
[ಕಿನ್ನರ ಸದೃಶ ಶರೀರಂ
ಸನ್ನಹ ತೂಣೀರ ಚಾಪ ಕಂಬಳಸಹಿತಂ
ರನ್ನದ ಚಿತ್ರಿತ ಘಟಮಂ
ತನ್ನಯ ಭುಜದೆ ತಳೆವಂ ಮೃಗಾಂತ್ಯತ್ರ್ಯಂಶಂ] ೩೦

(ಕುಂಭಾದಿ ದ್ರೇಕ್ಕಾಣ ಸ್ವರೂಪ)
ದ[2]ಸ[2]ರಿಯ ಸೀರೆಗಳಂ ಸ್ನೇ
ಹ ಸುಧಾ ಜಲ [3]ಭೋ[3]ಜನಂಗಳಂ ಪಾರ್ವಂ [4]ಗೃ
ಧ್ರಸಮಾಸ್ಯಂ ಕಂಬಳ[4] ಚ
ರ್ಮಸಮೇತಂ ಘಟಗೃಹಾದಿಮದ್ರೇಕ್ಕಾಣಂ ೩೧

---

೨೯. ಮಕರರಾಶಿಯ ಎರಡನೆಯ ದ್ರೇಕ್ಕಾಣ ದೇವತೆಯು ವಿವಿಧಾಭರಣಾಲಂಕೃತಳೂ ವಿಚಿತ್ರಪದಾರ್ಥಗಳನ್ನು ಹುಡುಕುವವಳೂ ಕಲಾವಿದೆಯೂ ಲೋಹದ ಕರ್ಣಾಭರಣವನ್ನು ಧರಿಸಿರುವವಳೂ ಕಮಲದಳದಂತೆ ವಿಶಾಲವಾದ ಕಣ್ಣುಳ್ಳವಳೂ ಶ್ಯಾಮಲೆಯೂ ಆಗಿರುವಳು.

೩೦. ಮಕರರಾಶಿಯ ಕೊನೆಯ ದ್ರೇಕ್ಕಾಣ ದೇವತೆಯು ಕಿನ್ನರ ಸಮಾನ [ಕುದುರೆ ಮುಖದ] ಶರೀರವುಳ್ಳವನೂ ಕವಚ ಬತ್ತಳಿಕೆ ಬಿಲ್ಲು ಕಂಬಳಿಗಳನ್ನು ಧರಿಸಿರುವವನೂ ರತ್ನಖಚಿತಕುಂಭವನ್ನು ಭುಜದ ಮೇಲೆ ಹೊತ್ತಿರುವವನೂ ಆಗಿರುವನು.

ವಿ–(ಕ ಗ) ಈ ಎರಡು ಪ್ರತಿಗಳಲ್ಲೂ ಮಕರರಾಶಿಯ ಕೊನೆಯ ದ್ರೇಕ್ಕಾಣ ದೇವತೆಯ ಸ್ವರೂಪವನ್ನು ತಿಳಿಸುವ ಪದ್ಯವಿಲ್ಲ. ಬೃಹಜ್ಜಾತಕದಲ್ಲಿ ಹೇಳಿರುವಂತೆ ಈ ದ್ರೇಕ್ಕಾಣ ಸ್ವರೂಪವನ್ನು ತಿಳಿಸುವ ಪದ್ಯವನ್ನು ರಚಿಸಿ ಇಲ್ಲಿ ಸೇರಿಸಿದೆ.

೩೧. ಕುಂಭರಾಶಿಯ ಮೊದಲನೆಯ ದ್ರೇಕ್ಕಾಣ ದೇವತೆಯು ರೇಶ್ಮೆ ಬಟ್ಟೆ ಎಣ್ಣೆ ಸುಧೆ ನೀರು ಅನ್ನ ಇವುಗಳನ್ನು ಎದುರುನೋಡುತ್ತಿರುವವನೂ ಹದ್ದಿನಂತೆ ಮುಖವುಳ್ಳವನೂ ಕಂಬಳಿ ಮತ್ತು ಜಿಂಕೆಚರ್ಮವನ್ನು ಧರಿಸಿರುವವನೂ ಆಗಿರುವನು.

---

[1] ದಂಭಾ (ಕ) [2] ಶ (ಕ) [3] ಭಾ (ಕ) [4] ವೃದ್ಧಸಮಾಸ್ಯ ಕಂಬಳಂ (ಕ).

(ಕುಂಭ ಮಧ್ಯಮ ದ್ರೇಕ್ಕಾಣ ಸ್ವರೂಪ)

ಮಲಿನಾಂಬರ ವೇ[1]ಷ್ಟಿ[1]ತೆ ಶಾ
ಲ್ಮಲೀ ಕುಜಂ ಬೆರಸು ಬಂಡಿ[2]ಯುಂ ದಹಿಸೆ ವನ[2]
ಸ್ಥಳದೊಳ್ [3]ಲೋ[3]ಹಂಗೊಳುವಳ್
ತಳೆವಳ್ ಘಟಮಂ ಘಟದ್ವಿತೀಯತ್ರ್ಯಂಶಂ ೩೨

(ಕುಂಭಾಂತ್ಯ ದ್ರೇಕ್ಕಾಣ ಸ್ವರೂಪ)

ಫಲಪತ್ರ ತ್ವಙ್ನಿರ್ಯಾ
ಸರೋಹಮಿಶ್ರಿತ ಘಟಂಗಳಂ ತಳೆದಂ ಶ್ಯಾ
ಮಲದೇಹಂ ಮಕುಟಧರಂ
ಸಲೋ[4]ಮ[4]ಕರ್ಣಂ ಘಟಾಂತಿಮದ್ರೇಕ್ಕಾಣಂ ೩೩

(ಮೀನಾದಿ ದ್ರೇಕ್ಕಾಣ ಸ್ವರೂಪ)

ವನಿತಾ ವಿಭೂಷಣಾರ್ಥದೆ
ವನಧಿಗೆ ಪೋಪಂ ವಿಭೂಷಣಾಢ್ಯಂ [5]ಸ್ರು[5]ಗ್ಭಾ
ಜನ ಮಣಿ ಮೌಕ್ತಿಕ ಶಂಖಾ
[6]ಳಿನಿಲೀನಕರಂ[6] ಝುಷಾದಿಮದ್ರೇಕ್ಕಾಣಂ ೩೪

---

೩೨. ಕುಂಭ ರಾಶಿಯ ಎರಡನೆಯ ದ್ರೇಕ್ಕಾಣ ದೇವತೆಯು ಕೊಳೆ ಬಟ್ಟೆಯನ್ನುಟ್ಟಿರುವವಳೂ ಬೂರುಗದ ಮರವನ್ನು ಹಿಡಿದುಕೊಂಡಿರುವವಳೂ ಬಂಡಿಯು ಸುಟ್ಟುಹೋಗಲು ಕಾಡಿನಲ್ಲಿ ಲೋಹವನ್ನು ತೆಗೆದುಕೊಳ್ಳುವವಳೂ ಬಿಂದಿಗೆಯನ್ನು ಹೊತ್ತುಕೊಂಡಿರುವವಳೂ ಆಗಿರುವಳು.

೩೩. ಕುಂಭ ರಾಶಿಯ ಮೂರನೆಯ ದ್ರೇಕ್ಕಾಣ ದೇವತೆಯು ಹಣ್ಣು ಎಲೆ ತೊಗಟೆ ವೃಕ್ಷನಿರ್ಯಾಸ (ಗುಗ್ಗುಳ ಮೊದಲಾದವು) ಲೋಹ ಇವುಗಳಿಂದ ಕೂಡಿದ ಘಟಗಳನ್ನು ಹೊತ್ತುಕೊಂಡಿರುವವನೂ ಶ್ಯಾಮಲ ಶರೀರನೂ ಕಿರೀಟವನ್ನು ಧರಿಸಿರುವವನೂ ರೋಮಗಳಿಂದ ಕೂಡಿದ ಕಿವಿಯುಳ್ಳವನೂ ಆಗಿರುವನು.

೩೪. ಮೀನ ರಾಶಿಯ ಮೊದಲನೆಯ ದ್ರೇಕ್ಕಾಣ ದೇವತೆಯು ತನ್ನ ಪತ್ನಿಯ ಅಲಂಕಾರ ವಸ್ತುಗಳಿಗಾಗಿ ಸಮುದ್ರಕ್ಕೆ ಹೋಗುವವನೂ ಆಭರಣ ಯುತನೂ ಸ್ರುಕ್ ಸ್ರುವ ಮೊದಲಾದ ಯಜ್ಞೋಪಕರಣಗಳು ರತ್ನ ಮುತ್ತು ಶಂಖ ಇವುಗಳನ್ನು ಕೈಯಲ್ಲಿ ಇಟ್ಟುಕೊಂಡಿರುವವನೂ ಆಗಿರುವನು.

---

1 ಷಿ (ಗ) 2 ಯುಂದದೆ ವಿವನ (ಕ) ಯುಂದರೆ ವಿವರ್ನ (ಗ) 3 ರೋ (ಕ ಗ) 4 ಹ (ಕ)
5 ಸ್ರ (ಕ ಗ) 6 ದಿನಿಳಕಂಠಂ (ಕ) ದಿನೀಲಕರಂ (ಗ).

(ಮೀನ ಮಧ್ಯಮ ದ್ರೇಕ್ಕಾಣ ಸ್ವರೂಪ)

ಧೃತಚಂಪಕ ತನುರುಚಿ ಸ್ಮೂ
[1]ನ್ನತ[1] ಧ್ವಜಾಶ್ರಿತ ಪತಾಕ ಪೋತಗತಂ ವಾ
ರ್ಧಿತಟಕ್ಕೆ [2]ಪರೀವಾರಾ
ನ್ವಿ[2]ತನನೆ ಪೋಪಂ ಝಷದ್ವಿತೀಯತ್ರ್ಯಂಶಂ　೩೫

(ಮೀನಾಂತ್ಯ ದ್ರೇಕ್ಕಾಣ ಸ್ವರೂಪ)

ವಸನವಿಹೀನಂ ಕುಟಿಯೊಳ
ಗೆ ಸರ್ಪನಿಂ ಕಟ್ಟುಪಟ್ಟವಂ ಚೋರವಿಭಾ
ವಸುಗಳ ಭಯದಿಂದಾಕ್ರಂ
ದಿಸುವಂ ಕಾನನದೊಳನಿಮಿಷಾಂತ್ಯತ್ರ್ಯಂಶಂ　೩೬

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ದ್ರೇಕ್ಕಾಣಪ್ರಕರಣವರ್ಣನಂ ಏಕೋನವಿಂಶಾಧಿಕಾರಂ

---

೩೫. ಮೀನರಾಶಿಯ ಎರಡನೆಯ ದ್ರೇಕ್ಕಾಣದೇವತೆಯು ಸಂಪಿಗೆ ಹೂವಿನಂತೆ ಕಾಂತಿಯುತನೂ ಉನ್ನತ ಧ್ವಜಪತಾಕೆಗಳಿಂದ ಕೂಡಿರುವ ದೋಣಿಯಲ್ಲಿ ಸಮುದ್ರದ ದಡಕ್ಕೆ ತನ್ನ ಪರಿವಾರದವರೊಡನೆ ಹೋಗುವವನೂ ಆಗಿರುವನು.

ವಿ–ಬೃಹಜ್ಜಾತಕದಲ್ಲಿ ಈ ದ್ರೇಕ್ಕಾಣದೇವತೆಗೆ ಸ್ತ್ರೀಸ್ವರೂಪವನ್ನು ಹೇಳಿದೆ. 'ಪೋತಸ್ಥಿತೆ' 'ನ್ವಿತಳೆನೆ' 'ಪೋಪಳ್' ಎಂದು ಪದಗಳನ್ನು ಮಾರ್ಪಡಿಸಿದರೆ ಬೃಹಜ್ಜಾತಕದಲ್ಲಿ ಹೇಳಿರುವುದಕ್ಕೆ ಸರಿಯಾಗುತ್ತದೆ.

೩೬. ಮೀನರಾಶಿಯ ಮೂರನೆಯ ದ್ರೇಕ್ಕಾಣದೇವತೆಯು ಬಟ್ಟೆಯಿಲ್ಲದವನೂ ಹಳ್ಳದಲ್ಲಿ ಹಾವಿನಿಂದ ಆವೃತನೂ ಚೋರಾಗ್ನಿ ಭಯದಿಂದ ಕಾಡಿನಲ್ಲಿ ಆರ್ತನಾದ ಮಾಡುವವನೂ ಆಗಿರುವನು.

ವಿ–ಪ್ರತಿರಾಶಿಗೂ ಮೂರು ದ್ರೇಕ್ಕಾಣಗಳಂತೆ ಒಟ್ಟು ಮೂವತ್ತಾರು ದ್ರೇಕ್ಕಾಣಗಳಿವೆ. ಇವುಗಳಲ್ಲಿ ವೃಷಭ ಮಿಥುನ ಕನ್ಯಾ ವೃಶ್ಚಿಕ ರಾಶಿಗಳ ಮೊದಲನೆಯ ದ್ರೇಕ್ಕಾಣ, ಮೇಷ ಕರ್ಕಟಕ ವೃಶ್ಚಿಕ ಧನುಸ್ಸು ಮಕರ ಕುಂಭ ಮೀನ ರಾಶಿಗಳ ಎರಡನೆಯ ದ್ರೇಕ್ಕಾಣ, ಕನ್ಯಾರಾಶಿಯ ಮೂರನೆಯ ದ್ರೇಕ್ಕಾಣ ಒಟ್ಟು ಈ ಹನ್ನೆರಡು ಸ್ತ್ರೀ ದ್ರೇಕ್ಕಾಣಗಳು. ಉಳಿದ ಇಪ್ಪತ್ತನಾಲ್ಕು ಪುರುಷ ದ್ರೇಕ್ಕಾಣಗಳು.

---

[1] ನ್ನತ (ಕ ಗ)　[2] ಪಾರಾವಾರಾ $\sqrt{}$ (ಕ) ಪಾರಿವರಾಳ್ವಿ (ಗ).

ಕರ್ಕಟಕ ಸಿಂಹ ಧನುಸ್ಸು ಈ ರಾಶಿಗಳ ಮೊದಲನೆಯ ದ್ರೇಕ್ಕಾಣ, ಮೇಷ ವೃಷಭ ರಾಶಿಗಳ ಎರಡನೆಯ ದ್ರೇಕ್ಕಾಣ, ವೃಷಭ ಸಿಂಹ ತುಲಾ ವೃಶ್ಚಿಕ ರಾಶಿಗಳ ಮೂರನೆಯ ದ್ರೇಕ್ಕಾಣ ಒಟ್ಟು ಈ ಒಂಬತ್ತೂ ಚತುಷ್ಪಾತ್ ದ್ರೇಕ್ಕಾಣಗಳು.

ಮೇಷ ಧನುಸ್ಸು ಮಕರ ರಾಶಿಗಳ ಮೊದಲನೆಯ ದ್ರೇಕ್ಕಾಣ, ಮಿಥುನ ಸಿಂಹ ಕನ್ಯಾ ರಾಶಿಗಳ ಎರಡನೆಯ ದ್ರೇಕ್ಕಾಣ, ಮೇಷ ಮಿಥುನ ಸಿಂಹ ಧನುಸ್ಸು ಮಕರ ರಾಶಿಗಳ ಮೂರನೆಯ ದ್ರೇಕ್ಕಾಣ ಒಟ್ಟು ಈ ಹನ್ನೊಂದು ಆಯುಧಭೃತ್ ದ್ರೇಕ್ಕಾಣಗಳು.

ಕರ್ಕಟಕ ರಾಶಿಯ ಎರಡು ಮೂರನೆಯ ದ್ರೇಕ್ಕಾಣಗಳು, ವೃಶ್ಚಿಕ ರಾಶಿಯ ಒಂದು ಎರಡನೆಯ ದ್ರೇಕ್ಕಾಣಗಳು, ಮೀನ ರಾಶಿಯ ಮೂರನೆಯ ದ್ರೇಕ್ಕಾಣ ಒಟ್ಟು ಈ ಐದೂ ಸರ್ಪ ದ್ರೇಕ್ಕಾಣಗಳು.

ಸಿಂಹ ಕುಂಭರಾಶಿಗಳ ಮೊದಲನೆಯ ದ್ರೇಕ್ಕಾಣ, ಮಿಥುನ ತುಲಾ ರಾಶಿಗಳ ಎರಡನೆಯ ದ್ರೇಕ್ಕಾಣ, ಈ ನಾಲ್ಕೂ ಪಕ್ಷಿ ದ್ರೇಕ್ಕಾಣಗಳು.

ಈ ಅಧಿಕಾರದಲ್ಲಿ ಹೇಳಿರುವ ಮೂವತ್ತಾರು ದ್ರೇಕ್ಕಾಣ ದೇವತೆಗಳ ಚಿತ್ರಗಳನ್ನೂ ಮೇಷಾದಿ ಹನ್ನೆರಡು ರಾಶಿಗಳ ಸ್ವರೂಪಗಳನ್ನೂ ಪ್ರಕೃತ ಗ್ರಂಥ ಮತ್ತು ಶ್ರೀ ತತ್ತ್ವನಿಧಿಗಳನ್ನು ಆಧರಿಸಿ ಮುಂದಿನ ಪುಟಗಳಲ್ಲಿ ಕೊಡಲಾಗಿದೆ.

1 ರಿಂದ 12 ರ ವರೆಗಿನ ಅಂಕಿಗಳು ಕ್ರಮವಾಗಿ ಮೇಷಾದಿ ಹನ್ನೆರಡು ರಾಶಿಗಳನ್ನೂ ಈ ಅಂಕಿಗಳ ಪಕ್ಕದಲ್ಲಿ ಕೊಟ್ಟಿರುವ i, ii, iii—ಈ ಅಧೀನಾಂಕಗಳು ಕ್ರಮವಾಗಿ ಆ ಆ ರಾಶಿಯ ಆದಿ, ಮಧ್ಯ, ಅಂತ್ಯ ದ್ರೇಕ್ಕಾಣಗಳನ್ನೂ ಸೂಚಿಸುತ್ತವೆ.

ಉದಾ : 1 = ಮೇಷರಾಶಿ

| | | |
|---|---|---|
| 1— i | ,, | ಆದಿ ದ್ರೇಕ್ಕಾಣ |
| 1— ii | ,, | ಮಧ್ಯ ದ್ರೇಕ್ಕಾಣ |
| 1—iii | ,, | ಅಂತ್ಯ ದ್ರೇಕ್ಕಾಣ |


1


2


3


1—i


2—i


3—i


1—ii


2—ii


3—ii


1—iii


2—iii


3—iii

## ದ್ರೇಕ್ಕಾಣ ದೇವತೆಗಳ ಚಿತ್ರ



4



5



6



4—i



5—i



6—i



4—ii



5—ii



6—ii



4—iii



5—iii



6—iii


7


8


9


7—i


8—i


9--i


7—ii


8—ii


9—ii


7—iii


8—iii


9—iii

## ದ್ರೇಕ್ಕಾಣ ದೇವತೆಗಳ ಚಿತ್ರ



10



11



12



10—i



11—i



12—i



10—ii



11—ii



12—ii



10—iii



11—iii



12—iii

# ವಿಂಶತ್ಯಧಿಕಾರಂ

## ದೃಷ್ಟಿ ಪ್ರಕರಣಂ

(ಮೇಷರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ತಾರೇಶಂ ನಿಲೆ ಮೇಷದೊ
ಳಾರಂ ಮೊದಲಾಗೆ ಷಡ್ಗ್ರಹಂ [1]ನೋಡೆ ನೃಪಂ[1]
[2]ಸೂರಿ[2] ನೃಪಪ್ರತಿಮಗುಣಂ
ಚೋರಂ ನಿರ್ಧನನೆನಿಕ್ಕುಮಾತಂ ಕ್ರಮದಿಂ ೧

(ವೃಷಭರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಕುವಲಯಸಖನಿ[3]ರೆ[3] ವೃಷಭದೊ
ಳವನಿಸುತಾದಿ ಗ್ರಹಂಗಳೀಕ್ಷಿಪೊಡವನ
ರ್ಥವಿಹೀನಂ ಚೋರಂ ಪಾ
ರ್ಥಿವ[4]ಧನಪತಿ [ನೃಪತಿ][4] ಧನ್ಯನನ್ಯಪ್ರೇಷ್ಯಂ ೨

---

೧. ಚಂದ್ರನು ಮೇಷರಾಶಿಯಲ್ಲಿರುವಾಗ ಕುಜನೇ ಮೊದಲಾದ ಆರು ಗ್ರಹಗಳು ನೋಡಿದರೆ ಜಾತಕನು ಕ್ರಮವಾಗಿ ರಾಜ ಪಂಡಿತ ರಾಜತುಲ್ಯ ಗುಣವಂತ ಕಳ್ಳ ದರಿದ್ರನಾಗುತ್ತಾನೆ.

ವಿ—ಜನನಕಾಲದಲ್ಲಿ ಚಂದ್ರನು ಮೇಷರಾಶಿಯಲ್ಲಿದ್ದು ಆತನನ್ನು ಕುಜ ನೋಡಿದರೆ ಜಾತಕನು ರಾಜನಾಗುತ್ತಾನೆ; ಬುಧ ನೋಡಿದರೆ ಪಂಡಿತನಾಗುತ್ತಾನೆ; ಗುರು ನೋಡಿದರೆ ರಾಜನಿಗೆ ಸಮಾನನಾಗುತ್ತಾನೆ; ಶುಕ್ರ ನೋಡಿದರೆ ಗುಣವಂತನಾಗುತ್ತಾನೆ; ಶನಿ ನೋಡಿದರೆ ಕಳ್ಳನಾಗುತ್ತಾನೆ; ಸೂರ್ಯ ನೋಡಿದರೆ ದರಿದ್ರನಾಗುತ್ತಾನೆ. ಚಂದ್ರನಿರುವ (ಜನ್ಮ)ರಾಶಿಗೆ ಹೇಳಿರುವ ಕುಜಾದಿ ಗ್ರಹಗಳ ದೃಷ್ಟಿಫಲಗಳೇ ಆಯಾ ಲಗ್ನಗಳಿಗೂ ಉಂಟಾಗುತ್ತವೆ.

೨. ಚಂದ್ರನು ವೃಷಭರಾಶಿಯಲ್ಲಿರುವಾಗ ಕುಜನೇ ಮೊದಲಾದ ಆರು ಗ್ರಹಗಳು ನೋಡಿದರೆ ಜಾತಕನು ಕ್ರಮವಾಗಿ ದರಿದ್ರ ಕಳ್ಳ ರಾಜ ಧನಿಕನಾದ ರಾಜ ಧನಿಕ ಸೇವಕನಾಗುತ್ತಾನೆ.

ವಿ—ಜನನಕಾಲದಲ್ಲಿ ವೃಷಭರಾಶಿಯಲ್ಲಿರುವ ಚಂದ್ರನನ್ನು ಕುಜ ನೋಡಿದರೆ ಜಾತಕನು ದರಿದ್ರನಾಗುತ್ತಾನೆ; ಬುಧ ನೋಡಿದರೆ ಕಳ್ಳನಾಗುತ್ತಾನೆ; ಗುರು ನೋಡಿದರೆ ಧನಾಢ್ಯನಾದ ರಾಜನಾಗುತ್ತಾನೆ; ಶುಕ್ರ ನೋಡಿದರೆ ರಾಜನಾಗುತ್ತಾನೆ; ಶನಿ ನೋಡಿದರೆ ಧನಿಕನಾಗುತ್ತಾನೆ; ಸೂರ್ಯ ನೋಡಿದರೆ ಸೇವಕನಾಗುತ್ತಾನೆ. ಇದರಂತೆಯೇ ಉಳಿದ ರಾಶಿಗಳಲ್ಲೂ ಕ್ರಮವಾಗಿ ಹೇಳಿರುವ ಫಲಗಳನ್ನು ಕುಜಾದಿ ಆರುಗ್ರಹಗಳಿಗೂ ಪ್ರತ್ಯೇಕವಾಗಿ ತಿಳಿದುಕೊಳ್ಳಬೇಕು.

---

1 ನೋರ್ಪಡವಂ (ಕ) ನೋಳ್ಪಡವಂ (ಗ)   2 ಶೂರ (ಕ ಗ)   3 ರೆ (ಗ).   4 ನತಿ (ಗ).

(ಮಿಥುನರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ತುಹಿನಕರಂ ಮಿಥುನದೊಳಿರೆ
ಮಹಿಜಾದಿಗಳೀಕ್ಷಿಪಂದು [1]ಲೋ[1]ಹಾಜೀವ್ಯಂ
ಮಹಿ[2]ನಾಥಂ ವಿಬುಧಂ [ಭಯ]
ರಹಿತಮನಂ[2] ನೆಯ್ಗೆ ಕಾಜಿನರ್ಥ[3]ನ[3]ನೆನಿಕ್ಕುಂ ೩

(ಕರ್ಕಟಕರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಹಿಮರುಚಿ ಕರ್ಕಿಯೊಳಿರೆ ನೋ
ಡೆ ಮಹೀಜಾದಿ [4]ಗ್ರಹಾಳಿ ಯೋಧಂ[4] ಕವಿ ಸೂ
ರಿ ಮಹೀತಳನಾಥಂ [5]ಲೋ[5]
ಹಮನುಪಜೀವಿಸುವನಕ್ಷಿರೋಗಿಯೆನಿಕ್ಕುಂ ೪

(ಸಿಂಹರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಬಿಸಜಾರಿ ಹರಿಯೊಳಿರೆ ವೀ
ಕ್ಷಿಸೆ ಕನಕಾದಿಗ್ರಹಂ ಮಹೀನಾಥಂ ಜೋ
ಯಿಸಿಗಂ ವಿತ್ತಾಧೀಶಂ
[6]ವಸುಧೇಶಂ ನಾ[6]ವಿದಂ ನರೇಶ್ವರನಕ್ಕುಂ ೫

---

೩. ಚಂದ್ರನು ಮಿಥುನರಾಶಿಯಲ್ಲಿರುವಾಗ ಕುಜ ನೋಡಿದರೆ ಜಾತಕನು ಲೋಹವ್ಯಾಪಾರಿಯೂ ಬುಧ ನೋಡಿದರೆ ರಾಜನೂ ಗುರು ನೋಡಿದರೆ ವಿದ್ವಾಂಸನೂ ಶುಕ್ರ ನೋಡಿದರೆ ಹೆದರದವನೂ (ಧೈರ್ಯಶಾಲಿಯೂ) ಶನಿ ನೋಡಿದರೆ ನೆಯ್ಗೆಯ ಕೆಲಸಮಾಡುವವನೂ ಸೂರ್ಯ ನೋಡಿದರೆ ದರಿದ್ರನೂ ಆಗುತ್ತಾನೆ.

೪. ಚಂದ್ರನು ಕರ್ಕಟಕರಾಶಿಯಲ್ಲಿರುವಾಗ ಕುಜ ನೋಡಿದರೆ ಜಾತಕನು ಯುದ್ಧಕುಶಲನೂ ಬುಧ ನೋಡಿದರೆ ಕವಿಯೂ ಗುರು ನೋಡಿದರೆ ವಿದ್ವಾಂಸನೂ ಶುಕ್ರ ನೋಡಿದರೆ ರಾಜನೂ ಶನಿ ನೋಡಿದರೆ ಲೋಹವ್ಯಾಪಾರದಿಂದ ಜೀವಿಸುವವನೂ ಸೂರ್ಯ ನೋಡಿದರೆ ನೇತ್ರರೋಗಿಯೂ ಆಗುತ್ತಾನೆ.

೫. ಚಂದ್ರನು ಸಿಂಹರಾಶಿಯಲ್ಲಿರುವಾಗ ಕುಜ ನೋಡಿದರೆ ಜಾತಕನು ರಾಜನೂ ಬುಧ ನೋಡಿದರೆ ಜೋಯಿಸನೂ ಗುರು ನೋಡಿದರೆ ಧನಿಕನೂ ಶುಕ್ರ ನೋಡಿದರೆ ದೊರೆಯೂ ಶನಿ ನೋಡಿದರೆ ಕ್ಷೌರಕನೂ ಸೂರ್ಯ ನೋಡಿದರೆ ಅರಸನೂ ಆಗುತ್ತಾನೆ.

---

[1] ರೋ (ಕ ಗ) [2] ನಾಥಂ ವಿಬುಧಂ ಮಂದಹಿತಂ ಮನಂ (ಕ) ನಾಂಗಂ ವಿಬಾದಂ ಮಂತರ್ಹಿತಮಮಂ (ಗ) [3] ಮ (ಕ ಗ) [4] ಗ್ರಹಂಹಾಳಿಯೊದಯೊಗಂ (ಕ) ಗ್ರಹಂ ವಿಯೋಗಂ (ಗ) [5] ರೋ (ಕ ಗ) [6] ವಸುದೀಶಂ ನಯು (ಕ) ನಯು (ಗ).

(ಕನ್ಯಾರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಶಶಿ ಕನ್ನೆಯೊಳಿ[1]ರೆ ವೀ[1]ಕ್ಷಿಸೆ
ಶಶಾಂಕಜಾದಿತ್ರಯಂ ನೃಪಂ ಸೇನಾಪಂ
ಕುಶಲನೆನಿಕ್ಕುಂ ಲಗ್ನಮ
ನಶುಭಗ್ರಹದೃಷ್ಟಿ ಕೂಡೆ ದುಷ್ಟನೆನಿಕ್ಕುಂ ೬

(ತುಲಾರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಇರೆ ಚಂದ್ರಂ ತೊಳೆಯೊಳ್ ಹಿಮ
ಕಿರಣಸುತಾದಿ ಗ್ರಹತ್ರಯಂ ನೋಡೆ ಧರಾ
ಮರಪತಿ ಪೊಂಬೆಸಗೆಯ್ವಂ
ಪರಿಣತಮತಿಯಕ್ಕುಮನ್ಯದೃಷ್ಟಿಯಿನದಯಂ ೭

(ವೃಶ್ಚಿಕರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಕನಕಾದಿಗಳೀಕ್ಷಿಸೆ ಚಂ
ದ್ರನನಳಿಯೊಳ್ ನಿಂದನಂ ಧರಾಧಿಪನವುಳ್ಪು
[2]ಟ್ಟನ[2] ತಂದೆ ವಿನಯನಿಧಿ ರಜ
ಕನಂಗಹೀನಂ ದರಿದ್ರನಕ್ಕುಂ ತರದಿಂ ೮

---

೬. ಚಂದ್ರನು ಕನ್ಯಾರಾಶಿಯಲ್ಲಿರುವಾಗ ಬುಧ ನೋಡಿದರೆ ಜಾತಕನು ಅರಸನೂ ಗುರು ನೋಡಿದರೆ ಸೇನಾಪತಿಯೂ ಶುಕ್ರ ನೋಡಿದರೆ ನಿಪುಣನೂ ಅಶುಭಗ್ರಹ ನೋಡಿದರೆ ದುಷ್ಟನೂ ಆಗುತ್ತಾನೆ.

ವಿ–ಪದ್ಯದಲ್ಲಿ 'ಲಗ್ನಮನಶುಭಗ್ರಹದೃಷ್ಟಿ ಕೂಡೆ' ಎಂದಿರುವುದರಿಂದ ಜನ್ಮರಾಶಿ (ಚಂದ್ರನಿರುವರಾಶಿ)ಗೆ ಹೇಳಿರುವ ಗ್ರಹದೃಷ್ಟಿಫಲವೇ ಲಗ್ನಕ್ಕೂ ಸಂಭವಿಸುತ್ತದೆ ಎಂದು ತಿಳಿದುಬರುತ್ತದೆ. ಕನ್ಯಾರಾಶಿಯಲ್ಲಿ ಚಂದ್ರನಿದ್ದಾಗ ಪಾಪಗ್ರಹ ನೋಡಿದರೆ ಜಾತಕನು ಹೆಂಗಸರನ್ನು ಆಶ್ರಯಿಸಿ ಜೀವಿಸುತ್ತಾನೆಂದು ಬೃಹಜ್ಜಾತಕದಲ್ಲಿದೆ.

೭. ಚಂದ್ರನು ತುಲಾರಾಶಿಯಲ್ಲಿರುವಾಗ ಬುಧ ನೋಡಿದರೆ ಜಾತಕನು ದೊರೆಯೂ ಗುರು ನೋಡಿದರೆ ಚಿನ್ನದ ಕೆಲಸ ಮಾಡುವವನೂ ಶುಕ್ರ ನೋಡಿದರೆ ಸುಸಂಸ್ಕೃತಮತಿಯೂ ಉಳಿದ ಪಾಪಗ್ರಹಗಳು ನೋಡಿದರೆ ದಯೆಯಿಲ್ಲದವನೂ ಆಗುತ್ತಾನೆ.

ವಿ–ಚಂದ್ರನು ತುಲಾರಾಶಿಯಲ್ಲಿರುವಾಗ ಶುಕ್ರ ನೋಡಿದರೆ ವ್ಯಾಪಾರಿಯಾಗುತ್ತಾನೆಂದು ಬೃಹಜ್ಜಾತಕದಲ್ಲಿದೆ.

೮. ಚಂದ್ರನು ವೃಶ್ಚಿಕರಾಶಿಯಲ್ಲಿರುವಾಗ ಕುಜ ನೋಡಿದರೆ ಜಾತಕನು ರಾಜನೂ ಬುಧ ನೋಡಿದರೆ ಅವಳಿಮಕ್ಕಳ ತಂದೆಯೂ ಗುರು ನೋಡಿದರೆ ಅತ್ಯಂತ ವಿನೀತನೂ ಶುಕ್ರ ನೋಡಿದರೆ ಅಗಸನೂ ಶನಿ ನೋಡಿದರೆ ಅಂಗಹೀನನೂ ಸೂರ್ಯ ನೋಡಿದರೆ ದರಿದ್ರನೂ ಆಗುತ್ತಾನೆ.

---

[1] ರಲೀ (ಗ) [2] ಟ್ಟುನರಂ (ಕ).

(ಧನೂರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಧನುವಿನೊಳಿರೆ ಚಂದ್ರಂ ಶಶಿ
ತನಯಾದಿ ತ್ರಿತಯದೃಷ್ಟಿ[1]ಯಿಂ ಬಂಧ್ವಧಿಪಾ[1]
ವನಿಪತಿ ಜನಾಶ್ರಯಂ ಕ್ರೂ
ರನಿರೀಕ್ಷಣದಿಂದೆ ಕುಟಿಲನುಂ ಶಠನುಮವಂ ೯

(ಮಕರರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಶತಪತ್ರಶತ್ರು ಮಕರ
ಸ್ಥಿತನಾಗೆ ಕುಜಾದಿಗಳ್ ನಿರೀಕ್ಷಿಸೆ ಧಾತ್ರೀ
ಪತಿ ಸ[2]ಕಲ[2]ಮಹೀಪತಿ ಭೂ
ಪತಿ ಬುಧನರ್ಥೇಶನಲ್ಪವಿತ್ತನೆನಿಕ್ಕುಂ ೧೦

(ಕುಂಭರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಹರಿಣಾಂಕಂ ಕುಂಭದೊಳಿರೆ
ಹರಿಣಾಂಕಜ ಗುರು ಸಿತರ್ ನಿರೀಕ್ಷಿಸೆ ಜನಪಂ
[3]ನರ[3]ಪಸಮಂ [4]ಪಾಣ್ಬಂ[4] ಕ್ರೂ
ರರಭೀಕ್ಷಿಸೆ ತರದೆ ತತ್ಸಮಂ ಫಲಮಕ್ಕುಂ ೧೧

---

೯. ಚಂದ್ರನು ಧನೂರಾಶಿಯಲ್ಲಿರುವಾಗ ಬುಧ ನೋಡಿದರೆ ಜಾತಕನು ಬಂಧುಗಳಿಗೆ ಯಜಮಾನನೂ ಗುರು ನೋಡಿದರೆ ರಾಜನೂ ಶುಕ್ರ ನೋಡಿದರೆ ಜನಾಶ್ರಯನೂ ಕ್ರೂರಗ್ರಹ ನೋಡಿದರೆ ಮೋಸಗಾರನೂ ಸ್ವಕಾರ್ಯಧುರಂಧರನೂ ಆಗುತ್ತಾನೆ.

೧೦. ಚಂದ್ರನು ಮಕರರಾಶಿಯಲ್ಲಿರುವಾಗ ಅಂಗಾರಕನು ನೋಡಿದರೆ ಭೂಪತಿಯೂ ಬುಧ ನೋಡಿದರೆ ರಾಜಾಧಿರಾಜನೂ ಗುರು ನೋಡಿದರೆ ಅರಸನೂ ಶುಕ್ರ ನೋಡಿದರೆ ಪಂಡಿತನೂ ಶನಿ ನೋಡಿದರೆ ಧನಿಕನೂ ಸೂರ್ಯ ನೋಡಿದರೆ ದರಿದ್ರನೂ ಆಗುತ್ತಾನೆ.

೧೧. ಚಂದ್ರನು ಕುಂಭರಾಶಿಯಲ್ಲಿರುವಾಗ ಬುಧ ನೋಡಿದರೆ ಜಾತಕನು ರಾಜನೂ ಗುರು ನೋಡಿದರೆ ರಾಜನಿಗೆ ಸಮನೂ ಶುಕ್ರ ನೋಡಿದರೆ ಜಾರನೂ ಕ್ರೂರಗ್ರಹ ನೋಡಿದರೂ ಶುಕ್ರನಿಗೆ ಹೇಳಿರುವ ಫಲವನ್ನೇ ಅನುಭವಿಸುವವನೂ (ಜಾರನೂ) ಆಗುತ್ತಾನೆ.

---

[1] ಯೆಂಬುದನಧಿಕಾ (ಕ) ಯಿಂ ಬುಧನಿಧಿಕಾ (ಗ) [2] ಖರ (ಕ) [3] ಜನ (ಗ) [4] ಪಾರ್ವಂಬಂ (ಕ).

(ಮೀನರಾಶಿಯಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ತುಹಿನಾಂಶಂ ಕೂಡಿರೆ ಝಷ
ಗೃಹದೊಳ್ ಬುಧ ಜೀವ ಶುಕ್ರರೀಕ್ಷಿಸುವೊಡವಂ
ಪ್ರಹಸನಶೀಲಂ ಮಹಿಪಂ
ಮಹಾಸ್ಪದಂ ಪಾಪದೃಷ್ಟಿಯಿಂ ಪಾಪಾತ್ಮಂ ೧೨

---

೧ ೧೨. ಚಂದ್ರನು ಮೀನರಾಶಿಯಲ್ಲಿರುವಾಗ ಬುಧ ನೋಡಿದರೆ ಹಾಸ್ಯಜ್ಞನೂ ಗುರು ನೋಡಿದರೆ ರಾಜನೂ ಶುಕ್ರ ನೋಡಿದರೆ ಮಹಾಸ್ಪದನೂ ಪಾಪಗ್ರಹ ನೋಡಿದರೆ ಪಾಪಿಷ್ಠನೂ ಆಗುತ್ತಾನೆ.

ವಿ—ಮೀನರಾಶಿಯಲ್ಲಿರುವ ಚಂದ್ರನನ್ನು ಶುಕ್ರ ನೋಡಿದರೆ ಜಾತಕನು ಪಂಡಿತನಾಗುತ್ತಾನೆಂದು ಬೃಹಜ್ಜಾತಕದಲ್ಲಿದೆ.

ಸೂರ್ಯನ ಸ್ವಕ್ಷೇತ್ರವಾದ ಸಿಂಹರಾಶಿಯನ್ನು ಬಿಟ್ಟು ಉಳಿದ ರಾಶಿಗಳಲ್ಲಿರುವ ಚಂದ್ರನನ್ನು ಸೂರ್ಯ ನೋಡಿದರೆ ಅಶುಭಫಲ ಉಂಟಾಗುತ್ತದೆ. ಸೂರ್ಯನು ಸಪ್ತಮದೃಷ್ಟಿಯಿಂದ ಮಾತ್ರ ನೋಡುತ್ತಾನೆ; ವಿಶೇಷದೃಷ್ಟಿ ಇಲ್ಲ.

ಅಂಗಾರಕನ ಸ್ವಕ್ಷೇತ್ರವಾದ ಮೇಷ ವೃಶ್ಚಿಕ ಉಚ್ಚಕ್ಷೇತ್ರವಾದ ಮಕರ ಮತ್ತು ಸಿಂಹ ಈ ನಾಲ್ಕುರಾಶಿಗಳಲ್ಲಿರುವ ಚಂದ್ರನನ್ನು ಅಂಗಾರಕ ನೋಡಿದರೆ ಶುಭಫಲವೂ ಉಳಿದ ರಾಶಿಗಳಲ್ಲಿರುವ ಚಂದ್ರನನ್ನು ನೋಡಿದರೆ ಅಶುಭಫಲವೂ ಉಂಟಾಗುತ್ತದೆ. ಅಂಗಾರಕನು ಸಪ್ತಮವನ್ನು ಪೂರ್ಣದೃಷ್ಟಿಯಿಂದಲೂ ಚತುರ್ಥಾಷ್ಟಮಗಳನ್ನು ವಿಶೇಷದೃಷ್ಟಿಯಿಂದಲೂ ನೋಡುತ್ತಾನೆ.

ವೃಷಭರಾಶಿಯನ್ನು ಬಿಟ್ಟು ಉಳಿದ ರಾಶಿಗಳಲ್ಲಿರುವ ಚಂದ್ರನನ್ನು ಬುಧ ನೋಡಿದರೆ ಶುಭಫಲ ಉಂಟಾಗುತ್ತದೆ. ಬುಧ ಸಪ್ತಮದೃಷ್ಟಿಯಿಂದ ಮಾತ್ರ ನೋಡುತ್ತಾನೆ ; ವಿಶೇಷದೃಷ್ಟಿ ಇಲ್ಲ.

ಚಂದ್ರನನ್ನು ಗುರು ನೋಡಿದರೆ ಶುಭಫಲವುಂಟಾಗುತ್ತದೆ ; ಅಶುಭಫಲವಿಲ್ಲ. ಗುರು ಸಪ್ತಮವನ್ನು ಪೂರ್ಣದೃಷ್ಟಿಯಿಂದಲೂ ಪಂಚಮ ನವಮಗಳನ್ನು ವಿಶೇಷದೃಷ್ಟಿಯಿಂದಲೂ ನೋಡುತ್ತಾನೆ.

ವೃಶ್ಚಿಕ ಕುಂಭರಾಶಿಗಳಲ್ಲಿರುವ ಚಂದ್ರನನ್ನು ಶುಕ್ರ ನೋಡಿದರೆ ಸಾಮಾನ್ಯ ಫಲವೂ ಉಳಿದ ರಾಶಿಗಳಲ್ಲಿರುವಾಗ ನೋಡಿದರೆ ಶುಭಫಲವೂ ಆಗುತ್ತದೆ. ಶುಕ್ರ ಸಪ್ತಮದೃಷ್ಟಿಯಿಂದ ಮಾತ್ರ ನೋಡುತ್ತಾನೆ ; ವಿಶೇಷದೃಷ್ಟಿ ಇಲ್ಲ.

ವೃಷಭ ಮಕರಗಳನ್ನು ಬಿಟ್ಟು ಉಳಿದ ರಾಶಿಗಳಲ್ಲಿರುವ ಚಂದ್ರನನ್ನು ಶನಿ ನೋಡಿದರೆ ಅಶುಭಫಲ ಉಂಟಾಗುತ್ತದೆ. ಶನಿ ಸಪ್ತಮವನ್ನು ಪೂರ್ಣದೃಷ್ಟಿಯಿಂದಲೂ ತೃತೀಯ ದಶಮಸ್ಥಾನಗಳನ್ನು ವಿಶೇಷದೃಷ್ಟಿಯಿಂದಲೂ ನೋಡುತ್ತಾನೆ.

## ದೃಷ್ಟಿಫಲ ಚಕ್ರ

| ಚಂದ್ರನಿರುವ ರಾಶಿ | ನೋಡುವ ಗ್ರಹಗಳು | | | | | |
|---|---|---|---|---|---|---|
| | ಕುಜ | ಬುಧ | ಗುರು | ಶುಕ್ರ | ಶನಿ | ಸೂರ್ಯ |
| ಮೇಷ | ರಾಜ | ಪಂಡಿತ | ರಾಜತುಲ್ಯ | ಗುಣವಂತ | ಚೋರ | ದರಿದ್ರ |
| ವೃಷಭ | ದರಿದ್ರ | ಕಳ್ಳ | ರಾಜ | ಧನಿಕನಾದ ರಾಜ | ಧನಿಕ | ಸೇವಕ |
| ಮಿಥುನ | ಲೋಹ ವ್ಯಾಪಾರಿ | ರಾಜ | ವಿದ್ವಾಂಸ | ಧೈರ್ಯಶಾಲಿ | ನೆಯ್ಗೆಕಾರ | ದರಿದ್ರ |
| ಕರ್ಕಾಟಕ | ಯೋಧ | ಕವಿ | ಪಂಡಿತ | ಅರಸ | ಲೋಹ ವ್ಯಾಪಾರಿ | ನೇತ್ರ ರೋಗಿ |
| ಸಿಂಹ | ದೊರೆ | ಜೋಯಿಸ | ಧನಿಕ | ನೃಪತಿ | ಕ್ಷೌರಕ | ಅರಸ |
| ಕನ್ಯಾ | ದುಷ್ಟ | ಅರಸ | ಸೇನಾಪತಿ | ನಿಪುಣ | ದುಷ್ಟ | ದುಷ್ಟ |
| ತುಲಾ | ನಿರ್ಘೃಣ | ದೊರೆ | ಸ್ವರ್ಣಕಾರ | ಪರಿಣತ ಮತಿ | ನಿರ್ಘೃಣ | ನಿರ್ಘೃಣ |
| ವೃಶ್ಚಿಕ | ಅರಸ | ಅವಳಿ ಮಕ್ಕಳ ತಂದೆ | ವಿನಯ ನಿಧಿ | ಅಗಸ | ಅಂಗಹೀನ | ದರಿದ್ರ |
| ಧನುಸ್ಸು | ಕುಟಿಲ ಶಠ | ಬಂಧುಪತಿ | ದೊರೆ | ಜನಾಶ್ರಯ | ಕುಟಿಲ ಶಠ | ಕುಟಿಲ ಶಠ |
| ಮಕರ | ಭೂಪತಿ | ರಾಜಾಧಿರಾಜ | ಅರಸ | ಪಂಡಿತ | ಧನಿಕ | ದರಿದ್ರ |
| ಕುಂಭ | ಜಾರ | ರಾಜ | ನೃಪನಮ | ಜಾರ | ಜಾರ | ಜಾರ |
| ಮೀನ | ಪಾಪಿಷ್ಠ | ಹಾಸ್ಯಜ್ಞ | ಭೂಪತಿ | ಮಹಾಸ್ವದ | ಪಾಪಿಷ್ಠ | ಪಾಪಿಷ್ಠ |

(ಹೋರಾ ದ್ರೇಕ್ಕಾಣಗಳಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ದೊರೆಕೊಂಡಿರ್ದ ವಿಲಗ್ನಹೋರೆಗಿನನಕ್ಕಬ್ಜಾರಿಯಕ್ಕೀಶನಾ
ಗಿರೆ ತದ್ರಾಶಿ[1]ದ[1]ಳಾಶ್ರಿತಗ್ರಹಸಮಾಜಂ ನೋೞ್ಪೊಡಾ ಹೋರೆಯೊಳ್
ಹರಿಣಾಂಕಂ ನಿಲೆ ಮೇಣ್ ವಿಲಗ್ನಭವನತ್ರ್ಯಂಶಾಧಿಪಂ ತತ್ಸುಧಾ
ಕರನಂ ನೋೞ್ಪೊಡೆ ತ[2]ತ್ರಿಯಂ[2]ಶಗತನಂ ತಜ್ಜಾತಕಂ ಶೋಭನಂ ೧೩

---

೧೩. ಸೂರ್ಯ ಚಂದ್ರ ಹೋರೆಗಳಲ್ಲಿ ಜನನಹೋರೆ ಯಾವುದೋ ಆ ಹೋರೆಯಲ್ಲಿರುವ ಗ್ರಹಗಳು ಅದೇ ಹೋರೆಯಲ್ಲಿರುವ ಚಂದ್ರನನ್ನು ನೋಡಿದರೆ ಅಥವಾ ಜನ್ಮಲಗ್ನದ್ರೇಕ್ಕಾಣಾಧಿಪತಿ ಅದೇ ದ್ರೇಕ್ಕಾಣದಲ್ಲಿರುವ ಚಂದ್ರನನ್ನು ನೋಡಿದರೆ ಜಾತಕನಿಗೆ ಶುಭಫಲಗಳಾಗುತ್ತವೆ.

ವಿ–ಚಂದ್ರನಿರುವ ಹೋರೆ ಜನನಲಗ್ನಹೋರೆ ಈ ಎರಡುಹೋರೆಗಳೂ ಒಂದೇ ಆಗಬೇಕೆಂದೂ ಮತ್ತು ಜನನಲಗ್ನದ್ರೇಕ್ಕಾಣ ಚಂದ್ರನಿರುವ ದ್ರೇಕ್ಕಾಣ ಈ ಎರಡು ದ್ರೇಕ್ಕಾಣಗಳೂ ಒಂದೇ ಆಗಬೇಕೆಂದೂ ಶ್ರೀಧರನು ಹೇಳಿರುವ ಅಭಿಪ್ರಾಯವು ಭಟ್ಟೋತ್ಪಲರಿಗೆ ಸಮ್ಮತವಲ್ಲ.

ಚಂದ್ರನಿರುವ ದ್ರೇಕ್ಕಾಣಾಧಿಪತಿ ಮಿತ್ರಕ್ಷೇತ್ರದಲ್ಲಿದ್ದು ಚಂದ್ರನನ್ನು ನೋಡಿದರೆ ಜಾತಕನಿಗೆ ಶುಭಫಲವುಂಟಾಗುತ್ತದೆಂದು ಬೃಹಜ್ಜಾತಕದ ಹೋರಾ ವಿವರಣ ವ್ಯಾಖ್ಯಾನದಲ್ಲಿದೆ. ಈ ಅಭಿಪ್ರಾಯ ಶ್ರೀಧರನಿಗೆ ಸಮ್ಮತವಲ್ಲ. ಭಟ್ಟೋತ್ಪಲರ ಅಭಿಪ್ರಾಯದಂತೆ ಶ್ರೀಧರನು ಮಿತ್ರಕ್ಷೇತ್ರದಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲವನ್ನು ಪ್ರತ್ಯೇಕವಾಗಿ ಮುಂದಿನ ಪದ್ಯದಲ್ಲಿ ಹೇಳಿರುತ್ತಾನೆ.

ಚಂದ್ರನು ಸೂರ್ಯಹೋರೆಯಲ್ಲಿದ್ದು ಸೂರ್ಯಹೋರೆಯಲ್ಲಿರುವ ಗ್ರಹಗಳು ನೋಡಿದರೆ ಶುಭಫಲಗಳಾಗುತ್ತವೆ; ಚಂದ್ರಹೋರೆಯಲ್ಲಿದ್ದು ಚಂದ್ರಹೋರೆಯಲ್ಲಿರುವ ಗ್ರಹಗಳು ನೋಡಿದರೆ ಶುಭಫಲಗಳಾಗುತ್ತವೆ; ಸೂರ್ಯಹೋರೆಯಲ್ಲಿದ್ದು ಚಂದ್ರಹೋರೆಯಲ್ಲಿರುವ ಗ್ರಹಗಳು ನೋಡಿದರೂ ಚಂದ್ರಹೋರೆಯಲ್ಲಿದ್ದು ಸೂರ್ಯಹೋರೆಯಲ್ಲಿರುವ ಗ್ರಹಗಳು ನೋಡಿದರೂ ಅಶುಭಫಲ ಉಂಟಾಗುತ್ತದೆ.

ಲಘುಜಾತಕದಲ್ಲಿ 'ದ್ರೇಕ್ಕಾಣಾಂಶಕಪೈರ್ವಾ ಪ್ರಾಯಃ ಸೌಮ್ಯೈಃ ಶುಭಂ ನಾನ್ಯೈಃ' ಎಂದಿರುವುದರಿಂದ ದ್ರೇಕ್ಕಾಣಾಧಿಪತಿ ಶುಭಗ್ರಹವಾಗಿದ್ದು ಚಂದ್ರನನ್ನು ನೋಡಿದರೆ ಶುಭಫಲವೂ ಪಾಪಗ್ರಹಗಳು ನೋಡಿದರೆ ಮಧ್ಯಮ ಫಲವೂ ಉಂಟಾಗುತ್ತದೆ.

---

[1] ಗ (ಕ ಗ) [2] ತ್ರಿಯಾಂ (ಕ) ತ್ರಿತಯಾಂ (ಗ).

(ಮಿತ್ರಕ್ಷೇತ್ರದಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಮಿತ್ರಕ್ಷೇತ್ರದೊಳುತ್ಪಲ
ಮಿತ್ರಂ ನಿರೆ ತತ್ತುಷಾರರುಚಿಯಂ ಮಿತ್ರ
ಕ್ಷೇತ್ರದೊಳೊಡಗೂಡಿದ ಶತ
ಪತ್ರಸಖಾದಿಗ್ರಹಂಗಳೀಕ್ಷಿಸೆ ಶುಭದಂ ೧೪

(ದ್ವಾದಶಾಂಶದಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಶಿಶಿರಕರನೆಲ್ಲಿ ನಿಂದೊಡ
ಮಶಿಶಿರಕಿರಣಾದಿಗಳ್ ನಿರೀಕ್ಷಿಪೊಡೆ ಫಲಂ
ಶಶಲಕ್ಷ್ಮನಿರೆ ನಿಜದ್ವಾ
ದಶಭಾಗದೊಳಾ[1]ವ[1] ಗೃಹದೊಳಂ ದೊರೆಕೊಳ್ಗುಂ ೧೫

(ಸಿಂಹ ನವಾಂಶದಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ದಿನಪಾಂಶದೊಳಿರೆ ಹಿಮಕರ
ನಿನಾದಿಗಳ್ ನೋಡೆ [2]ಪುಟ್ಟಿ[2]ದಂ ತರದಿಂ ಕೋ
ಪನನವನಿಪಪ್ರಿಯಂ ಬಹು
[3]ಧನಾ[3]ನ್ವಿತಂ ಪ್ರಭು ನಿರಾತ್ಮಜಂ ವ[4]ಧ[4]ಶೀಲಂ ೧೬

---

೧೪. ಮಿತ್ರಕ್ಷೇತ್ರದಲ್ಲಿರುವ ಚಂದ್ರನನ್ನು ಮಿತ್ರಕ್ಷೇತ್ರದಲ್ಲಿರುವ ಸೂರ್ಯಾದಿ ಗ್ರಹಗಳು ನೋಡಿದರೆ ಜಾತಕನಿಗೆ ಶುಭಫಲವುಂಟಾಗುತ್ತದೆ.

೧೫. ಚಂದ್ರನು ಮೇಷಾದಿರಾಶಿಗಳಲ್ಲಿರುವಾಗ ಹೇಳಿರುವ ಸೂರ್ಯಾದಿಗ್ರಹಗಳ ದೃಷ್ಟಿಫಲಗಳೇ ಆತನಿರುವ ದ್ವಾದಶಾಂಶ ರಾಶಿಗಳಲ್ಲೂ ಉಂಟಾಗುತ್ತವೆ.

ವಿ—ಚಂದ್ರನು ಮೇಷರಾಶಿಯಲ್ಲಿರುವಾಗ ಕುಜನೇ ಮೊದಲಾದ ಆರು ಗ್ರಹಗಳು ನೋಡಿದರೆ ಜಾತಕನು ಕ್ರಮವಾಗಿ ರಾಜ ಪಂಡಿತ ರಾಜತುಲ್ಯ ಗುಣವಂತ ಕಳ್ಳ ದರಿದ್ರನಾಗುತ್ತಾನೆಂದು ಇದೇ ಅಧಿಕಾರದ ೧ನೇ ಪದ್ಯದಲ್ಲಿದೆ. ಈ ಫಲಗಳೇ ಚಂದ್ರನು ಮೇಷದ್ವಾದಶಾಂಶದಲ್ಲಿದ್ದು ಕುಜಾದಿಗ್ರಹಗಳು ನೋಡುವಾಗಲೂ ಉಂಟಾಗುತ್ತವೆ. ಇದರಂತೆಯೆ ವೃಷಭಾದಿರಾಶಿಗಳಲ್ಲಿ ಚಂದ್ರನಿರುವಾಗ ಉಂಟಾಗುವ ಗ್ರಹದೃಷ್ಟಿಫಲಗಳು ಆಯಾ ದ್ವಾದಶಾಂಶಗಳಲ್ಲಿರುವಾಗಲೂ ಉಂಟಾಗುತ್ತವೆ. ಪ್ರತಿರಾಶಿಯಲ್ಲೂ ಮೇಷಾದಿ ಹನ್ನೆರಡು ದ್ವಾದಶಾಂಶಗಳೂ ಇರುವುದರಿಂದ ಹನ್ನೆರಡು ರಾಶಿಗಳ ಗ್ರಹದೃಷ್ಟಿಫಲವು ಪ್ರತಿರಾಶಿಗೂ ಸಂಭವಿಸುತ್ತದೆ.

೧೬. ಚಂದ್ರನು ಸೂರ್ಯನ (ಸಿಂಹ) ನವಾಂಶದಲ್ಲಿರುವಾಗ ಸೂರ್ಯ ನೋಡಿದರೆ ಜಾತಕನು ಕೋಪಿಷ್ಠನೂ ಅಂಗಾರಕ ನೋಡಿದರೆ ರಾಜವಲ್ಲಭನೂ

---

[1] ದ (ಗ) [2] ಘುಟ (ಗ) [3] ವಿಧಾ (ಗ) [4] ದು (ಗ).

(ಕರ್ಕಟಕ ನವಾಂಶದಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಇರೆ ಶಶಿ ನಿಜಾಂಶದೊಳ್ ನೋ
ಡೆ ರವಿಪ್ರಭೃತಿಗ್ರಹಂ *ಕೃಶಂ ಲೋಭಿ ಮುನೀ
ಶ್ವರ ಮುಖ್ಯಂ ಸ್ತ್ರೀ[1]ಪೋ[1]ಷ್ಯಂ
ಪರವಂಚನಶೀಲನೆನಿಸುಗುಂ ಪುಟ್ಟಿದವಂ* ೧೭

(ಮೇಷ ವೃಶ್ಚಿಕ ನವಾಂಶಗಳಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಧರಣಿಸುತಾಂಶಕದೊಳ್ ಹಿಮ
ಕರನಿ[2]ರೆ[2] ಸೂರ್ಯಾದಿಗಳ್ ನಿರೀಕ್ಷಿಸೆ ರಕ್ಷಾ
ನಿರತಂ [3]ವಧ[3]ರುಚಿ ಧುಲ್ಲಂ
ನರೇಂದ್ರನರ್ಥಪತಿ ಕಲಹಕಾರಿಯೆನಿಕ್ಕುಂ ೧೮

(ಮಿಥುನ ಕನ್ಯಾ ನವಾಂಶಗಳಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಕುವಲಯಸಖ[4]ನೊಂದಿ[4]ದೊಡ್ಯೆಂ
ದವಾಂಶದೊಳಿನಾದಿಗಳ್ ನಿರೀಕ್ಷಿಸೆ ನೃತ್ಯ
ಪ್ರವಿಣಂ ಚೋರಂ ಕವಿ ಮಂ
ತ್ರವೇದಿ ಗೀತವಿದನ[5]ಖಿ[5]ಳ ಶಿಲ್ಪಿಯೆನಿಕ್ಕುಂ ೧೯

---

ಬುಧ ನೋಡಿದರೆ ಧನಿಕನೂ ಗುರು ನೋಡಿದರೆ ಪ್ರಭುವೂ ಶುಕ್ರ ನೋಡಿದರೆ ಮಗನಿಲ್ಲದವನೂ ಶನಿ ನೋಡಿದರೆ ಕೊಲೆಗಾರನೂ ಆಗುತ್ತಾನೆ.

೧೭. ಚಂದ್ರನು ತನ್ನ (ಕರ್ಕಟಕ) ನವಾಂಶದಲ್ಲಿರುವಾಗ ಸೂರ್ಯ ನೋಡಿದರೆ ಜಾತಕನು ಕ್ಷೀಣವಾದ ದೇಹವುಳ್ಳವನೂ ಅಂಗಾರಕ ನೋಡಿದರೆ ಜಿಪುಣನೂ ಬುಧ ನೋಡಿದರೆ ತಪಸ್ವಿಯೂ ಗುರು ನೋಡಿದರೆ ಪ್ರಧಾನನೂ ಶುಕ್ರ ನೋಡಿದರೆ ಸ್ತ್ರೀಪೋಷಿತನೂ ಶನಿ ನೋಡಿದರೆ ಮೋಸಗಾರನೂ ಆಗುತ್ತಾನೆ.

೧೮. ಕುಜನ (ಮೇಷ ವೃಶ್ಚಿಕ) ನವಾಂಶಗಳಲ್ಲಿ ಚಂದ್ರನಿರುವಾಗ ಸೂರ್ಯ ನೋಡಿದರೆ ಜಾತಕನು ನಗರ ರಕ್ಷಣೆಯಲ್ಲಿ ನಿರತನೂ ಅಂಗಾರಕ ನೋಡಿದರೆ ಪ್ರಾಣಿಹಿಂಸಕನೂ ಬುಧ ನೋಡಿದರೆ ಜಟ್ಟಿಯೂ ಗುರು ನೋಡಿದರೆ ರಾಜನೂ ಶುಕ್ರ ನೋಡಿದರೆ ಧನಿಕನೂ ಶನಿ ನೋಡಿದರೆ ಜಗಳಗಂಟಿಯೂ ಆಗುತ್ತಾನೆ.

೧೯. ಚಂದ್ರನು ಬುಧನ (ಮಿಥುನ ಕನ್ಯಾ) ನವಾಂಶಗಳಲ್ಲಿರುವಾಗ ಸೂರ್ಯ ನೋಡಿದರೆ ಜಾತಕನು ನೃತ್ಯಕಲೆಯಲ್ಲಿ ನಿಪುಣನೂ ಅಂಗಾರಕ ನೋಡಿದರೆ ಕಳ್ಳನೂ ಬುಧ ನೋಡಿದರೆ ಕವಿಯೂ ಗುರು ನೋಡಿದರೆ ಮಂತ್ರಿಯೂ ಶುಕ್ರ ನೋಡಿದರೆ ಸಂಗೀತಗಾರನೂ ಶನಿ ನೋಡಿದರೆ ಶಿಲ್ಪನಿಪುಣನೂ ಆಗುತ್ತಾನೆ.

---

[1] ಪ್ರೇ (ಕ) [2] ರೆ (ಗ) [3] ಮುದು (ಕ) ವಧು (ಗ) [4] ನೋಡಿ (ಗ) [5] ಬ (ಕ)
* ಈ ಭಾಗ (ಗ) ಪ್ರತಿಯಲ್ಲಿಲ್ಲ.

(ಧನುರ್ಮೀನ ನವಾಂಶಗಳಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಅಮರೇಜ್ಯಾಂಶದೊಳಿರೆ ಚಂ
ದ್ರಮನರ್ಕಾದಿಗ[1]ಳೆ ವೀ[1]ಕ್ಷಿಪಂದಧಿಕಬಲಂ
ಸಮರಕರಂ ಪ್ರಹಸನ ಶೀ
ಲ ಮಂತ್ರಿ ಪ[2]ಡ[2]ಪಾಳಿಯಧಿಕಕಾಮಿಯೆನಿಕ್ಕುಂ ೨೦

(ವೃಷಭ ತುಲಾ ನವಾಂಶಗಳಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಕವಿಯಂಶದೊಳುಡುಪತಿ ನಿರೆ
ದಿವಾಕರಾದಿಗ್ರಹಂಗಳೀಕ್ಷಿಸೆ ಜಡನ
ನ್ಯವಧೂಲೋಲಂ [ಕವಿ] ಸ
ತ್ಕವಿ ಸುಖಿ ಪರದಾರಶೀಲನೆನಿಕುಂ ಮನುಜಂ ೨೧

(ಮಕರ ಕುಂಭ ನವಾಂಶಗಳಲ್ಲಿ ಚಂದ್ರನಿರುವಾಗ ಗ್ರಹದೃಷ್ಟಿಫಲ)

ಕ್ಷಪಾಕರನಿನಾತ್ಮಜಾಂಶಗತನಾಗೆ ನೋಡಲ್ ದಿನಾ
ಧಿ[3]ಪ[3]ಪ್ರಭೃತಿ [4]ಷಡ್ಗ್ರ[4]ಹಂಗಳವನಲ್ಪಪುತ್ರಂ ಸು[5]ಖ[5]
ವ್ಯಪೇತಧನಭಾಗಿ [6]ಮಾ[6]ನರತನಾತ್ಮಕರ್ಮಾನುರಾ
ಗಿ ಪಾರದರಿಗಂ ಮಹಾಕೃಪಣನಕ್ಕುಮಾ ಲಗ್ನಜಂ ೨೨

---

೨೦. ಗುರುವಿನ(ಧನುಸ್ಸು ಮೀನ) ನವಾಂಶಗಳಲ್ಲಿ ಚಂದ್ರನಿರುವಾಗ ಸೂರ್ಯ ನೋಡಿದರೆ ಜಾತಕನು ಹೆಚ್ಚುಬಲಿಷ್ಠನೂ ಅಂಗಾರಕ ನೋಡಿದರೆ ಯುದ್ಧಕಾರಣನೂ ಬುಧ ನೋಡಿದರೆ ಹಾಸ್ಯಗಾರನೂ ಗುರು ನೋಡಿದರೆ ಮಂತ್ರಿಯೂ ಶುಕ್ರ ನೋಡಿದರೆ ಜಾರನೂ ಶನಿ ನೋಡಿದರೆ ಹೆಚ್ಚು ಕಾಮಿಯೂ (ಸ್ತ್ರೀಲೋಲನೂ) ಆಗುತ್ತಾನೆ.

ವಿ–ಶುಕ್ರ ನೋಡಿದರೆ ಕಾಮವಿಲ್ಲದವನೂ ಶನಿ ನೋಡಿದರೆ ವೃದ್ಧಶೀಲ (ಧರ್ಮಬುದ್ಧಿಯುಳ್ಳವ)ನೂ ಆಗುತ್ತಾನೆಂದು ಬೃಹಜ್ಜಾತಕದಲ್ಲಿದೆ.

೨೧. ಶುಕ್ರನ (ವೃಷಭ ತುಲಾ) ನವಾಂಶಗಳಲ್ಲಿ ಚಂದ್ರನಿರುವಾಗ ಸೂರ್ಯ ನೋಡಿದರೆ ಜಾತಕನು ಮೂರ್ಖನೂ ಅಂಗಾರಕ ನೋಡಿದರೆ ಪರದಾರಾಸಕ್ತನೂ ಬುಧ ನೋಡಿದರೆ ಕವಿಯೂ ಗುರು ನೋಡಿದರೆ ಸತ್ಕವಿಯೂ ಶುಕ್ರ ನೋಡಿದರೆ ಸುಖಿಯೂ ಶನಿ ನೋಡಿದರೆ ಪರದಾರಗಾಮಿಯೂ ಆಗುತ್ತಾನೆ.

೨೨. ಚಂದ್ರನು ಶನಿಯ (ಮಕರ ಕುಂಭ) ನವಾಂಶಗಳಲ್ಲಿರುವಾಗ ಸೂರ್ಯ ನೋಡಿದರೆ ಜಾತಕನು ಅಲ್ಪಾಪತ್ಯನೂ ಅಂಗಾರಕ ನೋಡಿದರೆ ಹಣ ವಿದ್ದರೂ ದುಃಖಿತನೂ ಬುಧ ನೋಡಿದರೆ ಗರ್ವಿತನೂ ಗುರು ನೋಡಿದರೆ ತನ್ನ ಕುಲಕ್ಕನುಗುಣವಾದ ಕೆಲಸಗಳಲ್ಲಿ ಅನುರಾಗಿಯೂ ಶುಕ್ರ ನೋಡಿದರೆ ವ್ಯಭಿಚಾರಿಯೂ ಶನಿ ನೋಡಿದರೆ ಅತ್ಯಂತ ಜಿಪುಣನೂ ಆಗುತ್ತಾನೆ.

---

[1] ಳ[6] ವೀ (ಕ ಗ) [2] ದ (ಗ) [3] ಪತಿ (ಗ) [4] ಸದ್ಗ್ರ (ಕ ಗ) [5] ಖಂ (ಕ) ದ್ರ (ಗ)
[6] ದಾ (ಕ ಗ)

(ಸೂರ್ಯನಿಗೆ ಗ್ರಹದೃಷ್ಟಿಫಲ)

ತುಹಿನಪ್ರದ್ಯೋತಾದಿ
ಗ್ರಹಾಂಶದೊಳ್ ಪಂಕಜಪ್ರಿಯಂ ನೆಲಸಿರೆ ತ
ದ್ಗ್ರಹಗಣಮಾಕ್ಷಿಸಿದ ಫಲಂ
ತುಹಿನಾಂಶುಗೆ ಮುನ್ನ ಪೇಳ್ದ ಫಲದವೊಲಕ್ಕುಂ ೨೩

(ನವಾಂಶಸ್ಥಿತ ಗ್ರಹದೃಷ್ಟಿಫಲ ವಿಶೇಷ)

ವಿಧುವಿರ್ದ ನವಾಂಶಕ [ಗ್ರಹ]
ದಧಿಪತಿ ಬಲವಂತನಾದೊಡಂಶಕಫಲಮು
[1]ಧ್ಯ[1]ಧಿಕಂ ಗ್ರಹಪತಿ ವೀರ್ಯಾ
ಧ್ಯಧಿಕನೆನಿ[2]ಪ್ಪಂದು ರಾಶಿಫಲಮು[1]ಧ್ಯ[1]ಧಿಕಂ ೨೪

---

೨೩. ಚಂದ್ರನೇ ಮೊದಲಾದ ಗ್ರಹಗಳ ಅಂಶದಲ್ಲಿ ಸೂರ್ಯನಿರುವಾಗ ಆ ಗ್ರಹಗಳ ದೃಷ್ಟಿಫಲವು ಚಂದ್ರನಿಗೆ ಹೇಳಿರುವ ದೃಷ್ಟಿಫಲದಂತೆಯೇ ಆಗುತ್ತದೆ.

ವಿ—ಮೇಷಾದಿ ಹನ್ನೆರಡು ನವಾಂಶಗಳಲ್ಲಿರುವಾಗ ಚಂದ್ರನಿಗೆ ಹೇಳಿರುವ ಗ್ರಹದೃಷ್ಟಿಫಲವೇ ಆ ನವಾಂಶಗಳಲ್ಲಿ ಸೂರ್ಯನಿದ್ದು ಗ್ರಹಗಳು ನೋಡಿದಾಗಲೂ ಉಂಟಾಗುತ್ತದೆ. ಚಂದ್ರನು ಸೂರ್ಯನನ್ನು ನೋಡುವಾಗ ಸೂರ್ಯದೃಷ್ಟಿ ಫಲವನ್ನೇ ಕೊಡುತ್ತಾನೆ. ಸೂರ್ಯಚಂದ್ರರಿಗೆ ಗ್ರಹದೃಷ್ಟಿಫಲ ಸಮಾನ.

೨೪. ಚಂದ್ರನಿರುವ ನವಾಂಶರಾಶ್ಯಧಿಪತಿ ಬಲಿಷ್ಠನಾಗಿದ್ದರೆ ನವಾಂಶ ದೃಷ್ಟಿಫಲ ಅಧಿಕವಾಗಿಯೂ ರಾಶ್ಯಧಿಪತಿ ಬಲಿಷ್ಠನಾಗಿದ್ದರೆ ರಾಶಿದೃಷ್ಟಿಫಲ ಅಧಿಕವಾಗಿಯೂ ಉಂಟಾಗುತ್ತದೆ.

ವಿ—ಚಂದ್ರನಿರುವ ರಾಶ್ಯಧಿಪತಿಗಿಂತ ನವಾಂಶಾಧಿಪತಿ ಬಲಿಷ್ಠನಾಗಿದ್ದರೆ ನವಾಂಶ ದೃಷ್ಟಿಫಲವೇ ಅಧಿಕವಾಗಿ ಉಂಟಾಗುತ್ತದೆ. ರಾಶಿದೃಷ್ಟಿಫಲ ಉಂಟಾಗುವುದಿಲ್ಲವೆಂದು ಭಟ್ಟೋತ್ಪಲರು ಹೇಳಿರುತ್ತಾರೆ. ರಾಶ್ಯಧಿಪತಿ ನವಾಂಶಾಧಿಪತಿಗಿಂತ ಬಲಿಷ್ಠನಾಗಿದ್ದರೆ ರಾಶಿದೃಷ್ಟಿಫಲವೇ ಅಧಿಕವಾಗಿ ಉಂಟಾಗುತ್ತದೆ ; ನವಾಂಶದೃಷ್ಟಿಫಲವೂ ಸಂಭವಿಸುತ್ತದೆ.

---

[1] ಪ್ಪ (ಕ) ಪ್ಯ (ಗ) [2] ಫಂ (ಕ ಗ).

(ವರ್ಗೋತ್ತಮ ಸ್ವ ಪರ ನವಾಂಶಸ್ಥಿತ ಗ್ರಹದೃಷ್ಟಿಫಲ)

ಕ್ರಮದಿಂ ಬರ್ಕುಂ ವರ್ಗೋ
ತ್ತಮಾಂಶ ನಿಜ ಪರಗ್ರಹಂಗಳೊಳ್ ಪುಷ್ಟಂ ಮ
ಧ್ಯಮನಲ್ಪಂ ಶುಭಫಲಮು
ತ್ಕ್ರಮದಿಂದಂ ಬರ್ಕುಮಶುಭಫಲಮಂತ[1]ವ[1]ಟುೞೊಳ್ ೨೫

(ರಾಶ್ಯಧಿಪಾದಿ ದೃಷ್ಟಿಫಲ)

ಹರಿಣಾಂಕಾಶ್ರಿತ ಮಂದಿರಾಧಿಪತಿ ನೋಟ್ಪಂದಿಂದುವಂ ಭೂಪನಾ
ನರನಾಲೋಕಿಸೆ ತದ್ಗ್ರಹಾಧಿಪತಿಮಿತ್ರಂ ಚಂದ್ರನಂ ಮೇಣ್ ಸುಧಾ
ಕರನಿರ್ದಂಶಮನಕ್ಕೆ ತದ್ವಿಧು[2]ಗ[2]ತ ದ್ರೇಕ್ಕಾಣಮಂ [3]ಮೇಣ್ ತದೀ[3]
ಶ್ವರ ಸೌಮ್ಯರ್ ನಡೆ ನೋಡೆ ವೀಕ್ಷಿ[4]ಸ[4]ದೊಡನ್ಯರ್ ಧನ್ಯನಾ ಮಾನವಂ ೨೬

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ದೃಷ್ಟಿಪ್ರಕರಣವರ್ಣನಂ ವಿಂಶತ್ಯಧಿಕಾರಂ

---

೨೫. ಚಂದ್ರನು ಮೇಷಾದಿ ನವಾಂಶಗಳಲ್ಲಿರುವಾಗ ಉಂಟಾಗುವ ಗ್ರಹದೃಷ್ಟಿಫಲಗಳು ಶುಭವಾಗಿದ್ದರೆ ವರ್ಗೋತ್ತಮಾಂಶ ಸ್ವನವಾಂಶ ಅನ್ಯ ನವಾಂಶಗಳಲ್ಲಿ ಕ್ರಮವಾಗಿ ಪುಷ್ಟ ಮಧ್ಯಮ ಅಲ್ಪಗಳಾಗಿ ಸಂಭವಿಸುತ್ತವೆ. ಅಶುಭ ಫಲವಾಗಿದ್ದರೆ ಇದಕ್ಕೆ ವಿಪರೀತಕ್ರಮದಲ್ಲಿ ಉಂಟಾಗುತ್ತದೆ.

ವಿ–ಚಂದ್ರನು ವರ್ಗೋತ್ತಮಾಂಶದಲ್ಲಿರುವಾಗ ಗ್ರಹದೃಷ್ಟಿಫಲ ಶುಭ ವಾದರೆ ಪೂರ್ಣ ಅಶುಭವಾದರೆ ಅಲ್ಪ; ಸ್ವನವಾಂಶದಲ್ಲಿರುವಾಗ ಮಧ್ಯಮ; ಅನ್ಯನವಾಂಶದಲ್ಲಿರುವಾಗ ಶುಭವಾದರೆ ಅಲ್ಪ ಅಶುಭವಾದರೆ ಪೂರ್ಣ.

೨೬. ಜನನಕಾಲದಲ್ಲಿ ಚಂದ್ರನಿರುವ ರಾಶ್ಯಧಿಪತಿ ಚಂದ್ರನನ್ನು ನೋಡಿದರೆ ಜಾತಕನು ರಾಜನಾಗುತ್ತಾನೆ; ಚಂದ್ರರಾಶ್ಯಧಿಪತಿಯ ಮಿತ್ರನು ಚಂದ್ರನನ್ನು ನೋಡಿದರೆ ಅಥವಾ ಚಂದ್ರನಿರುವ ಅಂಶವನ್ನಾಗಲೀ ಅಥವಾ ದ್ರೇಕ್ಕಾಣವನ್ನಾಗಲೀ ಆಯಾ ಅಧಿಪತಿಗಳು ಶುಭಗ್ರಹಗಳಾಗಿದ್ದು ನೋಡುವುದಲ್ಲದೆ ಇತರ ಗ್ರಹಗಳು ನೋಡದಿದ್ದರೆ ಜಾತಕನು ಧನ್ಯನಾಗುತ್ತಾನೆ.

ವಿ–ಚಂದ್ರನಿರುವ ಅಂಶವೆಂದರೆ ನವಾಂಶ ದ್ವಾದಶಾಂಶ ತ್ರಿಂಶಾಂಶ ಗಳನ್ನು ಗಣನೆಗೆ ತೆಗೆದುಕೊಳ್ಳಬೇಕೆಂದು ಭಟ್ಟೋತ್ಪಲರು ಅಭಿಪ್ರಾಯಪಟ್ಟಿರು ತ್ತಾರೆ. ಅಂಶದ್ರೇಕ್ಕಾಣಾಧಿಪತಿಗಳು ಅಶುಭವಾಗಿದ್ದರೂ ಶುಭಫಲಪ್ರದರಾಗು ತ್ತಾರೆ; ಆದರೆ ಫಲ ಅಲ್ಪ.

---

[1] ದ (ಗ) [2] ಗೆ (ಕ ಗ) [3] ಮೇಣಧೀ (ಗ) [4] ಸಿಶಿ (ಕ) ಸಿ (ಗ).

# ಏಕವಿಂಶಾಧಿಕಾರಂ

## ಅರಿಷ್ಟಯೋಗ ಪ್ರಕರಣಂ

(ಹೆಂಡತಿ ಮಕ್ಕಳ ಇರುವಿಕೆ ಮತ್ತು ಇಲ್ಲದಿರುವಿಕೆಯ ವಿಚಾರ)

ತುಹಿನಕರಂಗೆ ಮೇಣುದಯರಾಶಿಗೆ ಸಪ್ತಮಮಂದಿರಂ ಶುಭ
ಗ್ರಹ ಗೃಹಮಾಗೆ ತತ್ಪತಿ ನಿರೀಕ್ಷಿಸೆ ಕೂಡಿರೆ ಮೇಣ್ ಕುರಾಂಗನಾ
ಸಹಿತನವಕ್ಕೆ ಪಂಚಮಮೊಳಾ ತೆಱನಾಗಿರೆ ಪುತ್ರಭಾಗಿ ತ
[1]ದ್ರಹಿ[1]ತನೆನಿಪ್ಪೊಡಾತ್ಮಜ ಕುಲ ಪ್ರಮದಾ ರಹಿತಂ ವಿಲಗ್ನಜಂ ೧

---

೧. ಜನನಕಾಲದಲ್ಲಿ ಚಂದ್ರನಿಂದ ಅಥವಾ ಲಗ್ನರಾಶಿಯಿಂದ ಏಳನೆಯ ಸ್ಥಾನವು ಶುಭಗ್ರಹದ ರಾಶಿಯಾಗಿದ್ದು ಆ ರಾಶ್ಯಧಿಪತಿ ನೋಡಿದರೆ ಅಥವಾ ಆ ರಾಶಿಯಲ್ಲೇ ಇದ್ದರೆ ಜಾತಕನಿಗೆ ಉತ್ತಮಕುಲದ ಹೆಂಡತಿ ಇರುತ್ತಾಳೆ; ಪಂಚಮ ಸ್ಥಾನವು ಶುಭಗ್ರಹದ ರಾಶಿಯಾಗಿದ್ದು ಆ ರಾಶ್ಯಧಿಪತಿ ನೋಡಿದರೆ ಅಥವಾ ಆ ರಾಶಿಯಲ್ಲೇ ಇದ್ದರೆ ಜಾತಕನು ಪುತ್ರವಂತನಾಗುತ್ತಾನೆ. ಪಂಚಮ ಸಪ್ತಮ ರಾಶ್ಯಧಿಪತಿಗಳು ತಮ್ಮ ರಾಶಿಯನ್ನು ನೋಡದಿದ್ದರೆ ಅಥವಾ ರಾಶಿಯಲ್ಲಿಲ್ಲದಿದ್ದರೆ ಜಾತಕನು ಪುತ್ರ ಕಳತ್ರರಹಿತನಾಗುತ್ತಾನೆ.

ವಿ–ಲಗ್ನದಿಂದ ಏಳನೆಯ ರಾಶಿ ಕಳತ್ರಸ್ಥಾನ; ಐದನೆಯ ರಾಶಿ ಪುತ್ರ ಸ್ಥಾನ; ಕಳತ್ರ ಪುತ್ರ ಸ್ಥಾನಗಳು ಶುಭಗ್ರಹದ ರಾಶಿಯಾಗಿದ್ದು ಸ್ಥಾನಾಧಿಪತಿ ಸ್ಥಾನದಲ್ಲಿದ್ದರೆ ಅಥವಾ ಸ್ಥಾನವನ್ನು ನೋಡಿದರೆ ಕಳತ್ರ ಪುತ್ರ ಭಾವಫಲಗಳು ಅನುಕೂಲವಾಗಿರುತ್ತವೆ; ಪಾಪಗ್ರಹದ ರಾಶಿಯಾಗಿದ್ದು ಸ್ಥಾನಾಧಿಪತಿ ಸ್ಥಾನದಲ್ಲಿಲ್ಲದಿದ್ದರೆ ಅಥವಾ ಸ್ಥಾನವನ್ನು ನೋಡದಿದ್ದರೆ ಕಳತ್ರ ಪುತ್ರ ಸೌಖ್ಯಗಳಿರುವುದಿಲ್ಲ. ಲಗ್ನದಂತೆ ಚಂದ್ರನಿಂದಲೂ ಕಳತ್ರ ಪುತ್ರ ಭಾವಫಲಗಳನ್ನು ತಿಳಿಯಬೇಕು.

---

[1] ದ್ಯ್ರಹೀ (ಕ ಗ).

ಬರೆ ಕನ್ಯಾಲಗ್ನಂ ಭಾ
ಸ್ಕರನಲ್ಲಿರ ಮೀನದೊಳ್ ಶನೈಶ್ಚರನಿರೆ ಸುಂ
ದರಿ ಸಾಯ್ಗುಮುದಯದೈದನೆ
ಯ ರಾಶಿಯೊಳ್ ಧೂ[1]ಮಿ[1]ಜನಿರೆ ತನುಜಂ ಸಾಯ್ಗುಂ ೨

(ಹೆಂಡತಿಯು ಸಾವಿನ ವಿಚಾರ)

ಅಸುರೇಂದ್ರಾರ್ಚಿತನಿಂದಮಷ್ಟಮ ಚತುರ್ಥರ್ಕ್ಷೇತ್ರದೊಳ್ ಕೂಡಿದಂ
ದು ಸದನ್ಯಗ್ರಹಮಲ್ಲದಂದು ಭೃಗುಜಂ[2]ಗಿರ್ವರ್ಕ[2]ದೊಳ್ ಕೂಡಿದಂ
ದು ಸದನ್ಯಗ್ರಹಮಲ್ಲಿ ಸದ್ಗ್ರಹಸಮಾಜಂ ಕೂಡದಿರ್ದಂದು ವೀ
ಕ್ಷಿ[3]ಸುದಂದಾತನ ಕಾಂತೆ [4]ಪಾಶ ಪತ[4]ನಾಗ್ನಿಪ್ರಾಪ್ತಿಯಿಂ ಪೊಂದುಗುಂ ೩

---

೨. ಕನ್ಯಾಲಗ್ನದಲ್ಲಿ ಜನನವಾಗಿ ಸೂರ್ಯ ಲಗ್ನದಲ್ಲೂ ಶನಿ ಮೀನದಲ್ಲೂ ಇದ್ದರೆ ಜಾತಕನ ಹೆಂಡತಿ ಸಾಯುತ್ತಾಳೆ; ಇದೇ ಯೋಗದಲ್ಲಿ ಅಂಗಾರಕನು ಐದನೆಯ ಸ್ಥಾನದಲ್ಲಿ (ಮಕರರಾಶಿಯಲ್ಲಿ) ಇದ್ದರೆ ಪುತ್ರನು ಸಾಯುತ್ತಾನೆ.

ವಿ–ಕನ್ಯಾಲಗ್ನವಾದರೆ ಸಪ್ತಮಸ್ಥಾನವು ಮೀನವಾಗುತ್ತದೆ. ಕನ್ಯಾದಲ್ಲಿರುವ ರವಿ ಮೀನ(ಸಪ್ತಮಸ್ಥಾನ)ವನ್ನು ಪೂರ್ಣದೃಷ್ಟಿಯಿಂದ ನೋಡುತ್ತಾನೆ. ಮೀನದಲ್ಲಿ ಪಾಪಿಯಾದ ಶನಿಯೂ ಇರುವನು. ಸಪ್ತಮಸ್ಥಾನಕ್ಕೆ ಪಾಪಗ್ರಹ ಯೋಗ ಮತ್ತು ಪಾಪಗ್ರಹ ದೃಷ್ಟಿಗಳಿರುವುದರಿಂದ ಈ ಯೋಗದಲ್ಲಿ ಹುಟ್ಟಿರುವ ಜಾತಕನ ಹೆಂಡತಿ ಹೆಚ್ಚುಕಾಲ ಜೀವಿಸದೆ ಸಾಯುತ್ತಾಳೆ. ಪಂಚಮಸ್ಥಾನದಲ್ಲಿ ಪಾಪಿಯಾದ ಅಂಗಾರಕನಿರುವುದರಿಂದ ಪುತ್ರನಾಶವೂ ಆಗುತ್ತದೆ.

೩. ಜನನಕಾಲದಲ್ಲಿ ಶುಕ್ರನಿಂದ ಎಂಟು ನಾಲ್ಕನೆಯ ಸ್ಥಾನಗಳಲ್ಲಿ ಅಶುಭಗ್ರಹವಿರುವಾಗ ಅಥವಾ ಶುಕ್ರನಿಗೆ ಎರಡುಪಾರ್ಶ್ವಗಳಲ್ಲೂ ಪಾಪಗ್ರಹ ವಿರುವಾಗ ಶುಭಗ್ರಹಗಳು ಶುಕ್ರನೊಡನಿಲ್ಲದಿದ್ದರೆ ಅಥವಾ ಆತನನ್ನು ನೋಡದಿದ್ದರೆ ಜಾತಕನ ಹೆಂಡತಿ ಪಾಶ ಪತನಾಗ್ನಿಗಳಿಂದ ಸಾಯುತ್ತಾಳೆ.

ವಿ–ಈ ಪದ್ಯದಲ್ಲಿ ಎರಡುಯೋಗಗಳಿವೆ. (೧) ಶುಕ್ರನಿಗೆ ಅಷ್ಟಮ ಚತುರ್ಥಗಳಲ್ಲಿ ಪಾಪಗ್ರಹಗಳಿರುವುದಲ್ಲದೆ ಶುಭಗ್ರಹಯೋಗ ದೃಷ್ಟಿಗಳಿಲ್ಲದಿರುವುದು; (೨) ಪಾಪಗ್ರಹ ಮಧ್ಯದಲ್ಲಿರುವ ಶುಕ್ರನಿಗೆ ಶುಭಗ್ರಹಯೋಗ ದೃಷ್ಟಿಗಳಿಲ್ಲದಿರುವುದು; ಈ ಎರಡುಯೋಗಗಳಲ್ಲಿ ಯಾವ ಯೋಗವಿದ್ದರೂ ಜಾತಕನ ಹೆಂಡತಿ ನೇಣುಹಾಕಿಕೊಳ್ಳುವುದು ಮೇಲಿಂದ ಬೀಳುವುದು ಬೆಂಕಿ ಇವುಗಳಲ್ಲಿ ಯಾವುದಾದರೂ ಒಂದು ಕಾರಣದಿಂದ ಸಾಯುತ್ತಾಳೆ. ಹೋರಾವಿವರಣ ವ್ಯಾಖ್ಯಾನದಲ್ಲಿ 'ಪತನ'ಶಬ್ದಕ್ಕೆ 'ಗರ್ಭಪಾತ'ವೆಂದು ಅರ್ಥಮಾಡಿರುತ್ತಾರೆ. ಭಟ್ಟೋತ್ಪಲರು ಶುಕ್ರನಿಗೆ ಶುಭಗ್ರಹಯೋಗ ದೃಷ್ಟಿಗಳಿಲ್ಲದಿರುವುದನ್ನೇ ಪ್ರತ್ಯೇಕ

---

[1] ಭು (ಕ), (ಗ) [2] ಗೆರ್ಬರ್ಕ (ಕ) ಗಿರ್ಬರ್ಕ್ಕ (ಗ) [3] ಸಿ (ಕ) [4] ಪೋದ ಪಥ (ಕ ಗ)

(ಕಾಣ ದಂಪತಿಯೋಗ)

ಖರಕರನುದಯಕ್ಕಾಱನೆ
ಯ ರಾಶಿಯೊಳ್ ಶೀತಕಿರಣನಾ ಹೋರೆಗೆ ಪ
ನ್ನೆರಡನೆಯೊಳಿರ್ದೊಡಂ ಕ
ಣ್ಗುರು[1]ಡರ್[1] ಸ್ತ್ರೀಪುರುಷರಪ್ಪರೆಂಬುದು ತಜ್ಞಂ ೪

ಯೋಗವನ್ನಾಗಿ ಹೇಳಿ ಒಟ್ಟು ಮೂರುಯೋಗಗಳೆಂದು ಹೇಳಿರುವರಲ್ಲದೆ ಶುಕ್ರನಿಗೆ ಅಷ್ಟಮ ಚತುರ್ಥಗಳಲ್ಲಿ ಪಾಪಗ್ರಹವಿರುವಾಗ ಬೆಂಕಿಯಿಂದಲೂ ಪಾಪಗ್ರಹ ಮಧ್ಯದಲ್ಲಿ ಶುಕ್ರನಿರುವಾಗ ಮೇಲಿಂದ ಬೀಳುವುದರಿಂದಲೂ ಶುಕ್ರನಿಗೆ ಶುಭಗ್ರಹ ಯೋಗ ದೃಷ್ಟಿಗಳಿಲ್ಲದಿರುವಾಗ ನೇಣುಹಾಕಿಕೊಂಡೂ ಜಾತಕನ ಹೆಂಡತಿ ಸಾಯುತ್ತಾಳೆಂದು ಅಭಿಪ್ರಾಯಪಟ್ಟಿರುತ್ತಾರೆ. ಶುಕ್ರನು ಕಳತ್ರಕಾರಕ; ಆದುದರಿಂದಲೇ ಈ ಯೋಗಗಳಲ್ಲಿ ಶುಕ್ರನನ್ನೇ ಮುಖ್ಯವಾಗಿ ತೆಗೆದುಕೊಂಡಿದೆ. ಕಳತ್ರಕಾರಕನಾದ ಶುಕ್ರ ಅಗ್ನಿದ್ರೇಕ್ಕಾಣದಲ್ಲಿದ್ದರೆ ಬೆಂಕಿಯಿಂದಲೂ ಶಕಟಾದಿ ಉನ್ನತಗಾಮಿ ದ್ರೇಕ್ಕಾಣದಲ್ಲಿದ್ದರೆ ಪತನದಿಂದಲೂ ಪಾಶ (ನಿಗಳ)ದ್ರೇಕ್ಕಾಣದಲ್ಲಿದ್ದರೆ ನೇಣುಹಾಕಿಕೊಂಡೂ ಜಾತಕನ ಹೆಂಡತಿ ಸಾಯುತ್ತಾಳೆಂದು ಕೆಲವರು ಅಭಿಪ್ರಾಯಪಡುತ್ತಾರೆ.

೪. ಜನನಕಾಲದಲ್ಲಿ ಸೂರ್ಯನು ಲಗ್ನಕ್ಕೆ ಆರನೆಯ ಸ್ಥಾನದಲ್ಲೂ ಚಂದ್ರನು ಆ ಲಗ್ನಕ್ಕೆ ಹನ್ನೆರಡನೆಯ ಸ್ಥಾನದಲ್ಲೂ ಇದ್ದರೆ ಜಾತಕನಿಗೆ ಮತ್ತು ಆತನ ಹೆಂಡತಿಗೆ ಒಂದುಕಣ್ಣು ಕುರುಡಾಗಿರುತ್ತದೆ.

ವಿ–ಲಗ್ನಕ್ಕೆ ಹನ್ನೆರಡನೆಯ ಸ್ಥಾನದಲ್ಲಿ ಚಂದ್ರನಿದ್ದರೆ ಜಾತಕನ ಬಲಗಣ್ಣೂ ಸೂರ್ಯನಿದ್ದರೆ ಎಡಗಣ್ಣೂ ಕುರುಡಾಗಿರುತ್ತದೆ. ಸಪ್ತಮವು ಕಳತ್ರಸ್ಥಾನವಾದುದರಿಂದ ಆ ಸ್ಥಾನಕ್ಕೆ ಹನ್ನೆರಡರಲ್ಲಿ ಅಂದರೆ ಲಗ್ನದಿಂದ ಷಷ್ಠಸ್ಥಾನದಲ್ಲಿ ಸೂರ್ಯನಾಗಲೀ ಚಂದ್ರನಾಗಲೀ ಇದ್ದರೆ ಜಾತಕನ ಪತ್ನಿಗೆ ಒಂದು ಕಣ್ಣು ಕುರುಡಾಗಿರುತ್ತದೆ. ಈ ಪದ್ಯದಲ್ಲಿ ಸತಿಪತಿಗಳಿಬ್ಬರಿಗೂ ಒಂದು ಕಣ್ಣು ಕುರುಡಾಗಿರುತ್ತದೆಂದು ಫಲ ಹೇಳಿರುವುದರಿಂದ ಸೂರ್ಯ ಚಂದ್ರರಲ್ಲಿ ಒಂದು ಗ್ರಹ ಲಗ್ನಕ್ಕೆ ಹನ್ನೆರಡನೆಯ ಸ್ಥಾನದಲ್ಲೂ ಮತ್ತೊಂದು ಸಪ್ತಮ ಸ್ಥಾನಕ್ಕೆ ಹನ್ನೆರಡರಲ್ಲೂ ಇರಬೇಕು. ಪದ್ಯದಲ್ಲಿ ಲಗ್ನಕ್ಕೆ ಹನ್ನೆರಡನೆಯ ಸ್ಥಾನದಲ್ಲಿ ಚಂದ್ರನ ಸ್ಥಿತಿಯನ್ನು ಹೇಳಿರುವುದರಿಂದ ಷಷ್ಠದಲ್ಲಿ ಸೂರ್ಯನಿರಬೇಕೆಂದಿದೆ. ಇದರಂತೆಯೇ ಲಗ್ನಕ್ಕೆ ಹನ್ನೆರಡನೆಯ ಸ್ಥಾನದಲ್ಲಿ ಸೂರ್ಯ ಆರನೆಯ ಸ್ಥಾನದಲ್ಲಿ ಚಂದ್ರ ಇರುವಾಗಲೂ ಈ ಫಲ ಉಂಟಾಗುತ್ತದೆ. ಆದರೆ ಈ ಅಭಿಪ್ರಾಯವನ್ನು ಶ್ರೀಧರನು ತನ್ನ ಗ್ರಂಥದಲ್ಲಿ ತಿಳಿಸಿಲ್ಲ. ಈ ಯೋಗದಲ್ಲಿ ಸೂರ್ಯಚಂದ್ರರಿಗೆ ಆರು ರಾಶಿಗಳ ಅಂತರವಿರುವುದರಿಂದ ಪೂರ್ಣಿಮಾತಿಥಿಯ ಸಮೀಪದಲ್ಲಿ ಸೂರ್ಯೋದಯಾಸ್ತ ಕಾಲಗಳಲ್ಲಿ ಹುಟ್ಟಿದವರಿಗೆ ಮಾತ್ರ ಈ ಯೋಗವು ಸಂಭವಿಸುತ್ತದೆ.

[1] ಡಂ (ಕ ಗ).

(ಅವಯವಹೀನ ಭಾರ್ಯೆ ಮತ್ತು ವಂಧ್ಯಾಪತಿ ಯೋಗ)

ಭೃಗುಸೂರ್ಯರ್ ನಿಲೆ ಸಪ್ತಮಾವ[1]ಸ[1]ಥದೊಳ್ ಮೇಣ್ [2]ತ್ರಿ[2]ತ್ರಿಕೋಣರ್ಕ್ಷದೊಳ್
ಭೃಗುಜಂ ಪಂಚಮದೊಳ್ ಖರಾಂಶು ವಿಕಲಸ್ತ್ರೀನಾಥನಾ ಲಗ್ನ[3]ಜಂ[3]
ಭೃಗು ಜಾಮಿತ್ರಗೃಹಾಂತ್ಯದೊಳ್*[4]ಶನಿ[4] ವಿಲಗ್ನಸ್ಥಾನದೊಳ್*ಕೂಡೆ ಸೌ
ಮ್ಯಗಣಂ ಪಂಚಮ ಸಂಸ್ಥರಾ†[5]ಗ[5]ದಿರೆ ವಂಧ್ಯಸ್ತ್ರೀವರಂ ತನ್ನರಂ† ೫

---

೫. ಜನನಕಾಲದಲ್ಲಿ ಶುಕ್ರಸೂರ್ಯರು ಏಳನೆಯ ಸ್ಥಾನದಲ್ಲಿದ್ದರೆ ಅಥವಾ ಒಂಬತ್ತನೆಯ ಸ್ಥಾನದಲ್ಲಿ ಶುಕ್ರನೂ ಐದನೆಯ ಸ್ಥಾನದಲ್ಲಿ ಸೂರ್ಯನೂ ಇದ್ದರೆ ಜಾತಕನು ಹೀನಾಂಗಸ್ತ್ರೀಪತಿಯೂ ಶುಕ್ರನು ಏಳನೆಯ ಸ್ಥಾನದಲ್ಲಿ ಕರ್ಕಟಕ ವೃಶ್ಚಿಕ ಮೀನ ರಾಶಿಗಳ ಕೊನೆಯ ನವಾಂಶದಲ್ಲೂ ಶನಿ ಲಗ್ನದಲ್ಲೂ ಇದ್ದು ಶುಭಗ್ರಹಗಳು ಐದನೆಯ ಸ್ಥಾನದಲ್ಲಿಲ್ಲದಿದ್ದರೆ ಬಂಜೆಯ ಪತಿಯೂ ಆಗುತ್ತಾನೆ.

ಟಿ—ಶ್ರೀಧರನು ಎರಡುವಿಕಲಾಂಗಯೋಗಗಳನ್ನು ಮಾತ್ರ ಹೇಳಿರುತ್ತಾನೆ. ಆದರೆ ಬೃಹಜ್ಜಾತಕ ವ್ಯಾಖ್ಯಾನಕಾರರ ಅಭಿಪ್ರಾಯದಂತೆ ವಿಕಲಾಂಗಯೋಗ ಗಳು ಮೂರು.

ಸೂರ್ಯ ಶುಕ್ರರು (೧) ಏಳನೆಯ ಸ್ಥಾನದಲ್ಲಿರುವುದು (೨) ಒಂಬತ್ತನೆಯ ಸ್ಥಾನದಲ್ಲಿರುವುದು (೩) ಐದನೆಯ ಸ್ಥಾನದಲ್ಲಿರುವುದು. ಇದಕ್ಕೆ ಗರ್ಗಾಚಾರ್ಯರ ಸಮ್ಮತಿಯೂ ಇರುವುದರಿಂದ ಶ್ರೀಧರನು ಹೇಳಿರುವ ಎರಡನೆಯ ವಿಕಲಾಂಗಯೋಗವು ಇತರ ಜ್ಯೋತಿಷಾಚಾರ್ಯರಿಗೆ ಸಮ್ಮತವಲ್ಲ.

ಕರ್ಕಟಕ ವೃಶ್ಚಿಕ ಮೀನರಾಶಿಗಳ ಕೊನೆಯ ಅಂಶ ಮೀನನವಾಂಶ ವಾಗುತ್ತದೆ. ಶುಕ್ರನು ಆಶ್ಲೇಷಾ ನಕ್ಷತ್ರದ ೪ನೇ ಪಾದದಲ್ಲಿದ್ದರೆ ಕರ್ಕಟಕ ರಾಶಿಯ ಕೊನೆಯ ನವಾಂಶದಲ್ಲೂ ಜ್ಯೇಷ್ಠಾನಕ್ಷತ್ರದ ೪ನೇ ಪಾದದಲ್ಲಿದ್ದರೆ ವೃಶ್ಚಿಕರಾಶಿಯ ಕೊನೆಯ ನವಾಂಶದಲ್ಲೂ ರೇವತೀನಕ್ಷತ್ರದ ೪ನೇ ಪಾದದಲ್ಲಿದ್ದರೆ ಮೀನರಾಶಿಯ ಕೊನೆಯ ನವಾಂಶದಲ್ಲೂ ಇದ್ದಂತಾಗುತ್ತದೆ. ಕರ್ಕಟಕ ವೃಶ್ಚಿಕ ಮೀನರಾಶಿಗಳು ಸಪ್ತಮ ಕ್ಷೇತ್ರಗಳಾಗಬೇಕಾಗಿದ್ದರೆ ಕ್ರಮವಾಗಿ ಮಕರ ವೃಷಭ ಕನ್ಯಾರಾಶಿಗಳು ಲಗ್ನಗಳಾಗಬೇಕಾಗುತ್ತವೆ.

---

[1] ಪ (ಕ) [2] ತ (ಗ) [3] ಮಂ (ಕ ಗ) [4] ರವಿ (ಕ) [5] ದ (ಕ)

* † ಈ ಭಾಗಗಳು (ಗ) ಪ್ರತಿಯಲ್ಲಿಲ್ಲ.

(ಜಾರ ಯೋಗ)

*ಕ್ರೂ[1]ರರ[1] ದ್ವಾದಶ ಸಪ್ತಮೋದಯದೊಳೊಂದಿರ್ದಂದ*ತಿಕ್ಷೀಣನಾ
ತಾರೇಶಂ ಸುತ ಲಾಭ ಲಗ್ನಗೃಹದೊಳ್ ಬಂದೊಂದದಿರ್ದಂದು ಮೇಣ್
ಸೌ[2]ರಾಂ[2]ಗಾರಕ ವರ್ಗಸಂಸ್ಥಿತ ಸಿತಂ ಧಾತ್ರೀತನೂಜಾತನಂ
[3]ಸೂರಾ[3]ಪತ್ಯನನಕ್ಕೆ ವೀಕ್ಷಿಸೆ ಪರಸ್ತ್ರೀಲೋಲನಾ ಮಾನವಂ ೬

---

೬. ಕ್ರೂರಗ್ರಹಗಳು ಹನ್ನೆರಡು ಏಳು ಲಗ್ನ ಈ ಸ್ಥಾನಗಳಲ್ಲಿರುವಾಗ ಅತಿಕ್ಷೀಣಚಂದ್ರನು ಐದು ಹನ್ನೊಂದು ಲಗ್ನ ಗೃಹಗಳಲ್ಲಿಲ್ಲದಿದ್ದರೆ ಅಥವಾ ಶನಿ ಅಂಗಾರಕ ಇವರ ವರ್ಗದಲ್ಲಿರುವ ಶುಕ್ರ ಅಂಗಾರಕನನ್ನಾಗಲೀ ಶನಿಯನ್ನಾಗಲೀ ನೋಡಿದರೆ ಜಾತಕನು ಸ್ತ್ರೀಲಂಪಟನಾಗುತ್ತಾನೆ.

ವಿ—ಈ ಪದ್ಯದಲ್ಲಿ ಎರಡುಯೋಗಗಳಿವೆ. ಅದರಲ್ಲಿ ಮೊದಲನೆಯ ಯೋಗವು 'ಪಾಪಗ್ರಹೈರ್ವ್ಯಯ ಮದ ಲಗ್ನರಾಶಿಸಂಸ್ಥೈಃ ಕ್ಷೀಣೇ ಶಶಿನ್ಯಸುತ ಕಲತ್ರ ಜನ್ಮ ಧೀಸ್ಥೇ' ಎಂದು ಬೃಹಜ್ಜಾತಕದಲ್ಲಿದೆ. ಇದರಂತೆ ಕ್ಷೀಣಚಂದ್ರನು ಪಂಚಮ ಸ್ಥಾನದಲ್ಲಿರಬೇಕು. ಹೆಂಡತಿ ಮಕ್ಕಳಿಲ್ಲದಿರುವುದೇ ಈ ಯೋಗಕ್ಕೆ ಫಲ. ಕ್ಷೀಣ ಚಂದ್ರನ ಸ್ಥಿತಿ ಮತ್ತು ಫಲ ಈ ಎರಡು ಅಂಶಗಳಲ್ಲಿ ಕಂಡುಬರುವ ವ್ಯತ್ಯಾಸಕ್ಕೆ ಪ್ರತಿಕಾರರಿಂದುಂಟಾಗಿರಬಹುದಾದ ಗ್ರಂಥವ್ಯತ್ಯಾಸವೇ ಕಾರಣವೆಂದು ಹೇಳ ಬಹುದು. ಎರಡನೆಯ ಯೋಗದಲ್ಲಿ ಶುಕ್ರನು ಸಪ್ತಮದಲ್ಲಿರಬೇಕೆಂದು ಬೃಹಜ್ಜಾತಕ ದಲ್ಲಿದೆ. ಆ ಅಂಶವನ್ನು ಶ್ರೀಧರನು ಬಿಟ್ಟಿರುತ್ತಾನೆ. ಶನ್ಯಂಗಾರಕವರ್ಗದಲ್ಲಿ ರುವ ಶುಕ್ರನು ಶನಿ ಅಥವಾ ಅಂಗಾರಕನನ್ನು ನೋಡಬೇಕಾದರೆ ಶನಿ ಶುಕ್ರರಿಗೆ ಅಥವಾ ಅಂಗಾರಕ ಶುಕ್ರರಿಗೆ ಪರಸ್ಪರ ಸಪ್ತಮಸ್ಥಿತಿ ಇರಬೇಕು. ಬೃಹಜ್ಜಾತಕದಲ್ಲಿ "ಅಸಿತಕುಜಯೋರ್ವರ್ಗೇಽಸ್ತಸ್ಥೇ ಸಿತೇ ತದವೇಕ್ಷಿತೇ" ಎಂದಿರುವ ಈ ಯೋಗದಲ್ಲಿ ಶುಕ್ರನಿಗೆ ಶನಿ ಮಂಗಳರಿಂದ ಸಪ್ತಮಸ್ಥಿತಿ ಇರಬೇಕೆಂಬ ಅಭಿಪ್ರಾಯದಿಂದ ಶ್ರೀಧರನು ಸಪ್ತಮಸ್ಥಿತಿ ವಿಚಾರವನ್ನು ಬಿಟ್ಟಿರಬಹುದು. ಆದರೆ ಈ ಯೋಗದಲ್ಲಿ ಶುಕ್ರನಿಗೆ ಲಗ್ನದಿಂದ ಸಪ್ತಮಸ್ಥಿತಿ ಇರಬೇಕೆಂದು ಭಟ್ಟೋತ್ಪಲರೇ ಮೊದಲಾದ ಬೃಹಜ್ಜಾತಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುತ್ತಾರೆ.

ಮೂರನೆಯ ಪಾದದಲ್ಲಿ 'ಸಂಸ್ಥಿತ' ಎಂದಿರುವುದನ್ನು 'ಸಪ್ತಗ' ಎಂದು ವ್ಯತ್ಯಾಸಮಾಡಿದರೆ ಶುಕ್ರನಿಗೆ ಸಪ್ತಮಸ್ಥಿತಿ ಇರಬೇಕೆನ್ನುವ ಅಂಶವೂ ಯೋಗದಲ್ಲಿ ಸೇರಿದಂತಾಗುತ್ತದೆ.

---

[1] ರ (ಕ) [2] ರ್ಯಾಂ (ಕ ಗ) [3] ಸುರಾ (ಕ) ಸೂರ್ಯಾ (ಗ) * ಈ ಭಾಗ (ಗ) ಪ್ರತಿ ಯಲ್ಲಿಲ್ಲ

(ವ್ಯಭಿಚಾರಶೀಲ ದಂಪತಿಯೋಗ)

ಕ್ಷಿತಿಜಾರ್ಕಜ ಮಧ್ಯದೊಳುದು
ಪತಿ ನಿಲೆ ತದ್ವರ್ಗಸಪ್ತಮಸ್ಥಾನದೊಳಾ
ಸಿತನಿರ್ದು ನೋಡಲಾ ದಂ
ಪತಿಗಳ್ ವ್ಯಭಿಚಾರಶೀಲರಿ[1]ರ್ವ[1]ರುಮಪ್ಪರ್ ೭

(ಪತ್ನೀಪುತ್ರಹೀನ ಮತ್ತು ಕೃಶತನು ಯೋಗ)

ತುಹಿನಪ್ರದ್ಯೋತನುಂ ಶುಕ್ರನುಮೊಡನಿರೆ ಜಾಮಿತ್ರದೊಳ್ ಪುಣ್ಯಕಾಂತಾ
ರಹಿತಂ ಮೇಣ್ ಪುತ್ರಹೀನಂ ದ್ಯುನ[2]ಗೃಹಮದು ಪುಂರಾಶಿ[2]ಯಾದಂದು ಪಾಪ
ಗ್ರಹಮಂತಾ ರಾಶಿಯಂ ನೋಳ್ಪೊಡೆ ಕೃಶತನುವಕ್ಕುಂ ನರಂ ತ[3]ದ್ಗೃ[3]ಹಂ ಸ್ತ್ರೀ
[4]ಗೃಹಮಾ[4]ದಂದುಗ್ರರಾಲೋಕಿಸೆ ಕೃಶತನು ತತ್ಕಾಂತೆಯಕ್ಕುಂ ನಿತಾಂತಂ ೮

---

೭. ಅಂಗಾರಕ ಶನಿಗಳ ಮಧ್ಯದಲ್ಲಿ ಚಂದ್ರನಿರುವಾಗ ಆ ಗ್ರಹಗಳ ವರ್ಗದಲ್ಲೇ ಸಪ್ತಮಸ್ಥಾನದಲ್ಲಿ ಶುಕ್ರನಿದ್ದು ನೋಡಿದರೆ ಸತಿಪತಿಗಳಿಬ್ಬರೂ ವ್ಯಭಿಚಾರಿಗಳಾಗುತ್ತಾರೆ.

ವಿ—ಶುಕ್ರನು ತಾನಿರುವ ಸ್ಥಾನದಿಂದ ಸಪ್ತಮವನ್ನು ಮಾತ್ರ ಪೂರ್ಣ ದೃಷ್ಟಿಯಿಂದ ನೋಡುತ್ತಾನೆ. ಈ ಯೋಗದಲ್ಲಿ ಶುಕ್ರನು ಸಪ್ತಮಸ್ಥಾನದಲ್ಲಿದ್ದು ಶನ್ಯಂಗಾರಕರನ್ನು ನೋಡುತ್ತಾನೆಂದಿರುವುದರಿಂದ ಶನ್ಯಂಗಾರಕರು ಲಗ್ನದಲ್ಲಿರಬೇಕು. ಆದುದರಿಂದ ಲಗ್ನದಲ್ಲಿ ಚಂದ್ರ ಕುಜ ಶನಿಗಳಿರುವಾಗ ಶುಕ್ರನು ಸಪ್ತಮದೃಷ್ಟಿಯಿಂದ ನೋಡಿದರೆ ಜಾತಕನು ವ್ಯಭಿಚಾರಿಯಾಗುತ್ತಾನೆ; ಆತನ ಹೆಂಡತಿಯೂ ಜಾರೆಯಾಗುತ್ತಾಳೆ. ಬೃಹಜ್ಜಾತಕದಲ್ಲಿ ಚಂದ್ರನು ಅಂಗಾರಕ ಶನಿಗಳೊಡನೆ ಇರಬೇಕೆಂದಿದೆ; ಅವರ ಮಧ್ಯದಲ್ಲಿರಬೇಕೆಂದಿಲ್ಲ; ಭಟ್ಟೋತ್ಪಲರು ಸಪ್ತಮದಲ್ಲಿ ಚಂದ್ರನೊಡನೆ ಶನ್ಯಂಗಾರಕರಿದ್ದು ಅವರ ಷಡ್ವರ್ಗದಲ್ಲಿರುವ ಶುಕ್ರನನ್ನು ನೋಡಬೇಕೆಂದು ವ್ಯಾಖ್ಯಾನಮಾಡಿರುತ್ತಾರೆ.

೮. ಜನನಕಾಲದಲ್ಲಿ ಚಂದ್ರನೂ ಶುಕ್ರನೂ ಒಟ್ಟಿಗೆ ಏಳನೆಯ ಸ್ಥಾನದಲ್ಲಿದ್ದರೆ ಜಾತಕನಿಗೆ ಹೆಂಡತಿ ಅಥವಾ ಮಗನಿರುವುದಿಲ್ಲ. ಏಳನೆಯ ಸ್ಥಾನವು ಪುರುಷ ರಾಶಿಯಾಗಿದ್ದು ಪಾಪಗ್ರಹ ಆ ರಾಶಿಯನ್ನು ನೋಡಿದರೆ ಜಾತಕನ ಶರೀರ ಬಡವಾಗಿರುತ್ತದೆ; ಆ ಸ್ಥಾನ ಸ್ತ್ರೀರಾಶಿಯಾಗಿದ್ದು ಕ್ರೂರಗ್ರಹಗಳು ನೋಡಿದರೆ ಜಾತಕನ ಹೆಂಡತಿಯು ಶರೀರ ಬಡವಾಗಿರುತ್ತದೆ.

ವಿ—ಈ ಪದ್ಯದಲ್ಲಿ ಎರಡು ಯೋಗಗಳಿವೆ. ಇದರಲ್ಲಿ ಮೊದಲನೆಯ ಯೋಗವು 'ಭೃಗುಜ ಶಶಿನೋರಸ್ತೇಽಭಾರ್ಯೋ. ನರೋ ವಿಸುತೋಽಪಿ ವಾ' ಎಂದು ಬೃಹಜ್ಜಾತಕದಲ್ಲಿದೆ. ಇದನ್ನೇ ಶ್ರೀಧರನು 'ತುಹಿನಪ್ರದ್ಯೋತನುಂ ಶುಕ್ರನುಮೊಡನಿರೆ ಜಾಮಿತ್ರದೊಳ್ ಪುಣ್ಯಕಾಂತಾರಹಿತಂ ಮೇಣ್ ಪುತ್ರ

---

[1] ರ್ಬ (ಕ ಗ) [2] ಗೃಹಮದಥಂ ರಾಶಿ (ಕ) ಗೃಹಮದಧಾಸ (ಗ) [3] ದ್ಗೃ (ಕ)
[4] ಗೃಹಂ ವಾ (ಕ) ಗೃಹವಾ (ಗ).

ಹೀನಂ' ಎಂದು ಕನ್ನಡಿಸಿರುತ್ತಾನೆ. ಆದರೆ ಬೃಹಜ್ಜಾತಕದ ವ್ಯಾಖ್ಯಾನಕಾರರು 'ಒಂದೇರಾಶಿಯಲ್ಲಿರುವ ಶುಕ್ರಚಂದ್ರರಿಗೆ ಸಪ್ತಮದಲ್ಲಿ ಶನ್ಯಂಗಾರಕರಿದ್ದರೆ ಜಾತಕನಿಗೆ ಹೆಂಡತಿ ಅಥವಾ ಮಗನಿರುವುದಿಲ್ಲ' ಎಂದು ಅಭಿಪ್ರಾಯಪಟ್ಟಿರುತ್ತಾರೆ. ಈ ಯೋಗವಿಚಾರದಲ್ಲಿ ಶ್ರೀಧರನ ಅಭಿಪ್ರಾಯವನ್ನು ಮತ್ತಾರೂ ಸಮ್ಮತಿಸಿರುವಂತೆ ಕಂಡುಬರುವುದಿಲ್ಲ.

ಎರಡನೆಯ ಯೋಗವು * 'ಪರಿಣತತನೂ ಸ್ತ್ರೀನ್ರೋರ್ದೃಷ್ಟೌ ಶುಭೈಃ ಪ್ರಮದಾಪತೀ' ಎಂದು ಬೃಹಜ್ಜಾತಕದಲ್ಲಿದೆ. ಇದನ್ನು ಶ್ರೀಧರನು 'ದ್ಯುನಗೃಹಮದು ಪುಂರಾಶಿಯಾದಂದು ಪಾಪಗ್ರಹಮಂತಾ ರಾಶಿಯಂ ನೋೞ್ಪೊಡೆ ಕೃಶತನುವಕ್ಕುಂ ನರಂ ತದ್ಗೃಹಂ ಸ್ತ್ರೀಗೃಹಮಾದಂದುಗ್ರರಾಲೋಕಿಸೆ ಕೃಶತನು ತತ್ಕಾಂತೆಯಕ್ಕುಂ ನಿತಾಂತಂ' ಎಂದು ಕನ್ನಡಿಸಿರುತ್ತಾನೆ. ಮುಪ್ಪಿನಲ್ಲಿ ಶರೀರ ಗಳಿತವಾಗುತ್ತದೆ ಎನ್ನುವ ಅಭಿಪ್ರಾಯದಿಂದ 'ಪರಿಣತತನು' ಎನ್ನುವುದಕ್ಕೆ 'ಕೃಶತನು' ಎಂದು ಶ್ರೀಧರನು ಅರ್ಥಮಾಡಿರಬಹುದು. 'ಸ್ತ್ರೀನ್ರೋರ್ದೃಷ್ಟೌ ಶುಭೈಃ' ಎನ್ನುವುದಕ್ಕೆ ಪ್ರತಿಯಾಗಿ 'ನೋ ತೌ ದೃಷ್ಟೌ ಶುಭೈಃ' ಎಂದು ಪಾಠಾಂತರವಿದೆ. ಶ್ರೀಧರನು ಶುಭಗ್ರಹಗಳು ನೋಡಬೇಕೆಂದು ಹೇಳದಿರುವುದರಿಂದ ಈ ಪಾಠವನ್ನೇ ಅನುಸರಿಸಿರಬಹುದು. ಬೃಹಜ್ಜಾತಕದಲ್ಲಿ ಜಾರಯೋಗ, ವ್ಯಭಿಚಾರಶೀಲದಂಪತಿಯೋಗ ಪತ್ನೀಪುತ್ರಹೀನಯೋಗ ಪರಿಣತತನುಯೋಗ ಈ ನಾಲ್ಕುಯೋಗಗಳೂ ಒಂದೇಶ್ಲೋಕದಲ್ಲಿವೆ. ಮೊದಲನೆಯ ಯೋಗದಲ್ಲಿ ಶುಕ್ರನಿಗೆ ಶನ್ಯಂಗಾರಕ ವೀಕ್ಷಣವಿರಬೇಕೆಂದಿದೆ. ಈ ಶನ್ಯಂಗಾರಕ ವೀಕ್ಷಣವನ್ನು ನಾಲ್ಕು ಯೋಗಗಳಲ್ಲೂ ಅನುವೃತ್ತಿಮಾಡಿಕೊಂಡು ವ್ಯಾಖ್ಯಾನಕಾರರು ಆ ಶ್ಲೋಕಕ್ಕೆ ಅರ್ಥಮಾಡಿರುತ್ತಾರೆ. ಇದರಂತೆ ಶ್ರೀಧರನು ಹೇಳಿರುವ 'ಉಗ್ರರಾಲೋಕಿಸೆ' ಎನ್ನುವುದಕ್ಕೆ 'ಕುಜಶನಿಗಳು ನೋಡಿದರೆ' ಎಂದು ಅರ್ಥಮಾಡಬೇಕಾಗುತ್ತದೆ. ಈ ಯೋಗವಿಚಾರದಲ್ಲಿ ಬೃಹಜ್ಜಾತಕವ್ಯಾಖ್ಯಾನಕಾರರಲ್ಲೂ ಒಮ್ಮತವಿರುವುದಿಲ್ಲ. ಭಟ್ಟೋತ್ಪಲರು 'ಒಂದು ಪುರುಷಗ್ರಹ ಮತ್ತು ಒಂದು ಸ್ತ್ರೀಗ್ರಹ ಒಟ್ಟಿಗೆ ಒಂದುರಾಶಿಯಲ್ಲೂ ಕುಜಶನಿಗಳು ಈಗ್ರಹಗಳಿಗೆ ಏಳನೆಯರಾಶಿಯಲ್ಲೂ ಇರುವಾಗ ಶುಭಗ್ರಹ ಕುಜಶನಿಗಳನ್ನು ನೋಡಿದರೆ ದಂಪತಿಗಳು ಮುದುಕರಾಗಿರುತ್ತಾರೆ ಎಂದರೆ ಜಾತಕನ ವೃದ್ಧಾಪ್ಯದಲ್ಲಿ ವಯಸ್ಸಾದ ಹೆಂಡತಿ ಇರುತ್ತಾಳೆ' ಎಂದು ವ್ಯಾಖ್ಯಾನಮಾಡಿರುತ್ತಾರೆ. ಹೋರಾವಿವರಣದಲ್ಲಿ 'ಪುಂ ಸ್ತ್ರೀಗ್ರಹಗಳೆರಡೂ ಒಟ್ಟಿಗೆ ಲಗ್ನದಲ್ಲಿರುವಾಗ ಏಳನೆಯ ಸ್ಥಾನದಲ್ಲಿ ಶನ್ಯಂಗಾರಕರಿದ್ದು ಶುಭಗ್ರಹ ನೋಡಿದರೆ ಎಂದರೆ ಚಂದ್ರ ಅಥವಾ ಶುಕ್ರನೊಡನೆ ಸೂರ್ಯ ಅಥವಾ ಗುರು ಲಗ್ನದಲ್ಲಿದ್ದು ಶುಭಗ್ರಹದಿಂದ ದೃಷ್ಟರಾದ ಶನಿಕುಜರು ಏಳನೆಯ ಸ್ಥಾನದಲ್ಲಿದ್ದರೆ ಜಾತಕನ ವೃದ್ಧಾಪ್ಯದಲ್ಲಿ ವೃದ್ಧಳಾದ ಭಾರ್ಯೆ

* 'ಪರಿಣತತನೂ ನೃಸ್ತ್ರ್ಯೋರ್ದೃಷ್ಟೌ ಶುಭೈಃ ಪ್ರಮದಾಪತೀ' ಎಂದೂ 'ಪರಿಣತತನೂ ಸ್ತ್ರೀನಾದೃಷ್ಟೌ ಶುಭೈಃ ಪ್ರಮದಾಪತೀ' ಎಂದೂ 'ಪರಿಣತತನೂರ್ನೋ ತೌ ದೃಷ್ಟೌ ಶುಭೈಃ ಪ್ರಮದಾಪತೀ' ಎಂದೂ ಮೂಲಗ್ರಂಥದಲ್ಲಿ ಪಾಠಾಂತರಗಳಿವೆ.

(ಸ್ವಕುಲನಾಶಕ ಯೋಗ)

ಸಿತನಸ್ತದೊಳಿರೆ ರಜನೀ
ಪತಿ ಪತ್ತಱೊಳೊಂದಿ ನಿರೆ ಶುಭೇತರ[1]ರೊ[1]ಡಗೂ
ಡೆ [2]ತುರೀಯ[2]ದೊಳಾ ಲಗ್ನೋ
ದ್ಗತಮನುಜಂ ಸ್ವಕುಲ್[ನಾಶಕಂ][3] ತಾನೆನಿಕುಂ ೯

(ಶಿಲ್ಪಿ ಮತ್ತು ದಾಸೀಪುತ್ರ ಯೋಗ)

ಮೃಗಲಕ್ಷ್ಮಾತ್ಮಜನೊಂದಿದಂದು ಮೊದಲದ್ರೇಕ್ಕಾಣದೊಳ್ *[4][ಕೂಡಿರಲ್][4]
[5]ಖ[5]ಗಜಂ ಕೇಂದ್ರಗೃಹಂಗಳಲ್ಲಿ ಮೊದಲದ್ರೇಕ್ಕಾಣದೊಳ್ [6]ಕಾರು[6] ದಾ
ಸಿ,ಗೆ ಪುತ್ರಂ] ಸಿತನಂತ್ಯಗೇಹದಸಿತದ್ರೇಕ್ಕಾಣದೊಳ್* ಕೂಡಿದಂ
ದೊಗೆದಂ ನೀಚ[7]ಗುಣಾಘ[7]ಮೆಂಬುದವನಂ ಸಮ್ಯಕ್ತ್ವರತ್ನಾಕರಾ ೧೦

---

ಇರುತ್ತಾಳೆ.' ಎಂದು ವ್ಯಾಖ್ಯಾನಮಾಡಿರುತ್ತಾರೆ. ಸುಬೋಧಿನೀ ಟೀಕಾಕಾರರು ಭಟ್ಟೋತ್ಪಲರಂತೆಯೇ ವ್ಯಾಖ್ಯಾನಮಾಡಿರುತ್ತಾರೆ; ಆದರೆ ಫಲವನ್ನು ಮಾತ್ರ 'ಪರಸ್ಪರಂ ಪರಿಣತತನೂ ಪ್ರಮದಾಪತೀ ಭವತಃ। ಅಯಮಭಿಪ್ರಾಯಃ—ಅಸ್ಮಿನ್ ಯೋಗೇ ಜಾತಸ್ಯ ಪುರುಷಸ್ಯ ಪ್ರಮದಾ ವಯೋಧಿಕಾ ಭವತಿ। ತಥಾಸ್ಮಿನ್ ಯೋಗೇ ಜಾತಾಯಾಃ ಸ್ತ್ರಿಯಃ ಭರ್ತಾ ವಯೋಧಿಕೋ ಭವತಿ।' ಎಂದರೆ ಈ ಯೋಗದಲ್ಲಿ ಹುಟ್ಟಿದ ಪುರುಷನಿಗೆ ತನಗಿಂತ ವಯಸ್ಸಾದ ಹೆಂಡತಿ ಇರುತ್ತಾಳೆ; ಹೆಂಗಸಿಗೆ ತನಗಿಂತ ವಯಸ್ಸಾದ ಪತಿ ಇರುತ್ತಾನೆ' ಎಂದು ಹೇಳಿರುತ್ತಾರೆ. ಮತ್ತೆ ಕೆಲವರು 'ಜಾತಕನು ವೃದ್ಧಾಪ್ಯದಲ್ಲಿ ವಯಸ್ಸಾದವಳನ್ನು ಮದುವೆಮಾಡಿಕೊಳ್ಳುತ್ತಾನೆ'ಂದು ಅಭಿಪ್ರಾಯಪಟ್ಟಿರುತ್ತಾರೆ. ಆದರೆ ಶ್ರೀಧರನ ಅಭಿಪ್ರಾಯ ಈ ವ್ಯಾಖ್ಯಾನಕಾರರಲ್ಲಿ ಯಾರಿಗೂ ಸಮ್ಮತವಾಗಿರುವಂತೆ ತಿಳಿದುಬರುವುದಿಲ್ಲ.

೯. ಶುಕ್ರ ಏಳನೆಯ ಸ್ಥಾನದಲ್ಲಿಯೂ ಚಂದ್ರ ಹತ್ತನೆಯ ಸ್ಥಾನದಲ್ಲಿಯೂ ಅಶುಭಗ್ರಹಗಳು ನಾಲ್ಕನೆಯ ಸ್ಥಾನದಲ್ಲಿಯೂ ಇರುವ ಲಗ್ನದಲ್ಲಿ ಹುಟ್ಟಿದ ಜಾತಕನು ತನ್ನ ವಂಶವಿಚ್ಛೇದಕನಾಗುತ್ತಾನೆ.

ವಿ–ಉತ್ಪಲವ್ಯಾಖ್ಯಾನದಲ್ಲಿ 'ಪಾಪಾಃ–ಕ್ರೂರಗ್ರಹಾಃ ಆದಿತ್ಯಭೌಮಸೌರಾಃ' ಎಂದೂ ವಿವರಣವ್ಯಾಖ್ಯಾನದಲ್ಲಿ 'ಸುಖಗತಾಭ್ಯಾಂ ಆರಮಂದಾಭ್ಯಾಂ' ಎಂದೂ ಇದೆ. ಶ್ರೀಧರನು ಹೇಳಿರುವ 'ಶುಭೇತರರ್' ಎನ್ನುವುದಕ್ಕೆ ವಿವರಣ ವ್ಯಾಖ್ಯಾನದಲ್ಲಿರುವಂತೆ ಕುಜ ಶನಿಗಳೆಂದು ಅರ್ಥಮಾಡುವುದೇ ನ್ಯಾಯವಾಗಿದೆ. ಎಂಟನೆಯ ಪದ್ಯದಲ್ಲಿ ಹೇಳಿರುವ ಗ್ರಹಸ್ಥಿತಿಯಿಂದ ಈ ಅಂಶವು ಸ್ಪಷ್ಟಪಡುತ್ತದೆ. ಈ ಯೋಗದಲ್ಲಿ ಲಗ್ನಕ್ಕೆ ಏಳನೆಯ ಸ್ಥಾನದಲ್ಲಿ ಶುಕ್ರನೂ ಹತ್ತನೆಯ ಸ್ಥಾನದಲ್ಲಿರುವ ಚಂದ್ರನಿಗೆ ಏಳನೆಯ ಕಡೆ ಕುಜ ಶನಿಗಳೂ ಇರುತ್ತಾರೆ. ಲಗ್ನದಿಂದಾಗಲೀ ಚಂದ್ರನಿಂದಾಗಲೀ ಏಳನೆಯ ಸ್ಥಾನದಲ್ಲಿರುವ ಕುಜ ಶುಕ್ರ ಶನಿಗಳು ಶುಭಫಲಪ್ರದರಲ್ಲ.

---

[1] ದೊ (ಕ) [2] ತೂರ್ಯ (ಕ ಗ) [3] ದೂಷಣಂ (ಕ ಗ) [4] ಸಿ (ಗ) [5] ತ (ಗ) [6] ಕೂಡೆ (ಗ) [7] ಮೊಘ (ಕ) ನ (ಗ) * ಈ ಭಾಗ (ಕ) ಪ್ರತಿಯಲ್ಲಿಲ್ಲ.

೧೦. ಬುಧನು ಯಾವರಾಶಿಯಲ್ಲೇ ಆಗಲಿ ಮೊದಲದ್ರೇಕ್ಕಾಣದಲ್ಲಿರುವಾಗ ಶನಿ ಕೇಂದ್ರರಾಶಿಗಳಲ್ಲಿ ಮೊದಲದ್ರೇಕ್ಕಾಣದಲ್ಲಿದ್ದರೆ ಜಾತಕನು ಶಿಲ್ಪಿಯಾಗುತ್ತಾನೆ. ಶುಕ್ರನು ಹನ್ನೆರಡನೆಯ ಸ್ಥಾನದಲ್ಲಿ ಶನಿದ್ರೇಕ್ಕಾಣದಲ್ಲಿರುವಾಗ ಹುಟ್ಟಿದವನು ತೊತ್ತಿನಮಗನೂ ನೀಚಗುಣಗಳನ್ನುಳ್ಳವನೂ ಆಗುತ್ತಾನೆ.

ವಿ—ಈ ಪದ್ಯದಲ್ಲಿ ಎರಡು ಯೋಗಗಳಿವೆ. ಬೃಹಜ್ಜಾತಕದಲ್ಲಿ ಮೊದಲನೆಯ ಯೋಗವು 'ಶಿಲ್ಪೀ ತ್ರ್ಯಂಶೇ ಶಶಿಸುತಯುತೇ ಕೇಂದ್ರಸಂಸ್ಥಾರ್ಕಿದೃಷ್ಟೇ' ಎಂದಿದೆ. ಇದರಂತೆ 'ಬುಧನು ಯಾವರಾಶಿಯಲ್ಲೇ ಆಗಲಿ ಎಷ್ಟನೆಯ ದ್ರೇಕ್ಕಾಣದಲ್ಲಿರುವನೋ ಅಷ್ಟನೆಯ ದ್ರೇಕ್ಕಾಣದಲ್ಲೇ ಕೇಂದ್ರರಾಶಿಯಲ್ಲಿ ಶನಿ ಇದ್ದು ಬುಧನನ್ನು ನೋಡಿದರೆ ಆಗ ಜಾತಕನು ಶಿಲ್ಪಿಯಾಗುತ್ತಾನೆ' ಎಂದು ತಿಳಿದುಬರುತ್ತದೆ. ಎಂದರೆ ಬುಧನು ಒಂದನೆಯ ದ್ರೇಕ್ಕಾಣದಲ್ಲಿದ್ದರೆ ಶನಿಯೂ ಕೇಂದ್ರರಾಶಿಯಲ್ಲಿ ಒಂದನೆಯ ದ್ರೇಕ್ಕಾಣದಲ್ಲಿದ್ದು ಬುಧನನ್ನು ನೋಡಬೇಕು. ಇದರಂತೆಯೇ ಬುಧನು ಎರಡು ಅಥವಾ ಮೂರನೆಯದ್ರೇಕ್ಕಾಣದಲ್ಲಿದ್ದರೆ ಶನಿಯೂ ಕೇಂದ್ರರಾಶಿಯಲ್ಲಿ ಎರಡು ಅಥವಾ ಮೂರನೆಯ ದ್ರೇಕ್ಕಾಣದಲ್ಲಿದ್ದು ಬುಧನನ್ನು ನೋಡಬೇಕು. ಶನಿಯು ಮೂರು ಹತ್ತನೆಯ ಸ್ಥಾನಗಳನ್ನು ವಿಶೇಷದೃಷ್ಟಿಯಿಂದಲೂ ಏಳನೆಯ ಸ್ಥಾನವನ್ನು ಪೂರ್ಣದೃಷ್ಟಿಯಿಂದಲೂ ನೋಡುವುದರಿಂದ ಬುಧನಿಗೆ ನಾಲ್ಕನೆಯ ಅಥವಾ ಹತ್ತನೆಯ ಸ್ಥಾನದಲ್ಲಿ ಶನಿಯು ಇರುವಾಗ ಮಾತ್ರ ಈ ಯೋಗ ಸಂಭವಿಸುತ್ತದೆ. ಶ್ರೀಧರನು ಮೊದಲನೆಯ ದ್ರೇಕ್ಕಾಣದಲ್ಲಿ ಬುಧನಿರುವಾಗ ಮೊದಲನೆಯ ದ್ರೇಕ್ಕಾಣದಲ್ಲಿ ಶನಿ ಇರಬೇಕೆಂದು ಒಂದು ಉದಾಹರಣೆಯಿಂದ ಸ್ಪಷ್ಟಪಡಿಸಿರುತ್ತಾನೆ. ಇದರಂತೆಯೇ ಉಳಿದೆರಡುದ್ರೇಕ್ಕಾಣಗಳಲ್ಲಿರುವಾಗಲೂ ಈ ಯೋಗವು ಸಂಭವಿಸುತ್ತದೆ. ಶನಿ ಬುಧನನ್ನು ನೋಡಬೇಕೆನ್ನುವುದನ್ನು ಶ್ರೀಧರನು ತನ್ನ ಗ್ರಂಥದಲ್ಲಿ ಹೇಳಿರುವುದಿಲ್ಲ. ಆದರೂ 'ಮೊದಲದ್ರೇಕ್ಕಾಣದೊಳ್' ಎನ್ನುವುದಕ್ಕೆ ಲಗ್ನರಾಶಿಯ ಮೊದಲದ್ರೇಕ್ಕಾಣವೆಂದೂ 'ಕೇಂದ್ರಗೃಹಂಗಳಲ್ಲಿ ಮೊದಲದ್ರೇಕ್ಕಾಣದೊಳ್' ಎನ್ನುವುದಕ್ಕೆ ನಾಲ್ಕು ಮತ್ತು ಏಳನೆಯ ಕೇಂದ್ರಗಳ ಮೊದಲದ್ರೇಕ್ಕಾಣವೆಂದೂ ಅರ್ಥಮಾಡಿದರೆ ಆಗ ಬುಧನಿಗೆ ಶನಿ ದೃಷ್ಟಿಯೂ ಇರುತ್ತದೆ.

ಎರಡನೆಯ ಯೋಗವು ಬೃಹಜ್ಜಾತಕದಲ್ಲಿ 'ದಾಸ್ಯಾಂ ಜಾತೋ ದಿತಿಸುತಗುರೌ ರಿಃಫಗೇ ಸೌರಭಾಗೇ' ಎಂದಿದೆ. ಇಲ್ಲಿರುವ 'ಸೌರಭಾಗೇ' ಎನ್ನುವುದಕ್ಕೆ ಶನಿಯ ನವಾಂಶವೆಂದು ಭಟ್ಟೋತ್ಪಲರು ವ್ಯಾಖ್ಯಾನ ಮಾಡಿರುತ್ತಾರೆ. ಆದರೆ ಇದೇ ಶ್ಲೋಕದಲ್ಲಿ ಮೊದಲು 'ತ್ರ್ಯಂಶೇ' ಎಂದು ಹೇಳಿರುವುದರಿಂದ 'ಸೌರಭಾಗೇ' ಎನ್ನುವುದಕ್ಕೆ 'ಸೌರತ್ರ್ಯಂಶೇ' ಎಂದು ಅರ್ಥಮಾಡಿಕೊಂಡು ಶ್ರೀಧರನು ಅದನ್ನು 'ಅಸಿತದ್ರೇಕ್ಕಾಣದೊಳ್' ಎಂದು ಕನ್ನಡಿಸಿರುತ್ತಾನೆ. ಈ ಯೋಗಕ್ಕೇ 'ನೀಚಗುಣೌಘಂ' ಎಂದು ಫಲವನ್ನು ಹೇಳಿರುತ್ತಾನೆ. ಆದರೆ ಇದು ಮುಂದಿನ ಪದ್ಯದಲ್ಲಿ ಹೇಳಿರುವ ಮೊದಲನೆಯ ಯೋಗದ ಫಲವೆಂದು ಬೃಹಜ್ಜಾತಕದಿಂದ ತಿಳಿದುಬರುತ್ತದೆ.

(ಲಿಂಗವ್ಯಾಧಿ ಯೋಗ)

ರವಿಚಂದ್ರರ್ ನೆಲಸಿರ್ದೊಡಸ್ತ[1]ಗೃಹದೊಳ್ ಸೂರ್ಯಾತ್ಮಜಂ ನೋಡೆ ಮೇ
ಣವನೀಜೋಶನರಿರ್ದೊಡಸ್ತಗೃಹದೊಳ್ ಪಾಪಗ್ರಹಂ ನೋಡೆ ಸಂ
ಭವಿಕುಂ ವಿ[2]ದ್ರಧಿ ತನ್ನ[2]ರಂಗಳಿಕುಳೀರಾಂಶಂಗಳೊಳ್ ರೋಹಿಣೀ
ಧವನುಗ್ರಗ್ರಹಯುಕ್ತನಾಗಿ ನಿರೆ ಲಿಂಗವ್ಯಾಧಿಯಿಂ ಬರ್ದುಗುಂ ೧೧

(ಸಿತಕುಷ್ಠ ಯೋಗ)

ಉದಯದೊಳಿಂದು ಅಸ್ತದೊಳಿನಂ ಶನಿ ಪಂಕಜಮಿತ್ರನಿಂ ದ್ವಿತೀ
ಯದೊಳಿರೆ ಮೇಣ್ ತುಷಾರರುಚಿ ಪತ್ತಜೊಳರ್ಕಜ[3]ನುಂ[3] ದ್ವಿತೀಯಗೇ
ಹದೊಳವನೀಜನಸ್ತಗೃಹದೊಳ್ ನಿರೆ ಮೇಣ್ [ಗೃಹದಿಂ] ದ್ವಿತೀಯ ರಿಃ
ಫದೊಳಿರೆ [4]ಸ[4]ದ್ಗ್ರಹೇತರಗಣಂ ಸಿತಕುಷ್ಠಸಮೇತನಾ ನರಂ ೧೨

---

೧೧. ಜನನಕಾಲದಲ್ಲಿ ಸೂರ್ಯಚಂದ್ರರು ಏಳನೆಯ ಸ್ಥಾನದಲ್ಲಿದ್ದು ಶನಿ ನೋಡಿದರೆ ಅಥವಾ ಅಂಗಾರಕ ಶುಕ್ರರು ಏಳನೆಯ ಸ್ಥಾನದಲ್ಲಿದ್ದು ಪಾಪ ಗ್ರಹ ನೋಡಿದರೆ ವಿದ್ರಧಿ ರೋಗವು (ಕೆಳಹೊಟ್ಟೆ ಮತ್ತು ಗುಹ್ಯ ಪ್ರದೇಶದಲ್ಲಿ ಉಂಟಾಗುವ ರೋಗವಿಶೇಷ) ಸಂಭವಿಸುತ್ತದೆ. ವೃಶ್ಚಿಕ ಕರ್ಕಟಕ ನವಾಂಶಗಳಲ್ಲಿ ಚಂದ್ರನು ಪಾಪಗ್ರಹದೊಡನೆ ಇದ್ದರೆ ಲಿಂಗವ್ಯಾಧಿಯಿಂದ ಸಾಯುತ್ತಾನೆ.

ವಿ—ಈ ಪದ್ಯದಲ್ಲಿ ಮೂರುಯೋಗಗಳಿವೆ; ಇವುಗಳಲ್ಲಿ ಮೊದಲನೆಯ ಯೋಗವಿದ್ದರೆ ಜಾತಕನು ನೀಚಕೃತ್ಯಗಳನ್ನು ಮಾಡುತ್ತಾನೆಂದು ಬೃಹಜ್ಜಾತಕ ದಲ್ಲಿದೆ. ಹತ್ತನೆಯ ಪದ್ಯದಲ್ಲಿ ಹೇಳಿರುವ ಯೋಗದಲ್ಲಿ ಹುಟ್ಟಿದವನಿಗೆ ಈ ಫಲ ಉಂಟಾಗುತ್ತದೆಂದು ಶ್ರೀಧರನು ತಿಳಿಸಿರುತ್ತಾನಲ್ಲದೆ ಈ ಪದ್ಯದ ಮೊದಲೆರಡು ಯೋಗಗಳಿಗೂ ಒಂದೇಫಲವನ್ನು ಹೇಳಿರುತ್ತಾನೆ. ಎರಡನೆಯ ಯೋಗಫಲಕ್ಕೆ 'ವಾತರುಕ್' 'ವೃದ್ಧಿರುಕ್' 'ವಾಧ್ಯರುಕ್' ಎಂದು ಬೃಹಜ್ಜಾತಕದಲ್ಲಿ ಪಾಠ ಭೇದಗಳು ಕಂಡುಬರುತ್ತವೆ. 'ವಿಪ್ರಜಿತಂ ನರಂ' ಎಂದಿರುವುದನ್ನು ಮೂಲದ ಅರ್ಥಕ್ಕೆ ಸರಿಹೋಗುವಂತೆ ಅಕ್ಷರಸಾಮ್ಯದಿಂದ 'ವಿದ್ರಧಿ ತನ್ನರಂ' ಎಂದು ಬದಲಾಯಿಸಿದೆ.

೧೨. ಲಗ್ನದಲ್ಲಿ ಚಂದ್ರ ಏಳನೆಯಸ್ಥಾನದಲ್ಲಿ ಸೂರ್ಯ ಸೂರ್ಯನಿಂದ ಎರಡನೆಯ ಸ್ಥಾನದಲ್ಲಿ ಶನಿ ಇರುವಾಗ ಅಥವಾ ಚಂದ್ರ ಹತ್ತನೆಯ ಸ್ಥಾನದಲ್ಲಿ ಶನಿ ಎರಡನೆಯ ಸ್ಥಾನದಲ್ಲಿ ಅಂಗಾರಕ ಏಳನೆಯ ಸ್ಥಾನದಲ್ಲಿರುವಾಗ ಅಥವಾ ಎರಡು ಹನ್ನೆರಡನೆಯ ಸ್ಥಾನಗಳಲ್ಲಿ ಪಾಪಗ್ರಹಗಳಿರುವಾಗ ಹುಟ್ಟಿದ ಜಾತಕನಿಗೆ ಬಿಳೀಕುಷ್ಠರೋಗವಿರುತ್ತದೆ.

ವಿ—ಬೃಹಜ್ಜಾತಕದಲ್ಲಿ 'ಶ್ವಿತ್ರೀ ರಿಃಫಧನಸ್ಥಯೋರಶುಭಯೋಶ್ಚಂದ್ರೋ ದಯೇಽಸ್ತೇ ರವೌ। ಚಂದ್ರೇ ಖೇಽವನಿಜೇಽಸ್ತಗೇ ಚ ವಿಕಲೋ ಯದ್ಯರ್ಕಜೋ ವೇಶಿಗಃ॥' ಎಂದಿದೆ. ಶ್ರೀಧರನು ಇದನ್ನೇ ಕನ್ನಡಿಸಿದ್ದರೂ ಅರ್ಥವ್ಯತ್ಯಾಸವಿದೆ.

---

[1] ನ್ಯ (ಕ ಗ) [2] ಪ್ರಜಿತಂ ನ (ಕ) ಪ್ರಚಿತಂ ನ (ಗ) [3] ನಿಂ (ಕ ಗ) [4] ತ (ಕ).

(ಪ್ಲೀಹ ಶ್ವಾಸ ಕ್ಷಯ ವಿದ್ರಧಿ ಗುಲ್ಮವ್ಯಾಧಿ ಯೋಗ)

ಬಿಸರುಹಸಖನಿರೆ ಮಕರದೊ
ಳಸದ್ಗ್ರಹದ್ವಿ[1]ತ[1]ಯುಮಿರೆ ನಿಶಾನಾಥಂಗಿ
ರ್ದೆಸೆಯೊಳ್ ಮನುಜಂ ಪ್ಲೀಹ
ಶ್ವಸನ ಕ್ಷಯ ಗುಲ್ಮ ವಿದ್ರಧಿವ್ಯಾಧಿಯುತಂ ೧೩

---

ಬೃಹಜ್ಜಾತಕದಂತೆ ಲಗ್ನದಲ್ಲಿ ಚಂದ್ರ ಏಳನೆಯ ಸ್ಥಾನದಲ್ಲಿ ಸೂರ್ಯ ಮತ್ತು ಎರಡು ಹನ್ನೆರಡನೆಯ ಸ್ಥಾನಗಳಲ್ಲಿ ಅಶುಭಗ್ರಹಗಳಿದ್ದರೆ ಜಾತಕನಿಗೆ ಶ್ವೇತಕುಷ್ಠವಿರುತ್ತದೆ. ಶ್ರೀಧರನು ಈ ಯೋಗದಲ್ಲಿ ಅಶುಭಗ್ರಹಗಳು ಎರಡು ಹನ್ನೆರಡನೆಯ ಸ್ಥಾನಗಳಲ್ಲಿರಬೇಕೆನ್ನುವುದನ್ನು ಬಿಟ್ಟು ಇದನ್ನೇ ಬೇರೆಯೋಗ ವೆಂದು ಹೇಳಿರುತ್ತಾನೆ ; ಅಲ್ಲದೆ ಶನಿಯು ಸೂರ್ಯನಿಗೆ ಎರಡನೆಯ ಸ್ಥಾನದಲ್ಲಿ ರಬೇಕೆಂದು ಹೆಚ್ಚಾಗಿ ಸೇರಿಸಿರುತ್ತಾನೆ.

ಚಂದ್ರ ಹತ್ತನೆಯ ಸ್ಥಾನದಲ್ಲಿ ಅಂಗಾರಕ ಏಳನೆಯ ಸ್ಥಾನದಲ್ಲಿ ಶನಿ ಸೂರ್ಯನಿಗೆ ಎರಡನೆಯ ಸ್ಥಾನದಲ್ಲಿದ್ದರೆ ಜಾತಕನು ಅಂಗಹೀನನಾಗುತ್ತಾನೆಂದು ಬೃಹಜ್ಜಾತಕದಲ್ಲಿದೆ. ಈ ಯೋಗದಲ್ಲಿ ಹುಟ್ಟಿದವನಿಗೂ ಬಿಳೀಕುಷ್ಠವಿರುತ್ತದೆ ಎಂದು ಶ್ರೀಧರನು ಹೇಳಿರುವನಲ್ಲದೆ ಶನಿಯು ಸೂರ್ಯನಿಗೆ ಎರಡನೆಯ ಸ್ಥಾನದಲ್ಲಿರಬೇಕೆನ್ನುವ ಅಂಶವನ್ನು ಸ್ಪಷ್ಟಪಡಿಸಿಲ್ಲ.

೧೩. ಸೂರ್ಯನು ಮಕರರಾಶಿಯಲ್ಲಿದ್ದು ಅಶುಭಗ್ರಹಗಳೆರಡು ಚಂದ್ರನಿಗೆ ಎರಡುಪಕ್ಕಗಳಲ್ಲಿರುವಾಗ ಹುಟ್ಟಿದ ಜಾತಕನಿಗೆ ಪ್ಲೀಹ ಶ್ವಾಸ ಕ್ಷಯ ಗುಲ್ಮ ವಿದ್ರಧಿ ರೋಗಗಳಿರುತ್ತವೆ.

ವಿ–ಬೃಹಜ್ಜಾತಕದಲ್ಲಿ 'ಮೃಗಗೇ ಪತಂಗೇ' 'ಮದಗೇ ಪತಂಗೇ' ಎಂದು ಪಾಠಾಂತರಗಳಿವೆ. ಶ್ರೀಧರನು 'ಮೃಗಗೇ ಪತಂಗೇ' ಎನ್ನುವ ಪಾಠವನ್ನು ಅನುಸರಿಸಿರುತ್ತಾನೆ. 'ಮದಗೇ ಪತಂಗೇ' ಎನ್ನುವ ಪಾಠದಂತೆ ಸೂರ್ಯನು ಲಗ್ನದಿಂದ ಏಳನೆಯ ಸ್ಥಾನದಲ್ಲಿರಬೇಕೆಂದು ಅರ್ಥವಾಗುತ್ತದೆ. ಸೂರ್ಯನ ಸ್ಥಿತಿಯನ್ನು ಪ್ರತ್ಯೇಕವಾಗಿ ತಿಳಿಸಿರುವುದರಿಂದ 'ಅಸದ್ಗ್ರಹದ್ವಿತಯುಮಿರೆ ನಿಶಾನಾಥಂಗಿರ್ದೆಸೆಯೊಳ್' ಎನ್ನುವುದಕ್ಕೆ 'ಶನ್ಯಂಗಾರಕರ ಮಧ್ಯದಲ್ಲಿ ಚಂದ್ರನಿರುವಾಗ' ಎಂದು ಅರ್ಥವಾಗುತ್ತದೆ.

---

[1] ತೀ (ಕ ಗ).

(ಕೃಶಾಂಗ ಯೋಗ)

ಖರಕಿರಣಂ ಚಂದ್ರಾಂಶದೊ
ೞಿರೆ ಚಂದ್ರಂ ಖರಕರಾಂಶದೊೞ್ ನೆಲಸಿರೆ [1]ಶೋ
ಷರುಜಾರ್ತಂ[1] ರವಿಶಶಿಗೞ್
ಪರಸ್ಪರಾ[2]ಲಯದೊೞಿರೆ[2] ಕೃಶಾಂಗಂ ಮನುಜಂ ೧೪

(ತೊನ್ನುರೋಗ ಯೋಗ)

ಹಿಮಧಾಮಮಂ ನಿರೆ ಚಾಪಮಧ್ಯಪದದೊೞ್ ಮೇಣ್ ಕರ್ಕಿಮೇಷಾನಿಮೇ
ಷಮೃಗಾಂಕಾಂಶದೊೞರ್ಕಮಂದಕುಜಯುಕ್ತಂ ಮೇಣವರ್ ನೋಡೆ ಮೇಣ್
ಸಮನಿಪ್ಪಂದುದಯಕ್ಕೆ ಪಂಚಮ ನವ ಸ್ಥಾನಂಗೞೊೞ್ ಕರ್ಕಟಾ
ೞಿ ಮೃ[3]ಗೋಕ್ಷೋ[3]ದಯಮುಗ್ರರೊಂದಿದೊಡವರ್ ಮೇಣ್ [4]ನೋ[4]ಡೆ ತೊನ್ನಂ ನರಂ ೧೫

---

೧೪. ಜನನಕಾಲದಲ್ಲಿ ಸೂರ್ಯನು ಕರ್ಕಟಕನವಾಂಶದಲ್ಲೂ ಚಂದ್ರ ಸಿಂಹನವಾಂಶದಲ್ಲೂ ಇದ್ದರೆ ಜಾತಕನು ಕ್ಷಯರೋಗಪೀಡಿತನಾಗುತ್ತಾನೆ; ಸೂರ್ಯಚಂದ್ರರು ಪರಸ್ಪರಗೃಹದಲ್ಲಿ(ಸೂರ್ಯನು ಕರ್ಕಟಕರಾಶಿಯಲ್ಲಿ ಚಂದ್ರನು ಸಿಂಹರಾಶಿಯಲ್ಲಿ)ದ್ದರೆ ಕೃಶಾಂಗನಾಗುತ್ತಾನೆ.

ವಿ—ಕರ್ಕಟಕ ಅಥವಾ ಸಿಂಹರಾಶಿಯಲ್ಲಿ ಸೂರ್ಯ ಚಂದ್ರರಿಬ್ಬರೂ ಇದ್ದರೆ ಜಾತಕನು ಕೃಶಾಂಗನಾಗುತ್ತಾನೆಂದು ಬೃಹಜ್ಜಾತಕದಲ್ಲಿದೆ. ಮತ್ತೆ ಕೆಲವರು ಸಿಂಹರಾಶಿ ಸಿಂಹನವಾಂಶದಲ್ಲಿ ಚಂದ್ರನೂ ಕರ್ಕಟಕರಾಶಿ ಕರ್ಕಟಕ ನವಾಂಶದಲ್ಲಿ ಸೂರ್ಯನೂ ಇದ್ದರೆ ಜಾತಕನು ಕೃಶಾಂಗನಾಗುತ್ತಾನೆಂದು ಅಭಿಪ್ರಾಯಪಡುತ್ತಾರೆ. ಆದರೆ ಇದು ಗರ್ಗಾಚಾರ್ಯರಿಗೆ ಸಮ್ಮತವಲ್ಲ.

೧೫. ಜನನಕಾಲದಲ್ಲಿ ಚಂದ್ರನು ಧನೂರಾಶಿಯ ಮಧ್ಯ(ಸಿಂಹನವಾಂಶ)ದಲ್ಲಿ ಅಥವಾ ಯಾವರಾಶಿಯಲ್ಲಾಗಲಿ ಕರ್ಕಟಕ ಮೇಷ ಮೀನ ಮಕರನವಾಂಶಗಳಲ್ಲಿ ಸೂರ್ಯ ಶನಿ ಅಂಗಾರಕರೊಡನಿದ್ದರೆ ಅಥವಾ ಆ ನವಾಂಶಗಳಲ್ಲಿರುವ ಚಂದ್ರನನ್ನು ಸೂರ್ಯ ಶನಿ ಕುಜರು ನೋಡಿದರೆ ಅಥವಾ ಲಗ್ನಕ್ಕೆ ಐದು ಒಂಬತ್ತನೆಯ ಸ್ಥಾನಗಳಲ್ಲಿ ಕರ್ಕಟಕ ವೃಶ್ಚಿಕ ಮಕರ ವೃಷಭರಾಶಿಗಳಲ್ಲಿ ಪಾಪಗ್ರಹಗಳಿದ್ದರೆ ಅಥವಾ ಆ ರಾಶಿಗಳು ಐದು ಒಂಬತ್ತನೆಯ ಸ್ಥಾನಗಳಾಗಿದ್ದು ಪಾಪಗ್ರಹಗಳು ನೋಡಿದರೆ ಜಾತಕನಿಗೆ ತೊನ್ನುರೋಗವಿರುತ್ತದೆ.

ವಿ—ಈ ಯೋಗಗಳಲ್ಲಿ ಶುಭಗ್ರಹ ದೃಷ್ಟಿಯಿದ್ದರೆ ತೊನ್ನುರೋಗವಿರುವುದಿಲ್ಲ. ಶರೀರದಲ್ಲಿ ಕಲೆಗಳು ಮಾತ್ರ ಇರುತ್ತವೆ. ಬೃಹಜ್ಜಾತಕದಲ್ಲಿ 'ಯಾತ್ಯೈಸ್ತ್ರಿಕೋಣಮಲಿಕರ್ಕಿವೃಷೈರ್ಮೃಗೇ ಚ' ಎಂದಿರುವುದನ್ನು 'ಉದಯಕ್ಕೆ ಪಂಚಮ ನವ

---

[1] ಕೋಪರುಜಾರ್ಥಂ (ಕ ಗ) [2] ಯ ದೊನಿರಲು (ಕ) ಯುದೊೞಿರಲ್ (ಗ) [3] ಗಾಕ್ಷೋ (ಕ) ಗಾಕ್ಷೋರ್ (ಗ) [4] ಕೂ (ಕ).

ಜಲಜಪ್ರಿಯ ರವಿಜ ಕುಜೋ
ತ್ಪಲಪ್ರಿಯರ್ ನಿಧನ ಧನ ರಿಪು ವ್ಯಯಗೃಹದೊಳ್
ನೆಲಸಿರೆ ದೊರೆಕೊಂಡೆಡೆಯೊಳ್
ಬಲವದ್ಗ್ರಹ[1]ದಧಿಕ[1]ದೋಷದಿಂ ಕಣ್ಗಿಡುಗುಂ ೧೬

---

ಸ್ಥಾನಂಗಳೊಳ್ ಕರ್ಕಟಾಳಿಮೃಗೋಕ್ಷೋದಯಮುಗ್ರರೊಂದಿದೊಡೆ' ಎಂದು ಶ್ರೀಧರನು ಕನ್ನಡಿಸಿರುತ್ತಾನೆ. ವಿವರಣವ್ಯಾಖ್ಯಾನದಲ್ಲಿ 'ತ್ರಿಕೋಣಂ ಯಾತೈಃ—ಲಗ್ನ ಪಂಚಮ ನವಮ ಸ್ಥಾನಗತೈರಲಿವೃಷಕರ್ಕಿಮಕರೈಃ' ಎಂದಿದೆ. ಇದರಂತೆ ಕರ್ಕಟಕ ವೃಶ್ಚಿಕ ಮಕರ ವೃಷಭಲಗ್ನಗಳಲ್ಲಿ ಪಾಪಗ್ರಹವಿದ್ದರೂ ಅಥವಾ ಆ ಲಗ್ನಗಳನ್ನು ಪಾಪಗ್ರಹಗಳು ನೋಡಿದರೂ ಜಾತಕನಿಗೆ ತೊನ್ನು ರೋಗವಿರುತ್ತದೆ.

೧೬. ಜನನಕಾಲದಲ್ಲಿ ಸೂರ್ಯ ಶನಿ ಕುಜ ಚಂದ್ರರು ಎಂಟು ಎರಡು ಆರು ಹನ್ನೆರಡನೆಯ ಸ್ಥಾನಗಳಲ್ಲಿ ಯಾವಸ್ಥಾನದಲ್ಲಿದ್ದರೂ ಬಲಿಷ್ಠಗ್ರಹದ ದೋಷ ದಿಂದ ಜಾತಕನು ಕುರುಡನಾಗುತ್ತಾನೆ.

ವಿ—ಬೃಹಜ್ಜಾತಕದಲ್ಲಿ 'ನಿಧನಾರಿ ಧನ ವ್ಯಯಸ್ಥಿತಾ ರವಿ ಚಂದ್ರಾರ ಯಮಾ ಯಥಾ ತಥಾ' ಎಂದಿದೆ. ಇಲ್ಲಿ 'ಯಥಾ ತಥಾ' ಎನ್ನುವುದಕ್ಕೆ ಯಥಾ ಕ್ರಮಂ' ಎಂದು ಪಾಠಾಂತರವಿದೆ. ಇದರಂತೆ ಎಂಟನೆಯಸ್ಥಾನದಲ್ಲಿ ಸೂರ್ಯನೂ ಆರನೆಯಸ್ಥಾನದಲ್ಲಿ ಚಂದ್ರನೂ ಎರಡನೆಯಸ್ಥಾನದಲ್ಲಿ ಅಂಗಾರ ಕನೂ ಹನ್ನೆರಡನೆಯಸ್ಥಾನದಲ್ಲಿ ಶನಿಯೂ ಇದ್ದರೆ ಜಾತಕನು ಕುರುಡ ನಾಗುತ್ತಾನೆ. ಈ ಅಭಿಪ್ರಾಯವನ್ನೇ ಜಯದೇವನು 'ಧನೇ ಕುಜೋಽರಿಗೋ ವಿಧುರ್ವ್ಯಯೇ ಶನಿರ್ಮೃತೌ ರವಿಃ । ಯದಾ ತದಾ ಭವೇನ್ನೃಣಾಮವಶ್ಯ ಮಂಧತಾ ಸದಾ ॥' ಎಂದು ಸ್ಪಷ್ಟವಾಗಿ ಹೇಳಿರುತ್ತಾನೆ. ಉತ್ಪಲ ಮತ್ತು ವಿವರಣ ವ್ಯಾಖ್ಯಾನಕಾರರಿಗೆ ಅಭಿಮತವಾದ 'ಯಥಾ ತಥಾ' ಎನ್ನುವ ಪಾಠ ವನ್ನೇ ಶ್ರೀಧರನು 'ದೊರೆಕೊಂಡೆಡೆಯೊಳ್' ಎಂದು ಕನ್ನಡಿಸಿರುತ್ತಾನೆ. ಚಂದ್ರನು ಬಲಿಷ್ಠನಾಗಿದ್ದರೆ ವಾತ ಕಫದೋಷಗಳಿಂದಲೂ ಶನಿಯು ಬಲಿಷ್ಠ ನಾಗಿದ್ದರೆ ವಾತದೋಷದಿಂದಲೂ ಸೂರ್ಯಾಂಗಾರಕರು ಬಲಿಷ್ಠರಾಗಿದ್ದರೆ ಪಿತ್ತದೋಷದಿಂದಲೂ ಕಣ್ಣು ಕುರುಡಾಗುತ್ತದೆ. ಎಂಟನೆಯ ಸ್ಥಾನದಲ್ಲಿ ಪಾಪ ಗ್ರಹವಿದ್ದು ಎರಡನೆಯ ಸ್ಥಾನದಲ್ಲಿರುವ ಪಾಪಗ್ರಹವನ್ನು ನೋಡುವುದರಿಂದ ಬಲಗಣ್ಣೂ ಆರನೆಯ ಸ್ಥಾನದಲ್ಲಿ ಪಾಪಗ್ರಹವಿದ್ದು ಹನ್ನೆರಡನೆಯ ಸ್ಥಾನದಲ್ಲಿ ರುವ ಪಾಪಗ್ರಹವನ್ನು ನೋಡುವುದರಿಂದ ಎಡಗಣ್ಣೂ ಕಾಣಿಸುವುದಿಲ್ಲ.

---

[1] ಕೃತ (ಕ) ಗಧಿಕ (ಗ).

(ಕಿವುಡು ಯೋಗ)

ಸಹಜಾಯ [1]ನವಮ[1] ಪಂಚಮ
ಗೃಹದೊಳ್ ಪಾಪಗ್ರಹಂಗಳೊಡಗೂಡೆ ಶುಭ
ಗ್ರಹ[2]ವೀಕ್ಷಿಸದಂ[2]ದುದಯಿಸಿ
ದ ಹೋರೆಯೊಳ್ ಪುಟ್ಟಿದಾತನಕ್ಕುಂ ಕಿವುಡಂ ೧೭

(ಪಿಶಾಚಗ್ರಸ್ತ ಯೋಗ)

ಗುರು ಲಗ್ನಸ್ಥಿತನಾಗೆ ಸಪ್ತಮದೊಳಾರಂ ಕೂಡೆ ಮೇಣ್ ಲಗ್ನದೊಳ್
ತರಣಿಪ್ರೋದ್ಭವನಸ್ತ ಪಂಚ ನವಮಸ್ಥಾನಂಗಳೊಳ್ ಭೌಮ ಭಾ
ಸ್ಕರಿಗಳ್ ಕೂಡಿರೆ ಮೇಣ್ ತ್ರಿಕೋಣಗೃಹದೊಳ್ ಪಾಪಗ್ರಹಂಗಳ್ ಸುಧಾ
ಕಿರಣಂ ಕರ್ಕಿವಿಲಗ್ನದೊಳ್ ನಿಲೆ ಪಿಶಾಚಪ್ರಾಪ್ತನಕ್ಕುಂ ನರಂ ೧೮

---

೧೭. ಮೂರು ಹನ್ನೊಂದು ಒಂಬತ್ತು ಐದನೆಯ ಸ್ಥಾನಗಳಲ್ಲಿ ಪಾಪ ಗ್ರಹಗಳಿದ್ದು ಶುಭಗ್ರಹಗಳು ನೋಡದಿದ್ದಾಗ ಉದಯಿಸಿರುವ ಲಗ್ನದಲ್ಲಿ ಹುಟ್ಟಿದವನು ಕಿವುಡನಾಗುತ್ತಾನೆ.

ವಿ—ಮೂರು ಒಂಬತ್ತನೆಯ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದು ಶುಭಗ್ರಹಗಳು ನೋಡದಿದ್ದರೆ ಬಲದ ಕಿವಿಯೂ ಐದು ಹನ್ನೊಂದನೆಯ ಸ್ಥಾನಗಳಲ್ಲಿ ಪಾಪ ಗ್ರಹಗಳಿದ್ದು ಶುಭಗ್ರಹಗಳು ನೋಡದಿದ್ದರೆ ಎಡದ ಕಿವಿಯೂ ಕೇಳಿಸುವುದಿಲ್ಲ. ಈ ನಾಲ್ಕುಸ್ಥಾನಗಳಲ್ಲೂ ಪಾಪಗ್ರಹಗಳಿದ್ದು ಶುಭಗ್ರಹ ನೋಡದಿದ್ದರೆ ಎರಡು ಕಿವಿಗಳೂ ಕೇಳಿಸುವುದಿಲ್ಲ.

೧೮. ಜನನಕಾಲದಲ್ಲಿ ಗುರು ಲಗ್ನದಲ್ಲೂ ಏಳನೆಯಸ್ಥಾನದಲ್ಲಿ ಅಂಗಾರಕನೂ ಇದ್ದರೆ ಅಥವಾ ಲಗ್ನದಲ್ಲಿ ಶನಿಯೂ ಏಳು ಐದು ಒಂಬತ್ತನೆಯ ಸ್ಥಾನಗಳಲ್ಲಿ ಅಂಗಾರಕನೂ ಇದ್ದರೆ ಅಥವಾ ತ್ರಿಕೋಣ (೫ ಅಥವಾ ೯ನೇ ಸ್ಥಾನ) ದಲ್ಲಿ ಪಾಪಗ್ರಹಗಳೂ ಚಂದ್ರನು ಕರ್ಕಟಕಲಗ್ನದಲ್ಲೂ ಇದ್ದರೆ ಜಾತಕನಿಗೆ ಪಿಶಾಚ ಬಾಧೆ ಇರುತ್ತದೆ.

ವಿ—ಈ ಪದ್ಯದಲ್ಲಿ ಮೂರುಯೋಗಗಳಿವೆ. ಇವುಗಳಲ್ಲಿ ಒಂದು ಎರಡನೆಯ ಯೋಗಗಳಿದ್ದರೆ ಜಾತಕನು ಉನ್ಮತ್ತನಾಗುತ್ತಾನೆಂದು ಬೃಹಜ್ಜಾತಕದಲ್ಲಿದೆ. ಶ್ರೀಧರನು ಎರಡನೆಯ ಯೋಗವನ್ನು 'ಲಗ್ನದೊಳ್ ತರಣಿಪ್ರೋದ್ಭವನಸ್ತ ಪಂಚ ನವಮಸ್ಥಾನಂಗಳೊಳ್ ಭೌಮ ಭಾಸ್ಕರಿಗಳ್ ಕೂಡಿರೆ' ಎಂದು ಹೇಳಿರುತ್ತಾನೆ. ಈ ಪಾಠದಂತೆ ಲಗ್ನ ಮತ್ತು ಸಪ್ತಮ ಈ ಎರಡುಸ್ಥಾನಗಳಲ್ಲೂ ಒಂದೇಕಾಲದಲ್ಲಿ ಶನಿ ಇರಬೇಕೆಂದು ತಿಳಿದುಬರುತ್ತದೆ. ಒಂದೇ ಗ್ರಹವು ಏಕ ಕಾಲದಲ್ಲಿ ಎರಡುಸ್ಥಾನಗಳಲ್ಲಿರುವುದು ಅಸಂಭವ. ಆದುದರಿಂದ 'ಭಾಸ್ಕರಿಗಳ್' ಎನ್ನುವುದನ್ನು 'ಭಾಸ್ಕರರುಂ' ಎಂದು ವ್ಯತ್ಯಾಸಮಾಡುವುದರಿಂದ ಅಂಗಾರಕನು

---

[1] ನನವ (ಕ) ನವ (ಗ) [2] ಪೊಕ್ಷಿಸಿದಂ (ಕ) ಮಿರ್ದಂ (ಗ).

(ಹುಟ್ಟುಕುರುಡು ವಾತವ್ಯಾಧಿ ದಂತರೋಗ ಯೋಗ)

ಸರಸೀಜಾತಸ[1]ಖಂ[1] ನಿಜಗ್ರಹಣಕಾಲಂ ಕೂಡೆ ಲಗ್ನಸ್ಥನಾ
ಗಿರೆ [2]ಮರ್ತ್ಯಂ[2] ಜನನಾಂಧನಕ್ಕುಮಮರಾಧೀಶಾರ್ಚಿತಂ ಲಗ್ನದೊಳ್
ಸರಸೀ[3]ಜಾಪ್ತಜ[3]ನೇ[4]ಟಬೊಳ್[4] ನೆಲಸೆ ವಾತವ್ಯಾಧಿಯಕ್ಕುಂ ಶುಭೇ
ತರರಸ್ತಸ್ಥಿತರಾಗೆ ಕಾಣದಿರೆ ಸೌಮ್ಯರ್ ದಂತರೋಗಾನ್ವಿತಂ ೧೯

(ಬೋಳುತಲೆ ದಂತವಿಕಾರ ಯೋಗ)

ಪಾಪ[5]ಗ್ರಹಮದು[5]ದಯದೊಳಿರೆ
ಪಾಪೇಕ್ಷಣಮಾಗೆ ತ[6]ಜ್ಞ[6]ಟಿಯಕ್ಕುಂ ಲಗ್ನಂ
ಚಾಪ [7]ವೃಷ[7] ಮೇಷವಾಗಿರೆ
ಪಾಪಾಲೋಕನದೆ [8]ವಿಕೃತದಂತನ[8]ನಿಕ್ಕುಂ ೨೦

---

ಸೂರ್ಯನೊಡನೆ ಏಳು ಐದು ಒಂಬತ್ತನೆಯ ಸ್ಥಾನಗಳಲ್ಲಿರಬೇಕೆಂದಾಗುತ್ತದೆ. ಆದರೆ ಈ ಅಭಿಪ್ರಾಯಕ್ಕೆ ಇತರಜ್ಯೋತಿಷಾಚಾರ್ಯರ ಸಮ್ಮತಿ ಕಂಡುಬರುವುದಿಲ್ಲ. ಮೂರನೆಯ ಯೋಗದಲ್ಲಿ ಚಂದ್ರನು ಗ್ರಹಣಪೀಡಿತನಾಗಬೇಕೆಂದು ಬೃಹಜ್ಜಾತಕದಲ್ಲಿದೆ. ಇದಕ್ಕೆ ಪ್ರತಿಯಾಗಿ ಚಂದ್ರನು ಕರ್ಕಾಟಕರಾಶಿಯಲ್ಲಿರಬೇಕೆಂದು ಈ ಗ್ರಂಥದಲ್ಲಿವೆ. ಪ್ರತಿಕಾರರ ದೋಷದಿಂದ 'ಅಸುರಾಸ್ಯಗೆ' ಎನ್ನುವುದಕ್ಕೆ ಸಮಾನಪದ 'ಕರ್ಕಿವಿ' ಎಂದಾಗಿರಬಹುದು. ಈ ಯೋಗದಲ್ಲಿ ಚಂದ್ರನು ಕರ್ಕಾಟಕರಾಶಿಯಲ್ಲಿರಬೇಕೆಂದು ಇತರಜ್ಯೋತಿಷಗ್ರಂಥಗಳಲ್ಲಿ ಕಂಡುಬರುವುದಿಲ್ಲ.

೧೯. ಜನನಕಾಲದಲ್ಲಿ ಸೂರ್ಯನು ಗ್ರಹಣಪೀಡಿತನಾಗಿ ಲಗ್ನದಲ್ಲಿದ್ದರೆ ಜಾತಕನು ಹುಟ್ಟುಕುರುಡನಾಗುತ್ತಾನೆ; ಗುರು ಲಗ್ನದಲ್ಲೂ ಶನಿ ಏಳನೆಯ ಸ್ಥಾನದಲ್ಲೂ ಇದ್ದರೆ ಜಾತಕನಿಗೆ ವಾತರೋಗವುಂಟಾಗುತ್ತದೆ; ಅಶುಭಗ್ರಹಗಳು (ಸೂರ್ಯ ಚಂದ್ರ ಅಂಗಾರಕ ಶನಿಗಳು) ಏಳನೆಯ ಸ್ಥಾನದಲ್ಲಿದ್ದು ಶುಭಗ್ರಹಗಳು ನೋಡದಿದ್ದರೆ ಹಲ್ಲುರೋಗವಿರುತ್ತದೆ.

ವಿ—ಸೂರ್ಯಗ್ರಹಣವು ಉದಯಕಾಲದಲ್ಲಾಗಿ ಆ ಸಮಯದಲ್ಲಿ ಜನನವಾದರೆ ಜಾತಕನಿಗೆ ಕಣ್ಣುಗಳಿರುವುದಿಲ್ಲ. ಸೂರ್ಯಗ್ರಹಣ ಮತ್ತು ಜನನ ಇವೆರಡೂ ಸೂರ್ಯೋದಯಕಾಲದಲ್ಲಿ ಸಂಭವಿಸಿದಾಗ ಮಾತ್ರ ಗ್ರಹಣಪೀಡಿತನಾದ ಸೂರ್ಯ ಲಗ್ನದಲ್ಲಿದ್ದಂತಾಗುತ್ತದೆ.

೨೦. ಅಶುಭರಾಶಿ ಲಗ್ನವಾಗಿದ್ದು ಪಾಪಗ್ರಹ ನೋಡಿದರೆ ಜಾತಕನಿಗೆ ತಲೆಯಲ್ಲಿ ಕೂದಲಿರುವುದಿಲ್ಲ (ಬೋಳುತಲೆ). ಧನುಸ್ಸು ವೃಷಭ ಮೇಷರಾಶಿಗಳಲ್ಲಿ ಒಂದು ಲಗ್ನವಾಗಿ ಪಾಪಗ್ರಹ ನೋಡಿದರೆ ಜಾತಕನ ಹಲ್ಲುಗಳು ವಿಕಾರವಾಗಿರುತ್ತವೆ.

ವಿ—ಮೇಷ ಸಿಂಹ ವೃಶ್ಚಿಕ ಮಕರ ಕುಂಭ ಇವು ಅಶುಭರಾಶಿಗಳು; ಇವುಗಳಲ್ಲೊಂದು ಲಗ್ನವಾಗಿ ಪಾಪಗ್ರಹ ನೋಡಿದರೆ ತಲೆಯಲ್ಲಿ ಕೂದಲಿರುವು

---

[1] ಖಸಿಂ (ಕ) [2] ಮರ್ತ್ಯಂ (ಕ) ಧೂರ್ತಂ (ಗ) [3] [illegible] (ಕ ಗ) [4] [illegible] (ಕ)
[5] ಗ್ರಹಮು (ಕ ಗ) [6] [illegible] (ಕ ಗ) [7] ವೃಗ (ಕ ಗ) [8] ವಿಕೃತದಂತವೆ (ಕ) ಸಕೃತದಂತವೆ (ಗ).

(ಕಿವುಡು ಯೋಗ)

ಸಹಜಾಯು [1]ನವಮ[1] ಪಂಚಮ
ಗೃಹದೊಳ್ ಪಾಪಗ್ರಹಂಗಳೊಡಗೂಡೆ ಶುಭ
ಗ್ರಹ[2]ವೀಕ್ಷಿಸದಂ[2]ದುದಯಿಸಿ
ದ ಹೋರೆಯೊಳ್ ಪುಟ್ಟಿದಾತನಕ್ಕುಂ ಕಿವುಡಂ ೧೭

(ಪಿಶಾಚಗ್ರಸ್ತ ಯೋಗ)

ಗುರು ಲಗ್ನಸ್ಥಿತನಾಗೆ ಸಪ್ತಮದೊಳಾರಂ ಕೂಡೆ ಮೇಣ್ ಲಗ್ನದೊಳ್
ತರಣಿಪ್ರೋದ್ಭವನಸ್ತ ಪಂಚ ನವಮಸ್ಥಾನಂಗಳೊಳ್ ಭೌಮ ಭಾ
ಸ್ಕರಿಗಳ್ ಕೂಡಿರೆ ಮೇಣ್ ತ್ರಿಕೋಣಗೃಹದೊಳ್ ಪಾಪಗ್ರಹಂಗಳ್ ಸುಧಾ
ಕಿರಣಂ ಕರ್ಕಿವಿಲಗ್ನದೊಳ್ ನಿಲೆ ಪಿಶಾಚಪ್ರಾಪ್ತನಕ್ಕುಂ ನರಂ ೧೮

---

೧೭. ಮೂರು ಹನ್ನೊಂದು ಒಂಬತ್ತು ಐದನೆಯ ಸ್ಥಾನಗಳಲ್ಲಿ ಪಾಪ ಗ್ರಹಗಳಿದ್ದು ಶುಭಗ್ರಹಗಳು ನೋಡದಿದ್ದಾಗ ಉದಯಿಸಿರುವ ಲಗ್ನದಲ್ಲಿ ಹುಟ್ಟಿದವನು ಕಿವುಡನಾಗುತ್ತಾನೆ.

ವಿ—ಮೂರು ಒಂಬತ್ತನೆಯ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದು ಶುಭಗ್ರಹಗಳು ನೋಡದಿದ್ದರೆ ಬಲದ ಕಿವಿಯೂ ಐದು ಹನ್ನೊಂದನೆಯ ಸ್ಥಾನಗಳಲ್ಲಿ ಪಾಪ ಗ್ರಹಗಳಿದ್ದು ಶುಭಗ್ರಹಗಳು ನೋಡದಿದ್ದರೆ ಎಡದ ಕಿವಿಯೂ ಕೇಳಿಸುವುದಿಲ್ಲ. ಈ ನಾಲ್ಕುಸ್ಥಾನಗಳಲ್ಲೂ ಪಾಪಗ್ರಹಗಳಿದ್ದು ಶುಭಗ್ರಹ ನೋಡದಿದ್ದರೆ ಎರಡು ಕಿವಿಗಳೂ ಕೇಳಿಸುವುದಿಲ್ಲ.

೧೮. ಜನನಕಾಲದಲ್ಲಿ ಗುರು ಲಗ್ನದಲ್ಲೂ ಏಳನೆಯಸ್ಥಾನದಲ್ಲಿ ಅಂಗಾರಕನೂ ಇದ್ದರೆ ಅಥವಾ ಲಗ್ನದಲ್ಲಿ ಶನಿಯೂ ಏಳು ಐದು ಒಂಬತ್ತನೆಯ ಸ್ಥಾನಗಳಲ್ಲಿ ಅಂಗಾರಕನೂ ಇದ್ದರೆ ಅಥವಾ ತ್ರಿಕೋಣ (೫ ಅಥವಾ ೯ನೇ ಸ್ಥಾನ) ದಲ್ಲಿ ಪಾಪಗ್ರಹಗಳೂ ಚಂದ್ರನು ಕರ್ಕಟಕಲಗ್ನದಲ್ಲೂ ಇದ್ದರೆ ಜಾತಕನಿಗೆ ಪಿಶಾಚ ಬಾಧೆ ಇರುತ್ತದೆ.

ವಿ—ಈ ಪದ್ಯದಲ್ಲಿ ಮೂರುಯೋಗಗಳಿವೆ. ಇವುಗಳಲ್ಲಿ ಒಂದು ಎರಡನೆಯ ಯೋಗಗಳಿದ್ದರೆ ಜಾತಕನು ಉನ್ಮತ್ತನಾಗುತ್ತಾನೆಂದು ಬೃಹಜ್ಜಾತಕದಲ್ಲಿದೆ. ಶ್ರೀಧರನು ಎರಡನೆಯ ಯೋಗವನ್ನು 'ಲಗ್ನದೊಳ್ ತರಣಿಪ್ರೋದ್ಭವನಸ್ತ ಪಂಚ ನವಮಸ್ಥಾನಂಗಳೊಳ್ ಭೌಮ ಭಾಸ್ಕರಿಗಳ್ ಕೂಡಿರೆ' ಎಂದು ಹೇಳಿರುತ್ತಾನೆ. ಈ ಪಾಠದಂತೆ ಲಗ್ನ ಮತ್ತು ಸಪ್ತಮ ಈ ಎರಡುಸ್ಥಾನಗಳಲ್ಲೂ ಒಂದೇಕಾಲದಲ್ಲಿ ಶನಿ ಇರಬೇಕೆಂದು ತಿಳಿದುಬರುತ್ತದೆ. ಒಂದೇ ಗ್ರಹವು ಏಕ ಕಾಲದಲ್ಲಿ ಎರಡುಸ್ಥಾನಗಳಲ್ಲಿರುವುದು ಅಸಂಭವ. ಆದುದರಿಂದ 'ಭಾಸ್ಕರಿಗಳ್' ಎನ್ನುವುದನ್ನು 'ಭಾಸ್ಕರರುಂ' ಎಂದು ವ್ಯತ್ಯಾಸಮಾಡುವುದರಿಂದ ಅಂಗಾರಕನು

---

[1] ನನವ (ಕ) ನವ (ಗ) [2] ಪಿಾಕ್ಷಿಸಿದಂ (ಕ) ಮಿರ್ದಂ (ಗ).

(ಹುಟ್ಟುಕುರುಡು ವಾತವ್ಯಾಧಿ ದಂತರೋಗ ಯೋಗ)

ಸರಸೀಜಾತಸ[1]ಖಂ[1] ನಿಜಗ್ರಹಣಕಾಲಂ ಕೂಡೆ ಲಗ್ನಸ್ಥನಾ
ಗಿರೆ [2]ಮರ್ತ್ಯಂ[2] ಜನನಾಂಧನಕ್ಕುಮಮರಾಧೀಶಾರ್ಚಿತಂ ಲಗ್ನದೊಳ್
ಸರಸೀ[3]ಜಾಪ್ತಜ[3]ನೇಟಿಯೊಳ್ ನೆಲಸೆ ವಾ[4]ತವ್ಯಾ[4]ಧಿಯಕ್ಕುಂ ಶುಭೇ
ತರರಸ್ತಸ್ಥಿತರಾಗೆ ಕಾಣದಿರೆ ಸೌಮ್ಯರ್ ದಂತರೋಗಾನ್ವಿತಂ ೧೯

(ಬೋಳುತಲೆ ದಂತವಿಕಾರ ಯೋಗ)

ಪಾಪ[5]ಗ್ರಹಮದು[5]ದಯದೊಳಿರೆ
ಪಾಪೇಕ್ಷಣಮಾಗೆ ತ[6]ಲೆ[6]ಟಿಯಕ್ಕುಂ ಲಗ್ನಂ
ಚಾಪ [7]ವೃಷ[7] ಮೇಷವಾಗಿರೆ
ಪಾಪಾಲೋಕನದೆ [8]ವಿಕೃತದಂತನ[8]ಿಕ್ಕುಂ ೨೦

---

ಸೂರ್ಯನೊಡನೆ ಏಳು ಐದು ಒಂಬತ್ತನೆಯ ಸ್ಥಾನಗಳಲ್ಲಿರಬೇಕೆಂದಾಗುತ್ತದೆ. ಆದರೆ ಈ ಅಭಿಪ್ರಾಯಕ್ಕೆ ಇತರಜ್ಯೋತಿಷಾಚಾರ್ಯರ ಸಮ್ಮತಿ ಕಂಡುಬರುವುದಿಲ್ಲ. ಮೂರನೆಯ ಯೋಗದಲ್ಲಿ ಚಂದ್ರನು ಗ್ರಹಣಪೀಡಿತನಾಗಬೇಕೆಂದು ಬೃಹಜ್ಜಾತಕದಲ್ಲಿದೆ. ಇದಕ್ಕೆ ಪ್ರತಿಯಾಗಿ ಚಂದ್ರನು ಕರ್ಕಟಕರಾಶಿಯಲ್ಲಿರಬೇಕೆಂದು ಈ ಗ್ರಂಥದಲ್ಲಿವೆ. ಪ್ರತಿಕಾರರ ದೋಷದಿಂದ 'ಅಸುರಾಸ್ಯಗೆ' ಎನ್ನುವುದಕ್ಕೆ ಸಮಾನಪದ 'ಕರ್ಕಿವಿ' ಎಂದಾಗಿರಬಹುದು. ಈ ಯೋಗದಲ್ಲಿ ಚಂದ್ರನು ಕರ್ಕಟಕರಾಶಿಯಲ್ಲಿರಬೇಕೆಂದು ಇತರಜ್ಯೋತಿಷಗ್ರಂಥಗಳಲ್ಲಿ ಕಂಡುಬರುವುದಿಲ್ಲ.

೧೯. ಜನನಕಾಲದಲ್ಲಿ ಸೂರ್ಯನು ಗ್ರಹಣಪೀಡಿತನಾಗಿ ಲಗ್ನದಲ್ಲಿದ್ದರೆ ಜಾತಕನು ಹುಟ್ಟುಕುರುಡನಾಗುತ್ತಾನೆ; ಗುರು ಲಗ್ನದಲ್ಲೂ ಶನಿ ಏಳನೆಯ ಸ್ಥಾನದಲ್ಲೂ ಇದ್ದರೆ ಜಾತಕನಿಗೆ ವಾತರೋಗವುಂಟಾಗುತ್ತದೆ; ಅಶುಭಗ್ರಹಗಳು (ಸೂರ್ಯ ಚಂದ್ರ ಅಂಗಾರಕ ಶನಿಗಳು) ಏಳನೆಯ ಸ್ಥಾನದಲ್ಲಿದ್ದು ಶುಭಗ್ರಹಗಳು ನೋಡದಿದ್ದರೆ ಹಲ್ಲುರೋಗವಿರುತ್ತದೆ.

ವಿ–ಸೂರ್ಯಗ್ರಹಣವು ಉದಯಕಾಲದಲ್ಲಾಗಿ ಆ ಸಮಯದಲ್ಲಿ ಜನನವಾದರೆ ಜಾತಕನಿಗೆ ಕಣ್ಣುಗಳಿರುವುದಿಲ್ಲ. ಸೂರ್ಯಗ್ರಹಣ ಮತ್ತು ಜನನ ಇವೆರಡೂ ಸೂರ್ಯೋದಯಕಾಲದಲ್ಲಿ ಸಂಭವಿಸಿದಾಗ ಮಾತ್ರ ಗ್ರಹಣಪೀಡಿತನಾದ ಸೂರ್ಯ ಲಗ್ನದಲ್ಲಿದ್ದಂತಾಗುತ್ತದೆ.

೨೦. ಅಶುಭರಾಶಿ ಲಗ್ನವಾಗಿದ್ದು ಪಾಪಗ್ರಹ ನೋಡಿದರೆ ಜಾತಕನಿಗೆ ತಲೆಯಲ್ಲಿ ಕೂದಲಿರುವುದಿಲ್ಲ (ಬೋಳುತಲೆ). ಧನುಸ್ಸು ವೃಷಭ ಮೇಷರಾಶಿಗಳಲ್ಲಿ ಒಂದು ಲಗ್ನವಾಗಿ ಪಾಪಗ್ರಹ ನೋಡಿದರೆ ಜಾತಕನ ಹಲ್ಲುಗಳು ವಿಕಾರವಾಗಿರುತ್ತವೆ.

ವಿ–ಮೇಷ ಸಿಂಹ ವೃಶ್ಚಿಕ ಮಕರ ಕುಂಭ ಇವು ಅಶುಭರಾಶಿಗಳು; ಇವುಗಳಲ್ಲೊಂದು ಲಗ್ನವಾಗಿ ಪಾಪಗ್ರಹ ನೋಡಿದರೆ ತಲೆಯಲ್ಲಿ ಕೂದಲಿರುವ

---

[1] ಖನಿಂ (ಕ) [2] ವಾತ್ಸ್ಯಂ (ಕ) ಧೂರ್ತಂ (ಗ) [3] ಪಪ್ರಿಯ (ಕ ಗ) [4] ಕ್ಷೋದೇ (ಕ) [5] ಗ್ರಹಮು (ಕ ಗ) [6] ರಿ (ಕ ಗ) [7] ವೃಗ (ಕ ಗ) [8] ವಿಕೃತದಂತವೆ (ಕ) ಸಕೃತದಂತವೆ (ಗ).

(ದಾಸಯೋಗ)

ಇನಲಗ್ನಾಂಶ[1]ಪತೀಂದು ಜೀವರೆನಿಪಾ ನಾಲ್ಕುಂ ಗ್ರಹಂ ನೀಚ ಶ
ತ್ರುನಿವಾಸಂಗಳೊ[2]ಳಾ[2] ನವಾಂಶಕದೊಳೊಂದಿರ್ದಂದು ತೊಟ್ಟು[3]ಟ್ಟು ಜಾ
ತನರಂ ತ್ರಿಗ್ರಹಮಲ್ಲಿರಲ್ ಬೆಸಲೆಗೊಂಡರ್ [4]ಗಂಡನುಂ ಗಂಡುದೊ
ಟ್ಟನಿಕುಂ ದ್ವಿಗ್ರಹಮೊಂದಿ ನಿಂದೊಡವಱೊಳ್ ವಾಙ್ಮಾತ್ರದಿಂ[5]ದರ್ಥದಿಂ ೨೧

---

ದಿಲ್ಲ. 'ಪಾಪಗ್ರಹದೃಷ್ಟಿ ಇರುವ ವೃಷಭ ಅಥವಾ ಧನುರ್ಲಗ್ನದಲ್ಲಿ ಜನನವಾದರೂ ತಲೆಯಲ್ಲಿ ಕೂದಲಿರುವುದಿಲ್ಲ' ಎಂದು ಬೃಹಜ್ಜಾತಕದಲ್ಲಿ ಅಧಿಕವಾಗಿದೆ.

೨೧. ಸೂರ್ಯ ಲಗ್ನದಲ್ಲಿ ಉದಿತವಾಗಿರುವ ನವಾಂಶಾಧಿಪತಿ ಚಂದ್ರ ಗುರು ಈ ನಾಲ್ಕು ಗ್ರಹಗಳೂ ನೀಚಕ್ಷೇತ್ರ, ಶತ್ರುಕ್ಷೇತ್ರಗಳಲ್ಲಿ ಅದೇ ನವಾಂಶದಲ್ಲಿರುವಾಗ ಹುಟ್ಟಿದವನು ಹುಟ್ಟು ದಾಸನಾಗುತ್ತಾನೆ. ನೀಚಕ್ಷೇತ್ರ ಶತ್ರುಕ್ಷೇತ್ರಗಳಲ್ಲಿ ಅದೇ ನವಾಂಶದಲ್ಲಿ ಮೂರು ಗ್ರಹಗಳಿದ್ದರೂ ಗರ್ಭದಾಸನಾಗುತ್ತಾನೆ. ಎರಡು ಗ್ರಹಗಳಿದ್ದರೆ ಬೆಲೆಗೆ ಕೊಂಡ ದಾಸನೂ [ಒಂದು ಗ್ರಹವಿದ್ದರೆ] ತಾನಾಗಿಯೇ ಜೀವಿಕೆಗಾಗಿ ದಾಸನೂ (ಸೇವಾವೃತ್ತಿಯನ್ನವಲಂಬಿಸಿರುವವನೂ) ಆಗುತ್ತಾನೆ.

ವಿ–ಈ ಯೋಗವು ಬೃಹಜ್ಜಾತಕದಲ್ಲಿ 'ರಾಶ್ಯಂಶ ಪೌಷ್ಣಕರ ಶೀತಕರಾಮರೇಜ್ಯೈರ್ನೀಚಾಧಿಪಾಂಶಕಗತೈರರಿಭಾಗಗೈರ್ವಾ' ಎಂದಿದೆ. ಇದಕ್ಕೆ ಭಟ್ಟೋತ್ಪಲರು 'ಚಂದ್ರನಿರುವ ನವಾಂಶಾಧಿಪತಿ ಸೂರ್ಯ ಚಂದ್ರ ಗುರು ಈ ನಾಲ್ಕು ಗ್ರಹಗಳು ತಮ್ಮತಮ್ಮ ನೀಚರಾಶ್ಯಧಿಪತಿಯ ನವಾಂಶದಲ್ಲಾಗಲೀ ಶತ್ರುನವಾಂಶದಲ್ಲಾಗಲೀ ಇರುವಾಗ ಹುಟ್ಟಿದ ಜಾತಕನು ದಾಸನಾಗುತ್ತಾನೆ' ಎಂದು ವ್ಯಾಖ್ಯಾನಮಾಡಿರುತ್ತಾರೆ. ವಿವರಣ ವ್ಯಾಖ್ಯಾನಕಾರರು 'ರಾಶ್ಯಧಿಪತಿ ಅಂಶಾಧಿಪತಿ ಚಂದ್ರ ಸೂರ್ಯ ಗುರು ಈ ಐದುಗ್ರಹಗಳು ತಮ್ಮತಮ್ಮ ನೀಚರಾಶ್ಯಧಿಪತಿಯ ಅಥವಾ ಶತ್ರುಗ್ರಹದ ನವಾಂಶದಲ್ಲಿದ್ದರೆ ಜಾತಕನು ದಾಸನಾಗುತ್ತಾನೆ' ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಸುಬೋಧಿನೀ ಟೀಕಾಕಾರರು 'ಜನ್ಮಲಗ್ನನವಾಂಶಾಧಿಪತಿ ಸೂರ್ಯ ಚಂದ್ರ ಗುರು ಈ ನಾಲ್ಕು ಗ್ರಹಗಳು ತಮ್ಮತಮ್ಮ ನೀಚರಾಶ್ಯಧಿಪತಿ ಇರುವ ನವಾಂಶದಲ್ಲಿದ್ದರೆ ಜಾತಕನು ದಾಸನಾಗುತ್ತಾನೆ' ಎಂದು ಅಭಿಪ್ರಾಯಪಟ್ಟಿರುತ್ತಾರೆ. ಮತ್ತೆ ಕೆಲವರು 'ಕರ್ಕಟಕ ಸಿಂಹ ಧನುಸ್ಸು ಮೀನ ಈ ನವಾಂಶಗಳೊಂದರಲ್ಲಿ ಚಂದ್ರನಿದ್ದು ಸೂರ್ಯ ಚಂದ್ರ ಗುರುಗಳಲ್ಲಿ ಒಂದು ಗ್ರಹ ತನ್ನ ನೀಚ ಅಥವಾ ಶತ್ರುರಾಶಿಯಲ್ಲಾಗಲೀ ಅಂಶದಲ್ಲಾಗಲೀ ಇದ್ದರೆ ಜಾತಕನು ದಾಸನಾಗುತ್ತಾನೆ' ಎಂದು ಅಭಿಪ್ರಾಯಪಡುತ್ತಾರೆ.

---

[1] ಶು (ಕ ಗ) [2] ಳಕ್ಕೆ (ಕ ಗ) [3] ಪ್ಪು (ಕ ಗ) [4] ಗಡನಾಲಗಂಡದೊ (ಗ)
[5] ದ್ರಾರ್ಥಮುಂ (ಕ ಗ).

(ಕಾಕನೇತ್ರ ವಿಕಟಾಂಗ ಬಹುರೋಗಯೋಗ)

ನವಮಂ ಮೇಣ್ ಪಂಚಮಂ ಶಾಕ್ವರ ಧನು[1]ವೆನಿಪಂ[1]ದಲ್ಲಿ ನಿಂದಂದಿನಂ ನೋ
ಡುವೊಡುಗ್ರರ್ ಕಾಕನೇತ್ರಂ ಮನುಜನೆನಿಕು[2]ಮ[2]ಲ್ಲಿರ್ದೊಡುರ್ವೀಸುತಂ ನೋ
ಡುವೊಡುಗ್ರರ್ ತನ್ಮನುಷ್ಯಂ ವಿಕಟನೆನಿಕುಮಲ್ಲಿರ್ದೊಡರ್ಕಾತ್ಮಜಂ ನೋ
ಡುವೊಡುಗ್ರರ್ ತದ್ವಿಲಗ್ನೋದ್ಭವನಖಿಳರುಜಾಬಾಧೆಯಿಂ ಬರ್ದು[3]ತಿರ್ಕುಂ[3] ೨೨

(ಮೂರ್ಛೆರೋಗ ಕ್ಷಯವ್ಯಾಧಿ ವಾಕ್ಪಾರುಷ್ಯಯೋಗ)

ಹರಿಣಾಂಕಾರ್ಕಜರಿರ್ದೊಡೊಂದೆಗೃಹದೊಳ್ ನೋಟ್ಪಂದು ಧಾತ್ರೀಸುತಂ
ದೊರೆಕೊಳ್ಗುಂ ಮೊಲನಾಗ[4]ರೊಂದ[4]ಗೃಹದೊಳ್ ನಿಂದಂದು [5]ಸೌರೀಂ[5]ದುಗಳ್
ಪರಿವೇಷಂ ದೊರಕೊಂಡೊಡಲ್ಲಿ ಮನುಜಂಗಕ್ಕುಂ ಕ್ಷಯವ್ಯಾಧಿ ಭಾ
ಸ್ಕರಪುತ್ರೋತ್ಪಲಮಿತ್ರರೊಂದಿ ನಿಲೆ ವಾಕ್ಪಾ[6]ರುಷ್ಯಮುಂ[6] ಕೂಡುಗುಂ ೨೩

೨೨. ಲಗ್ನದಿಂದ ಒಂಬತ್ತು ಅಥವಾ ಐದನೆಯ ಸ್ಥಾನವು ವೃಷಭ ಅಥವಾ ಧನೂರಾಶಿಯಾಗಿ ಅಲ್ಲಿ ಸೂರ್ಯನಿದ್ದು ಪಾಪಗ್ರಹಗಳು ನೋಡಿದರೆ ಜಾತಕನಿಗೆ ಕಾಕನೇತ್ರವಿರುತ್ತದೆ; ಅಂಗಾರಕನಿದ್ದು ಪಾಪಗ್ರಹಗಳು ನೋಡಿದರೆ ಆತನು ಕುರೂಪಿಯಾಗುತ್ತಾನೆ; ಶನಿ ಇದ್ದು ಪಾಪಗ್ರಹಗಳು ನೋಡಿದರೆ ಅನೇಕರೋಗಬಾಧೆಯಿಂದ ಸತ್ತು ಸತ್ತು ಬದುಕುತ್ತಾನೆ.

ವಿ–ಬೃಹಜ್ಜಾತಕದಲ್ಲಿ 'ಖಲತಿರಶುಭಕ್ಷೇತ್ರೇ ಲಗ್ನೇ ಹಯೇ ವೃಷಭೇಽಪಿ ವಾ। ನವಮಸುತಗೇ ಪಾಪೈರ್ದೃಷ್ಟೇ ರವಾವದೃಢೇಕ್ಷಣಃ' ಎಂದಿದೆ. ಇಲ್ಲಿ 'ಅಶುಭಕ್ಷೇತ್ರೇ ಲಗ್ನೇ ಹಯೇ ವೃಷಭೇಽಪಿ ವಾ' ಎನ್ನುವುದು ಒಂದು ಯೋಗ. 'ಖಲತಿಃ' ಎನ್ನುವುದು ಇದಕ್ಕೆ ಫಲ. ಉಳಿದಿರುವ ಭಾಗ ಮತ್ತೊಂದು ಯೋಗ. ಖಲತಿಯೋಗಕ್ಕೆ ಸಂಬಂಧಪಟ್ಟ 'ಹಯೇ ವೃಷಭೇಽಪಿ ವಾ' ಎನ್ನುವುದನ್ನು ಮುಂದಿನ ಯೋಗಕ್ಕೆ ಸೇರಿಸಿಕೊಂಡರೆ 'ಹಯೇ ವೃಷಭೇಽಪಿ ವಾ ನವಮಸುತಗೇ' ಎಂದಾಗುತ್ತದೆ. ಇದನ್ನೇ ಶ್ರೀಧರನು 'ನವಮಂ ಮೇಣ್ ಪಂಚಮಂ ಶಾಕ್ವರ ಧನುವೆನಿಪಂದು' ಎಂದು ಕನ್ನಡಿಸಿರುತ್ತಾನೆ. ಆದರೆ ಈ ಅಭಿಪ್ರಾಯಕ್ಕೆ ಇತರ ಗ್ರಂಥಸಮ್ಮತಿ ದೊರೆಯುವುದಿಲ್ಲ.

'ಅದೃಢೇಕ್ಷಣಃ' ಎನ್ನುವುದನ್ನು 'ಕಾಕನೇತ್ರಂ' ಎಂದು ಕನ್ನಡಿಸಿರುವುದರಿಂದ ಜಾತಕನಿಗೆ ಕಾಗೆಯ ದೃಷ್ಟಿಯಂತೆ ಸದಾ ಚಲಿಸುತ್ತಿರುವ (ಒಂದೇ ಕಡೆ ದೃಢವಾಗಿರದ) ದೃಷ್ಟಿ ಇರುತ್ತದೆ ಎಂದು ಅರ್ಥಮಾಡಬೇಕಾಗುತ್ತದೆ.

೨೩. ಜನನಕಾಲದಲ್ಲಿ ಚಂದ್ರ ಶನಿಗಳು ಒಂದೇರಾಶಿಯಲ್ಲಿ (ಸ್ಥಾನದಲ್ಲಿ)ದ್ದು ಅಂಗಾರಕ ಅವರನ್ನು ನೋಡಿದರೆ ಜಾತಕನಿಗೆ ಅಪಸ್ಮಾರರೋಗ ಬರುತ್ತದೆ; ಒಂದೇ ರಾಶಿಯಲ್ಲಿ ಶನಿ ಚಂದ್ರರಿದ್ದು ಆ ಕಾಲದಲ್ಲಿ ಚಂದ್ರನಿಗೆ

[1] ವೆನಿಪ್ಪಂ (ಕ ಗ) [2] ಪು (ಗ) [3] ತಿರ್ಗುಂ (ಕ ಗ) [4] ನಿಂದು (ಕ ಗ) [5] ಸೂರ್ಯೇಂ (ಕ ಗ) [6] ರ್ಪ್ಯಮೊಳ್ (ಕ ಗ).

(ಉತ್ತಮ ಮಧ್ಯಮಾಧಮ ಭೃತ್ಯಯೋಗ)

ವಸುಧಾನಂದನ ಸೂರ್ಯರೊಂದಿ ನಿರೆ ಕರ್ಮಸ್ಥಾನದೊಳ್ ಸೌಮ್ಯರೀ
ಕ್ಷಿಸದಿರ್ದಂದು ವಿಲಗ್ನಸಂಜನಿತಮರ್ತ್ಯಂ ಭೃತ್ಯ*[ರೊಳ್ ಮಧ್ಯಮಂ
ವಸುಧಾಜಂ ಶನಿಸೂರ್ಯರುಂ ದಶಮದೊಳ್ ನಿಂದಂದು ಮೇಣ್ ಸೌಮ್ಯರೀ
ಕ್ಷಿಸದಿರ್ದಂದಧಮಂ ನಭಸ್ಥರವಿಯಿಂದಂ ಭೃತ್ಯ]ವರ್ಗೋತ್ತಮಂ ೨೪

(ಬಂಧನಯೋಗ)

ಧನ ಧರ್ಮಾಂತ್ಯ ತನೂಜಮಂದಿರದೊಳುಗ್ರರ್ ಕೂಡಿ ನಿಂದಂದು ಬಂ
ಧನಮಾ ಮಂದಿರದಂದದಿಂ ಸಮನಿಕುಂ †ಮರ್ತ್ಯಂಗೆ ಪಾಪಾವರೋ
ಕನಮಾದಂದು ಭುಜಂಗ ಪಾಶ ನಿಗಳ ದ್ರೇಕ್ಕಾಣದೊಳ್ ತೀವ್ರ ಬಂ
ಧನಮಾ ತ್ರ್ಯಂಶದ ಮಾಡ್ಕೆಯಿಂ ಸಮನಿಕುಂ †ದೇವೇಂದ್ರನುಂ ಕಾವೊಡಂ ೨೫

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ಅರಿಷ್ಟಯೋಗಪ್ರಕರಣವರ್ಣನಂ ಏಕವಿಂಶಾಧಿಕಾರಂ

---

ಪರಿವೇಷವೂ ಉಂಟಾದರೆ ಜಾತಕನಿಗೆ ಕ್ಷಯರೋಗ ಬರುತ್ತದೆ; ಶನಿ ಚಂದ್ರರಿಬ್ಬರೂ ಒಂದೇ ರಾಶಿಯಲ್ಲಿದ್ದರೆ ಜಾತಕನು ನಿಷ್ಠುರ ಭಾಷಿಯಾಗುತ್ತಾನೆ.

ವಿ—ಚಂದ್ರನ ಸುತ್ತಲೂ ಕಾಣುವ ಮಂಡಲಾಕಾರದ ಪ್ರಭೆಯೇ ಪರಿವೇಷ. ಈ ಪದ್ಯದಲ್ಲಿ ಹೇಳಿರುವ ಮೂರು ಯೋಗಗಳಲ್ಲೂ ಚಂದ್ರ ಶನಿಗಳು ಒಂದೇ ಕ್ಷೇತ್ರದಲ್ಲಿರಬೇಕೆಂದು ತಿಳಿದು ಬರುತ್ತದೆ. ಇದರಿಂದ ಚಂದ್ರ ಶನಿಯೊಡನೆ ಒಂದೇ ಕ್ಷೇತ್ರದಲ್ಲಿದ್ದರೆ ಶುಭಫಲಗಳನ್ನು ಕೊಡುವುದಿಲ್ಲ ಎಂದು ಹೇಳಬಹುದು.

೨೪. ಜನನ ಕಾಲದಲ್ಲಿ ಅಂಗಾರಕ ಸೂರ್ಯರು ಒಟ್ಟಿಗೆ ಹತ್ತನೆಯ ಸ್ಥಾನದಲ್ಲಿದ್ದು ಶುಭಗ್ರಹ ನೋಡದಿದ್ದರೆ ಆ ಲಗ್ನದಲ್ಲಿ ಹುಟ್ಟಿದ ಜಾತಕನು ಮಧ್ಯಮ ವರ್ಗದ ಸೇವಕನಾಗುತ್ತಾನೆ; ಅಂಗಾರಕ ಶನಿ ಸೂರ್ಯರು ಒಟ್ಟಿಗೆ ಹತ್ತನೆಯ ಸ್ಥಾನದಲ್ಲಿದ್ದು ಶುಭಗ್ರಹ ನೋಡದಿದ್ದರೆ ಕೀಳುಮಟ್ಟದ ಸೇವಕನಾಗುತ್ತಾನೆ; ಹತ್ತನೆಯ ಸ್ಥಾನದಲ್ಲಿ ಸೂರ್ಯನಿದ್ದು ಶುಭಗ್ರಹ ನೋಡದಿದ್ದರೆ ಉತ್ತಮ ದರ್ಜೆಯ ಸೇವಕನಾಗುತ್ತಾನೆ.

ವಿ—ಹತ್ತನೆಯ ಸ್ಥಾನದಲ್ಲಿ ಪಾಪಗ್ರಹವಿದ್ದು ಶುಭಗ್ರಹ ನೋಡದಿದ್ದರೆ ಜಾತಕನು ಸೇವಕನಾಗುತ್ತಾನೆ. ಒಂದು ಪಾಪಗ್ರಹವಿದ್ದರೆ ಉತ್ತಮ ಸೇವಕನೂ ಎರಡು ಪಾಪಗ್ರಹಗಳಿದ್ದರೆ ಮಧ್ಯಮವೃತ್ತಿಯ ಸೇವಕನೂ ಮೂರು ಪಾಪ ಗ್ರಹಗಳಿದ್ದರೆ ಅಧಮವೃತ್ತಿಯ ಸೇವಕನೂ ಆಗುತ್ತಾನೆ.

---

* ಈ ಭಾಗ (ಕ ಗ) ಪ್ರತಿಗಳಲ್ಲಿಲ್ಲ † ಈ ಭಾಗ (ಗ) ಪ್ರತಿಯಲ್ಲಿಲ್ಲ.

೨೫. ಜನನಕಾಲದಲ್ಲಿ ಎರಡು ಒಂಬತ್ತು ಹನ್ನೆರಡು ಐದು ಈ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದರೆ ಜಾತಕನಿಗೆ ಲಗ್ನರಾಶಿಗನುಗುಣವಾದ ಬಂಧನವಾಗುತ್ತದೆ; ಪಾಪಗ್ರಹಗಳು ಲಗ್ನವನ್ನು ನೋಡುವುದಲ್ಲದೆ ಲಗ್ನದಲ್ಲಿ ಭುಜಗ ಪಾಶ ನಿಗಳ ದ್ರೇಕ್ಕಾಣಗಳು ಉದಯಿಸಿದ್ದರೆ ಇಂದ್ರನ ರಕ್ಷಣೆಯಿದ್ದರೂ ಉದಿತ ದ್ರೇಕ್ಕಾಣಸ್ವರೂಪಕ್ಕನುಗುಣವಾದ ಬಂಧನವು ಜಾತಕನಿಗುಂಟಾಗುತ್ತದೆ.

ವಿ—ಈ ಯೋಗದಲ್ಲಿ ಮೇಷ ವೃಷಭ ಧನುಸ್ಸು ಈ ಮೂರು ರಾಶಿಗಳು ಲಗ್ನವಾದರೆ ಜಾತಕನು ಹಗ್ಗದಿಂದ ಬಂಧಿತನಾಗುತ್ತಾನೆ; ಮಿಥುನ ಕನ್ಯಾ ತುಲಾ ಕುಂಭ ಈ ನಾಲ್ಕು ರಾಶಿಗಳು ಲಗ್ನವಾದರೆ ಸಂಕೋಲೆಯಿಂದ ಬಂಧಿತನಾಗುತ್ತಾನೆ; ಕರ್ಕಾಟಕ ಸಿಂಹ ಮಕರ ಮೀನ ಈ ನಾಲ್ಕು ರಾಶಿಗಳು ಲಗ್ನವಾದರೆ ದುರ್ಗಮಸ್ಥಾನದಲ್ಲಿ ಬಂಧನದಲ್ಲಿರುತ್ತಾನೆ. ವೃಶ್ಚಿಕ ಲಗ್ನವಾದರೆ ಗುಹೆಯಲ್ಲಿ ಬಂಧನದಲ್ಲಿರುತ್ತಾನೆ.

ದ್ರೇಕ್ಕಾಣಾಧ್ಯಾಯದಲ್ಲಿ ಪಾಶದ್ರೇಕ್ಕಾಣವನ್ನು ಪ್ರತ್ಯೇಕವಾಗಿ ಹೇಳಿರುವುದಿಲ್ಲ. ಆದುದರಿಂದ ಭುಜಂಗಪಾಶದ್ರೇಕ್ಕಾಣ ಮತ್ತು ನಿಗಳದ್ರೇಕ್ಕಾಣ ಎಂದು ಪದವಿಭಾಗ ಮಾಡಿಕೊಳ್ಳಬೇಕು. ಕರ್ಕಾಟಕ ರಾಶಿಯ ಎರಡು ಮೂರನೆಯ ದ್ರೇಕ್ಕಾಣಗಳು ವೃಶ್ಚಿಕರಾಶಿಯ ಒಂದು ಎರಡನೆಯ ದ್ರೇಕ್ಕಾಣಗಳು ಮೀನ ರಾಶಿಯ ಮೂರನೆಯ ದ್ರೇಕ್ಕಾಣ ಇವು ಭುಜಂಗ ದ್ರೇಕ್ಕಾಣಗಳು. ಮಕರ ರಾಶಿಯ ಮೂರನೆಯ ದ್ರೇಕ್ಕಾಣ ನಿಗಳದ್ರೇಕ್ಕಾಣ.

ದುರ್ಬಲ ಪಾಪಗ್ರಹ ಹನ್ನೆರಡನೆಯ (ವ್ಯಯ) ಸ್ಥಾನದಲ್ಲಿದ್ದರೆ ವೇಶ್ಯಾಸ್ತ್ರೀ ಅಥವಾ ಋಣಬಾಧೆಯಿಂದ ವಾಕ್(ಎರಡನೆಯ) ಸ್ಥಾನದಲ್ಲಿದ್ದರೆ ರಾಜ್ಯಪಾಲರ ದೂಷಣೆಯಿಂದ ಐದನೆಯ(ಪುತ್ರ)ಸ್ಥಾನದಲ್ಲಿದ್ದರೆ ಮಗನಿಂದ ನವಮ (ಧರ್ಮ)ಸ್ಥಾನದಲ್ಲಿದ್ದರೆ ಗುರುಜನರಿಂದ ಬಂಧನವುಂಟಾಗುತ್ತದೆ. ಇದೇ ಕ್ರಮದಲ್ಲಿ ಉಳಿದ ಸ್ಥಾನಗಳಲ್ಲಿ ಪಾಪಗ್ರಹಗಳಿರುವಾಗ ಬಂಧನಕಾರಣವನ್ನು ಊಹಿಸಬಹುದು.

# ದ್ವಾವಿಂಶಾಧಿಕಾರಂ

## ಸ್ತ್ರೀಜಾತಕ ಫಲ ಪ್ರಕರಣಂ

(ಸ್ತ್ರೀಜಾತಕ ಫಲಕಥನ ವ್ಯವಸ್ಥೆ)

ಪುರುಷ ಸ್ತ್ರೀ ಜಾತಕಫಲ
ಮೆರಡುಂ ಸಮ[1]ಮು[1]ದಯವ್ಯಗ[2]ಧ[2]ರರ್ ಬಲಯುತರಾ
ಗಿರೆ ವಪುರಾಕೃತಿಗಳನ
ಸ್ತರಾಶಿಬಲದಿಂದಮಱಿವುದಾಕೆಯ ಸೊಬಗಂ ೧

೧. ಪುರುಷ ಸ್ತ್ರೀಜಾತಕಗಳೆರಡಕ್ಕೂ ಫಲ ಸಮಾನ. ಲಗ್ನ ಚಂದ್ರರ ಬಲದಿಂದ ಜಾತಕಳ ಶರೀರ ಮತ್ತು ಆಕಾರವನ್ನೂ ಏಳನೆಯ ರಾಶಿಯ ಬಲದಿಂದ ಆಕೆಯ ಸೊಬಗನ್ನೂ ತಿಳಿದುಕೊಳ್ಳಬೇಕು.

ವಿ–ಶಾಸ್ತ್ರಕಾರರು ಪುರುಷ ಜಾತಕವನ್ನುದ್ದೇಶಿಸಿಯೇ ತಮ್ಮ ಗ್ರಂಥಗಳಲ್ಲಿ ಫಲಗಳನ್ನು ಹೇಳಿರುತ್ತಾರೆ. ಸ್ತ್ರೀಜಾತಕ ಫಲವನ್ನು ಹೇಳುವಾಗ ಈ ಫಲಗಳಲ್ಲಿ ಸ್ತ್ರೀಯರಿಗೆ ಸಂಭವಿಸಲು ಯೋಗ್ಯವಾದ ಫಲಗಳನ್ನು ಮಾತ್ರ ಗ್ರಹಿಸಬೇಕೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಮತ್ತೆ ಕೆಲವರು ಪುರುಷ ಜಾತಕಕ್ಕೆ ಹೇಳಿರುವ ಎಲ್ಲ ಫಲಗಳೂ ಸ್ತ್ರೀ ಜಾತಕಕ್ಕೂ ಉಂಟು; ಅದರಲ್ಲಿ ಕೇವಲ ಪುರುಷ ವ್ಯಕ್ತಿಯಿಂದಲೇ ಅನುಭವಿಸತಕ್ಕ ಫಲಗಳಿದ್ದರೆ ಆ ಫಲಗಳು ಜಾತಕಳ ಪತಿಗೆ ಸಂಭವಿಸುತ್ತವೆಂದು ಅಭಿಪ್ರಾಯಪಡುತ್ತಾರೆ. ವರಾಹಮಿಹಿರಾಚಾರ್ಯರು ಬೃಹಜ್ಜಾತಕದಲ್ಲಿ 'ಯದ್ಯತ್ಫಲಂ ನರಭವೇಽಕ್ಷಮಮಂಗನಾನಾಂ ತತ್ತದ್ವದೇತ್ ಪತಿಷು ವಾ ಸಕಲಂ ವಿಧೇಯ,೧' ಎಂದು ಮತಾಂತರಗಳನ್ನು ಸಂಗ್ರಹಿಸಿ ಹೇಳಿ ಲಘುಜಾತಕದಲ್ಲಿ 'ಸ್ತ್ರೀಪುಂಸೋರ್ಜನ್ಮಫಲಂ ತುಲ್ಯಂ' ಎಂದು ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಿರುತ್ತಾರೆ. ಇದನ್ನೇ ಶ್ರೀಧರನು 'ಪುರುಷ ಸ್ತ್ರೀಜಾತಕ ಫಲಮೆರಡುಂ ಸಮಂ' ಎಂದು ಹೇಳಿರುತ್ತಾನೆ. ಪುರುಷ ಜಾತಕಕ್ಕೆ ಹೇಳಿರುವ ಫಲಗಳು ಮಾತ್ರವಲ್ಲದೆ ಅದಕ್ಕಿಂತಲೂ ವಿಶೇಷವಾಗಿ ಸ್ತ್ರೀ ಜಾತಕಗಳಲ್ಲಿ ಸಂಭವಿಸುವ ಕೆಲವು ಫಲಗಳನ್ನು ಈ ಅಧಿಕಾರದಲ್ಲಿ ಸಂಗ್ರಹಿಸಿ ಹೇಳಲಾಗಿದೆ. ಜನ್ಮರಾಶಿ (ಚಂದ್ರನಿರುವ ರಾಶಿ) ಲಗ್ನ ಮತ್ತು ಏಳನೆಯ ರಾಶಿಗಳಲ್ಲಿ ಶುಭ ಗ್ರಹಗಳಿದ್ದರೆ ಜಾತಕಳ ಶರೀರ ಪುಷ್ಟವಾಗಿರುವುದಲ್ಲದೆ ಆಕಾರವೂ ನೋಡಲು ಸುಂದರವಾಗಿರುತ್ತದೆ. ಪಾಪಗ್ರಹಗಳಿದ್ದರೆ ಇದಕ್ಕೆ ವಿಪರೀತವಾಗಿರುತ್ತದೆ ಎಂದು ಹೇಳಬಹುದು. ಏಳನೆಯ ರಾಶಿಯ ಸ್ವರೂಪದಿಂದ ಪತಿಯ ರೂಪ ಲಕ್ಷಣಾದಿಗಳನ್ನೂ ತಿಳಿಯಬಹುದು.

[1] ನು (ಕ ಗ) [2] ವ (ಗ).

(ಹೆಂಗಸಿನ ಆಕಾರ ಮತ್ತು ಸ್ವಭಾವ)

ಉದಯಮುಮಿಂದುವಿರ್ದ ಗೃಹಮುಂ ಸಮಮಂದಿರಮಾಗೆ ಸಾಧು ಪು
ಟ್ಟಿದ ವಧು ಸದ್ಗ್ರಹಂಗಳವನೀಕ್ಷಿಸೆ ಶೀಲವಿಭೂಷಣಾಢ್ಯೆ ಮೇ
ಣುದಯಮುಮಿಂದುವಿರ್ದಗೃಹಮುಂ ವಿಷಮಂ ಬರೆ ಗಂಡಗಾಡಿ ದುಃ
ಖದ ಕಣಿಯಕ್ಕುಮುಗ್ರರಿರೆ ಮೇಣವಲೋಕಿಸೆ ಕಷ್ಟೆ ನಿಶ್ಚಯಂ ೧

(ಮೇಷ ವೃಶ್ಚಿಕ ಲಗ್ನಗಳಲ್ಲಿ ಅಂಗಾರಕಾದಿ ತ್ರಿಂಶಾಂಶಗಳಲ್ಲಿ ಹುಟ್ಟಿದ ಜಾತಕಳ ಫಲ)

ಧರಣೀನಂದನಗೇಹದೊಳ್ ಧರಣಿಜತ್ರಿಂಶಾಂಶಕಂ ಲಗ್ನವಾ
ಗಿರೆ ದೋಷಾಕರನಲ್ಲಿ ಕೂಡೆ ಕೊಡಗೂಸಾಗಿರ್ದು ನಾಚ್ಚೋಡೆ ಭಾ
ಸ್ಕರಪುತ್ರಾಂಶದೊಳಾಕೆ ತೊಟ್ಟು ಸುರನಾಥೇಜ್ಯಾಂಶದೊಳ್ ಸಾಧ್ವಿ ಪಂ
ಕರುಹಾರಾತಿಸುತಾಂಶದೊಳ್ ಕಪಟೆ ದುಶ್ಚಾರಿತ್ರೆ ಶುಕ್ರಾಂಶದೊಳ್ ೨

---

೧. ಲಗ್ನ ಮತ್ತು ಚಂದ್ರನಿರುವ ರಾಶಿ ಯುಗ್ಮ(ಸ್ತ್ರೀ)ರಾಶಿಯಾದರೆ ಜಾತಕಳು ಸಾಧು (ಹೆಂಗಸಿಗೆ ಯೋಗ್ಯವಾದ) ಸ್ವಭಾವವುಳ್ಳವಳಾಗುತ್ತಾಳೆ; ಶುಭಗ್ರಹಗಳು ಆ ರಾಶಿಗಳನ್ನು ನೋಡಿದರೆ ಶೀಲವತಿಯೂ ಆಭರಣಯುಕ್ತಳೂ ಆಗುತ್ತಾಳೆ. ಲಗ್ನ ಮತ್ತು ಚಂದ್ರನಿರುವ ರಾಶಿ ವಿಷಮ(ಪುರುಷ)ರಾಶಿಯಾದರೆ ಜಾತಕಳು ಪುರುಷಸ್ವಭಾವದವಳೂ ದುಃಖದ ಆಗರೆಯೂ (ದುಃಖಿತೆಯೂ) ಆಗುತ್ತಾಳೆ. ಪಾಪಗ್ರಹಗಳು ಈ ರಾಶಿಗಳಲ್ಲಿದ್ದರೆ ಅಥವಾ ನೋಡಿದರೆ ಕಷ್ಟಜೀವಿಯಾಗುತ್ತಾಳೆ.

ವಿ—ಲಗ್ನ ಜನ್ಮರಾಶಿಗಳಲ್ಲಿ ಒಂದು ಪುರುಷ ಮತ್ತೊಂದು ಸ್ತ್ರೀರಾಶಿಯಾದರೆ ಜಾತಕಳು ಮಧ್ಯಮಸ್ವರೂಪಾಕಾರವುಳ್ಳವಳಾಗುತ್ತಾಳೆ. ಇದೇ ಕ್ರಮದಲ್ಲಿ ಒಂದು ರಾಶಿಯಲ್ಲಿ ಶುಭಗ್ರಹವೂ ಮತ್ತೊಂದು ರಾಶಿಯಲ್ಲಿ ಪಾಪಗ್ರಹವೂ ಇದ್ದರೆ ಜಾತಕಳಿಗೆ ಶುಭಾಶುಭ ಮಿಶ್ರ ಸ್ವಭಾವವಿರುತ್ತದೆ. ಇದರಂತೆಯೇ ಶುಭಾಶುಭ ಗ್ರಹದೃಷ್ಟಿ ಇದ್ದರೆ ಮಿಶ್ರಫಲವುಂಟಾಗುತ್ತದೆ.

೨. ಅಂಗಾರಕನ(ಮೇಷ ವೃಶ್ಚಿಕ) ಲಗ್ನದಲ್ಲಿ ಅಂಗಾರಕತ್ರಿಂಶಾಂಶ ಉದಿತವಾಗಿದ್ದು ಚಂದ್ರನೂ ಅಲ್ಲಿದ್ದರೆ ಜಾತಕಳು ಕನ್ಯಾವಸ್ಥೆಯಲ್ಲೇ ವ್ಯಭಿಚಾರಿಣಿಯಾಗುತ್ತಾಳೆ; ಶನಿತ್ರಿಂಶಾಂಶದಲ್ಲಿದ್ದರೆ ದಾಸಿಯಾಗುತ್ತಾಳೆ; ಗುರು ತ್ರಿಂಶಾಂಶದಲ್ಲಿದ್ದರೆ ಪತಿವ್ರತೆಯಾಗುತ್ತಾಳೆ; ಬುಧ ತ್ರಿಂಶಾಂಶದಲ್ಲಿದ್ದರೆ ಮೋಸಗಾತಿಯಾಗುತ್ತಾಳೆ; ಶುಕ್ರ ತ್ರಿಂಶಾಂಶದಲ್ಲಿದ್ದರೆ ಕೆಟ್ಟ ನಡತೆಯುಳ್ಳವಳಾಗುತ್ತಾಳೆ.

ವಿ—ಅಂಗಾರಕನ ಲಗ್ನದಲ್ಲಿ ಅಂಗಾರಕಾದಿ ತ್ರಿಂಶಾಂಶಗಳು ಉದಿತವಾಗಿದ್ದರೆ ಅಥವಾ ಚಂದ್ರನು ಮೇಷ ವೃಶ್ಚಿಕ ರಾಶಿಗಳಲ್ಲಿ ಅಂಗಾರಕಾದಿ ತ್ರಿಂಶಾಂಶಗಳಲ್ಲಿದ್ದರೆ ಜಾತಕಳಿಗೆ ಈ ತ್ರಿಂಶಾಂಶಫಲಗಳು ಉಂಟಾಗುತ್ತವೆ. ಲಗ್ನ ಬಲಿಷ್ಠವಾಗಿದ್ದರೆ ಲಗ್ನದಲ್ಲಿ ಉದಿತವಾಗಿರುವ ತ್ರಿಂಶಾಂಶದಿಂದ ಚಂದ್ರ ಬಲಿಷ್ಠನಾಗಿದ್ದರೆ ಚಂದ್ರನಿರುವ ತ್ರಿಂಶಾಂಶದಿಂದ ಫಲವನ್ನು ಹೇಳಬೇಕು ಎಂದು ಬೃಹಜ್ಜಾತಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುತ್ತಾರೆ. ಶ್ರೀಧರನು ಹೇಳಿರುವಂತೆ ಲಗ್ನದಲ್ಲಿ ಉದಿತವಾಗಿರುವ ತ್ರಿಂಶಾಂಶದಲ್ಲೇ ಚಂದ್ರನೂ ಇರಬೇಕೆನ್ನುವ ವಿಚಾರಕ್ಕೆ ಇತರ ಜ್ಯೋತಿಷಾಚಾರ್ಯರ ಸಮ್ಮತಿ ಕಂಡುಬರುವುದಿಲ್ಲ.

(ವೃಷಭ ತುಲಾಲಗ್ನ ತ್ರಿಂಶಾಂಶಫಲ)

ದಿತಿಜೇಜ್ಯಾಲಯು ಲಗ್ನದೊಳ್ ಮಹಿಸುತತ್ರಿಂಶಾಂಶಕಂ ನಿಂದೊಡ
ಲ್ಲಿ ತುಷಾರದ್ಯುತಿ ಕೂಡಿದಂ[1]ದ[1]ಸತಿ ದೈತ್ಯೇಜ್ಯಾಂಶದೊಳ್ ಖ್ಯಾತೆ ಚಂ
ದ್ರತನೂಜಾಂಶಕದೊಳ್ ಕಲಾಕುಶಲೆ ಶಕ್ರೇಜ್ಯಾಂಶದೊಳ್ ಸದ್ಗುಣಾ
ನ್ವಿತೆಯಕ್ಕುಂ ಮಱುವಾಳ್ದ ತಾನೆನಿಸುಗುಂ ಘರ್ಮಾಂಶುಪುತ್ರಾಂಶದೊಳ್ ೪

(ಮಿಥುನ ಕನ್ಯಾಲಗ್ನ ತ್ರಿಂಶಾಂಶಫಲ)

ಬರೆ ಲಗ್ನಂ ಶಶಿಸೂನುಗೇಹದ ಕುಜತ್ರಿಂಶಾಂಶದೊಳ್ ರೋಹಿಣೀ
[2]ವರ[2]ನಲ್ಲಿರ್ದೊಡೆ ಗಾ[3]ಹುಗಾತಿಯ[3]ಱಿವಳ್ ಸೌಮ್ಯಾಂಶದೊಳ್ [4]ಷೇಡಿ[4] ಭಾ
ಸ್ಕರಪುತ್ರಾಂಶಕದೊಳ್ ಮಹಾಸತಿ ಸುರೇಂದ್ರೇಜ್ಯಾಂಶದೊಳ್ [5]ದುಶ್ಚರಿ
ತ್ರೆ ರತಾಸ[5]ಕ್ತೆ ಸಿತಾಂಶದೊಳ್ ವನಿತೆಯಕ್ಕುಂ ಪದ್ಯವಿದ್ಯಾಧರಾ ೫

(ಕರ್ಕಟಕಲಗ್ನ ತ್ರಿಂಶಾಂಶಫಲ)

ಉಡುರಾಜಾಲಯದಲ್ಲಿ ಭೂಮಿತನಯತ್ರಿಂಶಾಂಶಕಂ ಲಗ್ನಮಾ
ದೊಡೆ ತಾರಾಧಿಪನಲ್ಲಿ[6]ರಲ್ ಕು[6]ಲಟೆ ಲೋಕಸ್ತುತ್ಯೆ ಜೀವಾಂಶಮಾ
ದೊಡೆ ಮಂದಾಂಶಕಮಾದೊಡಾತ್ಮಪತಿಯಂ ಕೊಲ್ಗುಂ ಸಿತಾಂಶಂ [7]ದ[7]ಲಾ
ದೊಡೆ ನಾಡ್ಸೂಳೆ ಬುಧಾಂಶಮಾದೊಡೆ ಕಲಾಸಂಪನ್ನೆಯಕ್ಕುಂ [8]ವ[8]ಲಂ ೬

೪. ಶುಕ್ರನ (ವೃಷಭ ತುಲಾ) ಲಗ್ನದಲ್ಲಿ ಅಂಗಾರಕತ್ರಿಂಶಾಂಶ ಉದಿತವಾಗಿದ್ದು ಚಂದ್ರನೂ ಅಲ್ಲಿದ್ದರೆ ಜಾತಕಳು ದುಷ್ಟೆಯೂ ಶುಕ್ರತ್ರಿಂಶಾಂಶದಲ್ಲಿದ್ದರೆ ಒಳ್ಳೆಯ ಗುಣಗಳಿಂದ ಪ್ರಸಿದ್ಧಳೂ ಬುಧತ್ರಿಂಶಾಂಶದಲ್ಲಿದ್ದರೆ ಕಲೆಗಳಲ್ಲಿ ಕುಶಲೆಯೂ ಗುರುತ್ರಿಂಶಾಂಶದಲ್ಲಿದ್ದರೆ ಗುಣಾಢ್ಯೆಯೂ ಶನಿತ್ರಿಂಶಾಂಶದಲ್ಲಿದ್ದರೆ ವಿಧವೆಯಾಗಿ ಮತ್ತೆ ಮದುವೆ ಮಾಡಿಕೊಳ್ಳುವವಳೂ ಆಗುತ್ತಾಳೆ.

೫. ಬುಧನ (ಮಿಥುನ ಕನ್ಯಾ) ಲಗ್ನದಲ್ಲಿ ಅಂಗಾರಕತ್ರಿಂಶಾಂಶ ಉದಿತವಾಗಿದ್ದು ಚಂದ್ರನೂ ಅಲ್ಲಿದ್ದರೆ ಮೋಸಗಾತಿಯೂ ಬುಧತ್ರಿಂಶಾಂಶದಲ್ಲಿದ್ದರೆ ತಿಳಿವಳಿಕೆಯುಳ್ಳವಳೂ ಶನಿತ್ರಿಂಶಾಂಶದಲ್ಲಿದ್ದರೆ ನಪುಂಸಕಸಮಳೂ ಗುರುತ್ರಿಂಶಾಂಶದಲ್ಲಿದ್ದರೆ ಪತಿವ್ರತೆಯೂ ಶುಕ್ರತ್ರಿಂಶಾಂಶದಲ್ಲಿದ್ದರೆ ಕೆಟ್ಟನಡತೆಯುಳ್ಳವಳೂ ಕಾಮಾಭಿಲಾಷಿಣಿಯೂ ಆಗುತ್ತಾಳೆ.

ವಿ—ಮಿಥುನ ಅಥವಾ ಕನ್ಯಾಲಗ್ನದಲ್ಲಿ ಅಂಗಾರಕಾದಿ ತ್ರಿಂಶಾಂಶಗಳು ಉದಿತವಾಗಿದ್ದು ಚಂದ್ರನೂ ಅಲ್ಲಿರುವಾಗ ಉಂಟಾಗುವ ಫಲಗಳನ್ನು ಈ ಪದ್ಯದಲ್ಲಿ ವಿವರಿಸಿದೆ.

೬. ಚಂದ್ರನ (ಕರ್ಕಟಕ) ಲಗ್ನದಲ್ಲಿ ಅಂಗಾರಕತ್ರಿಂಶಾಂಶ ಉದಿತವಾಗಿದ್ದು ಚಂದ್ರನೂ ಅಲ್ಲಿದ್ದರೆ ಜಾತಕಳು ಸ್ವೈರಿಣಿಯೂ ಗುರುತ್ರಿಂಶಾಂಶದಲ್ಲಿದ್ದರೆ ಲೋಕಸ್ತುತ್ಯಳೂ ಶನಿತ್ರಿಂಶಾಂಶದಲ್ಲಿದ್ದರೆ ಪತಿಘಾತಿನಿಯೂ ಶುಕ್ರ

[1] ದು (ಕ ಗ) [2] ರ್ದವ (ಕ) ಧವ (ಗ) [3] ಳುತಕ್ಕುದ (ಕ ಗ) [4] ಪೀಡೆ (ಗ) [5] ಸುಷ್ಟರಿತ್ರೆ ಸುರತ (ಕ) ದುಶ್ಚರಿತ್ರೆ ಸುರತಾ (ಗ) [6] ತತ್ಕು (ಕ ಗ) [7] ವೊ (ಕ ಗ) [8] ಬ (ಕ ಗ).

(ಸಿಂಹಲಗ್ನ ತ್ರಿಂಶಾಂಶಫಲ)

ದಿನನಾಥಾಲಯಲಗ್ನದೊಳ್ ಕುಜ ಬುಧ ತ್ರಿಂಶಾಂಶಮಾದಂದು ಕೋ
ಕನದಪ್ರಿಯಧಿಪನಲ್ಲಿ ಕೂಡೆ ಪುರುಷಾಡಾಢ್ಯೆ ಜೀವಾಂಶದೊಳ್
ಜನನಾಥಾಂಗನೆ ಭಾರ್ಗವಾಂಶದೊಳಗಮ್ಯಾಸಕ್ತೆ ವಿತ್ತಾನುವ
ರ್ತಿನಿ ಮಾರ್ತಂಡಸುತಾಂಶದೊಳ್ ಪಸೆಯೊಳಿರ್ದಂತಾಕೆ ಕೆ[1]ಟ್ಟೋ[1]ಡುಗುಂ ೭

(ಧನುರ್ಮೀನಲಗ್ನ ತ್ರಿಂಶಾಂಶಫಲ)

ಅ[2]ನ[2]ರೇಂದ್ರೇಜ್ಯನಿವಾಸದಲ್ಲಿ ಕನ[3]ಕ[3]ತ್ರಿಂಶಾಂಶಕಂ ಲಗ್ನಮಾ
ಗೆ ನಿಶಾವಲ್ಲಭನಲ್ಲಿ ಕೂಡಿರೆ ಗುಣೌಘಾನ್ವಿತೆ ಜೀವಾಂಶದೊಳ್
ಜನಸಂಸ್ತುತ್ಯೆ ಸಿತಾಂಶದೊಳ್ ಸತಿ ಬುಧತ್ರಿಂಶಾಂಶದೊಳ್ ಜ್ಞಾನಭಾ
ಗಿನಿ ಮಂದಾಂಶದೊಳಾಕೆಯಲ್ಪರತಿಯಕ್ಕುಂ ಪದ್ಮವಿದ್ಯಾಧರಾ ೮

---

ತ್ರಿಂಶಾಂಶದಲ್ಲಿದ್ದರೆ ವ್ಯಭಿಚಾರಿಣಿಯೂ ಬುಧತ್ರಿಂಶಾಂಶದಲ್ಲಿದ್ದರೆ ಕಲಾಸಂಪನ್ನೆಯೂ ಆಗುತ್ತಾಳೆ.

೭. ಸೂರ್ಯನ (ಸಿಂಹ) ಲಗ್ನದಲ್ಲಿ ಅಂಗಾರಕ ಅಥವಾ ಬುಧತ್ರಿಂಶಾಂಶ ಉದಿತವಾಗಿದ್ದು ಚಂದ್ರನೂ ಅಲ್ಲಿದ್ದರೆ ಜಾತಕಳು ಪುರುಷಸ್ವಭಾವವುಳ್ಳವಳೂ ಗುರುತ್ರಿಂಶಾಂಶದಲ್ಲಿದ್ದರೆ ರಾಣಿಯೂ ಶುಕ್ರತ್ರಿಂಶಾಂಶದಲ್ಲಿದ್ದರೆ ಅಗಮ್ಯಪುರುಷರಲ್ಲಿ ಆಸಕ್ತಿಯುಳ್ಳವಳೂ ವಿತ್ತಾನುಯಾಯಿಯೂ (ವೇಶ್ಯೆಯೂ) ಶನಿತ್ರಿಂಶಾಂಶದಲ್ಲಿದ್ದರೆ ಹಸೆಯಲ್ಲಿರುವಾಗಲೇ (ಮದುವೆ ಕಾಲದಲ್ಲಿಯೇ) ಕೆಟ್ಟು ಓಡಿಹೋಗುವವಳೂ ಆಗುತ್ತಾಳೆ.

೮. ಗುರುವಿನ (ಧನುಸ್ಸು ಮೀನ) ಲಗ್ನದಲ್ಲಿ ಅಂಗಾರಕತ್ರಿಂಶಾಂಶ ಉದಿತವಾಗಿದ್ದು ಚಂದ್ರನೂ ಅಲ್ಲಿದ್ದರೆ ಜಾತಕಳು ಬಹುಗುಣವತಿಯೂ ಗುರುತ್ರಿಂಶಾಂಶದಲ್ಲಿದ್ದರೆ ಜನರಿಂದ ಹೊಗಳಿಸಿಕೊಳ್ಳುವವಳೂ ಶುಕ್ರತ್ರಿಂಶಾಂಶದಲ್ಲಿದ್ದರೆ ಸಾಧ್ವಿಯೂ ಬುಧತ್ರಿಂಶಾಂಶದಲ್ಲಿದ್ದರೆ ವಿಜ್ಞಾನಿಯೂ ಶನಿತ್ರಿಂಶಾಂಶದಲ್ಲಿದ್ದರೆ ಹೆಚ್ಚು ಕಾಮವಿಲ್ಲದವಳೂ ಆಗುತ್ತಾಳೆ.

ವಿ–ಬೃಹಜ್ಜಾತಕದಲ್ಲಿ 'ಜೈವೇ ನೈಕಗುಣಾಲ್ಪರತ್ಯತಿಗುಣಾ ವಿಜ್ಞಾನಯುಕ್ತಾ ಸತೀ' ಎಂದು ಗುರುಕ್ಷೇತ್ರ ತ್ರಿಂಶಾಂಶಫಲ ಉಕ್ತವಾಗಿದೆ. ಭಟ್ಟೋತ್ಪಲರು ಶುಕ್ರತ್ರಿಂಶಾಂಶಫಲವನ್ನು 'ಶುಕ್ರತ್ರಿಂಶಾಂಶಕೇ ಜಾತಾ ಅಸತೀ ಅಸಾಧ್ವೀ ಭವತಿ' ಎಂದು ವ್ಯಾಖ್ಯಾನ ಮಾಡಿದ್ದಾರೆ. ಉಳಿದ ವ್ಯಾಖ್ಯಾನಕಾರರು 'ಸತೀ-ಸಾಧುವೃತ್ತಾ' ಎಂದೂ 'ಸತೀ-ಚಾರಿತ್ರಯುಕ್ತಾ' ಎಂದೂ ವ್ಯಾಖ್ಯಾನ ಮಾಡಿರುತ್ತಾರೆ. ಭಟ್ಟೋತ್ಪಲರ ವ್ಯಾಖ್ಯಾನವು ಶ್ರೀಧರನಿಗೆ ಸಮ್ಮತವಾಗಿರುವುದಿಲ್ಲ.

ಬೃಹಸ್ಪತಿಗೆ ಪರ್ಯಾಯಪದವಾಗಿ 'ಅಸುರೇಂದ್ರೇಜ್ಯ' ಎಂದು (ಕ ಗ) ಪ್ರತಿಗಳಲ್ಲಿದೆ. 'ನ'ಕಾರ ಪ್ರಾಸವಾಗಿರುವುದರಿಂದ 'ಸ'ಕಾರಕ್ಕೆ ಪ್ರತಿ

---

[1] ಟ್ಟಾ (ಕ ಗ) [2] ಸು (ಕ ಗ) [3] ಕಂ (ಕ).

(ಮಕರ ಕುಂಭಲಗ್ನ ತ್ರಿಂಶಾಂಶಫಲ)
ಅಸಿತಕ್ಷೇತ್ರ ವಿಲಗ್ನದೊಳ್ ಬರೆ ಕುಜತ್ರಿಂಶಾಂಶಮಂತಲ್ಲಿ ಕೂ
ಡೆ ಸುಧಾಸಂಭವನಾ ವಿಲಗ್ನಭ[1]ವೆ ತೋ[1]ಟ್ತ್ರ ಕ್ಕುಂ ನಿಜಾಧೀಶಭ
ಕ್ತೆ ಸುರೇಜ್ಯಾಂಶಕದೊಳ್ [2]ವಿಪುತ್ರೆ ದಿತಿ[2]ಪುತ್ರೇಜ್ಯಾಂಶದೊಳ್ ದುಷ್ಟಚೇ
ಷ್ಟೆ ಸುಧಾಜಾತಸುತಾಂಶದೊಳ್ ಕುಲವಿಹೀನಾ[3]ಸ[3]ಕ್ತೆ ಮಂದಾಂಶದೊಳ್ ೯

(ತ್ರಿಂಶಾಂಶಫಲನಿರ್ಣಯ)
ಉದಯಮುಮುಡುಪತಿಯುಮಂ ಕೂ
ಡಿದೊಡೇಕತ್ರಿಂಶದಂಶದೊಳ್ ದೊರೆಕೊಳ್ಗುಂ
ಗದಿತಫಲಂ ನಿಲೆ ಪೆಱ[4]ತಂ[4]
ಶದೊಳುದಯಶಶಾಂಕರಲ್ಲಿ ಬಲ್ಲಿತೆ ಫಲ[5]ದಂ[5] ೧೦

ಯಾಗಿ 'ನ'ಕಾರವನ್ನುಪಯೋಗಿಸಿ 'ಅನರೇಂದ್ರೇಜ್ಯ' ಎಂದು ಮಾಡಿದೆ. ಆದರೆ ಈ ಪದ ರೂಢಿಯಲ್ಲಿಲ್ಲ. 'ಅನಿಮೇಷೇಜ್ಯ' ಎನ್ನುವ ಪದವನ್ನುಪಯೋಗಿಸಿದ್ದರೆ ಅರ್ಥಪೂರ್ಣವೂ ಪ್ರಾಸಬದ್ಧವೂ ಆಗುತ್ತಿತ್ತು. (ಕ ಗ) ಪ್ರತಿಗಳಲ್ಲಿ ಕಂಡು ಬರುವ ಪಾಠಕ್ಕೂ ಈ ಪದಕ್ಕೂ ಬಹಳ ವ್ಯತ್ಯಾಸವಾಗುವುದರಿಂದ 'ಅನರೇಂದ್ರೇಜ್ಯ' ಎನ್ನುವ ಪದವನ್ನೇ ಪದ್ಯದಲ್ಲಿ ಉಪಯೋಗಿಸಿದೆ.

೯. ಶನಿಯ (ಮಕರ ಕುಂಭ) ಲಗ್ನದಲ್ಲಿ ಅಂಗಾರಕತ್ರಿಂಶಾಂಶ ಉದಿತವಾಗಿದ್ದು ಚಂದ್ರನೂ ಅಲ್ಲಿದ್ದರೆ ಜಾತಕಳು ದಾಸಿಯೂ ಗುರುತ್ರಿಂಶಾಂಶದಲ್ಲಿದ್ದರೆ ಪತಿಭಕ್ತೆಯೂ ಶುಕ್ರತ್ರಿಂಶಾಂಶದಲ್ಲಿದ್ದರೆ ಬಂಜೆಯೂ ಬುಧತ್ರಿಂಶಾಂಶದಲ್ಲಿದ್ದರೆ ದುಷ್ಟೆಯೂ ಶನಿತ್ರಿಂಶಾಂಶದಲ್ಲಿದ್ದರೆ ನೀಚಪುರುಷಾಸಕ್ತೆಯೂ ಆಗುತ್ತಾಳೆ.

೧೦. ಲಗ್ನದಲ್ಲಿ ಉದಿತವಾಗಿರುವ ತ್ರಿಂಶಾಂಶ ಮತ್ತು ಚಂದ್ರನಿರುವ ತ್ರಿಂಶಾಂಶ ಇವೆರಡೂ ಒಂದೇ ಆದರೆ ಹೇಳಿರುವ ತ್ರಿಂಶಾಂಶಫಲವು ಜಾತಕಳಿಗೆ ಉಂಟಾಗುತ್ತದೆ; ಬೇರೆ ಬೇರೆ ತ್ರಿಂಶಾಂಶಗಳಲ್ಲಿದ್ದರೆ ಲಗ್ನ ಚಂದ್ರರಲ್ಲಿ ಬಲಿಷ್ಠವಾದುದರ ಫಲ ಉಂಟಾಗುತ್ತದೆ.

ವಿ–ಬೃಹಜ್ಜಾತಕದಲ್ಲಿ 'ಶಶಿಲಗ್ನಸಮಾಯುಕ್ತೈಃ ಫಲಂ ತ್ರಿಂಶಾಂಶಕೈರಿದಂ । ಬಲಾಬಲವಿಕಲ್ಪೇನ ತಯೋರುಕ್ತಂ ವಿಚಿಂತಯೇತ್ ॥' ಎಂದಿರುವುದನ್ನು ಶ್ರೀಧರನು ಈ ಪದ್ಯದಲ್ಲಿ ಕನ್ನಡಿಸಿರುತ್ತಾನೆ. 'ಚಂದ್ರನಿಗಿಂತ ಲಗ್ನ ಬಲಿಷ್ಠವಾಗಿದ್ದರೆ ಲಗ್ನದಲ್ಲಿ ಉದಿತವಾಗಿರುವ ತ್ರಿಂಶಾಂಶಫಲವೂ ಲಗ್ನಕ್ಕಿಂತ ಚಂದ್ರ ಬಲಿಷ್ಠವಾಗಿದ್ದರೆ ಚಂದ್ರನಿರುವ ತ್ರಿಂಶಾಂಶಫಲವೂ ಜಾತಕಳಿಗೆ ಉಂಟಾಗುತ್ತದೆ' ಎಂದು ಬೃಹಜ್ಜಾತಕ ವ್ಯಾಖ್ಯಾನಕಾರರು ಅಭಿಪ್ರಾಯಪಟ್ಟಿರುತ್ತಾರೆ. ಶ್ರೀಧರನು 'ಉದಯಮುಮುಡುಪತಿಯುಮಂ ಕೂಡಿದೊಡೇಕತ್ರಿಂಶದಂಶದೊಳ್ ದೊರೆಕೊಳ್ಗುಂ ಗದಿತಫಲಂ' ಎಂದು ಹೇಳಿರುವುದು ಇತರ ಜ್ಯೌತಿಷಾಚಾರ್ಯರಿಗೆ ಸಮ್ಮತವಲ್ಲ ಮತ್ತು 'ಉದಯಶಶಾಂಕರಲ್ಲಿ ಬಲ್ಲಿತೆ ಫಲದಂ' ಎಂದು ಸಾಮಾನ್ಯವಾಗಿಯೇ

[1] ವರೇ (ಗ) [2] ದ್ವಿಪುದ್ವಿತಿ (ಕ) ದ್ವಿಪುತ್ರೆ ದಿತಿ (ಗ) [3] ಶ (ಕ ಗ) [4] ರಂ (ಕ ಗ) [5] ವಂ (ಕ ಗ).

## ತ್ರಿಂಶಾಂಶಫಲಚಕ್ರ

| ಲಗ್ನ ಅಥವಾ ಜನ್ಮರಾಶಿ ↓ | ಕುಜ ತ್ರಿಂಶಾಂಶ | ಬುಧ ತ್ರಿಂಶಾಂಶ | ಗುರು ತ್ರಿಂಶಾಂಶ | ಶುಕ್ರ ತ್ರಿಂಶಾಂಶ | ಶನಿ ತ್ರಿಂಶಾಂಶ |
|---|---|---|---|---|---|
| ಮೇಷ, ವೃಶ್ಚಿಕ | ಕನ್ಯಾವಸ್ಥೆಯಲ್ಲೇ ವ್ಯಭಿಚಾರಿಣಿ | ಮೋಸಗಾತಿ | ಸಾಧ್ವಿ | ದುಶ್ಚಾರಿತ್ರೆ | ದಾಸಿ |
| ವೃಷಭ, ತುಲಾ | ದುಷ್ಟೆ | ಕಲಾಕುಶಲೆ | ಸದ್ಗುಣಾನ್ವಿತೆ | ಖ್ಯಾತೆ | ಮರುವಾಡಿತ್ತಿ (ಪುನರ್ಭೂ) |
| ಮಿಥುನ, ಕನ್ಯಾ | ಮೋಸಗಾತಿ | ಜ್ಞಾನಯುಕ್ತೆ | ಪತಿವ್ರತೆ | ದುಶ್ಚಾರಿತ್ರೆ ರತಾಸಕ್ತೆ | ನಪುಂಸಕತುಲ್ಯೆ (ಹೇಡಿ) |
| ಕರ್ಕಟಕ | ಸುಲಟೆ | ಕಲಾಸಂಪನ್ನೆ | ಲೋಕಸ್ತುತ್ಯೆ | ವ್ಯಭಿಚಾರಿಣಿ | ಪತಿಘಾತಿನಿ |
| ಸಿಂಹ | ಪುರುಷಾಚಾರಾಢ್ಯೆ | ಪುರುಷಾಚಾರಾಢ್ಯೆ | ಜನನಾಥಾಂಗನೆ | ಅಗಮ್ಯಾಸಕ್ತೆ ಪಿತ್ರಾನುವರ್ತಿನಿ | ಕೆಟ್ಟು ಓಡಿಹೋಗುತ್ತಾಳೆ |
| ಧನುಸ್ಸು, ಮೀನ | ಬಹುಗುಣವತಿ | ಜ್ಞಾನಭಾಗಿನಿ | ಜನಸ್ತುತ್ಯೆ | ಸಾಧ್ವಿ | ಅಲ್ಪರತಿ |
| ಮಕರ, ಕುಂಭ | ದಾಸಿ | ದುಷ್ಟೆ | ಪತಿಭಕ್ತೆ | ವಿಪುತ್ರೆ | ಕುಲವಿಹೀನಾಸಕ್ತೆ |

(ಸ್ತ್ರೀಯರು ಪರಸ್ಪರ ನೆರೆಯುವುದು)

ಜಲಜಸಖಾತ್ಮಜಾತ[1]ಸಿತ[1]ರತ್ತೆ ಪರಸ್ಪರ ಸಪ್ತಮಾಲಯುಂ
ಗಳೊಳೆ ಪರಸ್ಪರಾಂಶಕದೊಳೊಂದಿರೆ ಮೇಣ್ ಭೃಗು[2]ನಂದ[2]ನಾಲಯುಂ
ಗಳೊಳೆ ಘಟಾಂಶದೊಳ್ ಕುಜಯಮರ್ ನಿಲೆ ಮೇಣ್ ಪುರುಷ[3]ಸ್ವ[3]ಭಾವದಿಂ
ಲಲನೆ ಪರಸ್ಪರಂ ಲಲನೆಯೊಳ್ ನೆರೆಗುಂ ಸುಜನೈಕಬಾಂಧವಾ ೧೧

ಹೇಳಿರುವಾಗ 'ಉದಯಮುಮುಡುಪತಿಯುಂ ಕೂಡಿದೊಡೇಕತ್ರಿಂಶದಂಶದೊಳ್ ದೊರೆಕೊಳ್ಗುಂ ಗದಿತಫಲಂ' ಎಂದು ವಿಶೇಷವಾಗಿ ಹೇಳುವ ಆವಶ್ಯಕತೆಯೇ ಕಂಡುಬರುವುದಿಲ್ಲ.

ಯಾವ ರಾಶಿಯಲ್ಲೇ ಆಗಲೀ ಗುರುತ್ರಿಂಶಾಂಶ ಲಗ್ನದಲ್ಲಿ ಉದಿತವಾಗಿದ್ದರೆ ಅಥವಾ ಚಂದ್ರ ಗುರುತ್ರಿಂಶಾಂಶದಲ್ಲಿದ್ದರೆ ಶುಭಫಲವೂ ಶನಿತ್ರಿಂಶಾಂಶವಾಗಿದ್ದರೆ ಅಶುಭಫಲವೂ ಉಂಟಾಗುತ್ತದೆ. ಧನುರ್ಮೀನರಾಶಿಗಳನ್ನು ಬಿಟ್ಟು ಉಳಿದ ರಾಶಿಗಳಲ್ಲಿ ಅಂಗಾರಕತ್ರಿಂಶಾಂಶ ಉದಿತವಾಗಿದ್ದರೂ ಸೂರ್ಯ ಅಂಗಾರಕ ಶನಿ ಈ ಗ್ರಹಗಳ ರಾಶಿಗಳಲ್ಲಿ ಬುಧತ್ರಿಂಶಾಂಶ ಉದಿತವಾಗಿದ್ದರೂ ವೃಷಭ ತುಲಾ ಧನುಸ್ಸು ಮೀನ ಈ ರಾಶಿಗಳನ್ನು ಬಿಟ್ಟು ಉಳಿದ ರಾಶಿಗಳಲ್ಲಿ ಶುಕ್ರತ್ರಿಂಶಾಂಶ ಉದಿತವಾಗಿದ್ದರೂ ಅಶುಭಫಲ ಉಂಟಾಗುತ್ತದೆ ಎಂದು ತಿಳಿಯಬಹುದು.

೧೧. ಶನಿಶುಕ್ರರು ಒಬ್ಬರಿಗೊಬ್ಬರು ಏಳನೆಯ ಸ್ಥಾನದಲ್ಲಿ ಪರಸ್ಪರ ನವಾಂಶಗಳಲ್ಲಿದ್ದರೆ ಅಥವಾ ಶುಕ್ರಕ್ಷೇತ್ರ (ವೃಷಭ ತುಲಾ) ಗಳಲ್ಲಿ ಕುಂಭನವಾಂಶ ಉದಿತವಾಗಿದ್ದು ಅಲ್ಲಿ ಅಂಗಾರಕ ಶನಿಗಳಿದ್ದರೆ ಜಾತಕಳು ಪುರುಷಸ್ವಭಾವದಿಂದ ಮತ್ತೊಂದು ಹೆಂಗಸಿನೊಡನೆ ಕೂಡುತ್ತಾಳೆ.

ವಿ–ಶನಿ ಶುಕ್ರನಿಗೆ ಏಳನೆಯ ರಾಶಿಯಲ್ಲಿ ಶುಕ್ರನ(ವೃಷಭ ತುಲಾ) ನವಾಂಶಗಳಲ್ಲಿರುವಾಗ ಶುಕ್ರ ಶನಿಯ(ಮಕರ ಕುಂಭ) ನವಾಂಶಗಳಲ್ಲಿರುವುದು ಮೊದಲನೆಯ ಯೋಗ. ವೃಷಭಲಗ್ನ ಕುಂಭನವಾಂಶದಲ್ಲಾಗಲೀ ತುಲಾಲಗ್ನ ಕುಂಭನವಾಂಶದಲ್ಲಾಗಲೀ ಅಂಗಾರಕ ಶನಿಗಳಿರುವುದು ಎರಡನೆಯ ಯೋಗ. ಜಾತಕಳು ಹೆಂಗಸಿನೊಡನೆ ರಮಿಸುವುದೇ ಈ ಯೋಗಗಳಿಗೆ ಫಲ. ಮೊದಲನೆಯ ಯೋಗವು ಹನ್ನೆರಡು ವಿಧ ಸಂಭವಿಸುತ್ತದೆ: (೧) ಮೇಷರಾಶಿ ವೃಷಭ ನವಾಂಶದಲ್ಲಿ ಶನಿಯೂ ತುಲಾರಾಶಿ ಮಕರ ನವಾಂಶದಲ್ಲಿ ಶುಕ್ರನೂ ಇರುವುದು (೨) ಮೇಷರಾಶಿ ತುಲಾನವಾಂಶದಲ್ಲಿ ಶನಿಯೂ ತುಲಾರಾಶಿ ಕುಂಭನವಾಂಶದಲ್ಲಿ ಶುಕ್ರನೂ ಇರುವುದು (೩) ವೃಷಭರಾಶಿ ವೃಷಭನವಾಂಶದಲ್ಲಿ ಶನಿಯೂ ವೃಶ್ಚಿಕರಾಶಿ ಮಕರನವಾಂಶದಲ್ಲಿ ಶುಕ್ರನೂ ಇರುವುದು (೪) ವೃಶ್ಚಿಕರಾಶಿ ತುಲಾನವಾಂಶದಲ್ಲಿ ಶನಿಯೂ ವೃಷಭರಾಶಿ ಕುಂಭನವಾಂಶದಲ್ಲಿ ಶುಕ್ರನೂ ಇರು

[1] ಸಖ (ಕ ಗ) [2] ಗುಂಧ (ಗ) [3] ಪ್ರ (ಗ).

ವುದು (೫) ಧನೂರಾಶಿ ವೃಷಭನವಾಂಶದಲ್ಲಿ ಶನಿಯೂ ಮಿಥುನರಾಶಿ ಮಕರನವಾಂಶದಲ್ಲಿ ಶುಕ್ರನೂ ಇರುವುದು (೬) ಧನೂರಾಶಿ ತುಲಾ ನವಾಂಶದಲ್ಲಿ ಶನಿಯೂ ಮಿಥುನರಾಶಿ ಕುಂಭನವಾಂಶದಲ್ಲಿ ಶುಕ್ರನೂ ಇರುವುದು (೭) ಕರ್ಕಾಟಕರಾಶಿ ತುಲಾನವಾಂಶದಲ್ಲಿ ಶನಿಯೂ ಮಕರರಾಶಿ ಕುಂಭನವಾಂಶ ದಲ್ಲಿ ಶುಕ್ರನೂ ಇರುವುದು (೮) ಮಕರರಾಶಿ ವೃಷಭನವಾಂಶದಲ್ಲಿ ಶನಿಯೂ ಕರ್ಕಾಟಕರಾಶಿ ಮಕರನವಾಂಶದಲ್ಲಿ ಶುಕ್ರನೂ ಇರುವುದು (೯) ಸಿಂಹರಾಶಿ ವೃಷಭನವಾಂಶದಲ್ಲಿ ಶನಿಯೂ ಕುಂಭರಾಶಿ ಮಕರನವಾಂಶದಲ್ಲಿ ಶುಕ್ರನೂ ಇರು ವುದು (೧೦) ಸಿಂಹರಾಶಿ ತುಲಾನವಾಂಶದಲ್ಲಿ ಶನಿಯೂ ಕುಂಭರಾಶಿ ಕುಂಭ ನವಾಂಶದಲ್ಲಿ ಶುಕ್ರನೂ ಇರುವುದು (೧೧) ಮೀನರಾಶಿ ತುಲಾನವಾಂಶದಲ್ಲಿ ಶನಿಯೂ ಕನ್ಯಾರಾಶಿ ಕುಂಭನವಾಂಶದಲ್ಲಿ ಶುಕ್ರನೂ ಇರುವುದು (೧೨) ಕನ್ಯಾ ರಾಶಿ ವೃಷಭನವಾಂಶದಲ್ಲಿ ಶನಿಯೂ ಮೀನರಾಶಿ ಮಕರನವಾಂಶದಲ್ಲಿ ಶುಕ್ರನೂ ಇರುವುದು. ಈ ಹನ್ನೆರಡು ಯೋಗಗಳಲ್ಲೂ ಶನಿಶುಕ್ರರಿಗೆ ಪರಸ್ಪರ ಸಪ್ತಮ ಕ್ಷೇತ್ರಸ್ಥಿತಿ ಇದ್ದರೂ ಈ ಎರಡು ಗ್ರಹಗಳ ಸ್ಫುಟಾಂತರವು ೧೮೦ ಅಂಶಗಳಿಗೆ ಸಮನಾಗಿರದೆ ಒಂದು ನವಾಂಶಕ್ಕಿಂತ ಸ್ವಲ್ಪ ಅಧಿಕವಾಗಿ ವ್ಯತ್ಯಾಸವಿರುತ್ತದೆ. ೧೮೦ ಅಂಶಗಳ ಅಂತರವೇ ಇರಬೇಕಾದರೆ ಈ ಯೋಗಸಂಭವವೇ ಇರುವುದಿಲ್ಲ. ಪರಸ್ಪರ ಪೂರ್ಣದೃಷ್ಟಿ ೧೮೦ ಅಂಶಗಳ ಅಂತರವಿದ್ದಾಗ ಮಾತ್ರ ಸಾಧ್ಯ. ಪ್ರಕೃತಯೋಗದಲ್ಲಿ ಪೂರ್ಣದೃಷ್ಟಿ ಇರಬೇಕು. ಆದುದರಿಂದ ಬೃಹಜ್ಜಾತಕದಲ್ಲಿ 'ದೃಕ್ಸಂಸ್ಥಾವಸಿತಸಿತೌ ಪರಸ್ಪರಾಂಶೇ ಶೌಕ್ರೇ ವಾ ಯದಿ ಘಟರಾಶಿ ಸಂಭ ವೋsಂಶಃ' ಎಂದು ಹೇಳಿರುವ ಯೋಗಕ್ಕೆ 'ವೃಷಭ ಅಥವಾ ತುಲಾಲಗ್ನದಲ್ಲಿ ಕುಂಭನವಾಂಶ ಉದಿತವಾಗಿರುವಾಗ (೧) ಶುಕ್ರ ಶನಿಗಳು ಪರಸ್ಪರ ೧೮೦ ಅಂಶಗಳ ಅಂತರದಲ್ಲಿರುವುದು. (೨) ಶುಕ್ರ ಮಕರ ಅಥವಾ ಕುಂಭಾಂಶದಲ್ಲಿ ರುವಾಗ ಶನಿ ವೃಷಭ ಅಥವಾ ತುಲಾನವಾಂಶದಲ್ಲಿರುವುದು' ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಇವರ ಅಭಿಪ್ರಾಯದಂತೆ ವೃಷಭ ಅಥವಾ ತುಲಾ ಲಗ್ನದಲ್ಲಿ ಕುಂಭನವಾಂಶ ಉದಿತವಾಗಿರುವುದು ಎರಡು ಯೋಗಗಳಿಗೂ ಸಮಾನ. ಇಷ್ಟುಮಾತ್ರದಿಂದಲೇ ಈ ಯೋಗ ಸಂಭವಿಸುವುದಿಲ್ಲ. ಶ್ರೀಧರನಿಗೆ ಈ ಅಭಿಪ್ರಾಯ ಸಮ್ಮತವಲ್ಲ. ಪೂರ್ಣದೃಷ್ಟಿಗೆ ಸ್ವಲ್ಪ ಕಡಿಮೆಯಾದರೂ ಈ ಯೋಗ ಸಂಭವಿಸುತ್ತದೆ. ಎರಡು ಗ್ರಹಗಳೂ ಪರಸ್ಪರ ಸಪ್ತಮ ಸ್ಥಾನದಲ್ಲಿ ದ್ದರೆ ಸಾಕು; ಗ್ರಹಗಳ ಅಂತರ ೧೮೦ ಅಂಶಗಳಿರಬೇಕೆನ್ನುವುದು ಇಲ್ಲಿ ವಿವಕ್ಷಿತವಲ್ಲ. ಎರಡನೆಯ ಯೋಗದಲ್ಲಿ ಅಂಗಾರಕ ಶನಿಗಳು ಕುಂಭನವಾಂಶ ದಲ್ಲಿರಬೇಕೆಂದು ಶ್ರೀಧರನು ಅಧಿಕವಾಗಿ ಹೇಳಿರುತ್ತಾನೆ. ಆದರೆ ಈ ಅಭಿಪ್ರಾಯಕ್ಕೆ ಇತರ ಜ್ಯೋತಿಷಾಚಾರ್ಯರ ಸಮ್ಮತಿ ಕಂಡುಬರುವುದಿಲ್ಲ.

(ಪತಿಯ ವಿಚಾರ)

ದ್ಯುನಗೇಹಂ ಗ್ರಹಶೂನ್ಯಮುಂ ವಿಬಲಮುಂ ತಾನಾಗೆ ಮತ್ಯಾರ್ಧಮಂ
ವನಿತಾ*ಭರ್ತೃವೆನಿಕ್ಕುಮೀಕ್ಷಿಸ[1]ದಿರ[1]ಕ್ರೂರಗ್ರಹಂ ಭರ್ತೃ ಷಂ
ಡನೆನಿಕ್ಕುಂ ಚರರಾಶಿಯೊಳ್ ನೆಲಸೆ ಸೂರ್ಯಾಪತ್ಯನುಂ ಚಂದ್ರನಂ
ದನನುಂ ತದ್ವಧುವಿಂಗೆ* ಭರ್ತೃವೆನಿಕುಂ ನಿತ್ಯಪ್ರವಾಸಾನ್ವಿತಂ ೧೨

(ವೈಧವ್ಯ ಮೊದಲಾದ ದುರ್ಯೋಗಗಳು)

ಇರೆ ರವಿಯೇಱಱೊಳ್ ಬಿಸು[2]ಡು[2]ಗಾರ್ತಿಯನಿಕ್ಕು[3]ವಿ[3]ಳಾತನೂಜನ
ಲ್ಲಿರೆ[4]ಯೊಳೆ[4]ರಂಡೆಯ†[5]ಕ್ಕಿನಜ[5]ನಲ್ಲಿರೆ ನೋಡಿದೊಡಾ[6]ತನಂ[6] ಶುಭೇ
ತರಗಣಮಾಕೆ ಮತ್ತೆ ಕೊಡಗೂಸೆನಿಕುಂ ಪಲರುಗ್ರರಲ್ಲಿ ಕೂ
ಡಿರೆ ವಧು ರಂಡೆಯಕ್ಕುಮಿರೆ ಮಿ[7]ಶ್ರರ[7]ವಳ್ ಮಱುವಾಳ್ತಿ ನಿಶ್ಚಯಂ† ೧೩

---

೧೨. ಸ್ತ್ರೀಜಾತಕದಲ್ಲಿ ಏಳನೆಯ ಸ್ಥಾನ ಗ್ರಹಶೂನ್ಯವೂ ದುರ್ಬಲವೂ ಆಗಿ ಶುಭಗ್ರಹಗಳು ನೋಡದಿದ್ದರೆ ಜಾತಕಳ ಪತಿ ನೀಚಸ್ವಭಾವದವನಾಗುತ್ತಾನೆ. ಏಳನೆಯ ಸ್ಥಾನ ಚರರಾಶಿಯಾಗಿ ಅಲ್ಲಿ ಶನಿ ಬುಧರಿದ್ದರೆ ಜಾತಕಳ ಪತಿ ನಪುಂಸಕನೂ ಸಂಚಾರಶೀಲನೂ ಆಗುತ್ತಾನೆ.

ವಿ—ಬೃಹಜ್ಜಾತಕದಲ್ಲಿ 'ಕ್ಲೀಬೇಽಸ್ತೇ ಬುಧಮಂದಯೋಶ್ಚರಗೃಹೇ ನಿತ್ಯಂ ಪ್ರವಾಸಾನ್ವಿತಃ' ಎಂದಿದೆ. ಇದರಂತೆ ಏಳನೆಯ ಸ್ಥಾನದಲ್ಲಿ ‡ನಪುಂಸಕಗ್ರಹಗಳಾದ ಬುಧ ಶನಿಗಳಿದ್ದರೆ ಪತಿಯು ಷಂಡನಾಗುತ್ತಾನೆ. ಏಳನೆಯ ಸ್ಥಾನ ಚರರಾಶಿಯಾಗಿದ್ದರೆ ಪತಿ ಪ್ರವಾಸಶೀಲನಾಗುತ್ತಾನೆ'. ಎಂದು ಎರಡು ಯೋಗಗಳಾಗುತ್ತವೆ. ಶ್ರೀಧರನು ಈ ಎರಡು ಯೋಗಗಳನ್ನೂ ಒಟ್ಟಿಗೆ ಸೇರಿಸಿ ಒಂದೇ ಯೋಗವನ್ನಾಗಿ ಹೇಳಿರುತ್ತಾನೆ. ಏಳನೆಯ ಸ್ಥಾನ ಚರರಾಶಿಯಾದರೆ ಲಗ್ನವೂ ಚರರಾಶಿಯಾಗುತ್ತದೆ. ಮೇಷ ಕರ್ಕಾಟಕ ತುಲಾ ಮಕರ ಈ ನಾಲ್ಕು ಚರರಾಶಿಗಳು. ಏಳನೆಯ ಸ್ಥಾನ ಸ್ಥಿರರಾಶಿಯಾದರೆ ಪತಿ ಸ್ಥಾಯಿಯಾಗಿ ಒಂದೇ ಕಡೆ ಇರುತ್ತಾನೆ; ದ್ವಿಸ್ವಭಾವ ರಾಶಿಯಾದರೆ ಕೆಲವು ಕಾಲ ಸಂಚರಿಸುವವನೂ ಕೆಲವು ಕಾಲ ಸ್ಥಾಯಿಯಾಗಿರುವವನೂ ಆಗುತ್ತಾನೆ.

೧೩. ಸ್ತ್ರೀಜಾತಕದಲ್ಲಿ ಸೂರ್ಯ ಏಳನೆಯ ಸ್ಥಾನದಲ್ಲಿದ್ದರೆ ಜಾತಕಳ ಪತಿ ಆಕೆಯನ್ನು ಬಿಡುತ್ತಾನೆ. ಅಂಗಾರಕನು ಆ ಸ್ಥಾನದಲ್ಲಿದ್ದರೆ ಆಕೆ ಚಿಕ್ಕ ವಯಸ್ಸಿನಲ್ಲೇ ವಿಧವೆಯಾಗುತ್ತಾಳೆ; ಶನಿ ಆ ಸ್ಥಾನದಲ್ಲಿದ್ದು ಪಾಪಗ್ರಹಗಳು (ಸೂರ್ಯಾಂಗಾರಕರು) ನೋಡಿದರೆ ಆಕೆ ಕನ್ಯೆಯಾಗಿಯೇ ಇರುತ್ತಾಳೆ (ಆಕೆಗೆ ಮದುವೆಯೇ ಆಗುವುದಿಲ್ಲ); ಪಾಪಗ್ರಹಗಳು ಆ ಸ್ಥಾನದಲ್ಲಿದ್ದರೆ ಆಕೆ ವಿಧವೆಯಾಗುತ್ತಾಳೆ; ಸೌಮ್ಯ ಮತ್ತು ಪಾಪಗ್ರಹಗಳು ಆ ಸ್ಥಾನದಲ್ಲಿದ್ದರೆ ಆಕೆ ವಿಧವೆಯಾಗಿ ಮತ್ತೆ ಮದುವೆಯಾಗುತ್ತಾಳೆ.

---

[1] ಲದಂ (ಗ) [2] ಡ (ಕ) ದ (ಗ) [3] ವಿ (ಕ) [4] ವೊಳಗಾ (ಕ) ವೇಳೆ (ಗ) [5] ಕ್ಕುಯಿನ (ಕ) [6] ನರಂ (ಕ) . [7] ತ್ರನ (ಕ). * ಈ ಭಾಗ (ಕ) ಪ್ರತಿಯಲ್ಲಿಲ್ಲ † ಈ ಭಾಗ (ಗ) ಪ್ರತಿಯಲ್ಲಿಲ್ಲ.
‡'ಶಶಿಜನುಮರ್ಕಜನುಂ ನಪುಂಸಕಾಧಿಪರೆನಿಕುಂ' ಎಂದು ೨ನೆಯ ಅಧಿಕಾರ ೨ನೆಯ ಪದ್ಯದಲ್ಲಿದೆ.

(ಸ್ವೈರಿಣೀ ಮೊದಲಾದ ಯೋಗಗಳು)

ಬಲರಹಿತೋಗ್ರನೇಟಜುಡೆಯೊಳ್ ನಿಲೆ ವೀಕ್ಷಿಸದಂದು ಸದ್ಗ್ರಹಂ
ಲಲನೆಯೊಳೊಂದಿ ನಿಲ್ಲದೆ ಬಿಸುಟ್ಟು ಮಧೀಶನಿಳಾತ್ಮ[1]ಜೋಶನರ[61]
ನೆಲಸೆ ಪರಸ್ಪರಾಂಶದೊಳವಳ್ ಕಡುಜೋಡೆ ಕುಜೇಂದುಭಾರ್ಗ[2]ವರ[62]
ನೆಲಸೆ ಕಳತ್ರದೊಳ್ ಪತಿಯ[3]ನುಜ್ಞೆಯಿ[3]ನನ್ಯಯೊಳಾಕೆ ಕೂಡುಗುಂ ೧೪

(ತಾಯಿಯೊಡನೆ ವ್ಯಭಚಾರಿಣೀ ಯೋಗ)

ವಸುಧಾಪುತ್ರಾರ್ಕಿಗೇಹೋದಯದೊಳಿರೆ ಶಶಾಂಕೋಶ[4]ನರ[4] ಕ್ರೂರರಾಳೋ
ಕಿಸೆ ತಾಯುಂ ತಾನುಮಪ್ಪರ್ ಕುಲಟೆಯರಿರೆ ಜಾಮಿತ್ರ [5]ಭೌ[5]ಮಾಂಶದೊಳ್ ಭಾ
ನುಸುತಂ ಮೇಣ್ [6]ನೋ[6]ಡೆ [ರುಕ್ಪೀಡಿತ ಭಗಯುತೆಯಕ್ಕಾಕೆ ಸೌಮ್ಯಾಂಶದೊಳ್ ಮೇ
ಣೆಸೆಯಲ್ ದ್ಯೂನಂ ಸು]ಸೌಭಾಗ್ಯದ ಕಣಿ ರುಚಿರಶ್ರೋಣಿ ತತ್ಕಾಂತೆಯಕ್ಕುಂ ೧೫

---

ವಿ–ಶನಿಗೆ ಪಾಪಗ್ರಹದೃಷ್ಟಿ ಇರಬೇಕೆಂದು ಹೇಳಿರುವಂತೆಯೇ ಅಂಗಾರಕನಿಗೂ ಪಾಪಗ್ರಹದೃಷ್ಟಿ ಇರಬೇಕೆಂದು ಭಟ್ಟೋತ್ಪಲರು ಅಭಿಪ್ರಾಯಪಟ್ಟಿರುತ್ತಾರೆ. ಲಗ್ನಚಂದ್ರರಲ್ಲಿ ಬಲಿಷ್ಠವಾದುದರ ಏಳನೆಯ ಸ್ಥಾನದಲ್ಲಿ ಈ ಅಂಗಾರಕಾದಿ ಗ್ರಹಗಳಿರುವಾಗ ಈ ಫಲಗಳನ್ನು ತಿಳಿಯಬೇಕು.

೧೪. ಸ್ತ್ರೀಜಾತಕದಲ್ಲಿ ದುರ್ಬಲ ಪಾಪಗ್ರಹ ಏಳನೆಯ ಸ್ಥಾನದಲ್ಲಿದ್ದು ಶುಭಗ್ರಹ ನೋಡದಿದ್ದರೆ ಜಾತಕಳನ್ನು ಮದುವೆಯಾಗಿ ಅವಳೊಡನಿರದೆ ಪತಿ ಆಕೆಯನ್ನು ಬಿಡುತ್ತಾನೆ; ಅಂಗಾರಕ ಶುಕ್ರ(ವೃಷಭ ಕನ್ಯಾ)ನವಾಂಶದಲ್ಲೂ ಶುಕ್ರ ಅಂಗಾರಕ(ಮೇಷ ವೃಶ್ಚಿಕ)ನವಾಂಶದಲ್ಲೂ ಇದ್ದರೆ ಆಕೆ ತುಂಬಾ ವ್ಯಭಿಚಾರಿಣಿಯಾಗುತ್ತಾಳೆ; ಅಂಗಾರಕ ಚಂದ್ರ ಶುಕ್ರರು ಏಳನೆಯ ಸ್ಥಾನದಲ್ಲಿದ್ದರೆ ಆಕೆ ಪತಿಯ ಒಪ್ಪಿಗೆಯಿಂದ ಅನ್ಯಪುರುಷರೊಡನೆ ರಮಿಸುತ್ತಾಳೆ.

೧೫. ಸ್ತ್ರೀಜಾತಕದಲ್ಲಿ ಅಂಗಾರಕರಾಶಿ (ಮೇಷ ವೃಶ್ಚಿಕ) ಅಥವಾ ಶನಿಯ ರಾಶಿ (ಮಕರ ಕುಂಭ) ಲಗ್ನವಾಗಿ ಅಲ್ಲಿ ಚಂದ್ರ ಶುಕ್ರರಿದ್ದು ಅಶುಭಗ್ರಹಗಳು ನೋಡಿದರೆ ಜಾತಕಳ ತಾಯಿಯೂ ಮತ್ತು ತಾನೂ ಕುಲಟೆಯರಾಗುತ್ತಾರೆ; ಏಳನೆಯ ಸ್ಥಾನದಲ್ಲಿ ಅಂಗಾರಕ(ಮೇಷ ವೃಶ್ಚಿಕ)ನವಾಂಶ ಉದಿತವಾಗಿದ್ದು ಶನಿ ಅಲ್ಲಿದ್ದರೆ ಅಥವಾ ನೋಡಿದರೆ ಜಾತಕಳು ವ್ಯಾಧಿಯೋನಿಯುಳ್ಳವಳಾಗುತ್ತಾಳೆ. ಏಳನೆಯ ಸ್ಥಾನದಲ್ಲಿ ಶುಭಗ್ರಹದ ನವಾಂಶ ಉದಯಿಸಿದ್ದರೆ ಆಕೆ ಸೌಭಾಗ್ಯದ ಗಣಿಯೂ ಮನೋಹರವಾದ ನಿತಂಬಪ್ರದೇಶವುಳ್ಳವಳೂ ಆಗುತ್ತಾಳೆ.

---

[1] ಜಾಕ್ಯಜಂ (ಕ) ಜಾರ್ಕಜಂ (ಗ) [2] ವಂ (ಕ ಗ) [3] ನನ್ಯರಿ (ಕ) ನನ್ಯರ (ಗ)
[4] ನ (ಕ) [5] ಸಔಮ್ಯಾಂ ಸೋ (ಕ) ಸೋ (ಗ) [6] ಕೂ (ಗ)

(ಕಷ್ಟಜೀವಿ ಪತಿಯೋಗ)

ಇನಭವನಂ ಸಮನಿಪೊಡೇ
ೞನೆಯೆಡೆಯೊಳ್ ಭಾಸ್ಕರಾಂಶಮುದಯಾಂಶ[1]ಕ್ಕೇ
ೞ[1]ನೆಯೆಡೆಯೊಳ್ ಸಮನಿ[2]ಸೆ[2] ಮೃದು
ತನುವುಂ [ಮೇಣ್] ಕ್ಲೇಶಿಯೆನಿಕುಮಾಕೆಯ ಮದವಂ ೧೬

(ಪತಿಯ ಸ್ವಭಾವ ಮತ್ತು ಸ್ವರೂಪ)

ಹಿಮಧಾಮಾಲಯಮೇೞರಲ್ಲಿ ಬರೆ ಮೇಣ್ ಚಂದ್ರಾಂಶಮಾದಂದು ಸ
ಪ್ತಮದೊಳ್ ಸ್ತ್ರೀವ್ಯಸನಾರ್ಥಿ [3]ಕೋಮಲ[3]ನೆನಿಕ್ಕುಂ ಮಂದಗೇಹಾಂಶಮಾ
ಕ್ರಮದೊಳ್ ಕೂಡಿರೆ ವೃದ್ಧನುಂ ಜಡನುಮಕ್ಕುಂ ಭೌಮಗೇಹಾಂಶಮಾ
ಕ್ರಮದೊಳ್ ಕೂಡಿರೆ ಕಾಂತೆಗಾದ ಪುರುಷಂ ಸ್ತ್ರೀಲೋಲುಪಂ ಕೋಪನಂ ೧೭

ಸಿತಗೇಹಂ ದೊರೆಕೊಂಡೊಡಸ್ತಗೃಹದೊಳ್ ಮೇಣ್ ಸಪ್ತಮಸ್ಥಾನದೊಳ್
ಸಿತನಂಶಂ ಬರೆ ಕಾಂತನುಂ ಸುಭಗನುಂ ಗಂಡಂ ಬುಧಕ್ಷೇತ್ರಾಂಶಮಾ
ಸ್ಥಿತಿಯೊಳ್ ಕೂಡಿರೆ ಪಂಡಿತಂ ನಿಪುಣನಕ್ಕುಂ ಜೀವಗೇಹಾಂಶ[4]ಮಾ[4]
ಸ್ಥಿತಿಯೊಳ್ ಕೂಡೆ ಜಿತೇಂದ್ರಿಯಂ ಗುಣಿಯೆನಿಕ್ಕುಂ ತದ್ವಧೂಟೀವರಂ ೧೮

---

೧೬. ಸ್ತ್ರೀಜಾತಕದಲ್ಲಿ ಸೂರ್ಯನ ರಾಶಿ (ಸಿಂಹ) ಏಳನೆಯ ಸ್ಥಾನವಾದರೆ ಅಥವಾ ಸೂರ್ಯನ (ಸಿಂಹ) ನವಾಂಶ ಲಗ್ನದಲ್ಲಿ ಉದಯಿಸಿರುವ ನವಾಂಶಕ್ಕೆ ಏಳನೆಯ ಸ್ಥಾನದಲ್ಲಿದ್ದರೆ (ಏಳನೆಯ ಸ್ಥಾನದಲ್ಲಿ ಸಿಂಹನವಾಂಶ ಉದಯಿಸಿದ್ದರೆ) ಜಾತಕಳ ಪತಿಯು ಮೃದುಶರೀರವುಳ್ಳವನೂ ಕಷ್ಟಜೀವಿಯೂ ಆಗುತ್ತಾನೆ.

ವಿ–ಬೃಹಜ್ಜಾತಕದಲ್ಲಿ ಏಳನೆಯ ಸ್ಥಾನ ಸಿಂಹನವಾಂಶದಲ್ಲಿ ಉದಯಿಸಿದಾಗ 'ಅತಿಮೃದುಃ' ಎಂದು ಫಲವಿದೆ. ಇದಕ್ಕೆ ವಿವರಣವ್ಯಾಖ್ಯಾನದಲ್ಲಿ 'ಅತಿಮೃದುಃ ಮೃದುಮತಿಕ್ರಾಂತಃ ಕಠಿನಸ್ವಭಾವ ಇತ್ಯರ್ಥಃ' ಎಂದಿದೆ. ಇದರಂತೆ ಜಾತಕಳ ಪತಿಗೆ ಕಠಿಣ ಸ್ವಭಾವವಿರುತ್ತದೆ ಎಂದಾಗುತ್ತದೆ. ಆದರೆ ಇದು ಶ್ರೀಧರನಿಗೆ ಸಮ್ಮತವಲ್ಲ.

೧೭–೧೮. ಸ್ತ್ರೀಜಾತಕದಲ್ಲಿ ಚಂದ್ರನರಾಶಿ(ಕರ್ಕಟಕ) ಏಳನೆಯ ಸ್ಥಾನವಾದರೆ ಅಥವಾ ಚಂದ್ರನ(ಕರ್ಕಟಕ)ನವಾಂಶ ಏಳನೆಯ ಸ್ಥಾನದಲ್ಲಿ ಉದಯಿಸಿದ್ದರೆ ಜಾತಕಳ ಪತಿ ಕಾಮಾತುರನೂ ಕೋಮಲವಾದ ಶರೀರವುಳ್ಳವನೂ ಆಗುತ್ತಾನೆ; ಶನಿಯ(ಮಕರ ಕುಂಭ) ರಾಶಿ ಅಥವಾ ನವಾಂಶ ಏಳನೆಯ ಸ್ಥಾನದಲ್ಲಿದ್ದರೆ ಮುದುಕನೂ ಮೂರ್ಖನೂ ಆಗುತ್ತಾನೆ; ಅಂಗಾರಕನ (ಮೇಷ ವೃಶ್ಚಿಕ) ರಾಶಿ ಅಥವಾ ನವಾಂಶ ಏಳನೆಯ ಸ್ಥಾನದಲ್ಲಿ ಕೂಡಿದರೆ ಸ್ತ್ರೀಲೋಲನೂ ಕೋಪಿಷ್ಠನೂ ಆಗುತ್ತಾನೆ.

ಶುಕ್ರನ (ವೃಷಭ ತುಲಾ)ರಾಶಿ ಏಳನೆಯ ಸ್ಥಾನವಾದರೆ ಅಥವಾ ಏಳನೆಯ ಸ್ಥಾನದಲ್ಲಿ ಶುಕ್ರ (ವೃಷಭ ಕನ್ಯಾ)ನವಾಂಶ ಉದಯಿಸಿದ್ದರೆ ಜಾತಕಳ ಗಂಡ

---

[1] ಕ್ಕಾಬಿ (ಕ ಗ) [2] ಪೊಡತಿ (ಕ ಗ) [3] ಕಾಮುಬ (ಕ ಗ) [4] ವಾ (ಕ) ನಾ (ಗ).

(ಲಗ್ನದಲ್ಲಿರುವ ಗ್ರಹಫಲ)

ಸಿತಸೋಮರ್ ನಿರೆ ಲಗ್ನದೊಳ್ ಪೆಱರನೆಂತುಂ ಸೈರಿಸಳ್ ಸೌಮ್ಯನುಂ*
ಸಿತನುಂ ಕೂಡಿರೆ ಚೆಲ್ವೆ ಜಾಣೆ [1]ಸೊ[1]ಬಗಿಂಗಾವಾ[2]ಸೆಯ[2]ಕ್ಕುಂ ಶಶೀಂ
ದುತನೂಜರ್ ನಿರೆ ಸದ್ಗುಣಾನ್ವಿತೆ ಕಲಾಸಂಪನ್ನೆ ಸೌಮ್ಯಗ್ರಹ
ತ್ರಿತಯಂ ಕೂಡಿರೆ ಭಾಗ್ಯಸೌಖ್ಯವತಿಯಕ್ಕುಂ ಕಾಂತೆ ನಿಭ್ರಾಂತಿಯಿಂ ೧೯

(ವೈಧವ್ಯಯೋಗ)

ಉದಯಕ್ಕೆಂಟನೆಯೊಳ್ ನೆಲ
ಸಿದೊಡುಗ್ರಂ ತದ್ಗೃಹೇಶನಾವಗ್ರಹದಂ
ಶದೊಳೊಂದಿದನಂತಾ ಗ್ರಹ
ದ ದೆಸೆಯ ಫಲ[3]ದಂ[3]ದು ವಿಧವೆ ತದ್ವಧು[4]ವ[4]ಕ್ಕುಂ ೨೦

---

ಸುಂದರನೂ ಅದೃಷ್ಟಶಾಲಿಯೂ ಆಗುತ್ತಾನೆ; ಬುಧ(ಮಿಥುನ ಕನ್ಯಾ) ರಾಶಿ ಅಥವಾ ನವಾಂಶ ಏಳನೆಯ ಸ್ಥಾನದಲ್ಲಿ ಕೂಡಿದರೆ ವಿದ್ವಾಂಸನೂ ಜಾಣನೂ ಆಗುತ್ತಾನೆ; ಗುರು(ಧನುಸ್ಸು ಮೀನ)ರಾಶಿ ಅಥವಾ ನವಾಂಶ ಏಳನೆಯ ಸ್ಥಾನದಲ್ಲಿ ಕೂಡಿದರೆ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಂಡಿರುವವನೂ ಗುಣವಂತನೂ ಆಗುತ್ತಾನೆ.

೧೯. ಸ್ತ್ರೀಜಾತಕದಲ್ಲಿ ಶುಕ್ರ ಚಂದ್ರರು ಲಗ್ನದಲ್ಲಿದ್ದರೆ ಜಾತಕಳಿಗೆ ಮತ್ತೊಬ್ಬರ ವಿಷಯದಲ್ಲಿ ಸಹನೆಯಿರುವುದಿಲ್ಲ; ಬುಧ ಶುಕ್ರರಿದ್ದರೆ ಆಕೆ ಸುಂದರಿಯೂ ಚತುರಳೂ ಸೊಬಗಿಗೆ ಆವಾಸಸ್ಥಾನಳೂ ಆಗುತ್ತಾಳೆ; ಚಂದ್ರಬುಧರಿದ್ದರೆ ಸದ್ಗುಣವತಿಯೂ ಕಲಾವಿದೆಯೂ ಮೂರು ಶುಭಗ್ರಹಗಳಿದ್ದರೆ ಭಾಗ್ಯವತಿಯೂ ಸುಖಪಡುವವಳೂ ಆಗುತ್ತಾಳೆ.

೨೦. ಸ್ತ್ರೀಜಾತಕದಲ್ಲಿ ಲಗ್ನಕ್ಕೆ ಎಂಟನೆಯ ಸ್ಥಾನದಲ್ಲಿ ಪಾಪಗ್ರಹ ವಿದ್ದರೆ ಆ ಸ್ಥಾನಾಧಿಪತಿ ಯಾವ ಗ್ರಹದ ನವಾಂಶದಲ್ಲಿರುತ್ತಾನೋ ಆ ಗ್ರಹದ ದಶಾಕಾಲದಲ್ಲಿ ಜಾತಕಳು ವಿಧವೆಯಾಗುತ್ತಾಳೆ.

ವಿ_ಲಗ್ನಕ್ಕೆ ಎಂಟನೆಯ ಸ್ಥಾನದಲ್ಲಿ ಪಾಪಗ್ರಹವಿದ್ದರೆ ಜಾತಕಳು ವಿಧವೆ ಯಾಗುತ್ತಾಳೆ. ವಿವಾಹಾನಂತರ ಯಾವಕಾಲದಲ್ಲಿ ವಿಧವೆಯಾಗುತ್ತಾಳೆ ಎನ್ನುವ ವಿಚಾರದಲ್ಲಿ ಅಭಿಪ್ರಾಯ ಭೇದಗಳು ಕಂಡುಬರುತ್ತವೆ. ಬೃಹಜ್ಜಾತಕ ದಲ್ಲಿ 'ಕ್ರೂರೇಽಷ್ಟಮೇ ವಿಧವತಾ ನಿಧನೇಶ್ವರೋಂಽಶೇ ಯಸ್ಯ ಸ್ಥಿತೋ ವಯಸಿ ತಸ್ಯ ಸಮೇ ಪ್ರದಿಷ್ಟಾ' ಎಂದಿದೆ. ಇದರಂತೆ ಎಂಟನೆಯ ಸ್ಥಾನಾಧಿಪತಿ ಇರುವ ನವಾಂಶಾಧಿಪತಿಗೆ ಹೇಳಿರುವ ವಯಸ್ಸಿನ ಪ್ರಮಾಣದಷ್ಟು ವರ್ಷಗಳಲ್ಲಿ

---

[1] ಸು (ಕ) [2] ಸವು (ಕ) [3] ದೊಂ (ಕ) [4] ಗ (ಕ)

*ಇಲ್ಲಿಂದ ಮುಂದೆ ನಿರ್ಯಾಣ ಪ್ರಕರಣದಲ್ಲಿ ೩೦ನೇ ಪದ್ಯದ ೧ನೇ ಸಾಲು ಪೂರ್ತಿ (ಗ) ಪ್ರತಿಯಲ್ಲಿ ಗ್ರಂಥವಿಲ್ಲ.

(ಸೌಮಂಗಲ್ಯ ಮತ್ತು ಅಲ್ಪಪುತ್ರಯೋಗ)

ಹರಿ ಕನ್ಯಾ ವೃಶ್ಚಿಕ ವೃಷ
ಧರಾಶಿಯೊಳ್ ಮಟ್ಟಿದಲ್ಲಿ ಕೂಡಿರೆ ದೋಷಾ
ಕರನಲ್ಪಪು[1]ತ್ರೆ[1] ಸದ್ಗ್ರಹ
ಮೆರ[2]ಡಬೋಳಂ[2] ನೆಲಸೆ ವನಿತೆಗಕ್ಕುಂ ಮರಣಂ ೨೧

---

ಜಾತಕಳು ವಿಧವೆಯಾಗುತ್ತಾಳೆ ಎಂದು ಅರ್ಥವಾಗುತ್ತದೆ; ಈ ರೀತಿ ಅರ್ಥ ಮಾಡುವುದರಿಂದ ಹುಟ್ಟಿದ ಮೂರು ವರ್ಷಗಳಲ್ಲೇ(ಚಂದ್ರಾಂಗಾರಕರಿಗೆ ಮೂರು ವರ್ಷ ವಯಸ್ಸು ಎಂದಿರುವುದರಿಂದ) ವೈಧವ್ಯವು ಸಂಭವಿಸಬೇಕಾಗುತ್ತದೆ. ಸಾಮಾನ್ಯವಾಗಿ ಮೂರುವರ್ಷಗಳೊಳಗೆ ವಿವಾಹವಾಗುವುದು ಕಂಡುಬರುವುದಿಲ್ಲ. ಆದುದರಿಂದ 'ವಯಃ' ಎನ್ನುವುದಕ್ಕೆ 'ದಶಾಂತರ್ದಶಾಕಾಲ' ಎಂದು ಅರ್ಥ ಮಾಡಿರುತ್ತಾರೆ. ಇದರಂತೆ ಮದುವೆಯಾದ ಮೇಲೆ ಎಂಟನೆಯ ಸ್ಥಾನಾಧಿಪತಿ ಇರುವ ನವಾಂಶಾಧಿಪತಿಯ ದಶೆ ಅಥವಾ ಅಂತರ್ದಶಾಕಾಲದಲ್ಲಿ ವೈಧವ್ಯವುಂಟಾಗುತ್ತದೆ ಎಂದು ಹೇಳಬೇಕಾಗುತ್ತದೆ. ಮತ್ತೆ ಕೆಲವರು ಎಂಟನೆಯ ಸ್ಥಾನಾಧಿಪತಿ ಚಂದ್ರಮಂಗಳಬುಧರ ನವಾಂಶದಲ್ಲಿದ್ದರೆ ಬಾಲ್ಯದಲ್ಲೂ ಶುಕ್ರನವಾಂಶದಲ್ಲಿದ್ದರೆ ಯೌವನದಲ್ಲೂ ಗುರುನವಾಂಶದಲ್ಲಿದ್ದರೆ ಮಧ್ಯವಯಸ್ಸಿನಲ್ಲೂ ಸೂರ್ಯನವಾಂಶದಲ್ಲಿದ್ದರೆ ವಾರ್ಧಕದಲ್ಲೂ ಶನಿಯು ನವಾಂಶದಲ್ಲಿದ್ದರೆ ಬಹಳ ಮುಪ್ಪಾದಮೇಲೂ ವೈಧವ್ಯವುಂಟಾಗುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

೨೧. ಸ್ತ್ರೀಜಾತಕದಲ್ಲಿ ಸಿಂಹ ಕನ್ಯಾ ವೃಶ್ಚಿಕ ವೃಷಭರಾಶಿಗಳಲ್ಲಿ ಯಾವ ರಾಶಿಯಲ್ಲಾಗಲೀ ಚಂದ್ರನಿದ್ದರೆ ಜಾತಕಳಿಗೆ ಪುತ್ರರು ಕಡಿಮೆ. [ಹೆಚ್ಚು ಗಂಡು ಮಕ್ಕಳಿರುವುದಿಲ್ಲ.] ಎರಡನೆಯ ಸ್ಥಾನದಲ್ಲಿ ಶುಭಗ್ರಹಗಳಿದ್ದರೆ ಪತಿಗಿಂತ ಮೊದಲು ತಾನೇ ಸಾಯುತ್ತಾಳೆ.

ವಿ–ಎಂಟನೆಯ ಸ್ಥಾನದಲ್ಲಿ ಪಾಪಗ್ರಹವಿದ್ದರೆ ವೈಧವ್ಯ ಉಂಟಾಗುತ್ತದೆ ಎಂದು ೨೦ನೇ ಪದ್ಯದಲ್ಲಿದೆ; ಆದರೆ ಇದೇ ಯೋಗದಲ್ಲಿ ಶುಭಗ್ರಹ ಎರಡನೆಯ ಸ್ಥಾನದಲ್ಲಿದ್ದರೆ ವೈಧವ್ಯ ಉಂಟಾಗುವುದಿಲ್ಲ ಎಂದರೆ ಜಾತಕಳೇ ಪತಿಗಿಂತ ಮೊದಲು ಸಾಯುತ್ತಾಳೆ. ಎರಡನೆಯ ಸ್ಥಾನದಲ್ಲಿರುವ ಗ್ರಹ ಎಂಟನೆಯ ಸ್ಥಾನವನ್ನು ಪೂರ್ಣದೃಷ್ಟಿಯಿಂದ ನೋಡುವುದರಿಂದ ಈ ಸೌಮಂಗಲ್ಯಯೋಗದಲ್ಲಿ ಎಂಟನೆಯ ಸ್ಥಾನಕ್ಕೆ ಶುಭಗ್ರಹದೃಷ್ಟಿ ಇರಬೇಕೆನ್ನುವ ಅಂಶ ಸ್ಪಷ್ಟಪಡುತ್ತದೆ.

---

[1] ತ್ರ (ಕ) [2] ಡೆಯೊಳ್ (ಕ).

(ಪುರುಷಸ್ವಭಾವ ಯೋಗ)

ಜಲಜಸಖಸೂನು ಮ[1]ಧ್ಯಮ[1]
ಬಲನೆನೆ ಬಲರ[2]ಹಿತರ[2]ನೆ ಸಿತೇಂದುಜಶಶಿಗಳ್
ಬಲಯುಕ್ತರನ್ಯರೆನೆ [3]ವಿಷ
ಮ[3]ಲಗ್ನಮೆನೆ ವನಿತೆ ಪುರುಷಶೀಲೆಯೆನಿಕ್ಕುಂ ೨೨

(ಬ್ರಹ್ಮವಾದಿನೀ ಯೋಗ)

ದನುಜೇಜ್ಯ ಜ್ಞ ಕುಜಾಂಗಿ[4]ರರ್[4] ಸಮವಿಲಗ್ನಕ್ಷೇತ್ರದೊಳ್ ಬಾಲ್ಯರಾ
ಗಿ ನಿರಾಬಾಧೆಯಿನಿರ್ದೊಡಾ ಸಕಲಶಾಸ್ತ್ರೋಪೇತೆಯುಂ ಬ್ರಹ್ಮವಾ
ದಿನಿಯುಂ ಖ್ಯಾ[5]ತೆ[5]ಯುಮಕ್ಕುಮುಗ್ರರಿರೆ ಸಪ್ತಸ್ಥಾನದೊಳ್ ನಿಂದೊ[6]ಡೊಂ[6]
ದೆ ನವಸ್ಥಾನದೊಳಾ ಗ್ರಹೋ[7]ಕ್ತ[7][ತಪ]ಮಾ ಸ್ತ್ರೀಗಕ್ಕುಮವ್ಯಾಜದಿಂ ೨೩

---

೨೨. ಸ್ತ್ರೀಜಾತಕದಲ್ಲಿ ಶನಿ ಮಧ್ಯಮಬಲನೂ ಶುಕ್ರ ಬುಧ ಚಂದ್ರರು ದುರ್ಬಲರೂ ಉಳಿದವರು ಬಲಿಷ್ಠರೂ ಆಗಿದ್ದು ಓಜ(ಪುರುಷ)ರಾಶಿ ಲಗ್ನವಾಗಿದ್ದರೆ ಜಾತಕಳು ಪುರುಷಸ್ವಭಾವದವಳಾಗುತ್ತಾಳೆ.

ವಿ–ಸ್ತ್ರೀನಪುಂಸಕಗ್ರಹವಾದ ಬುಧ ಮತ್ತು ಸ್ತ್ರೀಗ್ರಹಗಳಾದ ಶುಕ್ರ ಚಂದ್ರರು ಈ ಮೂರು ಗ್ರಹಗಳೂ ದುರ್ಬಲರಾಗಿರುವುದಲ್ಲದೆ ಪುಂನಪುಂಸಕ ಗ್ರಹವಾದ ಶನಿ ಮಧ್ಯಮಬಲನೂ ಪುರುಷಗ್ರಹಗಳಾದ ಸೂರ್ಯಾಂಗಾರಕ ಗುರುಗಳು ಬಲಿಷ್ಠರೂ ಆಗಿರುವ ಕಾರಣ ಈ ವಿಧವಾದ ಗ್ರಹಸನ್ನಿವೇಶದಲ್ಲಿ ಪುರುಷರಾಶಿಯಲ್ಲಿ ಹುಟ್ಟಿರುವ ಜಾತಕಳಿಗೆ ಧೈರ್ಯ ಮೊದಲಾದ ಪುರುಷಸ್ವಭಾವ ಗಳಿರುತ್ತವೆ.

೨೩. ಸ್ತ್ರೀಜಾತಕದಲ್ಲಿ ಶುಕ್ರ ಬುಧ ಕುಜ ಗುರುಗಳು ಸಮರಾಶಿಲಗ್ನ ದಲ್ಲಿ ಬಲಿಷ್ಠರಾಗಿ ಉಪಹತರಾಗದೆ ಇದ್ದರೆ ಜಾತಕಳು ಎಲ್ಲ ಶಾಸ್ತ್ರಗಳನ್ನು ತಿಳಿದಿರುವವಳೂ ಬ್ರಹ್ಮವಾದಿನಿಯೂ ಪ್ರಸಿದ್ಧಳೂ ಆಗುತ್ತಾಳೆ; ಅಶುಭಗ್ರಹಗಳು ಏಳನೆಯ ಸ್ಥಾನದಲ್ಲಿರುವಾಗ ಯಾವುದಾದರೊಂದು ಗ್ರಹ ಒಂಬತ್ತನೆಯ ಸ್ಥಾನ ದಲ್ಲಿದ್ದರೆ ಆ ಒಂಬತ್ತನೆಯ ಸ್ಥಾನದಲ್ಲಿರುವ ಗ್ರಹಕ್ಕೆ [ಪ್ರವ್ರಜ್ಯಾಧಿಕಾರದಲ್ಲಿ (ಅಧಿಕಾರ ೧೬)] ಹೇಳಿರುವ ತಪಸ್ಸು (ದೀಕ್ಷೆ) ಆ ಜಾತಕಳಿಗೆ ಉಂಟಾಗುತ್ತದೆ.

ವಿ–ಈ ಪದ್ಯದಲ್ಲಿ ಎರಡುಯೋಗಗಳನ್ನು ಹೇಳಿದೆ. ಇದರಲ್ಲಿ ಎರಡನೆಯ ಯೋಗವಿರುವಾಗ ಇದೇ ಅಧಿಕಾರ ೧೩ನೇ ಪದ್ಯದಲ್ಲಿ ಹೇಳಿರುವ ಸಪ್ತಮಕ್ಷೇತ್ರ ಸ್ಥಿತಗ್ರಹಫಲವು ಉಂಟಾಗುವುದಿಲ್ಲ.

---

[1] ಧ್ಯಂ(ಕ) [2] ವಿತನ(ಕ) [3] ವ್ಯಾದ (ಕ) [4] [illegible] [5] [illegible] [6] [illegible] ಡಂ (ಕ) [7] [illegible]

(ಯೋಗಸಮನ್ವಯಕಾಲ)

ಕೊಡಗೂಸನೆರೆ[1]ಯೊ[1] ಕೂಸಂ
ಕು[2]ಡೆ[2] ಮದುವೆಗೆ ಯುವತಿ ಜಾತಕೋಚಿತಫಲಮಂ
ಕುಡುವ ಶುಭಲಗ್ನ[3]ಮುಂ[3] ಕುಡೆ
ಪಡೆಗುಂ ತತ್ಕಾಂತೆ ಪುತ್ರವಿತ್ತಾಢ್ಯತೆ[4]ಯಂ[4] ೨೪

(ಪತ್ನಿಯಿಂದ ಪತಿಗೆ ಉಂಟಾಗುವ ಫಲ)

ಪುರುಷ ಸ್ತ್ರೀಜನ ಜಾತ[ಕ]ಕ್ಕೆ ಫಲವೊಂದಾಗಿರ್ದೊಡಂ ತತ್ಫಲೋ
ತ್ಕರದೊಳ್ ಭಾವಿಪೊಡಂಗನಾಜನಕೊಡಂಬಟ್ಟಿರ್ಪುದು[5]ರ್ವೀತಲೇ
ಶ್ವರತಾ[5]ದ್ಯುತ್ತಮಲಾಭಮುಂ ವ್ಯಷಣನಾಶಾದ್ಯಂಗಳುಂ ತದ್ವಧೂ
ವರನೊಳ್ ಕೂಡುಗುಮೆಂದು ಯೋಜಿಸುವುದರ್ಥೋತ್ಪತ್ತಿಯಿಂ ತದ್ವಿದಂ ೨೫

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ಸ್ತ್ರೀಜಾತಕಫಲಪ್ರಕರಣ ವರ್ಣನಂ ದ್ವಾವಿಂಶಾಧಿಕಾರಂ

---

೨೪. ಕನ್ಯಾವರಣ ಕನ್ಯಾಪ್ರದಾನ ವಿವಾಹ ಈ ಮೂರುಕಾಲಗಳಲ್ಲೂ ಸ್ತ್ರೀ ಜಾತಕಕ್ಕೆ ಹೇಳಿರುವ ಶುಭಫಲಗಳನ್ನು ಕೊಡುವ ಲಗ್ನವಿದ್ದರೆ ಆ ಜಾತಕಳು ಪುತ್ರವಂತಳೂ ಧನವಂತಳೂ ಆಗುತ್ತಾಳೆ.

೨೫. ಪುರುಷ ಸ್ತ್ರೀಜಾತಕಗಳೆರಡರ ಫಲ ಒಂದಾಗಿದ್ದರೂ ಆ ಫಲ ಸಮುದಾಯದಲ್ಲಿ ಸ್ತ್ರೀಜಾತಕದ ರಾಜಯೋಗ ಮೊದಲಾದ ಉತ್ತಮಲಾಭಪ್ರದ ಶುಭಯೋಗಗಳೂ ವ್ಯಷಣನಾಶಾದಿ (ಸ್ತ್ರೀಯರಿಗೆ ಅಸಂಭವವಾದ) ದುರ್ಯೋಗ ಗಳೂ ಆ ಜಾತಕಳ ಪತಿಗೆ ಉಂಟಾಗುತ್ತವೆ ಎಂದು ಸ್ತ್ರೀಜಾತಕದ ಫಲಗಳನ್ನು ಅರಿತು ಯೋಜಿಸಬೇಕು.

ವಿ–ಸ್ತ್ರೀಜಾತಕದಲ್ಲಿ ಕಂಡುಬರುವ ಶುಭಾಶುಭಫಲಗಳಲ್ಲಿ ಯಾವ ಫಲವೇ ಆಗಲಿ ಪುರುಷರಿಂದ ಮಾತ್ರ ಅನುಭವಿಸತಕ್ಕುದಾಗಿದ್ದರೆ ಆ ಫಲ ಜಾತಕಳ ಪತಿಗೆ ಉಂಟಾಗುತ್ತದೆ.

---

[1] ಯ (ಕ) [2] ಡು (ಕ) [3] ಮಂ (ಕ) [4] ಯುಂ (ಕ) [5] ರ್ಬೀತರೇಶ್ವರನಾ (ಗ).

# ತ್ರಯೋವಿಂಶಾಧಿಕಾರಂ

## ನಿರ್ಯಾಣ ಪ್ರಕರಣಂ

(ಸಾವಿಗೆ ಕಾರಣ)

ಬಲಯುಕ್ತ ಗ್ರಹಮಷ್ಟಮಾವಸಥಮಂ ನೋಳ್ಪಂದು ತದ್ದೋಷದಿಂ
ನಿಲಯೋಕ್ತಂಗಳೊಳಾಮಯಂ ಜನಿಯಿಕುಂ ತದ್ವ್ಯಾಧಿಯಿಂ ಕೂಡುಗುಂ
ವಿಲಯಂ ತ[1]ದ್ಗ್ರ[1]ಹಮಂ ನಿರೀಕ್ಷಿಸೆ [2]ಪಲರ್[2] ವೀರ್ಯಾನ್ವಿತರ್ ಪ್ರ್ಯೋ[ಮ]ಗರ್
ಪಲ[3]ವುಂ[3] ಕುತ್ತಮವುಂಕೆ ಪುಟ್ಟಿದ ನರಂ ಪಂಚತ್ವಮಂ ಪೊರ್ದುಗಂ ॥ ೧

ಜಲಜಾತಪ್ರಿಯನೆಂಟರೊಳ್ ನಿರೆ ಮನುಷ್ಯಂ ಕಿಚ್ಚಿನಿಂ ಚಂದ್ರಮಂ
ನಿರೆ ನೀರಿಂ ಮಹಿಜಾತನಲ್ಲಿ ನಿರೆ ಶಸ್ತ್ರಾಘಾತದಿಂ ಸೋಮಜಂ
ನಿರೆ ಘೋರಜ್ವರದಿಂದೆ ಮಂತ್ರಿ ನಿರೆ ನಾನಾರೋಗದಿಂ ಭಾರ್ಗವಂ
ನಿರೆ [4][ತೃಡ್ಬಾಧೆಯಿನರ್ಕಜಂ][4] ನಿರೆ ಮಹಾಕ್ಷು[5]ದ್ವ್ಯಾ[5]ಧಿಯಿಂ ಪೊಂದುಗುಂ ೨

---

೧. ಜನನಕಾಲದಲ್ಲಿ ಬಲಿಷ್ಠಗ್ರಹ ಎಂಟನೆಯ ಸ್ಥಾನವನ್ನು ನೋಡಿದರೆ ಆ ಗ್ರಹಕ್ಕೆ ಹೇಳಿರುವ ದೋಷದಿಂದ (ಧಾತು ಪ್ರಕೋಪದಿಂದ) ಆ ಗ್ರಹವಿರುವ ರಾಶಿ ಕಾಲಪುರುಷನ ಅಂಗವಿಭಾಗದಲ್ಲಿ ಯಾವ ಅವಯವವಾಗುತ್ತದೆಯೋ ಆ ಅವಯವದಲ್ಲಿ ವ್ಯಾಧಿಯುಂಟಾಗಿ ಜಾತಕನು ಸಾಯುತ್ತಾನೆ; ಆ ಎಂಟನೆಯ ಸ್ಥಾನವನ್ನು ಬಲಿಷ್ಠರಾದ ಗ್ರಹಗಳು ನೋಡಿದರೆ ಆ ನೋಡುವ ಎಲ್ಲ ಗ್ರಹಗಳ ಧಾತುಪ್ರಕೋಪದಿಂದ ವ್ಯಾಧಿಯುಂಟಾಗಿ ಆತನು ಸಾಯುತ್ತಾನೆ.

ವಿ—ಎಂಟನೆಯ ಸ್ಥಾನದಲ್ಲಿ ಗ್ರಹವಿರುವಾಗ ಮರಣಕಾರಣವನ್ನು ಪ್ರತ್ಯೇಕವಾಗಿ ಮುಂದಿನ ಪದ್ಯದಲ್ಲಿ ಹೇಳಿರುವುದರಿಂದ ಎಂಟನೆಯ ಸ್ಥಾನದಲ್ಲಿ ಗ್ರಹವಿಲ್ಲದಿರುವಾಗ ಆ ಸ್ಥಾನವನ್ನು ನೋಡುವ ಗ್ರಹಗಳಿಂದ ಮೃತ್ಯುಕಾರಣವು ತಿಳಿದುಬರುತ್ತದೆ. ಎಂಟನೆಯ ಸ್ಥಾನವನ್ನು ಸೂರ್ಯ ಅಥವಾ ಅಂಗಾರಕ ನೋಡಿದರೆ ಪಿತ್ತಪ್ರಕೋಪದಿಂದ ಚಂದ್ರ ಅಥವಾ ಶುಕ್ರ ನೋಡಿದರೆ ಕಫ ವಾತ ಪ್ರಕೋಪದಿಂದ ಬುಧ ನೋಡಿದರೆ ಕಫ ವಾತ ಪಿತ್ತಪ್ರಕೋಪದಿಂದ ಗುರು ನೋಡಿದರೆ ಕಫ ಪ್ರಕೋಪದಿಂದ ಶನಿ ನೋಡಿದರೆ ವಾತಪ್ರಕೋಪದಿಂದ ವ್ಯಾಧಿಯುಂಟಾಗಿ ಜಾತಕನು ಸಾಯುತ್ತಾನೆ.

೨. ಎಂಟನೆಯ ಸ್ಥಾನದಲ್ಲಿ ಸೂರ್ಯನಿದ್ದರೆ ಬೆಂಕಿಯಿಂದ ಚಂದ್ರನಿದ್ದರೆ ನೀರಿನಿಂದ ಅಂಗಾರಕನಿದ್ದರೆ ಆಯುಧದ ಹೊಡೆತದಿಂದ ಬುಧನಿದ್ದರೆ ಭಯಂಕರಜ್ವರದಿಂದ ಗುರುವಿದ್ದರೆ ನಾನಾರೋಗಗಳಿಂದ ಶುಕ್ರನಿದ್ದರೆ ಬಾಯಾರಿಕೆಯಿಂದ ಶನಿಯಿದ್ದರೆ ಹಸಿವಿನ ಬಾಧೆಯಿಂದ ಜಾತಕನು ಸಾಯುತ್ತಾನೆ.

ವಿ—ಸೂರ್ಯನು ಎಂಟನೆಯ ಸ್ಥಾನದಲ್ಲಿರುವಾಗ ಸಾವಿಗೆ ಬೆಂಕಿ ಕಾರಣ ಎಂದರೆ ಜ್ವರಬಾಧೆ ಮೊದಲಾದ ಉಷ್ಣ ಸಂಬಂಧವಾದ ಖಾಯಿಲೆಗಳು ಅಥವಾ

---

[1] ದ್ಗ್ರ (ಕ) [2] ಫಲ (ಕ) [3] ರುಂ (ಕ) [4] ರಕ್ತಮಾಯಾಪಿತ್ತೋತ್ಥಜ್ವರಃ ಶಿರಿ ರಾಹು ಕೇತುಗಳ್ (ಕ) [5] ದ್ವ್ಯಾ (ಕ).

(ಮೃತ್ಯುಪ್ರದೇಶಜ್ಞಾನ)

ಚರ[1]ಗೃ[1]ಹಮಷ್ಟಮಮಾಗಿರೆ
[ಪರ]ಮಂಡ[2]ಲ[2]ದೊಳ್ ಸ್ಥಿರಾಲಯಂ ತದ್ಗೃಹಮಾ
ಗಿರೆ ನಿಜಮಂಡ[2]ಲ[2]ದೊಳ್ ದ್ವ್ಯಂ
ಗರಾಶಿಯಾಗಿರೆ [3]ತದೃಕ್ಷಮಧ್ವದೆ[3] ಮಡಿಗುಂ ೩

ಕ್ಷಿತಿಜಂ ಹತ್ತಟೊಳಿನಜಂ
ಚತುರ್ಥದೊಳ್ ಚಂದ್ರನಸ್ತದೊಳ್ ನಿಲೆ ವಾಪೀ
ಪತನ[4]ದೆ[4] ರವಿ ದಶಮದೊಳವ
ನಿತನೂಜಂ ಸುಖದೊಳಿರೆ ನಗಾಗ್ರದೆ ಮಡಿಗುಂ ೪

---

ಸಾಕ್ಷಾತ್ ಅಗ್ನಿಯಿಂದ ಸಾವು ಉಂಟಾಗುತ್ತದೆ ಎಂದು ಊಹಿಸಬೇಕು. ಚಂದ್ರನಿದ್ದರೆ ಶೀತಸಂಬಂಧವಾದ ಖಾಯಿಲೆ ಆಮಶಂಕೆ ಅಥವಾ ರಕ್ತಸಂಬಂಧ ವಾದ ವ್ಯಾಧಿಗಳಿಂದ ಅಂಗಾರಕನಿದ್ದರೆ ಅಪಘಾತ ಅಥವಾ ಪ್ಲೇಗು ಮೊದಲಾದ ಸಾಂಕ್ರಾಮಿಕ ರೋಗಗಳಿಂದ ಬುಧನಿದ್ದರೆ ಸಿಡುಬು ಬುದ್ಧಿವಿಕಾರ ಮೊದಲಾದವು ಗಳಿಂದ ಗುರುವಿದ್ದರೆ ಮನೋವಿಕಾರ ಅಥವಾ ತಿಳಿಯಲಸಾಧ್ಯವಾದ ವ್ಯಾಧಿ ಗಳಿಂದ ಶುಕ್ರನಿದ್ದರೆ ಹೆಚ್ಚು ಪಾನೀಯಾದಿಗಳಿಂದ ಶನಿ ಇದ್ದರೆ ಹಸಿವು ಅಥವಾ ಹೆಚ್ಚು ಊಟಮಾಡುವುದರಿಂದ ಸಾವು ಉಂಟಾಗುತ್ತದೆ ಎಂದು ಹೇಳಬಹುದು. ಬೃಹಜ್ಜಾತಕದಲ್ಲಿ 'ಶುಕ್ರ ಎಂಟನೆಯ ಸ್ಥಾನದಲ್ಲಿದ್ದರೆ ಬಾಯಾರಿಕೆಯಿಂದ ಶನಿಯಿದ್ದರೆ ಹಸಿವಿನಿಂದ ಮರಣ ಉಂಟಾಗುತ್ತದೆ' ಎಂದಿದೆ. ಲಘು ಜಾತಕದಲ್ಲಿ 'ಶುಕ್ರನಿದ್ದರೆ ಹಸಿವಿನಿಂದ ಶನಿಯಿದ್ದರೆ ಬಾಯಾರಿಕೆಯಿಂದ ಮರಣ ಉಂಟಾಗುತ್ತದೆ' ಎಂದಿದೆ. ಈ ಎರಡು ಗ್ರಂಥಗಳೂ ಏಕ ಕರ್ತೃಕವಾಗಿದ್ದು ಅಭಿಪ್ರಾಯಭೇದ ಕಂಡುಬರುವುದು ಸರಿಯಲ್ಲವೆಂದು ಆಕ್ಷೇಪಿಸಬಹುದು. ಆದರೆ ಹಸಿವು ಬಾಯಾರಿಕೆಗಳು ಸಾಮಾನ್ಯವಾಗಿ ಒಂದೆಡೆ ಯಲ್ಲೇ ಇರುತ್ತವೆ ಎನ್ನುವುದನ್ನು ಮನಸ್ಸಿನಲ್ಲಿಟ್ಟುಕೊಂಡಾಗಲೀ ಶುಕ್ರ ಶನಿ ಗಳಲ್ಲಿ ಯಾರು ಅಷ್ಟಮದಲ್ಲಿದ್ದರೂ ಹಸಿವಿನಿಂದಾಗಲೀ ಬಾಯಾರಿಕೆಯಿಂದಾಗಲೀ ಮರಣ ಸಂಭವಿಸುತ್ತದೆ ಎಂದು ಸ್ಪಷ್ಟಪಡಿಸುವುದಕ್ಕಾಗಲೀ ವರಾಹಮಿಹಿರರು ಒಂದೊಂದು ಗ್ರಂಥದಲ್ಲಿ ಒಂದೊಂದು ವಿಧವಾಗಿ ಹೇಳಿರಬಹುದು.

೩. ಎಂಟನೆಯ ಸ್ಥಾನ ಚರರಾಶಿಯಾಗಿದ್ದರೆ ಬೇರೆ ದೇಶದಲ್ಲೂ ಸ್ಥಿರ ರಾಶಿಯಾಗಿದ್ದರೆ ತನ್ನ ಊರಿನಲ್ಲೂ ದ್ವಿಸ್ವಭಾವರಾಶಿಯಾಗಿದ್ದರೆ ದಾರಿಯಲ್ಲೂ ಜಾತಕನು ಸಾಯುತ್ತಾನೆ.

೪. ಜನನಕಾಲದಲ್ಲಿ ಅಂಗಾರಕನು ಹತ್ತನೆಯ ಸ್ಥಾನದಲ್ಲೂ ಶನಿ ನಾಲ್ಕನೆಯ ಸ್ಥಾನದಲ್ಲೂ ಚಂದ್ರ ಏಳನೆಯ ಸ್ಥಾನದಲ್ಲೂ ಇದ್ದರೆ ಜಾತಕನು ಭಾವಿಗೆ ಬಿದ್ದು ಸಾಯುತ್ತಾನೆ; ಸೂರ್ಯ ಹತ್ತನೆಯ ಸ್ಥಾನದಲ್ಲೂ ಅಂಗಾರಕ ನಾಲ್ಕನೆಯ ಸ್ಥಾನದಲ್ಲೂ ಇದ್ದರೆ ಬೆಟ್ಟದ ತುದಿಯಿಂದ ಸಾಯುತ್ತಾನೆ.

---

[1] ಗ್ರ (ಕ) [2] ಣ (ಕ) [3] ತದಿಕ್ಷಮಾದರೊಳ್ (ಕ) [4] ದೊ (ಕ).

(ರಾಶಿಗ್ರಹಯೋಗದಿಂದ ಮೃತ್ಯುಕಾರಣ)

ಧರಣಿಜಗೇಹದೊಳ್ ನೆಲಸಿದಿಂದುವಿನಿರ್ಕೆಲದೊಳ್ ಶುಭಗ್ರಹೇ
ತರರಿರೆ ಶಸ್ತ್ರದಿಂದನಲನಿಂ ಮಡಿಗುಂ ನಿರೆ ಕನ್ನೆಯೊಳ್ ಕುಜಂ
ಹರಿಣಧರಂ ತುಲಾ[ಲ]ಯುದೊಳಿರ್ದೊಡೆರಡ್ಕೆಲದೊಳ್ ಶುಭಗ್ರಹೇ
ತರರಿರೆ [1]ರಕ್ತ[1]ಹಾನಿಯಿನವಂ ಮತಿಗೆ[2]ಟ್ಟೆರ್ದೆ[2]ಗೆಟ್ಟು ಪೊಂದುಗುಂ ೫

---

ವಿ–ಈ ಪದ್ಯದಲ್ಲಿರುವ ಎರಡು ಯೋಗಗಳಲ್ಲೂ ಹತ್ತು ಮತ್ತು ನಾಲ್ಕನೆಯ ಕೇಂದ್ರಸ್ಥಾನಗಳಲ್ಲಿ ಪಾಪಗ್ರಹವಿದೆ. ಆದುದರಿಂದ ಈ ಎರಡು ಕೇಂದ್ರಸ್ಥಾನಗಳಲ್ಲಿ ಪಾಪಗ್ರಹವಿದ್ದರೆ ಜಾತಕನಿಗೆ ಅಪಘಾತದಿಂದ ಮರಣ ವುಂಟಾಗುತ್ತದೆ ಎಂದು ಸಾಮಾನ್ಯವಾಗಿ ಹೇಳಬಹುದು. ಎರಡನೆಯ ಯೋಗ ದಲ್ಲಿ 'ನಗಾಗ್ರದೆ ಮಡಿಗುಂ' ಎಂದಿದೆ; ಇದಕ್ಕೆ ಜಾತಕನು ಬೆಟ್ಟದ ತುದಿಯಿಂದ ಬಿದ್ದು ಅಥವಾ ಬೆಟ್ಟದಮೇಲಿರುವ ಬಂಡೆ ಆತನ ಮೇಲೆ ಬಿದ್ದು ಸಾವು ಉಂಟಾಗು ತ್ತದೆ ಎಂದು ಅರ್ಥವಾಗುತ್ತದೆ.

೫. ಜನನಕಾಲದಲ್ಲಿ ಅಂಗಾರಕನ ರಾಶಿಯಲ್ಲಿ (ಮೇಷ ವೃಶ್ಚಿಕದಲ್ಲಿ) ರುವ ಚಂದ್ರನ ಎರಡುಪಾರ್ಶ್ವಗಳಲ್ಲೂ ಅಶುಭಗ್ರಹಗಳಿದ್ದರೆ ಜಾತಕನು ಆಯುಧ ದಿಂದಾಗಲೀ ಬೆಂಕಿಯಿಂದಾಗಲೀ ಸಾಯುತ್ತಾನೆ; ಕನ್ಯಾರಾಶಿಯಲ್ಲಿ ಅಂಗಾರಕ ನಿದ್ದು ಚಂದ್ರ ತುಲಾರಾಶಿಯಲ್ಲಿರುವಾಗ ಎರಡುಕಡೆಗಳಲ್ಲೂ ಪಾಪಗ್ರಹಗಳಿದ್ದರೆ ಜಾತಕನು ರಕ್ತಶೋಷದಿಂದ ಬುದ್ಧಿಗೆಟ್ಟು ಎದೆಗುಂದಿ ಸಾಯುತ್ತಾನೆ.

ವಿ–ಜನನಕಾಲದಲ್ಲಿ ಚಂದ್ರ ಮೇಷರಾಶಿಯಲ್ಲಿರಬೇಕಾದರೆ ಜಾತಕನ ನಕ್ಷತ್ರ ಅಶ್ವಿನಿ ಭರಣಿ ಕೃತ್ತಿಕ ೧ನೇ ಪಾದ ಇವುಗಳಲ್ಲೊಂದಾಗಿರಬೇಕು; ವೃಶ್ಚಿಕರಾಶಿಯಲ್ಲಿರಬೇಕಾದರೆ ವಿಶಾಖ ೪ನೇ ಪಾದ ಅನೂರಾಧ ಜ್ಯೇಷ್ಠ ಇವುಗಳಲ್ಲೊಂದಾಗಿರಬೇಕು. ಈ ನಕ್ಷತ್ರಗಳಲ್ಲಿ ಜನಿಸಿರುವವರ ಜನ್ಮರಾಶಿಯ ಎರಡುಪಾರ್ಶ್ವಗಳಲ್ಲೂ ಜನನಕಾಲದಲ್ಲಿ ಪಾಪಗ್ರಹವಿದ್ದರೆ ಜಾತಕನು ಆಯುಧ ದಿಂದಾಗಲೀ ಬೆಂಕಿಯಿಂದಾಗಲೀ ಸಾಯುತ್ತಾನೆ. ಇದು ಮೊದಲನೆಯ ಯೋಗ. ಎರಡನೆಯ ಯೋಗದಲ್ಲಿ ಅಂಗಾರಕನು ಕನ್ಯಾರಾಶಿಯಲ್ಲೂ ಚಂದ್ರನು ತುಲಾ ರಾಶಿಯಲ್ಲೂ ಇರಬೇಕೆಂದಿದೆ; ಆದರೆ ಬೃಹಜ್ಜಾತಕದಲ್ಲಿ 'ಕನ್ಯಾಯಾಂ ರುಧಿರೋತ್ಥ ಶೋಷ ಜನಿತಸ್ತದ್ವತ್ ಸ್ಥಿತೇ ಶೀತಗೌ' ಎಂದಿದೆ. ಇದರಂತೆ 'ಚಂದ್ರನು ಕನ್ಯಾರಾಶಿಯಲ್ಲಿರುವಾಗ ಸಿಂಹ ಮತ್ತು ತುಲಾರಾಶಿಗಳಲ್ಲಿ ಪಾಪ ಗ್ರಹಗಳಿದ್ದರೆ ರಕ್ತಶೋಷದಿಂದ ಸಾಯುತ್ತಾನೆ' ಎಂದು ಅರ್ಥವಾಗುತ್ತದೆ. ಈ ಅರ್ಥವನ್ನೇ ಕೊಡುವಂತೆ ಶ್ರೀಧರನಿಂದ ರಚಿತವಾಗಿರುವ ಪದ್ಯವು ಲೇಖಕ ರಿಂದ ಸ್ವಲ್ಪ ವ್ಯತ್ಯಾಸವಾಗಿರಬಹುದು. ಇಲ್ಲದಿದ್ದರೆ ಚಂದ್ರನು ತುಲಾರಾಶಿ ಯಲ್ಲಿರುವಾಗ ಅಂಗಾರಕ ಕನ್ಯಾರಾಶಿಯಲ್ಲಿದ್ದರೆ ಚಂದ್ರನ ಒಂದು ಪಾರ್ಶ್ವದಲ್ಲಿ ಪಾಪಗ್ರಹ ಇದ್ದಂತಾಗುವುದರಿಂದ 'ಎರಡ್ಕೆಲದೊಳ್ ಶುಭಗ್ರಹೇತರರಿರೆ' ಎಂದುಹೇಳುವ ಆವಶ್ಯಕತೆ ಕಂಡುಬರುವುದಿಲ್ಲ.

---

[1] ಏತ್ತ (ಕ) [2] ಟ್ಟುರ್ದೆನೆ (ಕ).

ಜಲಜಪ್ರಿಯಸುತ[1]ಗೃಹದೊಳ್
ನಿಲೆ ಶಶಿಯಿರ್ಕೆಲದೊಳುಗ್ರರಿರೆ ಮೇಣ್ ಕ್ರೂರರ್
ನಿಲೆ ನವ ಪಂಚಮದೊಳ್ ನೋ
ಡಲೊಲ್ಲದಿರೆ ಸೌಮ್ಯ[2]ರನಲ[2] ಪಾತದೆ ಮಡಿಗುಂ ೬

(ಶೂಲಕ್ಕೇರಿಸುವುದರಿಂದ ಮರಣ)

ದಿವಸಕರನಕ್ಕಿಳಾಸಂ
ಭವನಕ್ಕಿರೆ ನಾಲ್ಕಱೊಳ್ ದಶಸ್ಥಾನಕದೊಳ್
ರವಿಸುತನಿರೆ ಶೂಲದೊಳಿ
ಕ್ಕುವರಾ ಲಗ್ನಪ್ರಸೂತನಂ ಪಾತಕನಂ ೭

---

೬. ಶನಿಯ (ಮಕರ ಕುಂಭ)ರಾಶಿಯಲ್ಲಿ ಚಂದ್ರನಿರುವಾಗ ಆತನ ಎರಡುಪಾರ್ಶ್ವಗಳಲ್ಲೂ ಪಾಪಗ್ರಹಗಳಿದ್ದರೆ ಅಥವಾ ಅಶುಭಗ್ರಹಗಳು ಲಗ್ನದಿಂದ ಒಂಬತ್ತು ಐದನೆಯ ಸ್ಥಾನಗಳಲ್ಲಿದ್ದು ಶುಭಗ್ರಹಗಳು ನೋಡದಿದ್ದರೆ ಜಾತಕನು ಬೆಂಕಿ ಅಥವಾ ಬೀಳುವುದರಿಂದ ಸಾಯುತ್ತಾನೆ.

ವಿ—ಈ ಪದ್ಯದಲ್ಲಿ ಎರಡುಯೋಗಗಳನ್ನು ಹೇಳಿದೆ. ಇದರಲ್ಲಿ ಮೊದಲನೆಯ ಯೋಗಕ್ಕೆ 'ರಜ್ಜ್ವಗ್ನಿಪಾತ್ಯೈಃ *ಕೃತಃ*' ಎಂದು ಬೃಹಜ್ಜಾತಕದಲ್ಲಿ ಫಲವಿದೆ. ರಜ್ಜು ಅಗ್ನಿ ಪಾತ ಈ ಮೂರು ಮರಣಕಾರಣಗಳಲ್ಲಿ 'ರಜ್ಜು'ವನ್ನು ಶ್ರೀಧರನು ಬಿಟ್ಟಿರುತ್ತಾನೆ; ಅಲ್ಲದೆ ಎರಡನೆಯ ಯೋಗಕ್ಕೆ 'ಬಂಧನದಿಂದ ಮರಣವುಂಟಾಗುತ್ತದೆ' ಎಂದು ಬೃಹಜ್ಜಾತಕದಲ್ಲಿ ಹೇಳಿರುವ ಫಲವನ್ನು ಬಿಟ್ಟು ಆ ಯೋಗಕ್ಕೂ ಮೊದಲನೆಯ ಯೋಗದ ಫಲವನ್ನೇ ಹೇಳಿರುತ್ತಾನೆ.

೭. ಜನನ ಕಾಲದಲ್ಲಿ ಸೂರ್ಯನಾಗಲೀ ಅಂಗಾರಕನಾಗಲೀ ನಾಲ್ಕನೆಯ ಸ್ಥಾನದಲ್ಲಿರುವಾಗ ಹತ್ತನೆಯಸ್ಥಾನದಲ್ಲಿ ಶನಿ ಇದ್ದರೆ ಆ ಲಗ್ನದಲ್ಲಿ ಹುಟ್ಟಿದ ಪಾತಕಿಯನ್ನು ಶೂಲಕ್ಕೇರಿಸುತ್ತಾರೆ.

---

[1] ನಬ (ಕ) [2] ನರನ (ಕ).
*'ವಧಃ' ಎಂದೂ 'ಮೃತಃ' ಎಂದೂ ಪಾಠಾಂತರಗಳಿವೆ

(ಬಂಧನ ಮತ್ತು ಹೆಂಗಸಿನಿಂದ ಮರಣ)

ನಿಗಳಂ ಮೇಣ್ ಫಣಿಪಾಶಮೆಂಬ ಪೆಸರಿಂ ದ್ರೇಕ್ಕಾಣಮಾದಂದು ಪೊಂ
ದುಗುಮಾ ಬಂಧನದಿಂದಮೇಳನೆಯ ಗೇಹಂ ಕನ್ನೆಯಾದಂದು ಶೀ
ತಗು ಪಾಪಗ್ರಹಯುಕ್ತನಲ್ಲಿ[1]ರ[1]ಸುರೇಜ್ಯಂ ಮೇಷದೊಳ್ ಕೂಡೆ ತೀ
ಕ್ಷ್ಣಗು ಲಗ್ನಸ್ಥಿತನಾಗೆ ಪೆಣ್ಣ ಕ[2]ತ[2]ದಿಂ ಸಾ[3]ಯ್ಗುಂ ನಿಜಾ[3]ವಾಸದೊಳ್ ೮

---

೮. (ಎಂಟನೆಯ ಸ್ಥಾನದಲ್ಲಿ) ನಿಗಳ ಅಥವಾ ಸರ್ಪ ಪಾಶದ್ರೇಕ್ಕಾಣಗಳು ಉದಿತವಾಗಿದ್ದರೆ ಜಾತಕನು ಆಯಾ ದ್ರೇಕ್ಕಾಣಗಳಿಗನುಗುಣವಾದ ಬಂಧನದಿಂದ ಸಾಯುತ್ತಾನೆ. ಏಳನೆಯ ಸ್ಥಾನ ಕನ್ಯಾರಾಶಿಯಾಗಿ ಚಂದ್ರ ಪಾಪಗ್ರಹದೊಡನೆ ಆ ಸ್ಥಾನದಲ್ಲಿರುವಾಗ ಶುಕ್ರ ಮೇಷರಾಶಿಯಲ್ಲೂ ಸೂರ್ಯ ಲಗ್ನದಲ್ಲೂ ಇದ್ದರೆ ಜಾತಕನು ತನ್ನ ಮನೆಯಲ್ಲಿ ಹೆಂಗಸಿನ ಕಾರಣದಿಂದ ಸಾಯುತ್ತಾನೆ.

ವಿ–ನಿಗಳ ಸರ್ಪ ಪಾಶದ್ರೇಕ್ಕಾಣಗಳು ಎಂಟನೆಯ ಸ್ಥಾನದಲ್ಲಿ ಉದಿತವಾಗಬೇಕೆನ್ನುವ ಅಂಶ ಪದ್ಯದಲ್ಲಿಲ್ಲ. 'ಛಿದ್ರಸ್ಥಿತೈಃ' ಎಂದು ಬೃಹಜ್ಜಾತಕದಲ್ಲಿರುವುದರಿಂದ 'ಎಂಟನೆಯ ಸ್ಥಾನದಲ್ಲಿ' ಎಂದು ಟೀಕಿನಲ್ಲಿ ಸೇರಿಸಿದೆ. 'ಬಂಧಾದ್ಧೀನವಮಸ್ಥಯೋರಶುಭಯೋಃ ಸೌಮ್ಯಾಗ್ರಹಾದ್ಯಷ್ಟಯೋಃ' ಎಂದೂ 'ದ್ರೇಕ್ಕಾಣೈಶ್ಚ ಸಪಾಶಸರ್ಪನಿಗಲೈಶ್ಛಿದ್ರಸ್ಥಿತೈರ್ಬಂಧತಃ' ಎಂದೂ ಬೃಹಜ್ಜಾತಕದಲ್ಲಿ ಒಟ್ಟು ಎರಡು ಬಂಧನಯೋಗಗಳನ್ನು ಹೇಳಿದೆ. ಇದರಲ್ಲಿ ಮೊದಲನೆಯ ಯೋಗವನ್ನು '*ಕ್ರೂರರ್ ನಿಲೆ ನವ ಪಂಚಮದೊಳ್ ನೋಡಲೊಲ್ಲದಿರೆ ಸೌಮ್ಯರ್' ಎಂದು ಆರನೆಯ ಪದ್ಯದಲ್ಲೂ ಎರಡನೆಯ ಯೋಗವನ್ನು 'ನಿಗಳಂ ಮೇಣ್ ಫಣಿ ಪಾಶಮೆಂಬ ಪೆಸರಿಂ ದ್ರೇಕ್ಕಾಣಮಾದಂದು ಪೊಂದುಗುಮಾ ಬಂಧನದಿಂದಂ' ಎಂದು ಪ್ರಕೃತಪದ್ಯದಲ್ಲೂ ಪ್ರತ್ಯೇಕವಾಗಿ ಈ ಎರಡು ಯೋಗಗಳನ್ನೂ ಶ್ರೀಧರನು ಹೇಳಿರುತ್ತಾನೆ. ಬೃಹಜ್ಜಾತಕದ ವಿವರಣವ್ಯಾಖ್ಯಾನದಲ್ಲಿ 'ಬಂಧಾದ್ಧೀ' ಎನ್ನುವುದಕ್ಕೆ ಪ್ರತಿಯಾಗಿ 'ಲಗ್ನಾದ್ಧೀ' ಎನ್ನುವ ಪಾಠವನ್ನಿಟ್ಟುಕೊಂಡು ಈ ಎರಡು ಯೋಗಗಳನ್ನೂ ಸೇರಿಸಿ 'ಲಗ್ನದಿಂದ ಐದು ಒಂಬತ್ತನೆಯ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದು ಶುಭಗ್ರಹಗಳು ನೋಡದಿರುವಾಗ ಎಂಟನೆಯ ಸ್ಥಾನದಲ್ಲಿ ಪಾಶ ಸರ್ಪನಿಗಳ ದ್ರೇಕ್ಕಾಣಗಳಲ್ಲಿ ಯಾವ ದ್ರೇಕ್ಕಾಣವಾದರೂ ಉದಿತವಾಗಿದ್ದರೆ ಆ ದ್ರೇಕ್ಕಾಣದ ಹೆಸರಿಗನುಗುಣವಾದ ಬಂಧನದಿಂದ ಜಾತಕನು ಸಾಯುತ್ತಾನೆ' ಎಂದು ಒಂದೇ ಯೋಗವಾಗಿ ವ್ಯಾಖ್ಯಾನಮಾಡಿರುತ್ತಾರೆ. ಈ ಅಭಿಪ್ರಾಯವು ಶ್ರೀಧರನಿಗೆ ಸಮ್ಮತವಲ್ಲ. ಸರ್ಪ ಪಾಶ ನಿಗಳ ದ್ರೇಕ್ಕಾಣಗಳ ವಿವರ ದ್ರೇಕ್ಕಾಣ ಪ್ರಕರಣ (೧೯ನೇ ಅಧಿಕಾರ)ದಲ್ಲಿದೆ.

ಈ ಪದ್ಯದಲ್ಲಿರುವ ಎರಡನೆಯ ಯೋಗವು ಮೀನಮಾಸದ ಶುಕ್ಲ ಚತುರ್ದಶೀ ಪೂರ್ಣಿಮಾ ಕೃಷ್ಣಪ್ರಥಮಾ ತಿಥಿಗಳಲ್ಲಿ ಉತ್ತರಾನಕ್ಷತ್ರ ೨, ೩, ೪ನೇ ಪಾದಗಳು

---

[1] ರೆ (ಕ) [2] ಥ (ಕ) [3] ಸಾಯುಗು ನಿಜ (ಕ).

*ಶ್ರೀಧರನು ಈ ಯೋಗಕ್ಕೆ 'ಬಂಧನದಿಂದ ಮರಣ' ಎಂದು ಹೇಳಿರುವುದಿಲ್ಲ.

(ಜಲೋದರ ಬಂಧುಜನ ಮತ್ತು ನೀರಿನಿಂದ ಸಾವು)

ಇರೆ ಚಂದ್ರಂ ಮೃಗದೊಳ್ ಕುಳೀರದೊಳಿನಪ್ರೋದ್ಭೂತನಕ್ಕುಂ ಜಲೋ
ದರದಿಂದಂ ಮರಣಂ ವಧೂಗೃಹದೊಳಿರ್ದಂದಿಂದು ಸೂ[1]ರ್ಯರ್ ಶು[1]ಭೇ
ತರ ಸರ್ವೇಕ್ಷಣದಿಂದೆ ಬಂಧುಜನದಿಂ ಸಾವಕ್ಕುಮಿಂ[2]ದ್ವ[2]ರ್ಕರೊಂ
ದಿರೆ ಮೀನೋದಯದೊಳ್ ನಿರೀಕ್ಷಿಸುವೊಡುಗ್ರರ್ ನೀರೊಳಕ್ಕುಂ ಲಯಂ ೯

---

ಹಸ್ತನಕ್ಷತ್ರ ಚಿತ್ತಾನಕ್ಷತ್ರ ೧, ೨ನೇ ಪಾದಗಳು ಸೇರಿರುವುದಲ್ಲದೆ ಲಗ್ನಕ್ಕೆ ಎರಡನೆಯ ಸ್ಥಾನದಲ್ಲಿ ಶುಕ್ರನಿದ್ದು ಚಂದ್ರನೊಡನೆ ಅಂಗಾರಕನಾಗಲೀ ಶನಿಯಾಗಲೀ ಇರುವಾಗ ಸೂರ್ಯೋದಯಕಾಲದಲ್ಲಿ ಹುಟ್ಟಿದವರಿಗೆ ಮಾತ್ರ ಸಂಭವಿಸುತ್ತದೆ.

೯. ಜನನಕಾಲದಲ್ಲಿ ಚಂದ್ರ ಮಕರರಾಶಿಯಲ್ಲೂ ಕರ್ಕಟಕರಾಶಿಯಲ್ಲಿ ಶನಿಯೂ ಇದ್ದರೆ ಜಾತಕನಿಗೆ ಜಲೋಧರ ವ್ಯಾಧಿಯಿಂದ ಮರಣವುಂಟಾಗುತ್ತದೆ; ಕನ್ಯಾರಾಶಿಯಲ್ಲಿ ಚಂದ್ರ ಸೂರ್ಯರಿದ್ದು ಎಲ್ಲ ಪಾಪಗ್ರಹಗಳೂ ನೋಡಿದರೆ ನೆಂಟರಿಂದ ಸಾವು ಉಂಟಾಗುತ್ತದೆ; ಚಂದ್ರ ಸೂರ್ಯರು ಮೀನಲಗ್ನದಲ್ಲಿದ್ದು ಪಾಪಗ್ರಹಗಳು ನೋಡಿದರೆ ನೀರಿನಲ್ಲಿ (ಮುಳುಗುವುದರಿಂದ) ಮರಣ ವುಂಟಾಗುತ್ತದೆ.

ವಿ—ಜನ್ಮನಕ್ಷತ್ರ ಉತ್ತರಾಷಾಢ ೨, ೩, ೪ನೇ ಪಾದಗಳು ಶ್ರವಣ ಧನಿಷ್ಠ ೧, ೨ನೇ ಪಾದಗಳಾಗಿ ಕರ್ಕಟಕರಾಶಿಯಲ್ಲಿ ಶನಿ ಇರುವಾಗ ಹುಟ್ಟಿದವನು ಜಲೋದರದಿಂದ ಸಾಯುತ್ತಾನೆ. ಕನ್ಯಾಮಾಸದಲ್ಲಿ ಉತ್ತರಾ ೨, ೩, ೪ನೇ ಪಾದಗಳು ಹಸ್ತ ಚಿತ್ತ (೧, ೨ನೇ ಪಾದಗಳು) ನಕ್ಷತ್ರಗಳಲ್ಲಿ ಜನನವಾಗಿ ಕನ್ಯಾ ರಾಶಿಯಲ್ಲಿರುವ ಸೂರ್ಯ ಚಂದ್ರರನ್ನು ಅಂಗಾರಕ ಶನಿಗಳು ನೋಡಿದರೆ ಈ ಜಾತಕನು ನೆಂಟರಿಂದ ಸಾಯುತ್ತಾನೆ. ಮೀನ ಮಾಸದಲ್ಲಿ ಸೂರ್ಯೋದಯ ಕಾಲಕ್ಕೆ ಸಮೀಪದಲ್ಲಿ (ಮೀನಲಗ್ನದಲ್ಲಿ) ಪೂರ್ವಾಭಾದ್ರ ೪ನೇ ಪಾದ ಉತ್ತರಾಭಾದ್ರ ರೇವತಿ ನಕ್ಷತ್ರಗಳಲ್ಲಿ ಜನನವಾಗಿ ಮೀನರಾಶಿಯಲ್ಲಿರುವ ಚಂದ್ರಸೂರ್ಯರನ್ನು ಶನಿ ಕುಜರು ನೋಡಿದರೆ ಜಾತಕನು ನೀರಿನಲ್ಲಿ ಮುಳುಗಿ ಸಾಯುತ್ತಾನೆ.

---

1 ರ್ಯ ಸು(ಕ) 2 ದೊ (ಕ).

(ಕಟ್ಟಿಗೆಯ ಹೊಡೆತದಿಂದ ಮರಣ)

ಕನಕಂ ಹತ್ತಱೊಳಬ್ಜಮಿತ್ರನಿರೆ ತುರ್ಯಸ್ಥಾನದೊಳ್ ಕ್ಷೀಣಚಂ
ದ್ರನುಮರ್ಕೋದ್ಭವನುಂ ನಿರೀಕ್ಷಿಪೊಡೆ ಮೇಣ್ ಪಾಪಗ್ರಹಂ ಲಗ್ನ ಪಂ
ಚ [1]ನವ[1]ಸ್ಥಾನ[ವು]ನಿಪ್ಪ 'ಮೂಱಱೆಯೊಳೇಕಸ್ಥಾನದೊಳ್ ಕ್ಷೀಣಚಂ
ದ್ರನೊಳನ್ಯರ್ಕ್ಷದೊಳೊಂದಿ ತಾ[2]ವೆ[2] ನಿರೆ ಕಾಷ್ಠಾ[3]ಘಾ[3]ತದಿಂ ಪೊಂದುಗುಂ ೧೦

೧೦. ಜನನಕಾಲದಲ್ಲಿ ಅಂಗಾರಕ ಹತ್ತನೆಯ ಸ್ಥಾನದಲ್ಲೂ ಸೂರ್ಯ ನಾಲ್ಕನೆಯ ಸ್ಥಾನದಲ್ಲೂ ಇದ್ದು ಕ್ಷೀಣಚಂದ್ರ ಮತ್ತು ಶನಿ ನೋಡಿದರೆ ಅಥವಾ ಪಾಪಗ್ರಹಗಳು ಲಗ್ನ ಐದು ಒಂಬತ್ತು ಈ ಮೂರುಸ್ಥಾನಗಳಲ್ಲಿ ಯಾವ ಸ್ಥಾನ ದಲ್ಲಾದರೂ ಇರುವುದಲ್ಲದೆ ಕ್ಷೀಣಚಂದ್ರ ನೂ ಪಾಪಗ್ರಹದೊಡನೆ ಈ ಮೂರು ಸ್ಥಾನಗಳೊಂದರಲ್ಲಿದ್ದರೆ ಜಾತಕನು ಕಟ್ಟಿಗೆಯ ಹೊಡೆತದಿಂದ ಸಾಯುತ್ತಾನೆ.

ವಿ–ಬೃಹಜ್ಜಾತಕದ

"ಶೂಲೋದ್ಭಿನ್ನತನುಃ ಸುಖೇಽವನಿಸುತೇ ಸೂರ್ಯೇಽಪಿ ವಾ ಖೇ ಯಮೇ
ಸಪ್ರಕ್ಷೀಣ ಹಿಮಾಂಶುಭಿಶ್ಚ ಯುಗಪತ್ ಪಾಪೈಸ್ತ್ರಿಕೋಣಾದ್ಯಗೈಃ ।
ಬಂಧುಸ್ಥೇ ಚ ರವೌ ವಿಯತ್ಯವನಿಜೇ ಕ್ಷೀಣೇಂದುಸಂವೀಕ್ಷಿತೇ
ಕಾಷ್ಠೇನಾಭಿಹತಃ ಪ್ರಯಾತಿ ಮರಣಂ ಸೂರ್ಯಾತ್ಮಜೇನೇಕ್ಷಿತೇ ॥"

ಎನ್ನುವ ಶ್ಲೋಕದ ಮೊದಲನೆಯ ಪಾದವನ್ನು ಏಳನೆಯ ಪದ್ಯದಲ್ಲೂ ಉಳಿದ ಮೂರು ಪಾದಗಳನ್ನು ಈ ಪದ್ಯದಲ್ಲೂ ಶ್ರೀಧರನು ಕನ್ನಡಿಸಿರುತ್ತಾನೆ. ಬೃಹಜ್ಜಾತಕ ವ್ಯಾಖ್ಯಾನಕಾರರು ಶ್ಲೋಕದ ನಾಲ್ಕು ಸಾಲುಗಳಿಗೂ ಪ್ರತ್ಯೇಕವಾಗಿ ನಾಲ್ಕು ಯೋಗಗಳನ್ನು ಹೇಳಿರುತ್ತಾರೆ. ಅದರಲ್ಲಿ ಮೊದಲ ಮೂರು ಯೋಗ ಗಳಿಗೆ ಶೂಲದಿಂದ ಮರಣವೆಂದೂ ಕೊನೆಯ ಯೋಗಕ್ಕೆ ಮಾತ್ರ ಕಾಷ್ಠಾಘಾತ ದಿಂದ ಮರಣವೆಂದೂ ಅಭಿಪ್ರಾಯಪಟ್ಟಿರುತ್ತಾರೆ. ಶ್ರೀಧರನು 'ಶೂಲೋದ್ಭಿನ್ನತನುಃ ಸುಖೇಽವನಿಸುತೇ ಸೂರ್ಯೇಽಪಿ ವಾ ಖೇ ಯಮೇ' ಎನ್ನುವುದನ್ನು ಪ್ರತ್ಯೇಕವಾಗಿ ಏಳನೆಯ ಪದ್ಯದಲ್ಲಿ ಹೇಳಿ ಉಳಿದ ಮೂರು ಯೋಗಗಳನ್ನು ಎರಡು ಯೋಗಗಳನ್ನಾಗಿ ಮಾಡಿ ಈ ಎರಡು ಯೋಗಗಳಿಗೂ ಶ್ಲೋಕದ ನಾಲ್ಕನೆಯ ಸಾಲಿನಲ್ಲಿರುವ 'ಕಾಷ್ಠೇನಾಭಿಹತಃ ಪ್ರಯಾತಿ ಮರಣಂ' ಎನ್ನುವ ಫಲವನ್ನೇ ಹೇಳಿರುತ್ತಾನೆ. ಇದರಲ್ಲಿ 'ಸಪ್ರಕ್ಷೀಣ ಹಿಮಾಂಶುಭಿಶ್ಚ ಯುಗಪತ್ಪಾಪೈಸ್ತ್ರಿಕೋಣಾದ್ಯಗೈಃ' ಎನ್ನುವುದು ಒಂದು ಯೋಗ; ಉಳಿದ ಭಾಗವೆಲ್ಲ ಮತ್ತೊಂದು ಯೋಗ. ಶ್ರೀಧರನ ಈ ಅಭಿಪ್ರಾಯ ಬೃಹಜ್ಜಾತಕ ವ್ಯಾಖ್ಯಾನ ಕಾರರಲ್ಲಾರಿಗೂ ಸಮ್ಮತವಾಗಿರುವುದಿಲ್ಲ. ಗುಣಾಕರ ಕಲ್ಯಾಣವರ್ಮರು 'ನಾಲ್ಕರಲ್ಲಿ ಸೂರ್ಯನೂ ಹತ್ತರಲ್ಲಿ ಅಂಗಾರಕನು ಕ್ಷೀಣಚಂದ್ರನೊಡನೆಯೂ ಇದ್ದು ಶನಿ ನೋಡಿದರೆ ಕಾಷ್ಠಾಭಿಘಾತದಿಂದ ಮರಣವುಂಟಾಗುತ್ತದೆ' ಎಂದು ಅಭಿಪ್ರಾಯಪಟ್ಟಿರುತ್ತಾರೆ. ಪಟ್ಟಿನಲ್ಲಿ ಎಲ್ಲ ಪಾಪಗ್ರಹ(ಸೂರ್ಯ ಕ್ಷೀಣಚಂದ್ರ

[1] ನವಮು (ಕ) [2] ಮೇಣ್ (ಕ) [3] ಪಾ (ಕ).

(ದೊಣ್ಣೆಪೆಟ್ಟಿನಿಂದ ಸಾವು)

ನಿಧನದೊಳಧಿಕಕ್ಷೀಣಂ
ವಿಧು ನಿಲೆ ರವಿತನಯನುದಯದೊಳ್ ಹತ್ತನೆಯೊಳ್
ರುಧಿರಂ ನಾಲ್ಕನೆಯೊಳ್ ರವಿ
ನಿಧನಂ ಮನುಜಂಗೆ [1]ಲಗುಡಪಾತದಿನಕ್ಕುಂ[1] ೧೧

(ಗುದ್ದು ಬಂಧನ ಹೊಗೆ ಮತ್ತು ಬೆಂಕಿಯಿಂದ ಸಾವು)

ಕನಕಂ ನವಮದೊಳುದಯದೊ
ಳಿನಜಂ ಕ್ಷೀಣೇಂದು ದಶಮದೊಳ್ ಪಂಚಮದೊಳ್
ದಿನಪತಿ ನಿಲೆ ಗುರ್ದಿಂ ಬಂ
ಧನದಿಂ ಪೊಗೆಯಿಂ[2]ದಮ[2]ಗ್ನಿಯಿಂ[ದಂ] ಸಾಯ್ಗುಂ ೧೨

---

ಅಂಗಾರಕ ಶನಿ)ಗಳೂ ಕೇಂದ್ರ ಸ್ಥಾನಗಳಲ್ಲಾಗಲೀ ತ್ರಿಕೋಣ(ಲಗ್ನ ಐದು ಒಂಬತ್ತು) ಸ್ಥಾನಗಳಲ್ಲಾಗಲೀ ಇದ್ದರೆ ಜಾತಕನಿಗೆ ಕಾಷ್ಠಾಘಾತದಿಂದ ಮರಣ ವುಂಟಾಗುತ್ತದೆ ಎಂದು ತಾತ್ಪರ್ಯವಾಗುತ್ತದೆ.

೧೧. ಎಂಟನೆಯ ಸ್ಥಾನದಲ್ಲಿ ಅತಿಕ್ಷೀಣ ಬಲಹೀನಚಂದ್ರನೂ ಲಗ್ನದಲ್ಲಿ ಶನಿಯೂ ಹತ್ತನೆಯ ಸ್ಥಾನದಲ್ಲಿ ಅಂಗಾರಕನೂ ನಾಲ್ಕನೆಯ ಸ್ಥಾನದಲ್ಲಿ ಸೂರ್ಯನೂ ಇರುವಾಗ ಹುಟ್ಟಿದ ಜಾತಕನಿಗೆ ದೊಣ್ಣೆಪೆಟ್ಟಿನಿಂದ ಸಾವು ಉಂಟಾಗುತ್ತದೆ.

೧೨. ಅಂಗಾರಕ ಒಂಬತ್ತನೆಯ ಸ್ಥಾನದಲ್ಲೂ ಲಗ್ನದಲ್ಲಿ ಶನಿಯೂ ಕ್ಷೀಣ(ಬಲಹೀನ)ಚಂದ್ರ ಹತ್ತನೆಯ ಸ್ಥಾನದಲ್ಲೂ ಐದನೆಯ ಸ್ಥಾನದಲ್ಲಿ ಸೂರ್ಯನೂ ಇರುವಾಗ ಹುಟ್ಟಿದ ಜಾತಕನು ಗುದ್ದುವಿಕೆ ಬಂಧನ ಹೊಗೆ ಬೆಂಕಿ ಈ ಕಾರಣಗಳಿಂದ ಸಾಯುತ್ತಾನೆ.

ವಿ–ಬೃಹಜ್ಜಾತಕದ 'ರಂಧ್ರಾಸ್ಪದಾಂಗ ಹಿಬುಕೈರ್ಲಗುಡಾಹತಾಂಗಃ ಪ್ರಕ್ಷೀಣಚಂದ್ರ ರುಧಿರಾರ್ಕಸುತಾರ್ಕಯುಕ್ತೈಃ। ತೈರೇವ ಕರ್ಮನವಮೋದಯ ಪುತ್ರಸಂಸ್ಥೈರ್ಧೂಮಾಗ್ನಿ ಬಂಧನ ಶರೀರ ನಿಕುಟ್ಟನಾಂತಃ॥' ಈ ಶ್ಲೋಕದಲ್ಲಿ ರುವ ಯೋಗಗಳನ್ನು ಶ್ರೀಧರನು ೧೧, ೧೨ನೇ ಪದ್ಯಗಳಲ್ಲಿ ಕನ್ನಡಿಸಿರುತ್ತಾನೆ. ಬೃಹಜ್ಜಾತಕ ವ್ಯಾಖ್ಯಾನಕಾರರು ಮೊದಲನೆಯ ಯೋಗದಲ್ಲಿ 'ರಂಧ್ರಾಸ್ಪದಾಂಗ ಹಿಬುಕೈಃ' ಎನ್ನುವುದಕ್ಕೂ 'ಪ್ರಕ್ಷೀಣಚಂದ್ರ ರುಧಿರಾರ್ಕಸುತಾರ್ಕ' ಎನ್ನುವುದಕ್ಕೂ ಯಥಾಕ್ರಮಾನ್ವಯಮಾಡಿ ಎಂಟನೆಯ ಸ್ಥಾನದಲ್ಲಿ ಕ್ಷೀಣಚಂದ್ರನೂ ದಶಮದಲ್ಲಿ ಅಂಗಾರಕನೂ ಲಗ್ನದಲ್ಲಿ ಶನಿಯೂ ನಾಲ್ಕನೆಯ ಸ್ಥಾನದಲ್ಲಿ ಸೂರ್ಯನೂ ಇರಬೇಕೆಂದು ಎರಡನೆಯ ಯೋಗದಲ್ಲೂ ಇದೇರೀತಿ ಯಥಾ ಕ್ರಮಾನ್ವಯ ಮಾಡಿ ಹತ್ತನೆಯ ಸ್ಥಾನದಲ್ಲಿ ಕ್ಷೀಣಚಂದ್ರನೂ ಒಂಬತ್ತನೆಯ ಸ್ಥಾನ

---

[1] ಲಉಡಿಯು ಹೊಇಲಂ ಸಾವ ಪೊಕಾಟ ಪಾತದಿನಕಾಂ (ಕ) [2] ಧಂ ಅ (ಕ).

(ಆಯುಧ ಬೆಂಕಿ ರಾಜಕೋಪದಿಂದ ಮರಣ)

ರುಧಿರಂ ಸುಖದೊಳ್ ಶನಿ ದಶ
ಮದೊಳಂತಾ ಸೂರ್ಯನಸ್ತದೊಳ್ ನೆಲಸಿದೊಡಾ
ಯುಧದಿಂದೆ ಹವಿರ್ಭುಜನಿಂ
ದೆ ಧರಾಪತಿಕೋಪದಿಂದೆ ಮಡಿಗುಂ ಮನುಜಂ ೧೩

(ಆಯುಧದಿಂದ ಗಾಯವಾಗಿ ಹುಳು ಬಿದ್ದು ಮರಣ)

ಇಂದು ನಿರೆ ತುರ್ಯಗೃಹದೊಳ್
ಮಂದಂ ನಿರೆ ವಿತ್ತಭವನದೊಳ್ ನಿರೆ ಧರಣೀ
ಜಂ ದಶಮದೊಳಸ್ತ್ರಾಹತಿ
ಯಿಂದಮವಂ ಬಿರ್ದು ಪುಟಿತು ಲಯವಾಗದಿರಂ ೧೪

---

ದಲ್ಲಿ ಅಂಗಾರಕನೂ ಲಗ್ನದಲ್ಲಿ ಶನಿಯೂ ಐದನೆಯ ಸ್ಥಾನದಲ್ಲಿ ಸೂರ್ಯನೂ ಇರಬೇಕೆಂದೂ ಅಭಿಪ್ರಾಯಪಟ್ಟಿರುತ್ತಾರೆ. ಶ್ರೀಧರನೂ ಈ ಅಭಿಪ್ರಾಯವನ್ನೇ ಅನುಸರಿಸಿರುತ್ತಾನೆ. ಆದರೆ ಈ ವಿಧವಾಗಿ ಯಥಾಕ್ರಮಾನ್ವಯ ಮಾಡುವುದರಿಂದುಂಟಾಗುವ ಗ್ರಹಸ್ಥಿತಿಯಿಂದ ಎರಡು ಯೋಗಗಳಲ್ಲೂ ಚಂದ್ರನು ಕ್ಷೀಣನಾಗಿರಬೇಕೆಂದು ಹೇಳಿರುವ ಅಂಶವೇ ಸಂಭವಿಸುವುದಿಲ್ಲ. ಆದುದರಿಂದ ಶ್ಲೋಕಕ್ಕೆ ಯಥಾಕ್ರಮಾನ್ವಯಮಾಡಿ ಅರ್ಥಹೇಳುವುದು ಸರಿಯಲ್ಲ. ಪಾಪಗ್ರಹಗಳು ಮೊದಲನೆಯ ಯೋಗದಲ್ಲಿ ಏಳನೆಯ ಸ್ಥಾನವನ್ನು ಬಿಟ್ಟು ಉಳಿದ ಮೂರು ಕೇಂದ್ರಗಳು ಮತ್ತು ಎಂಟನೆಯ ಸ್ಥಾನದಲ್ಲೂ ಎರಡನೆಯ ಯೋಗದಲ್ಲಿ ಮೂರು ತ್ರಿಕೋಣಗಳು ಮತ್ತು ದಶಮ ಕೇಂದ್ರದಲ್ಲೂ ಇರಬೇಕೆಂದು ಅರ್ಥಮಾಡುವುದು ನ್ಯಾಯವಾಗಿ ಕಂಡುಬರುತ್ತದೆ. ಕ್ಷೀಣೇಂದು ಎನ್ನುವುದಕ್ಕೆ ದುರ್ಬಲನಾದ ಚಂದ್ರ ಎಂದು ಅರ್ಥಮಾಡಿ ಯಥಾಸಂಖ್ಯಾನ್ವಯ ಮಾಡುವುದರಿಂದ ಯಾವ ದೋಷವೂ ಸಂಭವಿಸುವುದಿಲ್ಲ.

೧೩. ಜನನಕಾಲದಲ್ಲಿ ಅಂಗಾರಕ ನಾಲ್ಕನೆಯ ಸ್ಥಾನದಲ್ಲೂ ಶನಿ ಹತ್ತನೆಯ ಸ್ಥಾನದಲ್ಲೂ ಸೂರ್ಯ ಏಳನೆಯ ಸ್ಥಾನದಲ್ಲೂ ಇದ್ದರೆ ಜಾತಕನು ಆಯುಧದಿಂದಾಗಲಿ ಬೆಂಕಿಯಿಂದಾಗಲಿ ರಾಜಕೋಪದಿಂದಾಗಲಿ ಸಾಯುತ್ತಾನೆ.

ವಿ—ಈ ಯೋಗದಲ್ಲಿ ಲಗ್ನವನ್ನು ಬಿಟ್ಟು ಉಳಿದ ಮೂರು ಕೇಂದ್ರಸ್ಥಾನಗಳಲ್ಲೂ ಪಾಪಗ್ರಹಗಳಿವೆ ; ಹೋರಾಸಾರದಲ್ಲಿ ಎಂಟನೆಯ ಸ್ಥಾನದಲ್ಲೂ ಗ್ರಹವಿರಬೇಕೆಂದಿದೆ. ಚಂದ್ರ ಎಂಟನೆಯ ಸ್ಥಾನದಲ್ಲಿರಬೇಕೆಂದು ಆ ಗ್ರಂಥಕಾರರ ಅಭಿಪ್ರಾಯವಿರಬಹುದು.

೧೪. ಜನನಕಾಲದಲ್ಲಿ ಚಂದ್ರ ನಾಲ್ಕನೆಯ ಸ್ಥಾನದಲ್ಲೂ ಶನಿ ಎರಡನೆಯ ಸ್ಥಾನದಲ್ಲೂ ಅಂಗಾರಕ ಹತ್ತನೆಯ ಸ್ಥಾನದಲ್ಲೂ ಇದ್ದರೆ ಜಾತಕನು ಆಯುಧದ ಪೆಟ್ಟಿನಿಂದ ಅಥವಾ ಬೀಳುವಿಕೆಯಿಂದ ಗಾಯವಾಗಿ ಹುಳುಬಿದ್ದು ಸಾಯದಿರಲಾರ (ಸತ್ತೇ ಸಾಯುತ್ತಾನೆ).

(ವಾಹನ ಮತ್ತು ಯಂತ್ರದ ಅಪಘಾತದಿಂದ ಮರಣ)

ಕನಕಂ ಕೂಡೆ ಚತುರ್ಥದೊಳ್ ದಶಮದೊಳ್ ಪದ್ಮಪ್ರಿಯಂ ಕೂಡೆ ವಾ
ಹನ[1]ದುತ್ಪಾತನ[1]ದಿಂ ಪ್ರಪಾತದಿನವಂ ಸಾಯ್ಗುಂ ನಿಶಾನಾಥ[2]ನುಂ[2]
ಶನಿಯುಂ ಭಾಸ್ಕರನುಂ ವಿಲಗ್ನದೊಳಿಳಾಜಂ ದ್ಯೂನದೊಳ್ ಕೂಡೆ ಯಂ
ತ್ರ ನಿರೋ[3]ಧೋತ್ಥಿತ[3] ಬಾಧೆಯಿಂದೆ ಪರಲೋಕಪ್ರಾಪ್ತನಕ್ಕುಂ ನರಂ ೧೫

(ಅಮೇಧ್ಯಮಧ್ಯದಲ್ಲಿ ಮರಣ)

ಕನಕಂ ಸುಖದೊಳ್ ಕ್ಷೀಣೇಂ
ದು ನ[4]ಭ[4]ದೊಳಿನನಸ್ತಗೃಹದೊಳಿರೆ ಮೇಣ್ ತೊಲೆಯೊಳ್
ಕನಕಂ ಶಶಿ ಮೃಗ ಕುಂಭದೊ
ಳಿನನಜದೊಳಿರ[5]ಲ್ಕಮೇಧ್ಯಮಧ್ಯದ[5] ಮರಣಂ ೧೬

---

೧೫. ಜನನಕಾಲದಲ್ಲಿ ಅಂಗಾರಕ ನಾಲ್ಕನೆಯ ಸ್ಥಾನದಲ್ಲೂ ಸೂರ್ಯ ಹತ್ತನೆಯ ಸ್ಥಾನದಲ್ಲೂ ಇದ್ದರೆ ಜಾತಕನು ವಾಹನದ ಅಪಘಾತದಿಂದ ಕೆಳಕ್ಕೆ ಬಿದ್ದು ಸಾಯುತ್ತಾನೆ ; ಚಂದ್ರ ಶನಿ ಸೂರ್ಯರು ಲಗ್ನದಲ್ಲೂ ಅಂಗಾರಕನು ಏಳನೆಯ ಸ್ಥಾನದಲ್ಲೂ ಇದ್ದರೆ ಯಂತ್ರದ ಪೀಡೆಯಿಂದುಂಟಾದ ನೋವಿನಿಂದ ಆತನು ಪರಲೋಕಕ್ಕೆ ಹೋಗುತ್ತಾನೆ (ಸಾಯುತ್ತಾನೆ.)

ವಿ—ವಾಹನ(ಚತುರ್ಥ)ಸ್ಥಾನ ಚತುಷ್ಪಾದ ರಾಶಿಯಾಗಿದ್ದರೆ ಕುದುರೆ ಆನೆ ಎತ್ತು ಮೊದಲಾದ ಪ್ರಾಣಿಗಳ ಮೇಲಿಂದ ಬಿದ್ದು ಸಾಯುತ್ತಾನೆ. ದ್ವಿಪದ ರಾಶಿಯಾಗಿದ್ದರೆ ಬಂಡಿ ಮೊದಲಾದ ದ್ವಿಚಕ್ರಯಾನಗಳಿಂದ ಬಿದ್ದು ಸಾಯುತ್ತಾನೆ. ಇದೇ ರೀತಿಯಲ್ಲಿ ರಾಶಿಸ್ವರೂಪಕ್ಕೆ ತಕ್ಕ ಯಾನಗಳನ್ನು ಊಹಿಸಿಕೊಳ್ಳಬೇಕು. ಈ ಅಧಿಕಾರದ ನಾಲ್ಕನೆಯ ಪದ್ಯದಲ್ಲಿ 'ರವಿ ದಶಮದೊಳವನಿತನೂಜಂ ಸುಖದೊಳಿರೆ' ಎಂದು ಇದೇ ಯೋಗವನ್ನು ಹೇಳಿ 'ನಗಾಗ್ರದೆ ಮಡಿಗುಂ' ಎಂದು ಫಲವನ್ನು ಮಾತ್ರ ಬೇರೆಯಾಗಿ ಹೇಳಿದೆ. ಯೋಗ ಪುನರುಕ್ತವಾದರೂ ಫಲ ಬೇರೆಯಾಗಿರುವುದರಿಂದ ಈ ಯೋಗದಲ್ಲಿ ಹುಟ್ಟಿದವನು ಮೇಲಿಂದ ಬಿದ್ದು ಸಾಯುತ್ತಾನೆ ಎಂದು ಸ್ಪಷ್ಟಪಡಿಸಿದಂತಾಗುತ್ತದೆ.

೧೬. ಜನನಕಾಲದಲ್ಲಿ ಅಂಗಾರಕ ನಾಲ್ಕನೆಯ ಸ್ಥಾನದಲ್ಲೂ ಕ್ಷೀಣ (ಬಲಹೀನ) ಚಂದ್ರ ಹತ್ತನೆಯ ಸ್ಥಾನದಲ್ಲೂ ಸೂರ್ಯ ಏಳನೆಯ ಸ್ಥಾನದಲ್ಲೂ ಇದ್ದರೆ ಅಥವಾ ತುಲಾರಾಶಿಯಲ್ಲಿ ಅಂಗಾರಕನೂ ಮಕರ ಅಥವಾ ಕುಂಭರಾಶಿಯಲ್ಲಿ ಚಂದ್ರನೂ ಮೇಷರಾಶಿಯಲ್ಲಿ ಸೂರ್ಯನೂ ಇದ್ದರೆ ಜಾತಕನು ಮಲದ ಮಧ್ಯದಲ್ಲಿ ಬಿದ್ದು ಸಾಯುತ್ತಾನೆ.

---

[1] ದಿಂದುಪಹತ (ಕ) [2] ನಿಂ (ಕ) [3] ಧಸ್ಥಿತ (ಕ) [4] ರ್ವ (ಕ) [5] ಲ್ಕೆ ಮಧ್ಯರ್ಧ್ಯದಿಂ (ಕ).

(ಗುಹ್ಯಸ್ಥಾನದಲ್ಲಿ ಹುಳು ಬೀಳುವುದು ಮತ್ತು ಶಸ್ತ್ರ ಚಿಕಿತ್ಸೆಯಿಂದ ಮರಣ)

ಗಲಿತೇಂದುವನಾರೋಕಿಸೆ
ಬಲವತ್ಕುಜನರ್ಕಸೂನುವಷ್ಟಮಗೃಹದೊಳ್
ನಿರೆ ಗುಹ್ಯೋದ್ಭವ ರುಜೆಯೊಳ್
ವಿಲಯಂ ಕೃಮಿ ಶಸ್ತ್ರ [1]ದಾಹ[1]ದಿಂ ಸಮನಿಸುಗುಂ ೧೭

(ಹಕ್ಕಿಯಿಂದ ಸಾವು)

ಶನಿಯಷ್ಟಮದೊಳ್ ಗಲಿತೇಂ
ದು ನಾಲ್ಕಱೊಳ್ ಸೂರ್ಯನು[ಂ] ಮಹೀಜಾತನುಮ
ಸ್ತನಿಕೇತನದೊಳ್ ನೆರೆಸಿರೆ
ಮನುಷ್ಯ[2]ನಂ ಪಕ್ಕಿ[2] ಪೊಯ್ದು ಕೊಲ್ಗುಂ ಕಡೆಯೊಳ್ ೧೮

(ನಗಾಗ್ರ ಕುಡ್ಯಾಶನಿ ಪಾತದಿಂದ ಮರಣ)

ಮೃಗಧರನೊಂಬತ್ತಱೊಳು
ಷ್ಣಗು[3]ಸು[3]ತನೆಂಟಱೊಳಿಳಾಸುತಂ ಸು[4]ತ[4]ದೊಳ್ ತೀ
ಕ್ಷ್ಣಗು ಲಗ್ನದೊಳಿರೆ ಮರಣಂ
ನಗಾಗ್ರ[5]ಕುಡ್ಯಾಶನಿ ಪ್ರ[5]ಪಾತದಿನಕ್ಕುಂ ೧೯

---

೧೭. ಜನನಕಾಲದಲ್ಲಿ ಕ್ಷೀಣಚಂದ್ರನನ್ನು ಬಲಿಷ್ಠನಾದ ಅಂಗಾರಕ ನೋಡುವುದಲ್ಲದೆ ಶನಿ ಎಂಟನೆಯ ಸ್ಥಾನದಲ್ಲಿದ್ದರೆ ಜಾತಕನಿಗೆ ಗುಹ್ಯಸ್ಥಾನದಲ್ಲಿ ವ್ಯಾಧಿಯುಂಟಾಗಿ ಹುಳುಬೀಳುವಿಕೆ ಶಸ್ತ್ರಚಿಕಿತ್ಸೆ ದಹನಚಿಕಿತ್ಸೆಗಳಿಂದ ಮರಣ ವುಂಟಾಗುತ್ತದೆ.

೧೮. ಜನನಕಾಲದಲ್ಲಿ ಶನಿ ಎಂಟನೆಯ ಸ್ಥಾನದಲ್ಲೂ ಕ್ಷೀಣಚಂದ್ರ ನಾಲ್ಕನೆಯ ಸ್ಥಾನದಲ್ಲೂ ಸೂರ್ಯಾಂಗಾರಕರು ಏಳನೆಯ ಸ್ಥಾನದಲ್ಲೂ ಇದ್ದರೆ ಜಾತಕನನ್ನು ಹಕ್ಕಿ ಹೊಡೆದು ಕೊಲ್ಲುತ್ತದೆ (ಪಕ್ಷಿಗಳಿಗೆ ಆಹಾರವಾಗುತ್ತಾನೆ).

೧೯. ಜನನಕಾಲದಲ್ಲಿ ಚಂದ್ರ ಒಂಬತ್ತನೆಯ ಸ್ಥಾನದಲ್ಲೂ ಶನಿ ಎಂಟನೆಯ ಸ್ಥಾನದಲ್ಲೂ ಅಂಗಾರಕನು ಐದನೆಯ ಸ್ಥಾನದಲ್ಲೂ ಸೂರ್ಯ ಲಗ್ನದಲ್ಲೂ ಇದ್ದರೆ ಜಾತಕನಿಗೆ ಬೆಟ್ಟದ ತುದಿಯಿಂದ ಬೀಳುವುದು ಗೋಡೆ ಬೀಳುವುದು ಸಿಡಿಲುಹೊಡೆಯುವುದು ಇವುಗಳಿಂದ ಮರಣವುಂಟಾಗುತ್ತದೆ.

ವಿ—ಇದೇ ಅಧಿಕಾರದ ನಾಲ್ಕನೆಯ ಪದ್ಯದಲ್ಲೂ ಬೆಟ್ಟದ ತುದಿಯಿಂದ ಬಿದ್ದು ಸಾಯುವ ಯೋಗವಿದೆ.

[1] ನಿಳಿಮು (ಕ) [2] ನುಂ ಪಕ್ಕಿ (ಕ) [3] ಪಾ (ಕ) [4] ಪ (ಕ) [5] ಕುಟ್ಯಾಶನಿಪಾತ (ಕ).

(ಶವದ ಪರಿಣಾಮ)

ಜನನದ್ರೇಕ್ಕಾಣದಿಂದಷ್ಟಮ[ಮೆ]ನಿಪುದು ವೈಶ್ವಾನರ ತ್ರ್ಯಂಶವಾದಂ
ದನ[1]ಲಂ[1]ಗಾಹಾರಮಕ್ಕುಂ ನರಶವಮುದಕತ್ರ್ಯಂಶಕಂ ಕೂಡೆ [2]ಸಂಕ್ಲೇ
ದ[2]ನಮಕ್ಕುಂ ವಾರಿಯೊಳ್ [3]ಮಿಶ್ರಿತಮೆ[3]ನೆ ಪುಗುಗುಂ ಪನ್ನಗತ್ರ್ಯಂಶಮಾಗಲ್
ಶುನಕಂ [4]ಬಳ್ಗಂ ವಿಹಂಗಕ್ಕ[4]ನುಪಮಮೆನಲಾಹಾರಮಕ್ಕುಂ ಯಥೇಷ್ಟಂ ೨೦

೨೦. ಜನನಕಾಲದ ದ್ರೇಕ್ಕಾಣದಿಂದ ಎಂಟನೆಯ ದ್ರೇಕ್ಕಾಣವು ಅಗ್ನಿ ದ್ರೇಕ್ಕಾಣವಾಗಿದ್ದರೆ ಜಾತಕನ ಶವ ಬೆಂಕಿಗೆ ಆಹಾರವಾಗುತ್ತದೆ (ಶವವನ್ನು ಸುಡುತ್ತಾರೆ); ಜಲ ದ್ರೇಕ್ಕಾಣವಾಗಿದ್ದರೆ ನೀರಿನಲ್ಲಿ ಕೊಳೆಯುತ್ತದೆ; ಮಿಶ್ರ ದ್ರೇಕ್ಕಾಣವಾಗಿದ್ದರೆ ಭೂಮಿಯೊಳಕ್ಕೆ ಪ್ರವೇಶಿಸುತ್ತದೆ (ಶವವನ್ನು ಹೂಳುತ್ತಾರೆ) ; ಸರ್ಪ ದ್ರೇಕ್ಕಾಣವಾದರೆ ನಾಯಿ ನರಿ ಪಕ್ಷಿಗಳಿಗೆ ಯಥೇಷ್ಟವಾದ ಆಹಾರವಾಗುತ್ತದೆ.

ವಿ–ಶವದ ಪರಿಣಾಮ ನಾಲ್ಕು ವಿಧ. (೧) ಸುಡುವುದು (೨) ನೀರಿಗೆ ಹಾಕುವುದು (೩) ಹೂಳುವುದು (೪) ನಾಯಿ ನರಿಗಳಿಗೆ ಆಹಾರವಾಗುವುದು. ಈ ನಾಲ್ಕರಲ್ಲಿ ಯಾವ ಪರಿಣಾಮವಾಗುತ್ತದೆ? ಎನ್ನುವ ಅಂಶ ಲಗ್ನದ್ರೇಕ್ಕಾಣಕ್ಕೆ ಇಪ್ಪತ್ತೆರಡನೆಯ (ಲಗ್ನದಿಂದ ಎಂಟನೆಯ ರಾಶಿಯಲ್ಲಿ ಉದಿತವಾಗಿರುವ) ದ್ರೇಕ್ಕಾಣ ಸ್ವರೂಪದಿಂದ ತಿಳಿದುಬರುತ್ತದೆ.

ಅಗ್ನಿದ್ರೇಕ್ಕಾಣವೆಂದರೆ ಪಾಪಗ್ರಹದ್ರೇಕ್ಕಾಣವೆಂದೂ, ಜಲದ್ರೇಕ್ಕಾಣವೆಂದರೆ ಶುಭಗ್ರಹ ದ್ರೇಕ್ಕಾಣವೆಂದೂ, ಮಿಶ್ರದ್ರೇಕ್ಕಾಣವೆಂದರೆ ಶುಭಗ್ರಹ ಪಾಪ ದ್ರೇಕ್ಕಾಣದಲ್ಲಾಗಲೀ ಪಾಪಗ್ರಹ ಶುಭದ್ರೇಕ್ಕಾಣದಲ್ಲಾಗಲೀ ಇರುವುದೆಂದೂ ಭಟ್ಟೋತ್ಪಲರು ಅಭಿಪ್ರಾಯಪಟ್ಟಿರುತ್ತಾರೆ.

ಸಿಂಹ ಮೇಷ ಕುಂಭ ವೃಶ್ಚಿಕ ಮಕರ ಈ ಐದು ರಾಶಿಗಳ ಮೊದಲನೆಯ ದ್ರೇಕ್ಕಾಣ, ಮೀನ ವೃಶ್ಚಿಕ ಸಿಂಹ ತುಲಾ ಈ ನಾಲ್ಕು ರಾಶಿಗಳ ಮೂರನೆಯ ದ್ರೇಕ್ಕಾಣ, ಕರ್ಕಟಕ ವೃಶ್ಚಿಕರಾಶಿಗಳ ಎರಡನೆಯ ದ್ರೇಕ್ಕಾಣ ಒಟ್ಟು ಈ ಹನ್ನೊಂದು ಕ್ರೂರದ್ರೇಕ್ಕಾಣಗಳು; ಕರ್ಕಟಕ ವೃಶ್ಚಿಕ ರಾಶಿಗಳ ಮೊದಲನೆಯ ದ್ರೇಕ್ಕಾಣ, ಕನ್ಯಾ ಮೀನರಾಶಿಗಳ ಮಧ್ಯ ದ್ರೇಕ್ಕಾಣ, ವೃಷಭ ಮಿಥುನ ರಾಶಿಗಳ ಮೂರನೆಯ ದ್ರೇಕ್ಕಾಣ ಒಟ್ಟು ಈ ಆರೂ ಜಲ ದ್ರೇಕ್ಕಾಣಗಳು, ಮಿಥುನ ಕನ್ಯಾ ತುಲಾ ರಾಶಿಗಳ ಒಂದನೆಯ ದ್ರೇಕ್ಕಾಣ, ಮೇಷ ಧನುಸ್ಸು ವೃಷಭ ಕುಂಭ ಮಕರ ರಾಶಿಗಳ ಎರಡನೆಯ ದ್ರೇಕ್ಕಾಣ, ಧನುಸ್ಸು ಕನ್ಯಾ ಕುಂಭ ರಾಶಿಗಳ ಮೂರನೆಯ ದ್ರೇಕ್ಕಾಣ ಒಟ್ಟು ಈ ಹನ್ನೊಂದು ಸೌಮ್ಯದ್ರೇಕ್ಕಾಣಗಳು ; ವೃಷಭ ಕುಂಭ ರಾಶಿಗಳ ಮೊದಲನೆಯ ದ್ರೇಕ್ಕಾಣ, ಮಿಥುನ ತುಲಾ ಸಿಂಹ ರಾಶಿಗಳ ಎರಡನೆಯ ದ್ರೇಕ್ಕಾಣ, ಮಕರ ಮೇಷ ಕರ್ಕಟಕ ರಾಶಿಗಳ ಮೂರನೆಯ ದ್ರೇಕ್ಕಾಣ ಒಟ್ಟು ಈ ಎಂಟು ಮಿಶ್ರ ದ್ರೇಕ್ಕಾಣಗಳು, ಎಂದು

[1] ಪಿ (ಕ ಗ) [2] ಶುಕ್ಲೇಶ (ಕ) ಸಂಕ್ಲೇಶ (ಗ) [3] ನಿಶ್ರಿತನೆ (ಕ ಗ) [4] ಗಳ್ಗಂ ವಿಹಂಗಳ (ಕ) ಗಳಂ ವಿಹಂಗಗಳ್ಗ (ಗ).

(ಮೃತ್ಯು ಕಾರಣ)

ಉದಯದ್ಗ್ರಹದ್ರೇಕ್ಕಾಣಂ
ಮೊದಲಾಗಿರೆ ಮುಂದ[1]ಣಿಪ್ಪತ್ತೆ[1]ರಡನೆ ತ್ರ್ಯಂ[2]ಶಾಂ[2]
ಶದ ಪತಿಯ ಗುಣದೆ ಮೇಣ್ ತ
ತ್ಸದನದ [3]ಧವಗು[3]ಣದೆ ಸಾವು ಸಮನಿಸಿ ಬರ್ಕುಂ		೨೧

(ಮರಣ ಭೂಮಿ)

ಉದಯನವಾಂಶಕಪತಿಯಾ
ವುದೊಂದು ಮಂದಿರದೊಳಿರ್ದನಾ ಗೃಹಸಂಬಂ
ಧದ ಭೂಮಿಯೊಳಾತಂ ಸಾ
ಯದಿರಂ ಮಿಗುವನ್ನರೊಳರೆ ನೆಲವರದೆಡೆ[4]ಯಂ[4]		೨೨

---

ಜಾತಕ ಪಾರಿಜಾತದಲ್ಲಿದೆ. ಕರ್ಕಾಟಕ ಮತ್ತು ವೃಶ್ಚಿಕ ರಾಶಿಗಳ ಒಂದು ಮತ್ತು ಎರಡನೆಯ ದ್ರೇಕ್ಕಾಣಗಳು ಮೀನ ರಾಶಿಯ ಮೂರನೆಯ ದ್ರೇಕ್ಕಾಣ ಈ ಐದು ಸರ್ಪದ್ರೇಕ್ಕಾಣಗಳು.

೨೧. ಜನನಲಗ್ನದ್ರೇಕ್ಕಾಣದಿಂದ ಮುಂದೆ ೨೨ನೇ ದ್ರೇಕ್ಕಾಣಾಧಿಪತಿಯ ಗುಣದಿಂದ ಅಥವಾ ಆ ಲಗ್ನಕ್ಕೆ ಎಂಟನೆಯ ರಾಶ್ಯಧಿಪತಿಯ ಗುಣದಿಂದ ಜಾತಕನಿಗೆ ಸಾವು ಉಂಟಾಗುತ್ತದೆ.

ವಿ—ನಿರ್ಯಾಣಾಧ್ಯಾಯದಲ್ಲಿ ಹೇಳಿರುವ ಯೋಗಗಳಲ್ಲಿ ಯಾವ ಯೋಗವೂ ಇಲ್ಲದೆ ಎಂಟನೆಯ ಸ್ಥಾನಕ್ಕೆ ಗ್ರಹಯೋಗವಾಗಲಿ ಗ್ರಹದೃಷ್ಟಿಯಾಗಲಿ ಇಲ್ಲದಿರುವಾಗ ಜನನದ್ರೇಕ್ಕಾಣದಿಂದ ೨೨ನೇ ದ್ರೇಕ್ಕಾಣಾಧಿಪತಿ ಅಥವಾ ಎಂಟನೆಯ ರಾಶ್ಯಧಿಪತಿಯ ಗುಣದಿಂದ ಮೃತ್ಯು ಕಾರಣವನ್ನು ತಿಳಿಯಬಹುದು.

೨೨. ಜನನಲಗ್ನದಲ್ಲಿ ಉದಯಿಸಿರುವ ನವಾಂಶದ ಅಧಿಪತಿ ಯಾವ ರಾಶಿಯಲ್ಲಿರುವನೋ ಆ ರಾಶಿಗೆ ಸಂಬಂಧಿಸಿದ ಭೂಮಿಯಲ್ಲಿ ಜಾತಕನು ಸಾಯದೇ ಇರುವುದಿಲ್ಲ (ಸಾಯುತ್ತಾನೆ). ಗೊತ್ತಾದ ಆ ಮರಣಭೂಮಿಯನ್ನು ಮೀರುವವರೂ ಇದ್ದಾರೆಯೇ? (ಯಾರೂ ಮೀರಲಾಗುವುದಿಲ್ಲ).

ವಿ—ಲಗ್ನನವಾಂಶಾಧಿಪತಿ ಮೇಷರಾಶಿಯಲ್ಲಿದ್ದರೆ । ಕುರಿ ಮೇಕೆಗಳು ಸಂಚರಿಸುವ ಭೂಮಿಯಲ್ಲೂ ವೃಷಭ ರಾಶಿಯಲ್ಲಿದ್ದರೆ ಗೋವುಗಳು ಸಂಚರಿಸುವ ಪ್ರದೇಶದಲ್ಲೂ ಮಿಥುನ ರಾಶಿಯಾದರೆ ಮನೆಯೊಳಗೂ ಕರ್ಕಾಟಕ ರಾಶಿಯಾದರೆ ಭಾವಿಯ ಸಮೀಪದಲ್ಲೂ ಸಿಂಹ ರಾಶಿಯಾದರೆ ಕಾಡಿನಲ್ಲೂ ಕನ್ಯಾ ರಾಶಿಯಾದರೆ

---

[1] ಣಿಪ್ಪತೆಳನೆ (ಕ) ಳಿಪ್ಪದೇಳನೆ (ಗ) [2] ಶಂ (ಕ ಗ) [3] ಶವಗು (ಕ) ಸಮ್ಮ (ಗ)
[4] ಯೊಳ್ (ಗ).

(ಮರಣಕಾಲದ ಮೂರ್ಛಾ ವಿಚಾರ)

ಉದಯ[1]ಕೆ ನಿಂದ[1] ರಾಶಿಯೊಳೆ ಸಂದ ನವಾಂಶಕದಿಂದೆ ಮುಂದೆ ಮ
ತ್ತುದಯಿಸುವಂಶಕಂಗಳವು ಸಲ್ವಿನೆಗಂ ಮನುಜಂಗೆ [2]ಮುಚ್ಚೆ ಪೋ[2]
ಪುದು ದೊರೆಕೊಳ್ಗು[3]ಮಂ[3]ಶಪತಿ ನೋಡುವೊಡಿಮ್ಮಡಿ [4]ಮುಚ್ಚೆವೋಕುಮಂ
ತದನೆ[4] ಶುಭಂ ನಿರೀಕ್ಷಿಪೊಡೆ ಮೂವಡಿ [5]ಮುಚ್ಚೆ[5] ತದಂತ್ಯಕಾಲದೊಳ್[6] ೨೩

ಜಲವಿರುವ ಪ್ರದೇಶದಲ್ಲೂ ತುಲಾ ರಾಶಿಯಾದರೆ ಅಂಗಡಿ ಸಮೀಪದಲ್ಲೂ ವೃಶ್ಚಿಕ ರಾಶಿಯಾದರೆ ಕುಂಟೆ ಸಮೀಪದಲ್ಲೂ ಧನೂ ರಾಶಿಯಾದರೆ ಕುದುರೆಗಳು ಸಂಚರಿಸುವ ಪ್ರದೇಶದಲ್ಲೂ ಮಕರ ರಾಶಿಯಾದರೆ ಜಲಪ್ರದೇಶದಲ್ಲೂ ಕುಂಭ ರಾಶಿಯಾದರೆ ಮನೆಯೊಳಗೂ ಮೀನ ರಾಶಿಯಾದರೆ ನೀರಿನಲ್ಲೂ ಮರಣ ಸಂಭವಿಸುತ್ತದೆ. ಇದರಂತೆಯೇ ಲಗ್ನನವಾಂಶಾಧಿಪತಿಯೊಡನಿರುವ ಗ್ರಹ ಮತ್ತು ಆ ನವಾಂಶಾಧಿಪತಿಯನ್ನು ನೋಡುವ ಗ್ರಹ ಈ ಗ್ರಹಗಳಿಂದಲೂ ಮರಣಭೂಮಿಯನ್ನು ತಿಳಿಯಬೇಕು. ಇವುಗಳಲ್ಲಿ ವ್ಯತ್ಯಾಸ ಕಂಡುಬಂದಾಗ ಬಲಿಷ್ಠಗ್ರಹದಿಂದ ಮರಣಭೂಮಿಯನ್ನು ನಿಶ್ಚಯಿಸಬೇಕು. ತಾರಾಗ್ರಹಗಳಿಗೆ ಎರಡು ರಾಶಿಗಳ ಆಧಿಪತ್ಯವಿರುವುದರಿಂದ ಯಾವ ರಾಶಿಯಿಂದ ಮರಣಭೂಮಿಯನ್ನು ನಿಷ್ಕರ್ಷಿಸಬೇಕೆಂದು ಸಂಶಯವುಂಟಾಗುತ್ತದೆ. 'ದ್ವಿಸ್ಥಾನಾಧಿಪತಿತ್ವಮಸ್ತಿ ಯದಿ ಚೇತ್ ಮುಖ್ಯಂ ತ್ರಿಕೋಣರ್ಕ್ಷಜಂ' ಎಂದು ಹೇಳಿರುವುದರಿಂದ ಅಂಗಾರಕನಿಗೆ–ಮೇಷ ಬುಧನಿಗೆ–ಕನ್ಯಾ ಗುರುವಿಗೆ–ಧನುಸ್ಸು ಶುಕ್ರನಿಗೆ–ತುಲಾ ಶನಿಗೆ–ಕುಂಭ ಈ ರಾಶಿಗಳಿಂದ ಮರಣಭೂಮಿಯನ್ನು ನಿಷ್ಕರ್ಷಿಸಬೇಕೆಂದೂ ಗ್ರಹಗಳಿಂದ ಭೂಮಿಯನ್ನು ನಿಷ್ಕರ್ಷಿಸುವಾಗ ದೇವಾಲಯಾದಿಗಳಲ್ಲಿ ಸಾಯುವವರನ್ನು ನಾವು ಈಗಲೂ ಕಾಣುತ್ತಿರುವುದರಿಂದ ಬೃಹಜ್ಜಾತಕದ ಎರಡನೇ ಅಧ್ಯಾಯ ೧೨ನೇ ಶ್ಲೋಕದಲ್ಲಿ ಗ್ರಹಗಳಿಗೆ ಹೇಳಿರುವ 'ದೇವಾಂಬ್ವಗ್ನಿ ವಿಹಾರ ಕೋಶ ಶಯನ ಕ್ಷಿತ್ಯುತ್ಕರ' ಭೂಮಿಗಳನ್ನೂ ತಿಳಿದು ಮರಣಸ್ಥಳವನ್ನು ಗೊತ್ತುಪಡಿಸಬೇಕೆಂದೂ ಕೆಲವರು ಅಭಿಪ್ರಾಯಪಟ್ಟಿರುತ್ತಾರೆ. ಮತ್ತೆ ಕೆಲವರು ಲಗ್ನದಲ್ಲಿರುವ ಗ್ರಹ ಲಗ್ನನವಾಂಶಾಧಿಪತಿ ಮತ್ತು ಇವರೊಡನೆ ಇರುವ ಅಥವಾ ಇವರನ್ನು ನೋಡುವ ಗ್ರಹಗಳಲ್ಲಿ ಬಲಿಷ್ಠವಾದ ಗ್ರಹದಿಂದ ಮರಣಭೂಮಿಯನ್ನು ತಿಳಿಯಬೇಕೆಂದು ಹೇಳುತ್ತಾರೆ.

೨೩. ಜನನಕಾಲಕ್ಕೆ ಸರಿಯಾಗಿ ಕ್ಷಿತಿಜದಲ್ಲಿ ಉದಯಿಸಿರುವ ರಾಶಿಯಲ್ಲಿ ಕಳೆದಿರುವ ನವಾಂಶದಿಂದ ಮುಂದಕ್ಕೆ ಎಷ್ಟು ಅಂಶಗಳು ಉದಯಿಸುತ್ತವೋ ಆ ಅಂಶಗಳು ಉದಯಿಸುವಷ್ಟು ಕಾಲ ಜಾತಕನಿಗೆ ಮರಣಕಾಲದಲ್ಲಿ ಮೂರ್ಛೆಯುಂಟಾಗುತ್ತದೆ; ಆ ಅಂಶಾಧಿಪತಿ ನೋಡಿದರೆ ಹಿಂದೆ ತಿಳಿಸಿದ ಕಾಲಕ್ಕೆ ಎರಡರಷ್ಟು ಕಾಲ ಮೂರ್ಛೆಯುಂಟಾಗುತ್ತದೆ; ಅದನ್ನೇ ಶುಭಗ್ರಹ ನೋಡಿದರೆ ಮೂರರಷ್ಟು ಕಾಲ ಜಾತಕನು ಮೂರ್ಛಿತನಾಗಿರುತ್ತಾನೆ.

---

[1] ಶಿತೇಂದು (ಕ ಗ) [2] ಮೂರ್ಛೆದೋ (ಗ) [3] ವಂ (ಕ ಗ) [4] ಮೂರ್ಛರಿ (ಗ) [5] ಮೂರ್ಛೆ (ಗ)

ವಿ—ಬೃಹಜ್ಜಾತಕದಲ್ಲಿ—

'ಮೋಹಸ್ತು ಮೃತ್ಯುಸಮಯೇsನುದಿತಾಂಶತುಲ್ಯಃ
ಸ್ವೇಶೇಕ್ಷಿತೇ ದ್ವಿಗುಣಿತಸ್ತ್ರಿಗುಣಃ ಶುಭೈಸ್ತು' ಎಂದಿದೆ.

ಈ ಶ್ಲೋಕದಲ್ಲಿರುವ 'ಸ್ವೇಶೇಕ್ಷಿತೇ' ಎನ್ನುವುದಕ್ಕೆ 'ಸ ಚೇಲ್ಲಗ್ನರಾಶಿಃ ಯದಿ ಸ್ವೇಶೇನ ಸ್ವಪತಿನೇಕ್ಷಿತೋ ದೃಷ್ಟಃ' ಎಂದು ಭಟ್ಟೋತ್ಪಲರೂ 'ಸ್ವೇಶೇಕ್ಷಿತೇ ದ್ವಿಗುಣಿತಃ—ಲಗ್ನಸ್ಯ ಲಗ್ನಾಧಿಪ ದರ್ಶನೇ ಸತಿ ಅನುದಿತಾಂಶ ತುಲ್ಯಾ ಮೋಹಾ ದ್ವಿಗುಣಿತಾ ವಕ್ತವ್ಯಾಃ' ಎಂದು ವಿವರಣವ್ಯಾಖ್ಯಾನಕಾರರೂ

'ಜನ್ಮಾಂಶಕಃ ಸ್ವಾಧಿಪತಿ ನಿರೀಕ್ಷಿತೋ ಯದಿ ಮೋಹೋ ಯಥೋಕ್ತ ಕಾಲಾದ್ದ್ವಿಗುಣಿತೋ ವಾಚ್ಯಃ' ಎಂದು ಸುಬೋಧಿನೀ ಟೀಕಾಕಾರರೂ ವ್ಯಾಖ್ಯಾನಮಾಡಿರುತ್ತಾರೆ.

ಭಟ್ಟೋತ್ಪಲರು ಮತ್ತು ವಿವರಣವ್ಯಾಖ್ಯಾನಕಾರರ ಅಭಿಪ್ರಾಯದಂತೆ ಜನನಲಗ್ನಾಧಿಪತಿ ಲಗ್ನವನ್ನು ನೋಡಿದರೆ ಮೂರ್ಛಾಕಾಲವನ್ನು ದ್ವಿಗುಣಮಾಡ ಬೇಕೆಂದೂ ಸುಬೋಧಿನೀ ಟೀಕಾಕಾರರ ಅಭಿಪ್ರಾಯದಂತೆ ಜನನಕಾಲದಲ್ಲಿ ಉದಯಿಸಿರುವ ಅಂಶಾಧಿಪತಿ ಆ ಅಂಶವನ್ನು ನೋಡಿದರೆ ಆಗ ಆ ಕಾಲವನ್ನು ದ್ವಿಗುಣಮಾಡಬೇಕೆಂದೂ ತಿಳಿದುಬರುತ್ತದೆ. ಸುಬೋಧಿನೀ ಟೀಕಾಕಾರರಂತೆ ಶ್ರೀಧರನೂ 'ಅಂಶಪತಿ ನೋಡುವೊಡೆ' ಎಂದು ಹೇಳಿರುತ್ತಾನೆ. ಅಧಿಪತಿ ಮತ್ತು ಶುಭಗ್ರಹ ಈ ಎರಡರ ದೃಷ್ಟಿಯೂ ಇದ್ದರೆ ಆಗ ಮೂರ್ಛಾಕಾಲವನ್ನು ಷಡ್ಗುಣಮಾಡಬೇಕು.

ಉದಾ.—ಲಗ್ನಸ್ಫುಟ = ರಾ ೧೦ ಭಾ ೧೫ ಕ ೦ ವಿ ೦ (ಕುಂಭ ಲಗ್ನ ಕುಂಭ ನವಾಂಶ) ಜನನ ಕಾಲದಲ್ಲಿ ಉದಿತ ನವಾಂಶ ಕುಂಭ; ಅಲ್ಲಿಂದ ಮುಂದಕ್ಕೆ ಇನ್ನೂ ನಾಲ್ಕು ಅಂಶಗಳು ಉದಯಿಸುತ್ತವೆ. ಅಂದರೆ ಜನನಕಾಲ ದಿಂದ ಮುಂದಕ್ಕೆ ಆ ಲಗ್ನ ಮುಗಿಯಬೇಕಾದರೆ ಇನ್ನೂ ೫೬ ನಿಮಿಷಗಳ ಕಾಲ ಬೇಕಾಗುತ್ತವೆ. ಇದೇ ಅನುದಿತಾಂಶ ಕಾಲ. ಶುಭಗ್ರಹ ದೃಷ್ಟಿಯಾಗಲಿ ಅಧಿಪತಿ ದೃಷ್ಟಿಯಾಗಲಿ ಇಲ್ಲದಿರುವಾಗ ಈ ಕಾಲದಲ್ಲಿ ಹುಟ್ಟಿದವನು ಮರಣ ಕಾಲದಲ್ಲಿ ೫೬ ನಿಮಿಷಗಳು ಮೂರ್ಛೆಹೋಗುತ್ತಾನೆ; ಇದೇ ಕಾಲದಲ್ಲಿ ಲಗ್ನಾಧಿಪತಿಯಾದ ಶನಿ (ನವಾಂಶಾಧಿಪತಿಯೂ ಆಗಿರುತ್ತಾನೆ) ಸಿಂಹರಾಶಿಯ ನವಾಂಶದಲ್ಲಿದ್ದರೆ ಲಗ್ನವನ್ನೂ ನವಾಂಶವನ್ನೂ ನೋಡುವುದರಿಂದ ಅಧಿಪತಿವೀಕ್ಷಣವಿರುತ್ತದೆ. ಆಗ ಜಾತಕನು ೧ ಗಂಟೆ ೫೨ ನಿಮಿಷಗಳ ಕಾಲ ಮೂರ್ಛಿತನಾಗುತ್ತಾನೆ. ಶನಿದೃಷ್ಟಿಯ ಜೊತೆಗೆ ಶುಭಗ್ರಹ ದೃಷ್ಟಿಯೂ ಇದ್ದರೆ ೫ ಗಂಟೆ ೩೬ ನಿಮಿಷಗಳ ಕಾಲ ಮೂರ್ಛಿತನಾಗುತ್ತಾನೆ. ಶನಿದೃಷ್ಟಿ ಇಲ್ಲದೆ ಶುಭಗ್ರಹ ದೃಷ್ಟಿ ಮಾತ್ರ ಇದ್ದರೆ ಆಗ ೨ ಗಂಟೆ ೪೮ ನಿಮಿಷಗಳ ಕಾಲ ಮೂರ್ಛಿತನಾಗುತ್ತಾನೆ.

(ಜೀವಂಗಳ ಗತಿ)

ಶತ[1]ಮು[1]ಖಮುಹತ್ತರಂ ಸುರ
ಗತಿಯುಂ ನರಗತಿಯನಿಂ[2]ದು ಭೃಗುಜರ್[2] ತಿರ್ಯ
ಗ್ಗತಿಯುಂ ಕುಜರವಿಗಳ್ ರವಿ
ಸುತ [3]ವಿಧುಸುತರಲ್ತೆ[3] ನರಕಗತಿಯುಂ ಕುಡುವರ್ ೨೪

ಉಡುರಾಜಾಂಬುಜಮಿತ್ರಯೊಳ್ ಸಬಲನಿರ್ದಾ ತ್ರ್ಯಂಶಕ[4]ಕ್ಕೀ[4]ಶನಾ
ದೊಡೆ ಜೀವಂ [5]ಸು[5]ರಲೋಕದಿಂ ನೃ[6]ಗತಿಯಿಂ[6] ಶುಕ್ರೇಂದುಗಳ್ ನಾಥರಾ
ದೊಡೆ ತಿರ್ಯಗ್ಗತಿಯಿಂದಮಬ್ಜಸಖನಕ್ಕ್ಷ್ವರ್ಣೀಸುತ[ಂ] ಸ್ವಾಮಿಯಾ
ದೊಡೆ ಮಂದೇಂದುಜರಾಳ್ದರಾದೊಡಱ ನೀಂ ಬಂದಂ ನರಂ [7]ಶ್ವಭ್ರ[7]ದಿಂ ೨೫

೨೪. ಮರಣಾನಂತರ ಗತಿಕಾರಕಗ್ರಹಗಳಲ್ಲಿ ಗುರುವು ದೇವಗತಿಯನ್ನೂ ಚಂದ್ರ ಶುಕ್ರರು ನರಗತಿಯನ್ನೂ ಅಂಗಾರಕ ಸೂರ್ಯರು ತಿರ್ಯಗ್ಗತಿಯನ್ನೂ ಶನಿ ಬುಧರು ನರಕಗತಿಯನ್ನೂ ಕೊಡುತ್ತಾರೆ (ಉಂಟುಮಾಡುತ್ತಾರೆ).

ವಿ–ದೇವಗತಿಗೆ ಗುರುವೂ ನರಗತಿಗೆ ಚಂದ್ರ ಶುಕ್ರರೂ ತಿರ್ಯಗ್ಗತಿಗೆ ಅಂಗಾರಕ ಸೂರ್ಯರೂ ನರಕಗತಿಗೆ ಶನಿ ಬುಧರೂ ಕಾರಕಗ್ರಹಗಳು. ಚಂದ್ರ ಶುಕ್ರರು ಪಿತೃಗತಿಗೆ ಕಾರಕರೆಂದು ಲಘು ಬೃಹಜ್ಜಾತಕಗಳಲ್ಲಿದೆ. ಪಿತೃಗತಿಯನ್ನೇ ನರಗತಿಯೆಂದು ಶ್ರೀಧರನು ಹೇಳಿರುತ್ತಾನೆ. ಈ ಗ್ರಹಗಳಲ್ಲಿ ಯಾವ ಗ್ರಹ ಗತಿಕಾರಕವಾಗುತ್ತದೆ ಎನ್ನುವ ವಿಚಾರ ೨೭ನೇ ಪದ್ಯದಲ್ಲಿದೆ.

೨೫. ಜನನಕಾಲದಲ್ಲಿ ಚಂದ್ರಸೂರ್ಯರಲ್ಲಿ ಬಲಿಷ್ಠನಾದವನು ಇರುವ ದ್ರೇಕ್ಕಾಣಾಧಿಪತಿ ಗುರುವಾದರೆ ಜಾತಕನು ದೇವಲೋಕದಿಂದಲೂ ಶುಕ್ರ ಚಂದ್ರರಾದರೆ ನೃಗತಿಯಿಂದಲೂ ಸೂರ್ಯನಾಗಲಿ ಅಂಗಾರಕನಾಗಲಿ ಆದರೆ ತಿರ್ಯಗ್ಗತಿಯಿಂದಲೂ ಶನಿ ಬುಧರಾದರೆ ಪಾತಾಳ(ನರಕ)ದಿಂದಲೂ ಬಂದವನೆಂದು ತಿಳಿದುಕೊಳ್ಳಬೇಕು.

ವಿ–ಸೂರ್ಯಚಂದ್ರರಲ್ಲಿ ಬಲಿಷ್ಠನಾದವನು ಧನುಸ್ಸು ಅಥವಾ ಮೀನ ದ್ರೇಕ್ಕಾಣದಲ್ಲಿದ್ದರೆ ದೇವಲೋಕದಿಂದಲೂ ವೃಷಭ ಅಥವಾ ಕರ್ಕಟಕ ಅಥವಾ ತುಲಾ ದ್ರೇಕ್ಕಾಣದಲ್ಲಿದ್ದರೆ ಪಿತೃಲೋಕದಿಂದಲೂ ಮೇಷ ಅಥವಾ ಸಿಂಹ ಅಥವಾ ವೃಶ್ಚಿಕ ದ್ರೇಕ್ಕಾಣದಲ್ಲಿದ್ದರೆ ತಿರ್ಯಗ್ಗತಿಯಿಂದಲೂ ಮಿಥುನ ಅಥವಾ ಕನ್ಯಾ ಅಥವಾ ಮಕರ ಅಥವಾ ಕುಂಭ ದ್ರೇಕ್ಕಾಣದಲ್ಲಿದ್ದರೆ ಪಾತಾಳ (ನರಕ)ದಿಂದಲೂ ಜಾತಕನು ಬಂದವನೆಂದು ತಿಳಿಯಬೇಕು.

---

[1] ಮು (ಕ ಗ) [2] ದುಜ ಭೃಗುಜಂ (ಕ) ದುಭೃಗುಜಂ (ಗ) [3] ಫಣಿಗಳ್ ವರ್ತೆ (ಕ) ಸನಿ ಫಣಿಗಳರ್ತೆ (ಗ [4] ಕ್ಕ್ಯ (ಕ) ಕ್ಕ್ಯೀ (ಗ) [5] ನ (ಗ) [6] ಪತಿಯುಂ (ಗ) [7] ಸ್ವಭ್ರಮ (ಕ) ಸ್ವಭ್ರ (ಗ).

(ಪೂರ್ವಜನ್ಮಸ್ಥಿತಿ ವಿಚಾರ)

ಜಲಜಾತಪ್ರಿಯ ಚಂದ್ರಯುಗೊಳ್ ಬಲಯು[1]ತಸ್ಥತ್ರ್ಯಂ[1]ಶಕಾಧೀಶ್ವರಂ
ನಿರೆ ತನ್ನುಚ್ಚದೊಳುತ್ತಮಾಸ್ಪದದಿನಾ ಪೇಳ್ದ ಗ್ರಹಂ ಮಧ್ಯದೊಳ್
ನಿರೆ ಮಧ್ಯಾಸ್ಪದದಿಂ ತದಂಬರಚರಂ ನೀಚಾಹ್ವಯಸ್ಥಾನದೊಳ್
ನಿರೆ ನೀಚಾಸ್ಪದದಿಂದೆ ಬಂದನವನೆಂಗಾ ನಾಲ್ಕುಯೋಗಂಗಳೊಳ್ ೨೬

(ಮುಂದಿನ ಜನ್ಮಸ್ಥಿತಿ ವಿಚಾರ)

ಉದಯತ್ರ್ಯಂಶದಿನತ್ತ ಷಣ್ಣಿಧನ ಸಪ್ತತ್ರ್ಯಂಶಕಾಧೀಶ ಮ
ಧ್ಯದೊಳಾರಯ್ಯ ಬಲಾನ್ವಿತ ಗ್ರಹದ [2]ಲೋಕಂ[2] ಕೂಡುಗುಂ ನಾಲ್ಕುಲೋ
ಕದೊಳುಚ್ಚಾಸ್ಪದಮುಚ್ಚಗೇಹದೊಳಿರಲ್ ಮಧ್ಯಾಸ್ಪದಂ ಮಧ್ಯಗೇ
ಹದೊಳಿರ್ದಂದಧಮಾಸ್ಪದಂ ನೆಲಸೆ ನೀಚಸ್ಥಾನದೊಳ್ [3]ತ[3]ದ್ಗ್ರಹಂ ೨೭

---

೨೬. ಸೂರ್ಯಚಂದ್ರರಲ್ಲಿ ಬಲಿಷ್ಠನಾದವನು ಇರುವ ದ್ರೇಕ್ಕಾಣಾಧಿಪತಿ ತನ್ನ ಉಚ್ಚ ಕ್ಷೇತ್ರದಲ್ಲಿದ್ದರೆ ಉನ್ನತಮುಟ್ಟದಿಂದ(ಉತ್ತಮ ಸ್ಥಿತಿಯಿಂದ)ಲೂ, ಆ ಗ್ರಹ ಮಧ್ಯಕ್ಷೇತ್ರದಲ್ಲಿ (ಉಚ್ಚನೀಚ ಕ್ಷೇತ್ರಗಳಿಗೆ ಮಧ್ಯದಲ್ಲಿ) ಇದ್ದರೆ ಮಧ್ಯಮ ತರಗತಿಯಿಂದಲೂ ಆ ಗ್ರಹ ನೀಚಕ್ಷೇತ್ರದಲ್ಲಿದ್ದರೆ ನಿಕೃಷ್ಟಸ್ಥಾನದಿಂದಲೂ ಬಂದವನೆಂದು ಹಿಂದೆ ಹೇಳಿದ ನಾಲ್ಕುಯೋಗಗಳಲ್ಲಿ ತಿಳಿಯಬೇಕು.

ವಿ—ಹಿಂದಿನ ಜನ್ಮದಲ್ಲಿ ದೇವ ಪಿತೃ ತಿರ್ಯಕ್ ನರಕ ಗತಿಗಳಲ್ಲಿ ಜಾತಕನು ಯಾವ ಗತಿಯಿಂದ ಬಂದಿರುವನೆಂದು ತಿಳಿಸುವ ಗ್ರಹ ಉಚ್ಚಕ್ಷೇತ್ರದಲ್ಲಿದ್ದರೆ ಪೂರ್ವಜನ್ಮದಲ್ಲಿ ಉತ್ತಮಸ್ಥಿತಿಯಲ್ಲಿದ್ದನೆಂದೂ ನೀಚಕ್ಷೇತ್ರದಲ್ಲಿದ್ದರೆ ನಿಕೃಷ್ಟ ಸ್ಥಿತಿಯಲ್ಲಿದ್ದನೆಂದೂ ಉಳಿದ ಕಡೆ ಇದ್ದಾಗ ಮಧ್ಯಮಸ್ಥಿತಿಯಲ್ಲಿದ್ದನೆಂದೂ ಗ್ರಹ ಸ್ಥಿತಿಯಿಂದ ತಿಳಿಯಬೇಕು.

೨೭. ಲಗ್ನದಲ್ಲಿ ಉದಯಿಸಿರುವ ದ್ರೇಕ್ಕಾಣದಿಂದ ಆರು ಎಂಟು ಏಳನೆಯ ಸ್ಥಾನಗಳಲ್ಲಿ ಉದಯಿಸಿರುವ ದ್ರೇಕ್ಕಾಣಗಳ ಅಧಿಪತಿಗಳಲ್ಲಿ ಬಲಿಷ್ಠಗ್ರಹದ ಲೋಕ ಜಾತಕನಿಗೆ ಉಂಟಾಗುತ್ತದೆ; ಈ ನಾಲ್ಕುಲೋಕಗಳಲ್ಲಿ ಲೋಕಕಾರಕ ಗ್ರಹ ಉಚ್ಚಕ್ಷೇತ್ರದಲ್ಲಿದ್ದರೆ ಮುಂದಿನ ಜನ್ಮದಲ್ಲಿ ಉತ್ತಮಸ್ಥಿತಿಯೂ ಮಧ್ಯದಲ್ಲಿದ್ದರೆ ಮಧ್ಯಮಸ್ಥಿತಿಯೂ ನೀಚಕ್ಷೇತ್ರದಲ್ಲಿರುವಾಗ ಅಧಮಸ್ಥಿತಿಯೂ ಜಾತಕನಿಗೆ ಉಂಟಾಗುತ್ತದೆ.

ವಿ—೨೭ನೇ ಪದ್ಯದಲ್ಲಿ ಲೋಕಕಾರಕ ಗ್ರಹಗಳನ್ನು ತಿಳಿಸಿದೆ. ಆರು ಏಳು ಎಂಟನೆಯ ಸ್ಥಾನಗಳಲ್ಲಿ ಉದಯಿಸಿರುವ ದ್ರೇಕ್ಕಾಣಗಳ ಅಧಿಪತಿಗಳಲ್ಲಿ ಬಲಿಷ್ಠಗ್ರಹದ ಲೋಕವು ಜಾತಕನಿಗೆ ಮುಂದೆ ಲಭಿಸುತ್ತದೆ. ಅದರಲ್ಲಿಯೂ ಉತ್ತಮ ಮಧ್ಯಮ ಅಧಮ ಸ್ಥಿತಿಯು ಕಾರಕಗ್ರಹದ ಸ್ಥಿತಿಯಿಂದ ತಿಳಿಯಬರುತ್ತದೆ.

ಉದಾ—ಲಗ್ನಸ್ಫುಟ = ರಾ ೦ ಭಾ ೧೪ ಕ ೦ ವಿಕ ೦; ರವಿಸ್ಫುಟ — ರಾ ೦ ಭಾ ೧೧ ಕ ೦ ವಿಕ ೦; ಗುರುಸ್ಫುಟ ರಾ ೭ ಭಾ ೪ ಕ ೦

---

[1] ತ್ರಂ ಶತ್ರ್ಯಂ (ಕ ಗ) [2] ಲೋಲ್ಕಂ (ಕ) ಲೋಕಂ ಕಂ (ಗ) [3] ಪ (ಕ ಗ)

(ಮೋಕ್ಷ ಯೋಗ)

ಗುರು ಷಷ್ಠಾಷ್ಟಮ ಕಂಟಕಂಗಳೆನಿಪಾಱುಂ ಗೇಹ[1]ದೊಳ್ ಸ್ವೋಚ್ಚದ[1]
ಲ್ಲಿರೆ ಜೀವಂ ಪೊಱಗಾಗಿ [2]ಷಡ್ಗ್ರ[2]ಹಮುಮಾರಯ್ಯಂದು ನಿರ್ವೀರ್ಯ[3]ಮಾ[3]
ಗಿರೆ [4]ಮೀನೋದಯದುದ್ಯತಾಂಶಮದು ತಾ[4]ರಾಧೀಶಪುತ್ರಾಂಶಮಾ
ಗಿರೆ ನಿಶ್ಶ್ರೇಯಸಲಕ್ಷ್ಮಿಯೊಳ್ ನೆರೆದು [ತಾಂ] ಸತ್ಸೌಖ್ಯನಕ್ಕುಂ ನರಂ ೨೮

ಇದು ಭಗವದರ್ಹತ್ಪರಮೇಶ್ವರ ಚರಣ ಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ನಿರ್ಯಾಣಪ್ರಕರಣವರ್ಣನಂ ತ್ರಯೋವಿಂಶಾಧಿಕಾರಂ

---

ವಿಕ ೦. ಈ ಜಾತಕನು ಮೇಷಲಗ್ನ ಸಿಂಹ ದ್ರೇಕ್ಕಾಣದಲ್ಲಿ ಹುಟ್ಟಿರುತ್ತಾನೆ. ಜನನಕಾಲದಲ್ಲಿ ಚಂದ್ರನಿಗಿಂತ ಸೂರ್ಯನು ಬಲಿಷ್ಠನಾಗಿರುತ್ತಾನೆ. ಸೂರ್ಯನು ಉಚ್ಚಕ್ಷೇತ್ರದಲ್ಲಿ ಸಿಂಹ ದ್ರೇಕ್ಕಾಣದಲ್ಲಿರುವುದರಿಂದ ಜಾತಕನು ಪೂರ್ವಜನ್ಮದಲ್ಲಿ ತಿರ್ಯಗ್ಜನ್ಮದಲ್ಲಿ ಉತ್ತಮಸ್ಥಿತಿಯಲ್ಲಿದ್ದನೆಂದು ತಿಳಿದುಬರುತ್ತದೆ. ' ಲಗ್ನದಿಂದ ಆರನೆಯ ರಾಶಿಯಲ್ಲಿ ಮಕರ ದ್ರೇಕ್ಕಾಣವೂ ಏಳನೆಯ ರಾಶಿಯಲ್ಲಿ ಕುಂಭ ದ್ರೇಕ್ಕಾಣವೂ ಎಂಟನೆಯ ರಾಶಿಯಲ್ಲಿ ಮೀನ ದ್ರೇಕ್ಕಾಣವೂ ಉದಯಿಸಿರುತ್ತದೆ; ಇದರಲ್ಲಿ ಮೀನ ದ್ರೇಕ್ಕಾಣಾಧಿಪತಿಯಾದ ಗುರು ಉಳಿದೆರಡು ದ್ರೇಕ್ಕಾಣಗಳಿಗೆ ಅಧಿಪತಿಯಾದ ಶನಿಗಿಂತ ಬಲಿಷ್ಠನಾಗಿರುವನಲ್ಲದೆ ಉಚ್ಚಕ್ಷೇತ್ರದಲ್ಲೂ ಇರುವುದರಿಂದ ಜಾತಕನು ಮರಣಾನಂತರ ದೇವಲೋಕದಲ್ಲಿ ಉತ್ತಮಸ್ಥಿತಿಯಲ್ಲಿರುತ್ತಾನೆಂದು ಹೇಳಬಹುದು.

೨೮. ಗುರುವು ಆರು ಎಂಟು ಲಗ್ನ ನಾಲ್ಕು ಏಳು ಹತ್ತು ಈ ಆರು ಸ್ಥಾನಗಳಲ್ಲಿ ಉಚ್ಚಕ್ಷೇತ್ರ(ಕರ್ಕಟಕ)ದಲ್ಲಿದ್ದರೆ ಅಥವಾ ಗುರುವನ್ನು ಬಿಟ್ಟು ಉಳಿದ ಆರು ಗ್ರಹಗಳು ದುರ್ಬಲರಾಗಿದ್ದು ಮೀನಲಗ್ನದಲ್ಲಿ ಬುಧನ ನವಾಂಶ ಉದಿತವಾಗಿದ್ದರೆ ಜಾತಕನು ಮೋಕ್ಷಲಕ್ಷ್ಮಿಯನ್ನು ಪಡೆದು ಸೌಖ್ಯದಿಂದಿರುತ್ತಾನೆ.

ವಿ.-ಈ ಪದ್ಯದಲ್ಲಿ ಒಂದೇ ಯೋಗವಿರುವಂತೆ ಕಂಡುಬಂದರೂ ಲಘುಜಾತಕದಲ್ಲಿ ' ಷಷ್ಠಾಷ್ಟಮಕಂಟಕಗೋ ಗುರುರುಚ್ಚೋ ಭವತಿ ಮೀನಲಗ್ನೇ ವಾ। ಶೇಷೈರಬಲೈರ್ಜನ್ಮನಿ ಮರಣೇ ವಾ ಮೋಕ್ಷಗತಿಮಾಹುಃ ॥' ಎಂದು ವರಾಹಮಿಹಿರರು ಹೇಳಿರುವುದರಿಂದ ಎರಡು ಯೋಗಗಳನ್ನಾಗಿ ವಿಭಾಗಿಸಿದೆ. ಈ ಯೋಗವು ಜನನಕಾಲದಲ್ಲಾಗಲಿ ಮರಣಕಾಲದಲ್ಲಾಗಲಿ ಇದ್ದರೆ ಮೋಕ್ಷವು ಲಭಿಸುತ್ತದೆ. ಮೀನಲಗ್ನದಲ್ಲಿ ಯಾವ ಅಂಶ ಉದಯಿಸಿರಬೇಕೆನ್ನುವ ವಿಚಾರ

---

[1] ದೊಳ್ನಿಚ್ಚೈಯುದ (ಕ) ದೊಳ್ ... ದ (ಗ) [2] ಸದ್ಗ್ರ (ಕ ಗ) [3] ನಾ (ಕ ಗ)
[4] ಹೀನೋದಯಾದಂತ್ಯಚಾಂಶಮಾದು ತಾ (ಕ) ಹಿಮೋದಯಾದಂತಿವಾಂಶಮಾಮ (ಗ).




ಲಘುಜಾತಕದಲ್ಲಿಲ್ಲ. 'ಭವನೇಽಂತ್ಯೇ ಸೌಮ್ಯಭಾಗೇ' ಎಂದು ಬೃಹಜ್ಜಾತಕದಲ್ಲಿರುವಂತೆ ಮೀನಲಗ್ನದಲ್ಲಿ 'ಸೌಮ್ಯಾಂಶ' ಉದಿತವಾಗಿರಬೇಕು.

'ಸೌಮ್ಯಭಾಗ' ಎನ್ನುವುದಕ್ಕೆ ಶುಭಗ್ರಹದ ನವಾಂಶ ಎಂದು ಭಟ್ಟೋತ್ಪಲರು ವ್ಯಾಖ್ಯಾನಮಾಡಿರುತ್ತಾರೆ. ಶ್ರೀಧರನು ಅದನ್ನು 'ತಾರಾಧೀಶಪುತ್ರಾಂಶ' ಎಂದು ಕನ್ನಡಿಸಿರುತ್ತಾನೆ.

ಯಾವ ಲಗ್ನವಾದರೂ ಕೊನೆಯ ನವಾಂಶ ಬುಧನ ಅಥವಾ ಗುರುವಿನ ಅಂಶವೇ ಆಗುವುದರಿಂದ 'ಭವನೇಽಂತ್ಯೇ ಸೌಮ್ಯಭಾಗೇ' ಎನ್ನುವುದಕ್ಕೆ ಬುಧ ಅಥವಾ ಗುರುವಿನ ನವಾಂಶ ಲಗ್ನದಲ್ಲಿ ಉದಿತವಾಗಿದ್ದರೆ ಎಂದು ವಿವರಣವ್ಯಾಖ್ಯಾನದಲ್ಲಿದೆ. ಈ ವ್ಯಾಖ್ಯಾನದಂತೆ ಲಗ್ನದಲ್ಲಿ ಕೊನೆಯ ನವಾಂಶ ಉದಿತವಾಗಿದ್ದು ಗುರು ಕರ್ಕಟಕರಾಶಿಯಲ್ಲಿ ಲಗ್ನ ನಾಲ್ಕು ಆರು ಏಳು ಎಂಟು ಹತ್ತು ಈ ಆರುಸ್ಥಾನಗಳಲ್ಲಿರುವುದಲ್ಲದೆ ಉಳಿದ ಗ್ರಹಗಳು ದುರ್ಬಲರಾಗಿರಬೇಕು. ಈ ಅಭಿಪ್ರಾಯ ವರಾಹಮಿಹಿರರಿಗೆ ಸಮ್ಮತವಲ್ಲ. ಪದ್ಯದಲ್ಲಿ ಹೇಳಿರುವ ಮೊದಲನೆಯ ಯೋಗವು ಗುರು ಕರ್ಕಟಕರಾಶಿಯಲ್ಲಿರುವಾಗ ಮೇಷ ಕರ್ಕಟಕ ತುಲಾ ಧನುಸ್ಸು ಮಕರ ಕುಂಭ ರಾಶಿಗಳಲ್ಲೊಂದು ಲಗ್ನವಾದರೆ ಸಂಭವಿಸುತ್ತದೆ.

———

# ಚತುರ್ವಿಂಶಾಧಿಕಾರಂ

## ನಷ್ಟಜಾತಕ ಪ್ರಕರಣಂ

(ಅಯನಜ್ಞಾನ)

ಮನುಜಂ ಬಂದು ಮದೀಯ ಜಾತಕಮನಾಧಾನಾದಿಯಿಂ ನೋಡಿ ಹೇ
ಳೆನೆ ತತ್ಪ್ರಶ್ನವಿಲಗ್ನದಲ್ಲಿ ಮೊದಲರ್ಧಂ ತಾಗಿ ಸಲ್ವನ್ನೆಗಂ
ಜನನಂ ವರ್ತ[1]ಕುಮು[1]ತ್ತರಾಯಣದ ಷಣ್ಮಾಸಂಗಳೊಳ್ ದಕ್ಷಿಣಾ
ಯನ ಷಣ್ಮಾಸಮದಾ ನರಂಗೆ ಜನನಂ ಪ[2]ಶ್ಚಾ[2]ರ್ಧಮಂ ತಾಪಿನಂ ೧

(ವರ್ಷಜ್ಞಾನ)

ಬರೆ ತತ್ಪ್ರಶ್ನವಿಲಗ್ನದಲ್ಲಿ ಮೊದಲ ದ್ರೇಕ್ಕಾಣಮಾ ಲಗ್ನಮಂ
ದಿರದೊಳ್ ಮೇಣ್ ಬರೆ ತದ್ದ್ವಿತೀಯಮೆನಿಪಾ ದ್ರೇಕ್ಕಾಣಮಾ ಪುತ್ರಮಂ
ದಿರದೊಳ್ ಮೇಣ್ ಬರೆ ತತ್ತೃತೀಯಮೆನಿಪಾ ದ್ರೇಕ್ಕಾಣಮಾ ಧರ್ಮಮಂ
ದಿರದೊಳ್ ವಾಕ್ಪತಿಯಿರ್ದನೆಂದಱಿಗೆ ತಜ್ಜ್ಞಂ ಜನ್ಮ [3]ತ[3]ತ್ಕಾಲದೊಳ್ ೨

---

೧. ನಷ್ಟಜಾತಕವನ್ನಪೇಕ್ಷಿಸುವವನು ದೈವಜ್ಞರ ಸಮೀಪಕ್ಕೆ ಬಂದು 'ನನ್ನ ಜಾತಕವನ್ನು ಆಧಾನಾದಿ ಕಾಲಗಳನ್ನು ನೋಡಿ ಹೇಳಿ' ಎಂದು ಪ್ರಶ್ನಿಸಲು ಆ ಪ್ರಶ್ನಕಾಲದ ಲಗ್ನದಲ್ಲಿ ಮೊದಲನೆಯ ಅರ್ಧಭಾಗ್ಗ ಉದಿತವಾಗಿದ್ದರೆ ಉತ್ತರಾಯಣದ ಆರು ತಿಂಗಳುಗಳಲ್ಲೂ ಎರಡನೆಯ ಅರ್ಧ ಉದಿತವಾಗಿದ್ದರೆ ದಕ್ಷಿಣಾಯನದ ಆರು ತಿಂಗಳುಗಳಲ್ಲೂ ಪೃಚ್ಛಕನ ಜನ್ಮಕಾಲವು ಇರುತ್ತದೆ.

ವಿ–ಜನನಕಾಲವು ತಿಳಿಯದಿದ್ದಾಗ ಈ ಅಧ್ಯಾಯದಲ್ಲಿ ತಿಳಿಸಿರುವ ಕ್ರಮದಂತೆ ನಷ್ಟಜಾತಕವನ್ನು ಬರೆದು ಅದರಿಂದ ಆ ಜಾತಕನಿಗೆ ಫಲಗಳನ್ನು ಹೇಳಬೇಕು. ಪೃಚ್ಛಕನು ಪ್ರಶ್ನೆಮಾಡುವ ಕಾಲದ ಲಗ್ನದಲ್ಲಿ ಮೊದಲನೆಯ ಹೋರೆಯಾಗಿದ್ದರೆ ಉತ್ತರಾಯಣದಲ್ಲೂ [ಮಕರ ಮೊದಲು ಆರು ತಿಂಗಳು] ಎರಡನೆಯ ಹೋರೆಯಾಗಿದ್ದರೆ ದಕ್ಷಿಣಾಯನದಲ್ಲೂ [ಕರ್ಕಟಕ ಮೊದಲು ಆರು ತಿಂಗಳು] ಜನನವಾಗಿದೆ ಎಂದು ತಿಳಿಯಬೇಕು.

೨. ಪ್ರಶ್ನಲಗ್ನದಲ್ಲಿ ಮೊದಲನೆಯ ದ್ರೇಕ್ಕಾಣ ಉದಯಿಸಿದ್ದರೆ ಲಗ್ನದಲ್ಲೂ ಅಥವಾ ಎರಡನೆಯ ದ್ರೇಕ್ಕಾಣ ಉದಯಿಸಿದ್ದರೆ ಲಗ್ನದಿಂದ ಐದನೆಯ ರಾಶಿಯಲ್ಲೂ ಅಥವಾ ಮೂರನೆಯ ದ್ರೇಕ್ಕಾಣ ಉದಯಿಸಿದ್ದರೆ ಲಗ್ನದಿಂದ ಒಂಬತ್ತನೆಯ ರಾಶಿಯಲ್ಲೂ ಗುರುವು ಜನನಕಾಲದಲ್ಲಿದ್ದನೆಂದು ತಿಳಿಯಬೇಕು.

ವಿ–ಲಗ್ನದಲ್ಲಿ ಎಷ್ಟನೆಯ ದ್ವಾದಶಾಂಶ ಉದಿತವಾಗಿದೆಯೋ ಲಗ್ನದಿಂದ ಅಷ್ಟನೆಯ ರಾಶಿಯಲ್ಲಿ ಗುರುವು ಇರುತ್ತಾನೆ. ಮೊದಲನೆಯ ದ್ರೇಕ್ಕಾಣವಾದರೆ

---

[1] ಸುಉ (ಕಗ) [2] ಕ್ಷಾ (ಕ) [3] ಕಾ (ಕ).

ಬೆಸಗೊಂಡುದಯಂ ಮೊದಲಾ
ಗಿ ಸುರೇಜ್ಯಂ ನಿಂದ ರಾಶಿವರಮೆಣಿಸಿ ವಿಚಾ
ರಿಸಿ ಭಗಣಂಗಳ[1]ನ[1]ವನೇ
ಱಿಸಿ ವಯಸಮನಱಿ ವಯೋನುಮಾನಕ್ರಮದಿಂ ೩

---

ಲಗ್ನದಿಂದ ನಾಲ್ಕು ರಾಶಿಗಳಲ್ಲೂ ಎರಡನೆಯ ದ್ರೇಕ್ಕಾಣವಾದರೆ ಐದನೇ ಸ್ಥಾನದಿಂದ ನಾಲ್ಕು ರಾಶಿಗಳಲ್ಲೂ ಮೂರನೆಯ ದ್ರೇಕ್ಕಾಣವಾದರೆ ಒಂಬತ್ತನೇ ಸ್ಥಾನದಿಂದ ನಾಲ್ಕು ರಾಶಿಗಳಲ್ಲೂ ಗುರುವು ಇರುತ್ತಾನೆ.

೩. ಪ್ರಶ್ನಲಗ್ನದಿಂದ ಗುರುವಿರುವ ರಾಶಿಯುವರೆಗೆ ಎಣಿಸಿ ಬಂದ ಸಂಖ್ಯೆಗೆ ಗುರುವಿನ ಭಗಣಗಳನ್ನು ಸೇರಿಸಿ ಪೃಚ್ಛಕನ ವಯಸ್ಸಿಗೆ ತಕ್ಕಂತೆ ಆತನ ವಯಸ್ಸನ್ನು ತಿಳಿಯಬೇಕು.

ವಿ–ಒಂದು ಗುರುಭಗಣ ಸಂಭವಕಾಲ ಹನ್ನೆರಡು ವರ್ಷಗಳು. ಪೃಚ್ಛಕನ ಆಕಾರ ಹನ್ನೆರಡು ವರ್ಷಗಳಿಗಿಂತ ಕಡಿಮೆಯಾಗಿ ಕಂಡುಬಂದರೆ ಆಗ ಲಗ್ನದಿಂದ ಗುರುವಿರುವ ರಾಶಿಸಂಖ್ಯಾ ಪ್ರಮಾಣದಷ್ಟು ವರ್ಷಗಳೆಂದೂ ೨೪ ವರ್ಷಗಳೊಳಗಿದ್ದರೆ ಆ ಸಂಖ್ಯೆಗೆ ಒಂದು ಭಗಣ (೧೨ ವರ್ಷಗಳು) ಸೇರಿಸಿದಷ್ಟು ವರ್ಷಗಳೆಂದೂ ೩೬ ವರ್ಷಗಳೊಳಗಿದ್ದರೆ ಎರಡು ಭಗಣ (೨೪ ವರ್ಷಗಳು) ಸೇರಿಸಿದಷ್ಟು ವರ್ಷಗಳೆಂದೂ ೪೮ ವರ್ಷಗಳೊಳಗಿದ್ದರೆ ಮೂರು ಭಗಣ (೩೬ ವರ್ಷಗಳು) ಸೇರಿಸಿದಷ್ಟು ವರ್ಷಗಳೆಂದೂ ಇದೇ ಕ್ರಮದಲ್ಲಿ ೧೨೦ ವರ್ಷಗಳೊಳಗಿದ್ದರೆ ಒಂಬತ್ತು ಭಗಣ (೧೦೮ ವರ್ಷಗಳು) ಸೇರಿಸಿದಷ್ಟು ವರ್ಷಗಳೆಂದೂ ಪ್ರಶ್ನೆ ಮಾಡುವವನ ಆಕಾರಕ್ಕನುಗುಣವಾಗಿ ವಯಸ್ಸಿನ ಪ್ರಮಾಣವನ್ನು ನಿಷ್ಕರ್ಷಿಸಬೇಕು.

ಆಕಾರದಿಂದ ವಯಸ್ಸನ್ನು ತಿಳಿಯಲು ಸಾಧ್ಯವಾಗದಿದ್ದರೆ ಆಗ ಪ್ರಶ್ನ ಕಾಲದಲ್ಲಿ ಆತನು ಮುಟ್ಟುವ ಅಂಗದಿಂದ ವಯಸ್ಸನ್ನು ತಿಳಿಯಬೇಕು. ಪಾದಗಳು (೧ ಭಗಣ) ಜಂಘೆ–ಮೊಣಕಾಲು (೨ ಭಗಣ) ಗುಹ್ಯಸ್ಥಾನ–ತೊಡೆ (೩ ಭಗಣ) ನಾಭಿ–ಕಟಿ (೪ ಭಗಣ) ಹೊಟ್ಟೆ (೫ ಭಗಣ) ಎದೆ (೬ ಭಗಣ) ಭುಜ–ತಲೆ (೭ ಭಗಣ) ತುಟಿ–ಕತ್ತು (೮ ಭಗಣ) ಕಣ್ಣು–ಹುಬ್ಬು (೯ ಭಗಣ) ಹಣೆ–ತಲೆ (೧೦ ಭಗಣ). ಇದರಂತೆ ಪೃಚ್ಛಕನು ಮುಟ್ಟುವ ಅವಯವದ ಭಗಣಸಂಖ್ಯೆಯನ್ನು ಹನ್ನೆರಡರಿಂದ ಗುಣಿಸಿ ಪ್ರಶ್ನಲಗ್ನದಿಂದ ಗುರುವಿರುವ ರಾಶಿಯುವರೆಗೆ ಎಣಿಸಿ ಬಂದ ಸಂಖ್ಯೆಯನ್ನು ಸೇರಿಸಿದರೆ ಆತನ ವಯಸ್ಸಾಗುತ್ತದೆ. ಪರಮಾಯುರ್ದಾಯ (೧೨೦ ವರ್ಷ) ಕ್ಕಿಂತ ಹೆಚ್ಚು ವಯಸ್ಸಾದವರಿಗೆ ನಷ್ಟಜಾತಕದ ಆವಶ್ಯಕತೆ ಇರುವುದಿಲ್ಲ.

---

[1] ವ (ಶ ಗ).

(ಋತುಜ್ಞಾನ)

ಉದಗಯನ[1]ಕ್ಕಱ ಶಿ[1]ಶಿರಂ
ಮೊದಲಾಗಿರೆ ಮೂಱು ಋತುಗಳೆಂಬುದಸಮಯಿಂ
ಮೊದಲಾಗಱು ಋತುಗಳ್ ಮೂ
ಱು ದಕ್ಷಿಣಾಯನಕೆ ಸಂತತಂ ವರ್ತಿಸುಗುಂ ೪

ಉದಯುಕ್ಷೇತ್ರದೊಳೊಂದಿದಂದು ಶನಿ ಮೇಣ್ ತತ್ತ್ರ್ಯಂಶವಪ್ಪಂದು ಪು
ಟ್ಟಿದ ಕಾಲಂ ಶಿಶಿರಂ ಸಿತಂಗದು ವಸಂತಂ ಗ್ರೀಷ್ಮಮುರ್ವೀಸುತಂ
ಗದು ವರ್ಷಾಗಮಮಿಂದುವಿಂಗದು ಶರತ್ಕಾಲಂ ಶಶಾಂಕಾತ್ಮಜಂ
ಗದು ಹೇಮಂತ[2]ಮ[2]ದಾಂಗಿರಂಗೆ ದೊರೆಕೊಳ್ಗುಂ ತಕ್ಕ್ರಮಪ್ರಾಪ್ತಿಯಿಂ ೫

---

೪. ಉತ್ತರಾಯಣಕ್ಕೆ ಶಿಶಿರ ಮೊದಲಾದ ಮೂರು ಋತುಗಳೂ ದಕ್ಷಿಣಾಯನಕ್ಕೆ ವರ್ಷ ಮೊದಲಾದ ಮೂರು ಋತುಗಳೂ ಇರುತ್ತವೆ.

ವಿ–ಋತುಗಳು ಆರು. ಇವುಗಳಲ್ಲಿ ಶಿಶಿರ ವಸಂತ ಗ್ರೀಷ್ಮ ಈ ಮೂರು ಉತ್ತರಾಯಣದಲ್ಲಿ ಬರುವ ಋತುಗಳು. ವರ್ಷ ಶರತ್ ಹೇಮಂತ ಈ ಮೂರು ದಕ್ಷಿಣಾಯನದಲ್ಲಿ ಬರುವ ಋತುಗಳು.

೫. ಪ್ರಶ್ನಲಗ್ನದಲ್ಲಿ ಶನಿ ಇದ್ದರೆ ಅಥವಾ ಶನಿಯ ದ್ರೇಕ್ಕಾಣ (ಮಕರ–ಕುಂಭ) ಉದಯಿಸಿದ್ದರೆ ಹುಟ್ಟಿದ ಕಾಲ ಶಿಶಿರ ಋತು ; ಶುಕ್ರನಿದ್ದರೆ ಅಥವಾ ಶುಕ್ರ ದ್ರೇಕ್ಕಾಣ (ವೃಷಭ-ತುಲಾ) ಉದಯಿಸಿದ್ದರೆ ವಸಂತ ಋತು ; ಅಂಗಾರಕನಿದ್ದರೆ ಅಥವಾ ಅಂಗಾರಕ ದ್ರೇಕ್ಕಾಣ (ಮೇಷ–ವೃಶ್ಚಿಕ) ಉದಯಿಸಿದ್ದರೆ ಗ್ರೀಷ್ಮ ಋತು ; ಚಂದ್ರನಿದ್ದರೆ ಅಥವಾ ಚಂದ್ರ ದ್ರೇಕ್ಕಾಣ (ಕರ್ಕಟಕ) ಉದಯಿಸಿದ್ದರೆ ವರ್ಷ ಋತು ; ಬುಧನಿದ್ದರೆ ಅಥವಾ ಬುಧ ದ್ರೇಕ್ಕಾಣ (ಮಿಥುನ–ಕನ್ಯಾ) ಉದಯಿಸಿದ್ದರೆ ಶರದೃತು ; ಗುರುವಿದ್ದರೆ ಅಥವಾ ಗುರು ದ್ರೇಕ್ಕಾಣ (ಧನುಸ್ಸು–ಮೀನ) ಉದಯಿಸಿದ್ದರೆ ಹೇಮಂತ ಋತು ಈ ಕ್ರಮದಲ್ಲಿ ಋತುಗಳು ಉಂಟಾಗುತ್ತವೆ.

ವಿ–ಲಗ್ನದಲ್ಲಿ ಒಂದಕ್ಕಿಂತ ಅಧಿಕವಾಗಿ ಗ್ರಹಗಳಿದ್ದರೆ ಅವುಗಳಲ್ಲಿ ಬಲಿಷ್ಠ ಗ್ರಹದಿಂದಲೂ ಗ್ರಹಗಳೇ ಇಲ್ಲದಿರುವಾಗ ಲಗ್ನದಲ್ಲಿ ಉದಿತವಾಗಿರುವ ದ್ರೇಕ್ಕಾಣಾಧಿಪತಿಯಿಂದಲೂ ಋತುವನ್ನು ತಿಳಿಯಬೇಕು.

---

[1] ಕ್ಕರಿಸಿ (ಕ) ಕ್ಕಱು ಸಿ (ಗ) [2] ವ (ಕ ಗ).

(ಋತುಪರಿವರ್ತನಕ್ರಮ)

ದೊರೆಕೊಂಡಿರ್ದಯನಕ್ಕೆ ಬೇಱೆ ಋತುವಾಗಿರ್ದಂದು ಚಂ[1]ದ್ರಜ್ಞಜೀ
ವರ[1] ನಿಂದಲ್ಲಿ ಪರಸ್ಪರಂ ನಿಲ್[2]ಸೆ[2] ದೈತ್ಯಾಮಾತ್ಯವಕ್ರಾರ್ಕಪು
ತ್ರರನಾ[3]ಷಡ್ಸ್[3]ಹಮಿರ್ದ ತಾಣಮವು [4]ಸಾ[4]ಮ್ಯಂ ತಾನಬಾಲ್ಯಂ ದಿವಾ
ಕರ[5]ನುಂ[5] ಪೃಚ್ಛಕಲಗ್ನದೊಳ್ ನೆಲಸೆ ಮತ್ತಂ ಗ್ರೀಷ್ಮವಾ ಕಾಲಮುಂ　೬

ಸಮನಿಸೆ ಹೇಮಂತಂ ಶಿಶಿ
ರಮಂ ಶರತ್ಸಮಯಮಲ್ಲಿ ಬರೆ ಕೊಳ್ಗೆ ವಸಂ
ತಮನಂಬುದರ್ತುಗಾ ಗ್ರೀ
ಷ್ಮಮನಂತೆ ವಿರೋಮ ಕಥ್ಯಮಯನದ್ವಯದೊಳ್　೭

೬. ಪ್ರಶ್ನಕಾಲದಿಂದ ಉಂಟಾದ ಅಯನಕ್ಕೆ ಸಂಬಂಧಪಡದ ಬೇರೆ ಋತುವಾಗಿದ್ದರೆ ಚಂದ್ರ ಬುಧ ಗುರುಗಳಿರುವ ಸ್ಥಾನದಲ್ಲಿ ಕ್ರಮವಾಗಿ ಶುಕ್ರ ಅಂಗಾರಕ ಶನಿಗಳನ್ನು ಪರಸ್ಪರ ನಿಲ್ಲಿಸಿದರೆ ಆಗ ಆ ಆರು ಗ್ರಹಗಳಿರುವ ಸ್ಥಾನ ದಿಂದ ಋತುಸಾಮ್ಯವುಂಟಾಗುತ್ತದೆ. ಗ್ರಹಗಳು ಬಲಿಷ್ಠರಲ್ಲದಿದ್ದಾಗ ಸೂರ್ಯನು ಪ್ರಶ್ನಲಗ್ನದಲ್ಲಿದ್ದರೆ ಗ್ರೀಷ್ಮ ಋತುವಾಗಲಿ ಅಥವಾ ಸೂರ್ಯನು ಇರುವ ರಾಶಿಗೆ ಸಂಬಂಧಿಸಿದ ಕಾಲ(ಋತು)ವಾಗಲಿ ಆಗುತ್ತದೆ.

ವಿ–ಚಂದ್ರ ಬುಧ ಗುರುಗಳು ದಕ್ಷಿಣಾಯನಕ್ಕೆ ಸಂಬಂಧಿಸಿದ ಗ್ರಹಗಳು. ಅಂಗಾರಕ ಶುಕ್ರ ಶನಿಗಳು ಉತ್ತರಾಯಣಕ್ಕೆ ಸಂಬಂಧಿಸಿದ ಗ್ರಹಗಳು. ಋತು ವನ್ನು ತಿಳಿಯುವಾಗ ಉತ್ತರಾಯಣದಲ್ಲಿ ದಕ್ಷಿಣಾಯನದ ಋತುವೂ ದಕ್ಷಿಣಾ ಯನದಲ್ಲಿ ಉತ್ತರಾಯಣದ ಋತುವೂ ಬಂದರೆ ಆಗ ಚಂದ್ರ ಶುಕ್ರರು ಬುಧಾಂ ಗಾರಕರು ಗುರು ಶನಿಗಳು ಇವರಲ್ಲಿ ಪರಸ್ಪರ ವಿನಿಮಯ ಮಾಡಿ ಅಯನಕ್ಕೆ ತಕ್ಕ ಋತುವನ್ನು ತಿಳಿಯಬೇಕು. ಸೂರ್ಯನೊಡನೆ ಮತ್ತೊಂದು ದುರ್ಬಲಗ್ರಹ ಲಗ್ನದಲ್ಲಿದ್ದಾಗ ಆ ಗ್ರಹದ ಋತುವನ್ನು ಬಿಟ್ಟು ಗ್ರೀಷ್ಮ ಋತುವೆಂದು ತಿಳಿಯ ಬೇಕು. ದಕ್ಷಿಣಾಯನವಾದರೆ ಆಗ ಸೂರ್ಯನಿರುವ ರಾಶಿಗನುಗುಣವಾದ ಋತುವನ್ನು ತಿಳಿಯಬೇಕು. ಈ ಕ್ರಮದಲ್ಲಿ ಆಯನಕ್ಕೆ ತಕ್ಕಂತೆ ಋತುಗಳನ್ನು ಬದಲಾಯಿಸಿಕೊಳ್ಳಬೇಕು.

೭. ಅಯನಕ್ಕೆ ಸಂಬಂಧಪಡದ ಋತು ಸಂಭವಿಸಿದಾಗ ಹೇಮಂತ ಋತುವಾದರೆ ಶಿಶಿರ ಋತುವನ್ನು, ಶರದೃತುವಾದರೆ ವಸಂತ ಋತುವನ್ನು, ವರ್ಷ ಋತುವಾದರೆ ಗ್ರೀಷ್ಮ ಋತುವನ್ನು ವಿನಿಮಯ ಮಾಡಿ ಎರಡು ಅಯನಗಳಲ್ಲೂ ಅಯನಕ್ಕೆ ತಕ್ಕ ಋತುವನ್ನು ಹೇಳಬೇಕು.

ವಿ–ಆರನೆಯ ಪದ್ಯದಿಂದ ಶರದೃತುವಿಗೆ ಗ್ರೀಷ್ಮ ಋತುವನ್ನು, ವರ್ಷ ಋತುವಿಗೆ ವಸಂತ ಋತುವನ್ನೂ ವಿನಿಮಯ ಮಾಡಬೇಕೆಂದು ತಿಳಿಯಬರುತ್ತದೆ. ಈ ಅಭಿಪ್ರಾಯ 'ಚಂದ್ರಜ್ಞಜೀವಾಃ ಪರಿವರ್ತನೀಯಾಃ ಶುಕ್ರಾರಮಂದೈ–

[1] ದ್ವಾರ್ಕಜೀವರಾ (ಕ ಗ) [2] ನಿ (ಕ) [3] ಸದ್ವ್ರ (ಕ ಗ) [4] ಸೌ (ಕ ಗ) [5] ನಾ (ಗ).

(ಮಾಸಜ್ಞಾನ)

ಕ್ರಮದಿಂ ಪೃಚ್ಛಕಲಗ್ನಗೇಹ[1]ಜನಿತ[1]ದ್ರೇಕ್ಕಾಣದೊಳ್ ವರ್ತಿಪಾ
ದಿಮಭಾಗಂ ಋತುಪೂರ್ವಮಾಸಮಪರಾರ್ಧಂ ತಾಗೆ ಮಾಸದ್ವಿತೀ
ಯಮೆನಿಕ್ಕುಂ ದೊರೆಕೊಂಡು ಬಂದುದ[2]ಯದಾ[2] ದ್ರೇಕ್ಕಾಣದೊಳ್ ಸಂದ ಭಾ
ಗಮನಾರಯ್ದನುಪಾತದಿಂದಱಿಗೆ ತಜ್ಜನ್ಮಾಹಮಂ ತದ್ವಿ[3]ದಂ[3] ೮

(ಜನ್ಮದಿನಜ್ಞಾನ)

ಸರಸಿರುಹಬಾಂಧವಂ ನಿಂ
ದ ರಾಶಿಯೊಳ್ ಭುಕ್ತಭಾಗ[4]ಮಿತಿಯಿಂ ಸಾಂವ
ತ್ಸರಿಕಂ[4] ಪೇ[5]ಬ್ಬು[5]ದು ಪೃಚ್ಛಕ
ನರಂಗೆ ತಜ್ಜನ್ಮದಿನಮನತಿಪರಿಣತಿಯಿಂ ೯

---

ರಯನೇ ವಿಲೋಮೇ' ಎಂದು ಬೃಹಜ್ಜಾತಕದಲ್ಲಿ ಹೇಳಿರುವುದಕ್ಕೆ ಸರಿಯಾಗಿದೆ. ಆದರೆ ಏಳನೆಯ ಪದ್ಯದಲ್ಲಿ ಋತುವಿನಿಮಯವನ್ನು ಸ್ಪಷ್ಟಪಡಿಸಲು ಪುನಃ ಹೇಳುವಾಗ್ಗ ವರ್ಷ ಋತುವಿಗೆ ಗ್ರೀಷ್ಮ ಋತುವನ್ನೂ ಶರದೃತುವಿಗೆ ವಸಂತ ಋತುವನ್ನೂ ವಿನಿಮಯ ಮಾಡಬೇಕೆಂದು ಹೇಳಿರುವುದರಿಂದ ಪರಸ್ಪರ ವಿರೋಧ ಉಂಟಾಗುತ್ತದೆ. 'ಕೊಳ್ಗೆ ಗ್ರೀಷ್ಮಮನಂಬುದರ್ತುಗೆ ವಸಂತಮನಂತೆ' ಎಂದು ವ್ಯತ್ಯಾಸ ಮಾಡಿದರೆ ವಿರೋಧವಿರುವುದಿಲ್ಲ.

೮. ಪ್ರಶ್ನಲಗ್ನದ ದ್ರೇಕ್ಕಾಣದಲ್ಲಿ ಮೊದಲನೆಯ ಅರ್ಧವಾದರೆ ಋತುವಿನಲ್ಲಿ ಮೊದಲನೆಯ ತಿಂಗಳೂ ಎರಡನೆಯ ಅರ್ಧವಾದರೆ ಎರಡನೆಯ ತಿಂಗಳೂ ಆಗುತ್ತದೆ. ಪ್ರಶ್ನಲಗ್ನದ ಆ ದ್ರೇಕ್ಕಾಣದಲ್ಲಿ ಕಳೆದಿರುವ ಅಂಶಗಳಿಗೆ ಅನುಪಾತ ಮಾಡಿ ಜನ್ಮದಿನವನ್ನು (ತಿಥಿಯನ್ನು) ತಿಳಿದುಕೊಳ್ಳಬೇಕು.

ವಿ—ಒಂದು ಋತುವಿನಲ್ಲಿ ಎರಡು ತಿಂಗಳುಗಳಿರುತ್ತವೆ. ಪ್ರಶ್ನಕಾಲದ ದ್ರೇಕ್ಕಾಣದಲ್ಲಿ ಮೊದಲನೆಯ ಅರ್ಧವಾದರೆ ಆ ಋತುವಿನಲ್ಲಿ ಮೊದಲನೆಯ ತಿಂಗಳೂ ಎರಡನೆಯ ಅರ್ಧವಾದರೆ ಎರಡನೆಯ ತಿಂಗಳೂ ಆಗುತ್ತದೆ. ಒಂದು ದ್ರೇಕ್ಕಾಣಕ್ಕೆ ಹತ್ತು ಅಂಶಗಳು. ಇದರಲ್ಲಿ ಅರ್ಧ ಎಂದರೆ ಐದು ಅಂಶಗಳು ಒಂದು ತಿಂಗಳಿಗೆ ಸಮಾನವೆಂದು ಭಾವಿಸಿ ಆ ದ್ರೇಕ್ಕಾಣದಲ್ಲಿ ಕಳೆದಿರುವ ಅಂಶಗಳಿಂದ ತಿಥಿಯನ್ನು ನಿರ್ಣಯಿಸಬೇಕು. ಹತ್ತು ಕಲೆಗಳಿಗೆ ಒಂದು ತಿಥಿಯಂತೆ ಆ ದ್ರೇಕ್ಕಾಣದ ಪೂರ್ವೋತ್ತರಾರ್ಧಗಳಲ್ಲಿ ಕಳೆದಿರುವ ಅಂಶಗಳಿಗೆ ಕಳೆದಿರುವಷ್ಟು ತಿಥಿಯನ್ನು ಅನುಪಾತ ಮಾಡಿ ತಿಳಿಯಬೇಕು.

೯. ಪ್ರಶ್ನಕಾಲದಲ್ಲಿ ಸೂರ್ಯನಿರುವ ರಾಶಿಯಲ್ಲಿ ಕಳೆದಿರುವ ಅಂಶ ಪ್ರಮಾಣದಿಂದ ಸಾಂವತ್ಸರಿಕನು (ಜೋಯಿಸನು) ಅನುಭವದಿಂದ ಪೃಚ್ಛಕನಿಗೆ ಆತನ ಜನ್ಮದಿವಸವನ್ನು ತಿಳಿಸುವುದು.

---

[1] ಜನಿರಲ್ (ಗ) [2] ಯ (ಕ) ಯಮ (ಗ) [3] ಧಂ (ಕ) [4] ಮನಿಶಂ ಸಾಧಕರಿಂ (ಗ)
[5] ಳ್ದ (ಕ).

(ದಿವಾರಾತ್ರಿಸಂಜ್ಞಾರಾಶಿಗಳು)

ನರಯುಗ್ಮಂ ಮೃಗ ಧನು ಶಾ
ಕ್ವರ ಮೇಷ ಕುಳೀರಮಿವು ನಿಶಾಸಂಜ್ಞಂಗಳ್
ಹರಿ ವೃಶ್ಚಿಕ ಕುಂಭ ತುರಾ
ತರುಣೀ ಮೀನಂಗಳಿವು ದಿವಾಸಂಜ್ಞಂಗಳ್ ೧೦

(ಜನ್ಮಕಾಲಜ್ಞಾನ)

ಬರೆ ರಾತ್ರಿಸಂಜ್ಞ[1] ಲಗ್ನಂ
ನರಂಗಹರ್ಜನ್ಮವಾ ದಿವಾಸಂಜ್ಞಂ ಮೇಣ್
ಬರೆ ರಜನೀಜನ್ಮಂ ಲ
ಗ್ನರಾಶಿ ಸಂದನಿತೆ ಘಳಿಗೆಯನುಪಾತನದಿಂ ೧೧

---

ವಿ—ಸೂರ್ಯನು ಪ್ರಶ್ನಕಾಲದಲ್ಲಿ ಯಾವ ರಾಶಿಯಲ್ಲಿರುವನೋ ಆ ರಾಶಿಯಲ್ಲಿ ಎಷ್ಟು ಅಂಶಗಳು ಸೂರ್ಯನಿಂದ ಭುಕ್ತವಾಗಿವೆಯೋ ಅಷ್ಟು ತಿಥಿಗಳು ಆ ತಿಂಗಳಿನಲ್ಲಿ ಕಳೆದಿವೆ ಎಂದು ಹೇಳಬೇಕು. ಒಂದು ರಾಶಿಯಲ್ಲಿ ಮೂವತ್ತು ಅಂಶಗಳಿವೆ. ಒಂದು ತಿಂಗಳಿನಲ್ಲಿ ಮೂವತ್ತು ತಿಥಿಗಳಿವೆ. ಒಂದು ಅಂಶಕ್ಕೆ ಒಂದು ತಿಥಿಯಂತೆ ಸೂರ್ಯನಿಂದ ಭುಕ್ತವಾದ ಅಂಶಗಳಿಂದ ತಿಥಿಯನ್ನು ಗೊತ್ತು ಮಾಡಬೇಕು.

೧೦. ಮಿಥುನ ಮಕರ ಧನುಸ್ಸು ವೃಷಭ ಮೇಷ ಕರ್ಕಾಟಕ ಇವು ರಾತ್ರಿ ಸಂಜ್ಞಾ ರಾಶಿಗಳು; ಸಿಂಹ ವೃಶ್ಚಿಕ ಕುಂಭ ತುಲಾ ಕನ್ಯಾ ಮೀನ ಇವು ದಿವಾ ಸಂಜ್ಞಾ ರಾಶಿಗಳು.

ವಿ—ರಾಶಿಗಳಿಗೆ ದಿವಾರಾತ್ರಿ ಸಂಜ್ಞೆಯನ್ನು ಒಂದನೆಯ ಅಧಿಕಾರದ ೩೯ನೇ ಪದ್ಯದಲ್ಲಿ ಹೇಳಿವೆ; ಆದರೂ ಸ್ಪಷ್ಟಪಡಿಸುವುದಕ್ಕಾಗಿ ಪುನಃ ಈ ಅಧಿಕಾರದಲ್ಲೂ ಹೇಳಿದೆ.

೧೧. ಪ್ರಶ್ನಲಗ್ನ ರಾತ್ರಿಸಂಜ್ಞಾ ರಾಶಿಯಾದರೆ ಹಗಲು ಜನ್ಮವೆಂದೂ ದಿವಾಸಂಜ್ಞಾ ರಾಶಿಯಾದರೆ ರಾತ್ರಿ ಜನ್ಮವೆಂದೂ ಅನುಪಾತದಿಂದ ಪ್ರಶ್ನಲಗ್ನದಲ್ಲಿ ಕಳೆದಿರುವ ಭಾಗದಷ್ಟೇ ಘಳಿಗೆಯೆಂದೂ ತಿಳಿಯಬೇಕು.

ವಿ—ಹಗಲು ಜನ್ಮದಲ್ಲಿ ಅಹಸ್ಸಿನ ಪ್ರಮಾಣಕ್ಕೆ ಲಗ್ನಪ್ರಮಾಣವು ಸಮಾನಾದರೆ ಲಗ್ನದಲ್ಲಿ ಕಳೆದಿರುವ ಭಾಗಕ್ಕೆ ಎಷ್ಟು ? ಎಂದು ಅನುಪಾತ ಮಾಡಿ ಬಂದ ಉದಯಾದಿ ಘಳಿಗೆಗಳನ್ನು ತಿಳಿಯಬೇಕು. ರಾತ್ರಿ ಜನನದಲ್ಲಿ ರಾತ್ರಿ ಪ್ರಮಾಣದಿಂದ ಅನುಪಾತ ಮಾಡಿ ಬಂದ ಘಳಿಗೆಗಳಿಗೆ ಅಹಃ ಪ್ರಮಾಣವನ್ನು ಸೇರಿಸಿದರೆ ಉದಯಾದಿ ಘಳಿಗೆಗಳು ಬರುತ್ತವೆ.

---

[1] ಜ್ಞೆ (ಆ).

(ಮಾಸಜ್ಞಾನ)

ಕ್ರಮದಿಂ ಪೃಚ್ಛಕಲಗ್ನಗೇಹ[1]ಜನಿತ[1]ದ್ರೇಕ್ಕಾಣದೊಳ್ ವರ್ತಿಪಾ
ದಿಮಭಾಗಂ ಋತುಪೂರ್ವಮಾಸಮಪರಾರ್ಧಂ ತಾಗೆ ಮಾಸದ್ವಿತೀ
ಯಮೆನಿಕ್ಕುಂ ದೊರೆಕೊಂಡು ಬಂದುದ[2]ಯದಾ[2] ದ್ರೇಕ್ಕಾಣದೊಳ್ ಸಂದ ಭಾ
ಗಮನಾರಯ್ದನುಪಾತದಿಂದಱಿಗೆ ತಜ್ಜನ್ಮಾಹಮಂ ತದ್ವಿ[3]ದಂ[3] ೮

(ಜನ್ಮದಿನಜ್ಞಾನ)

ಸರಸಿರುಹಬಾಂಧವಂ ನಿಂ
ದ ರಾಶಿಯೊಳ್ ಭುಕ್ತಭಾಗ[4]ಮಿತಿಯಿಂ ಸಾಂವ
ತ್ಸರಿಕಂ[4] ಪೇ[5]ಳ್ವು[5]ದು ಪೃಚ್ಛಕ
ನರಂಗೆ ತಜ್ಜನ್ಮದಿನಮನತಿಪರಿಣತಿಯಿಂ ೯

---

ರಯನೇ ವಿಲೋಮೇ' ಎಂದು ಬೃಹಜ್ಜಾತಕದಲ್ಲಿ ಹೇಳಿರುವುದಕ್ಕೆ ಸರಿಯಾಗಿದೆ. ಆದರೆ ಏಳನೆಯ ಪದ್ಯದಲ್ಲಿ ಋತುವಿನಿಮಯವನ್ನು ಸ್ಪಷ್ಟಪಡಿಸಲು ಪುನಃ ಹೇಳುವಾಗ, ವರ್ಷಋತುವಿಗೆ ಗ್ರೀಷ್ಮಋತುವನ್ನೂ ಶರದೃತುವಿಗೆ ವಸಂತ ಋತುವನ್ನೂ ವಿನಿಮಯ ಮಾಡಬೇಕೆಂದು ಹೇಳಿರುವುದರಿಂದ ಪರಸ್ಪರ ವಿರೋಧ ಉಂಟಾಗುತ್ತದೆ. 'ಕೊಳ್ಗೆ ಗ್ರೀಷ್ಮಮನಂಬುದರ್ತುಗೆ ವಸಂತಮನಂತೆ' ಎಂದು ವ್ಯತ್ಯಾಸ ಮಾಡಿದರೆ ವಿರೋಧವಿರುವುದಿಲ್ಲ.

೮. ಪ್ರಶ್ನಲಗ್ನದ ದ್ರೇಕ್ಕಾಣದಲ್ಲಿ ಮೊದಲನೆಯ ಅರ್ಧವಾದರೆ ಋತುವಿನಲ್ಲಿ ಮೊದಲನೆಯ ತಿಂಗಳೂ ಎರಡನೆಯ ಅರ್ಧವಾದರೆ ಎರಡನೆಯ ತಿಂಗಳೂ ಆಗುತ್ತದೆ. ಪ್ರಶ್ನಲಗ್ನದ ಆ ದ್ರೇಕ್ಕಾಣದಲ್ಲಿ ಕಳೆದಿರುವ ಅಂಶಗಳಿಗೆ ಅನುಪಾತ ಮಾಡಿ ಜನ್ಮದಿನವನ್ನು (ತಿಥಿಯನ್ನು) ತಿಳಿದುಕೊಳ್ಳಬೇಕು.

ವಿ—ಒಂದು ಋತುವಿನಲ್ಲಿ ಎರಡು ತಿಂಗಳುಗಳಿರುತ್ತವೆ. ಪ್ರಶ್ನಕಾಲದ ದ್ರೇಕ್ಕಾಣದಲ್ಲಿ ಮೊದಲನೆಯ ಅರ್ಧವಾದರೆ ಆ ಋತುವಿನಲ್ಲಿ ಮೊದಲನೆಯ ತಿಂಗಳೂ ಎರಡನೆಯ ಅರ್ಧವಾದರೆ ಎರಡನೆಯ ತಿಂಗಳೂ ಆಗುತ್ತದೆ. ಒಂದು ದ್ರೇಕ್ಕಾಣಕ್ಕೆ ಹತ್ತು ಅಂಶಗಳು. ಇದರಲ್ಲಿ ಅರ್ಧ ಎಂದರೆ ಐದು ಅಂಶಗಳು ಒಂದು ತಿಂಗಳಿಗೆ ಸಮಾನವೆಂದು ಭಾವಿಸಿ ಆ ದ್ರೇಕ್ಕಾಣದಲ್ಲಿ ಕಳೆದಿರುವ ಅಂಶಗಳಿಂದ ತಿಥಿಯನ್ನು ನಿರ್ಣಯಿಸಬೇಕು. ಹತ್ತು ಕಲೆಗಳಿಗೆ ಒಂದು ತಿಥಿಯಂತೆ ಆ ದ್ರೇಕ್ಕಾಣದ ಪೂರ್ವೋತ್ತರಾರ್ಧಗಳಲ್ಲಿ ಕಳೆದಿರುವ ಅಂಶಗಳಿಗೆ ಕಳೆದಿರುವಷ್ಟು ತಿಥಿಯನ್ನು ಅನುಪಾತ ಮಾಡಿ ತಿಳಿಯಬೇಕು.

೯. ಪ್ರಶ್ನಕಾಲದಲ್ಲಿ ಸೂರ್ಯನಿರುವ ರಾಶಿಯಲ್ಲಿ ಕಳೆದಿರುವ ಅಂಶ ಪ್ರಮಾಣದಿಂದ ಸಾಂವತ್ಸರಿಕನು (ಜೋಯಿಸನು) ಅನುಭವದಿಂದ ಪೃಚ್ಛಕನಿಗೆ ಆತನ ಜನ್ಮದಿವಸವನ್ನು ತಿಳಿಸುವುದು.

---

[1] ಜನಿದಂ (ಗ) [2] ಯ (ಕ) ಯುಮ (ಗ) [3] ಧಂ (ಕ) [4] ಮನಿತುಂ ಸಾಧಕರಿಂ (ಗ)
[5] ಳ್ವ (ಕ).

(ದಿವಾರಾತ್ರಿಸಂಜ್ಞಾರಾಶಿಗಳು)

ನರಯುಗ್ಮಂ ಮೃಗ ಧನು ಶಾ
ಕ್ವರ ಮೇಷ ಕುಳೀರಮಿವು ನಿಶಾಸಂಜ್ಞಂಗಳ್
ಹರಿ ವೃಶ್ಚಿಕ ಕುಂಭ ತುಲಾ
ತರುಣೀ ಮೀನಂಗಳಿವು ದಿವಾಸಂಜ್ಞಂಗಳ್ ೧೦

(ಜನ್ಮಕಾಲಜ್ಞಾನ)

ಬರೆ ರಾತ್ರಿಸಂಜ್ಞ[1] ಲಗ್ನಂ
ನರಂಗಹರ್ಜನ್ಮವಾ ದಿವಾಸಂಜ್ಞಂ ಮೇಣ್
ಬರೆ ರಜನೀಜನ್ಮಂ ಲ
ಗ್ನರಾಶಿ ಸಂದನಿತೆ ಘಳಿಗೆಯನುಪಾತನದಿಂ ೧೧

---

ವಿ—ಸೂರ್ಯನು ಪ್ರಶ್ನಕಾಲದಲ್ಲಿ ಯಾವ ರಾಶಿಯಲ್ಲಿರುವನೋ ಆ ರಾಶಿಯಲ್ಲಿ ಎಷ್ಟು ಅಂಶಗಳು ಸೂರ್ಯನಿಂದ ಭುಕ್ತವಾಗಿವೆಯೋ ಅಷ್ಟು ತಿಥಿಗಳು ಆ ತಿಂಗಳಿನಲ್ಲಿ ಕಳೆದಿವೆ ಎಂದು ಹೇಳಬೇಕು. ಒಂದು ರಾಶಿಯಲ್ಲಿ ಮೂವತ್ತು ಅಂಶಗಳಿವೆ. ಒಂದು ತಿಂಗಳಿನಲ್ಲಿ ಮೂವತ್ತು ತಿಥಿಗಳಿವೆ. ಒಂದು ಅಂಶಕ್ಕೆ ಒಂದು ತಿಥಿಯಂತೆ ಸೂರ್ಯನಿಂದ ಭುಕ್ತವಾದ ಅಂಶಗಳಿಂದ ತಿಥಿಯನ್ನು ಗೊತ್ತು ಮಾಡಬೇಕು.

೧೦. ಮಿಥುನ ಮಕರ ಧನುಸ್ಸು ವೃಷಭ ಮೇಷ ಕರ್ಕಟಕ ಇವು ರಾತ್ರಿ ಸಂಜ್ಞಾ ರಾಶಿಗಳು; ಸಿಂಹ ವೃಶ್ಚಿಕ ಕುಂಭ ತುಲಾ ಕನ್ಯಾ ಮೀನ ಇವು ದಿವಾ ಸಂಜ್ಞಾ ರಾಶಿಗಳು.

ವಿ—ರಾಶಿಗಳಿಗೆ ದಿವಾರಾತ್ರಿ ಸಂಜ್ಞೆಯನ್ನು ಒಂದನೆಯ ಅಧಿಕಾರದ ೩೯ನೇ ಪದ್ಯದಲ್ಲಿ ಹೇಳಿದೆ; ಆದರೂ ಸ್ಪಷ್ಟಪಡಿಸುವುದಕ್ಕಾಗಿ ಪುನಃ ಈ ಅಧಿಕಾರದಲ್ಲೂ ಹೇಳಿದೆ.

೧೧. ಪ್ರಶ್ನಲಗ್ನ ರಾತ್ರಿಸಂಜ್ಞಾ ರಾಶಿಯಾದರೆ ಹಗಲು ಜನ್ಮವೆಂದೂ ದಿವಾಸಂಜ್ಞಾ ರಾಶಿಯಾದರೆ ರಾತ್ರಿ ಜನ್ಮವೆಂದೂ ಅನುಪಾತದಿಂದ ಪ್ರಶ್ನಲಗ್ನದಲ್ಲಿ ಕಳೆದಿರುವ ಭಾಗದಷ್ಟೇ ಘಳಿಗೆಯೆಂದೂ ತಿಳಿಯಬೇಕು.

ವಿ—ಹಗಲು ಜನ್ಮದಲ್ಲಿ ಅಹಸ್ಸಿನ ಪ್ರಮಾಣಕ್ಕೆ ಲಗ್ನಪ್ರಮಾಣವು ಸಮನಾದರೆ ಲಗ್ನದಲ್ಲಿ ಕಳೆದಿರುವ ಭಾಗಕ್ಕೆ ಎಷ್ಟು ? ಎಂದು ಅನುಪಾತ ಮಾಡಿ ಉದಯಾದಿ ಘಳಿಗೆಗಳನ್ನು ತಿಳಿಯಬೇಕು. ರಾತ್ರಿ ಜನನದಲ್ಲಿ ರಾತ್ರಿ ಪ್ರಮಾಣದಿಂದ ಅನುಪಾತ ಮಾಡಿ ಬಂದ ಘಳಿಗೆಗಳಿಗೆ ಅಹಃ ಪ್ರಮಾಣವನ್ನು ಸೇರಿಸಿದರೆ ಉದಯಾದಿ ಘಳಿಗೆಗಳು ಬರುತ್ತವೆ.

---

[1] ಜ್ಞೆ (ಕ).

ಉದಾ—ಪೃಚ್ಛಕನ ವಯಸ್ಸು ಸುಮಾರು ೨೪ ವರ್ಷಗಳು.

ಪ್ರಶ್ನಕಾಲ—ತಾ 10–2–1958ನೇ ಹೇವಿಳಂಬಿ ಸಂವತ್ಸರದ ಮಾಘ ಬಹುಳ ಸಪ್ತಮಿ ಬೆಳಗ್ಯೆ 9 ಗಂಟೆ 50 ನಿಮಿಷ.

ಪ್ರಶ್ನಕಾಲದ ಸೂರ್ಯ ಸ್ಫುಟ ರಾಶ್ಯಾದಿ ೯–೨೭–೪೦, ಚಂದ್ರ ಸ್ಫುಟ ರಾಶ್ಯಾದಿ ೬–೧೪–೩೦, ಲಗ್ನ ಸ್ಫುಟ ೧೧–೨೧–೪೧ ಅಹಃ ಪ್ರಮಾಣ ೨೮ ಘ. ೫೪ ವಿಘ. ಈ ಅಧಿಕಾರದ ಮೊದಲನೆಯ ಪದ್ಯದಲ್ಲಿ ಹೇಳಿರುವಂತೆ ಪ್ರಶ್ನಲಗ್ನದಲ್ಲಿ ಎರಡನೆಯ ಅರ್ಧ ಉದಿತವಾಗಿರುವುದರಿಂದ ನಷ್ಟಜಾತಕನು ದಕ್ಷಿಣಾಯನದಲ್ಲಿ ಹುಟ್ಟಿರುವನು ಎಂದು ತಿಳಿದುಬರುತ್ತದೆ.

ಎರಡನೆಯ ಪದ್ಯದಲ್ಲಿ ಹೇಳಿರುವಂತೆ ಪ್ರಶ್ನಲಗ್ನದಲ್ಲಿ ಮೂರನೆಯ ದ್ರೇಕ್ಕಾಣವು ಉದಿತವಾಗಿರುವುದರಿಂದ ಜನನ ಕಾಲದಲ್ಲಿ ಗುರುವು ಲಗ್ನದಿಂದ ಒಂಬತ್ತನೆಯ ಸ್ಥಾನದಲ್ಲಿರುವನು ಎಂದು ತಿಳಿದುಬರುತ್ತದೆ.

ಪೃಚ್ಛಕನ ವಯಸ್ಸು ಸುಮಾರು ೨೪ ವರ್ಷಗಳೊಳಗೆ ಇರುವಂತೆ ಆತನ ಆಕಾರದಿಂದ ತಿಳಿದುಬರುವುದರಿಂದ್ದ ಮೂರನೆಯ ಪದ್ಯದಲ್ಲಿ ತಿಳಿಸಿರುವಂತೆ ಲಗ್ನದಿಂದ ಗುರುವಿರುವ ರಾಶಿ ಸಂಖ್ಯೆ+ಭಗಣ=೯+೧೨=೨೧ ವರ್ಷಗಳು.

ಪ್ರಶ್ನಲಗ್ನದಲ್ಲಿ ಯಾವ ಗ್ರಹವೂ ಇಲ್ಲ. ಆದುದರಿಂದ ಈ ಉದಾಹರಣೆಯಲ್ಲಿ ದ್ರೇಕ್ಕಾಣದಿಂದ ಋತುವನ್ನು ನಿರ್ಣಯಿಸಬೇಕು. ಪ್ರಶ್ನಲಗ್ನದಲ್ಲಿ ಅಂಗಾರಕನ ದ್ರೇಕ್ಕಾಣವಾಗಿರುವುದರಿಂದ ಜನನ ಋತು ಗ್ರೀಷ್ಮವಾಗುತ್ತದೆ. ಇದು ಉತ್ತರಾಯಣದ ಋತು. ಜನನವು ದಕ್ಷಿಣಾಯನದಲ್ಲ ಆಗಿರುವುದರಿಂದ ಗ್ರೀಷ್ಮಕ್ಕೆ ಪ್ರತಿಯಾಗಿ ಶರದೃತುವನ್ನು ತೆಗೆದುಕೊಳ್ಳಬೇಕು. ದ್ರೇಕ್ಕಾಣದಲ್ಲಿ ಮೊದಲನೆಯ ಅರ್ಧ ಉದಿತವಾಗಿರುವುದರಿಂದ ಶರದೃತುವಿನಲ್ಲಿ ಮೊದಲನೆಯ ತಿಂಗಳು ಎಂದರೆ ಆಶ್ವಯುಜವಾಗುತ್ತದೆ. ಪ್ರಶ್ನಕಾಲದಲ್ಲಿ ಸೂರ್ಯನು ೨೮ನೇ ಅಂಶದಲ್ಲಿರುವುದರಿಂದ ಆಶ್ವಯುಜ ಮಾಸದಲ್ಲಿ ೨೮ನೇ ತಿಥಿ ಎಂದರೆ ಕೃಷ್ಣಪಕ್ಷದ ತ್ರಯೋದಶೀ ತಿಥಿಯಲ್ಲಿ ಜನನವಾಗಿದೆ ಎಂದು ತಿಳಿಯಬೇಕು. ಪ್ರಶ್ನಲಗ್ನವು ದಿವಾಸಂಜ್ಞೆಯ ರಾಶಿಯಾಗಿರುವುದರಿಂದ ರಾತ್ರಿಯಲ್ಲಿ ಜನನವಾಗಿದೆ. ೧೧ನೇ ಪದ್ಯದಲ್ಲಿ ಹೇಳಿರುವಂತೆ ಅನುಪಾತ ಮಾಡಿ ಬರುವ ಕಾಲ=

೧೮೦೦ ಕಲೆಗಳಿಗೆ ರಾತ್ರಿ ಪ್ರಮಾಣ ೩೧.೧ ಘಳಿಗೆಯಾದರೆ

ಪ್ರಶ್ನಲಗ್ನದಲ್ಲಿ ಗತ ೧೩೦೧ ಕಲೆಗಳಿಗೆ ಎಷ್ಟು?

$$=\frac{೧೩೦೧\times ೩೧.೧}{೧೮೦೦}=\frac{೪೦೪೬೧.೧}{೧೮೦೦}=$$ ೨೨ ಘಳಿಗೆ ೨೯ ವಿಘಳಿಗೆ.

∴ ಜನನಕಾಲ = ಅಹಃ ಪ್ರಮಾಣ (೨೮ ಘ. ೫೪ ವಿಘ.) + ೨೨ ಘ. ೨೯ ವಿಘ.=ಉದಯಾದಿ ೫೧ ಘ. ೨೩ ವಿಘ.

(ಮತಾಂತರದಲ್ಲಿ ಚಾಂದ್ರಮಾನ ಜ್ಞಾನ)

ಅರೆಬರ್ ಕಾರ್ತಿಕ ಪೌರ್ಣಮಾಸೀದಿನಂ ಮೊದಲಾಗಿ ಮಾಸಮಂತದುವೆ ಸಂವತ್ಸರ[1]ಕೆ[1] ಮೊದಲೆಂಬರ್ ಕಾರ್ತಿಕಮಾದಿಯಾ[2]ಗೆ[2] ಚತುರ್ಮಾಸಂ ಕೃತ್ತಿಕಾದಿಯಾಗಿ ಶೆರಡುಂ ಗೆಯ್ದುಂ ತಾರೆಯನಾಳ್ಗುಂ ಫಾಲ್ಗುಣಂ ಮೂಱುಂ ಚೈತ್ರಾದಿಯಾಗಯ್ದುಂ ತಿಂಗಳೆರಡುಂ ಗೆಯ್ದಿ ಭಾದ್ರಪದಾ[3]ಶ್ವಯುಜವವು ಮೂಱು ಗೆ[4]ಯ್ದುಂ[4] ಬೃಹಸ್ಪತಿ [ಚಾರದೊಳ್ ೧೨

---

ಈ ಉದಾಹರಣೆಯಲ್ಲಿ ನಷ್ಟಜಾತಕನು ತಾ 1-11-1937ನೇ ಈಶ್ವರ ಸಂವತ್ಸರದ ಆಶ್ವಯುಜ ಕೃಷ್ಣ ತ್ರಯೋದಶೀ ದಿವಸ ಸೂರ್ಯೋದಯಾದಿ ೫೧-೨೩ ಘಳಿಗೆಗೆ ಜನಿಸಿದವನೆಂದು ತಿಳಿದುಬರುತ್ತದೆ. ಈ ಕಾಲಕ್ಕೆ ಸರಿಯಾಗಿ ಪಂಚಾಂಗದ ಸಹಾಯದಿಂದ ಗ್ರಹ ಮೊದಲಾದುವನ್ನು ತಿಳಿದು ಜಾತಕವನ್ನು ಬರೆಯಬಹುದು.

ನಷ್ಟಜಾತಕಾಧ್ಯಾಯದಲ್ಲಿ ವರಾಹಮಿಹಿರಾಚಾರ್ಯರು ನಷ್ಟಜಾತಕವನ್ನು ತರಲು ಮತಾಂತರಗಳನ್ನು ಹೇಳಿರುವಂತೆ ಶ್ರೀಧರನೂ ಎಲ್ಲ ಮತಗಳನ್ನೂ ತನ್ನ ಗ್ರಂಥದಲ್ಲಿ ಸಂಗ್ರಹಿಸಿ ಹೇಳಿರುತ್ತಾನೆ. ಇದರಂತೆ ಆನಯನ ಮಾಡಿದ ಜಾತಕವು ಒಂದೇ ವಿಧವಾಗಿರುವುದಿಲ್ಲ. ಆದರೆ ಇವುಗಳಲ್ಲಿ ಯಾವ ಕ್ರಮವನ್ನನುಸರಿಸಿ ನಷ್ಟಜಾತಕವನ್ನು ತರಬೇಕು ಎನ್ನುವುದನ್ನು ವರಾಹಮಿಹಿರರು ಬೃಹಜ್ಜಾತಕದಲ್ಲಿ ಸ್ಪಷ್ಟಪಡಿಸದಿದ್ದರೂ ಅಧ್ಯಾಯದ ಕೊನೆಯಲ್ಲಿ ಹೇಳಿರುವ ಮತವನ್ನೇ ತಮ್ಮ ಅಭಿಪ್ರಾಯವನ್ನು ಮಾತ್ರ ಸೂಚಿಸುವ ಲಘುಜಾತಕದಲ್ಲೂ ಹೇಳಿರುವುದರಿಂದ ಆ ಕ್ರಮದಂತೆಯೇ ನಷ್ಟಜಾತಕವನ್ನು ತರುವುದು ಆಚಾರ್ಯರಿಗೆ ಅಭಿಮತವೆಂದು ನಾವು ತಿಳಿಯಬಹುದು.

೧೨. ಕೆಲವರು ಕಾರ್ತಿಕ ಮಾಸದ ಹುಣ್ಣಿಮೆಯಿಂದ ಮೊದಲು ಮಾಡಿ ಮಾಸಗಣನೆಯೆಂದೂ ಅದೇ ಸಂವತ್ಸರಕ್ಕೆ ಆರಂಭವೆಂದೂ ಹೇಳುತ್ತಾರೆ. ಗುರುಚಾರದಂತೆ ಕಾರ್ತಿಕಾದಿಯಾಗಿ ನಾಲ್ಕು ತಿಂಗಳುಗಳಲ್ಲಿ ಕೃತ್ತಿಕಾದಿಯಾಗಿ ಎರಡು ನಕ್ಷತ್ರಗಳೂ ಫಾಲ್ಗುಣ ಮಾಸದಲ್ಲಿ ಮೂರು ನಕ್ಷತ್ರಗಳೂ ಚೈತ್ರಾದಿ ಐದು ತಿಂಗಳುಗಳಲ್ಲಿ ಎರಡು ನಕ್ಷತ್ರಗಳೂ ಭಾದ್ರಪದ ಮತ್ತು ಆಶ್ವಯುಜ ತಿಂಗಳುಗಳಲ್ಲಿ ಮೂರು ನಕ್ಷತ್ರಗಳೂ ಕ್ರಮವಾಗಿ ಇರುತ್ತವೆ.

ವಿ-ಚಾಂದ್ರ ಸೌರ ಸಾವನ ಎಂದು ಮಾಸಗಳು ಮೂರು ವಿಧ. ಇವುಗಳಲ್ಲಿ ಚಾಂದ್ರಮಾನವು ದರ್ಶಾಂತ ಮಾಸ ಪೂರ್ಣಿಮಾಂತ ಮಾಸ ಎಂದು ಎರಡು ವಿಧ. ಶುಕ್ಲ ಪ್ರಥಮಾ ತಿಥಿಯಿಂದ ಅಮಾವಾಸ್ಯೆ ಪೂರ್ತಿ ಇರುವ

---

[1] ಕ್ಕೆ (ಕ ಗ) [2] ಗಿರೆ (ಕ ಗ) [3] ದಮಾ (ಗ) [4] ಯ್ದು (ಕ) ಯ್ದ್ (ಗ).

ಕಾಲಕ್ಕೆ ದರ್ಶಾಂತ ಮಾಸವೆಂದೂ ಕೃಷ್ಣ ಪ್ರಥಮಾ ತಿಥಿಯಿಂದ ಪೂರ್ಣಿಮಾ ಪೂರ್ತಿ ಇರುವ ಕಾಲಕ್ಕೆ ಪೂರ್ಣಿಮಾಂತ ಮಾಸವೆಂದೂ ಹೆಸರು. ಇವೆರಡರಲ್ಲಿ ದರ್ಶಾಂತ ಮಾಸವು ಶುಕ್ಲ ಪ್ರಥಮಾ ತಿಥಿಯಿಂದಲೂ ಪೂರ್ಣಿಮಾಂತ ಮಾಸವು ಕೃಷ್ಣ ಪ್ರಥಮಾ ತಿಥಿಯಿಂದಲೂ ಪ್ರಾರಂಭವಾಗುತ್ತದೆ. ಈಗ ದರ್ಶಾಂತ ಮಾಸವೇ ನಮ್ಮ ದೇಶದಲ್ಲಿ ಅಧಿಕವಾಗಿ ಪ್ರಚಾರದಲ್ಲಿದೆ. ಈ ಮಾಸವನ್ನು ಗಣನೆಗೆ ತೆಗೆದುಕ್ಕೊಂಡಿರುವವರಿಗೆ ಚೈತ್ರ ಮಾಸದಲ್ಲಿ ವರ್ಷವು ಪ್ರಾರಂಭವಾಗುತ್ತದೆ. ಉತ್ತರಭಾರತದಲ್ಲಿ ಕೆಲವೆಡೆಗಳಲ್ಲಿ ಪೂರ್ಣಿಮಾಂತ ಮಾಸವು ರೂಢಿಯಲ್ಲಿದೆ. ಪೂರ್ಣಿಮಾಂತ ಮಾಸಗಣನೆ ಮಾಡುವವರಿಗೆ ಕಾರ್ತಿಕ ಕೃಷ್ಣ ಪ್ರಥಮೆಯಿಂದ ವರ್ಷವು ಪ್ರಾರಂಭವಾಗುತ್ತದೆ.

ವರಾಹಮಿಹಿರರು ಬೃಹತ್ಸಂಹಿತೆಯಲ್ಲಿ—

"ನಕ್ಷತ್ರೇಣ ಸಹೋದಯಮಸ್ತಂ ವಾ ಯೇನ ಯಾತಿ ಸುರಮಂತ್ರೀ ।
ತತ್ಸಂಜ್ಞಂ ವಕ್ತವ್ಯಂ ವರ್ಷಂ ಮಾಸಕ್ರಮೇಣೈವ ॥
ವರ್ಷಾಣಿ ಕಾರ್ತಿಕಾದೀನ್ಯಾಗ್ನೇಯಾದ್ಭದ್ವಯಾನಿ ಯೋಜ್ಯಾನಿ ।
ಕ್ರಮಶಸ್ತ್ರಿಭಂ ತು ಪಂಚಮಮುಪಾಂತ್ಯಮಂತ್ಯಂ ಚ ಯದ್ವರ್ಷಂ ॥"

ಎಂದು ಗುರುವಿನ ಉದಯ ನಕ್ಷತ್ರದಿಂದ ಉಂಟಾಗುವ ವರ್ಷವನ್ನು ತಿಳಿಯುವುದಕ್ಕಾಗಿ ಗುರುಚಾರದಲ್ಲಿ ನಕ್ಷತ್ರ ವಿಭಾಗವನ್ನು ಮಾಡಿರುತ್ತಾರೆ. ಗುರುವಿನ ಉದಯದಿಂದ ಉಂಟಾಗುವ ವರ್ಷವು ಕಾರ್ತಿಕ ಕೃಷ್ಣ ಪಕ್ಷದ ಪ್ರಥಮೆಯಿಂದ ಪ್ರಾರಂಭವಾಗುತ್ತದೆ. ಈ ನಕ್ಷತ್ರವಿಭಾಗವನ್ನನುಸರಿಸಿ ಕೃತ್ತಿಕೆ ರೋಹಿಣಿ—ಕಾರ್ತಿಕ, ಮೃಗಶಿರೆ ಆರ್ದ್ರೆ—ಮಾರ್ಗಶಿರ, ಪುನರ್ವಸು ಪುಷ್ಯ—ಪುಷ್ಯ, ಆಶ್ಲೇಷೆ ಮಖೆ—ಮಾಘ, ಪೂರ್ವಫಲ್ಗುನಿ ಉತ್ತರಫಲ್ಗುನಿ ಹಸ್ತ—ಫಾಲ್ಗುಣ, ಚಿತ್ತೆ ಸ್ವಾತಿ—ಚೈತ್ರ, ವಿಶಾಖೆ ಅನೂರಾಧೆ—ವೈಶಾಖ, ಜ್ಯೇಷ್ಠೆ ಮೂಲ—ಜ್ಯೇಷ್ಠ, ಪೂರ್ವಾಷಾಢ ಉತ್ತರಾಷಾಢ—ಆಷಾಢ, ಶ್ರವಣ ಧನಿಷ್ಠೆ—ಶ್ರಾವಣ, ಶತಭಿಷೆ ಪೂರ್ವಾಭಾದ್ರೆ ಉತ್ತರಾಭಾದ್ರೆ—ಭಾದ್ರಪದ, ರೇವತಿ ಅಶ್ವಿನಿ ಭರಣಿ—ಆಶ್ವಯುಜ ಎಂದು ಕಾರ್ತಿಕ ಮೊದಲು ಹನ್ನೆರಡು ಪೂರ್ಣಿಮಾಂತ ತಿಂಗಳುಗಳಾಗುತ್ತವೆ. ಇದರಂತೆ ಫಾಲ್ಗುಣ ಭಾದ್ರಪದ ಆಶ್ವಯುಜ ಮಾಸಗಳಿಗೆ ಮೂರು ನಕ್ಷತ್ರಗಳಂತೆ ಒಂಬತ್ತು ನಕ್ಷತ್ರಗಳೂ ಉಳಿದ ಒಂಬತ್ತು ತಿಂಗಳುಗಳಿಗೆ ಎರಡೆರಡು ನಕ್ಷತ್ರಗಳಂತೆ ಹದಿನೆಂಟು ನಕ್ಷತ್ರಗಳೂ ಹೀಗೆ ಒಟ್ಟು ಇಪ್ಪತ್ತೇಳು ನಕ್ಷತ್ರಗಳನ್ನೂ ಹನ್ನೆರಡು ತಿಂಗಳುಗಳಿಗೆ ವಿಭಾಗಿಸಿದೆ.

ವನಜರಿಪುವಾವ ಮಂದಿರ
ದ ನವಾಂಶದೊಳಿರ್ದನಾ ನವಾಂಶ[1]ವಶದೆ[1] ತಾ
ನೆಸಿಕುಂ ನಕ್ಷತ್ರಂ ತ
ಜ್ಜನಿತಂ ಪೃಚ್ಛಕನ ಜನ್ಮಮಾಸಮೆನಿಕ್ಕುಂ ೧೩

(ಜನ್ಮದಿನಜ್ಞಾನ)

ತ್ರಿದಶಾಧಿಪಮಂತ್ರಿಯ ಚಾ
ರದ ವಶದೊಳ್ ಕಾರ್ತಿಕಾದಿ ಮಾಸಂಗಳೊಳೊಂ
ದಿದ ತಾರೆಯ ಸ[2]ಲ್ವ[2]ದಱ
ವುದು ತಜ್ಞಂ ಜನ್ಮದಿನಮನನುಪಾತನದಿಂ ೧೪

---

೧೩. ಪ್ರಶ್ನಕಾಲದ ಚಂದ್ರನು ಯಾವ ರಾಶಿಯಲ್ಲಿ ಯಾವ ನವಾಂಶದಲ್ಲಿರುವನೋ ಆ ನವಾಂಶದಿಂದ ನಕ್ಷತ್ರವು ತಿಳಿಯುತ್ತದೆ. ಆ ನಕ್ಷತ್ರದಿಂದುಂಟಾಗುವ ಮಾಸವೇ ಪೃಚ್ಛಕನ ಜನ್ಮಮಾಸವಾಗುತ್ತದೆ.

ವಿ–ಪ್ರಶ್ನಕಾಲದಲ್ಲಿ ಚಂದ್ರನಿರುವ ನಕ್ಷತ್ರವನ್ನು ತಿಳಿದುಕೊಂಡು ಆ ನಕ್ಷತ್ರಕ್ಕೆ ೧೨ನೇ ಪದ್ಯದಲ್ಲಿ ತಿಳಿಸಿರುವಂತೆ ಯಾವ ಮಾಸವಾಗುತ್ತದೆಯೋ ಅದೇ ನಷ್ಟಜಾತಕನ ಜನ್ಮಮಾಸವಾಗುತ್ತದೆ.

೧೪. ಗುರುವಿನ ಚಾರದಂತೆ ಕಾರ್ತಿಕಾದಿ ಮಾಸಗಳಿಗೆ ಬಂದಿರುವ ನಕ್ಷತ್ರಗಳ ಸಲ್ಲುವಿಕೆಯಿಂದ ಅನುಪಾತ ಮಾಡಿ ಜನ್ಮದಿನವನ್ನು ದೈವಜ್ಞನು (ನಷ್ಟಜಾತಕಜ್ಞನು) ತಿಳಿದುಕೊಳ್ಳುವುದು.

ವಿ–ಜನ್ಮಮಾಸದಲ್ಲಿರುವ ನಕ್ಷತ್ರ ಪ್ರಮಾಣಕ್ಕೆ ಮೂವತ್ತು ತಿಥಿಗಳು ಸಮವಾದರೆ ಚಂದ್ರನಿಂದ ಭುಕ್ತಭಾಗಕ್ಕೆ ಎಷ್ಟು? ಎಂದು ಅನುಪಾತ ಮಾಡಿ ಜನ್ಮತಿಥಿಯನ್ನು ತಿಳಿಯಬೇಕು.

ಉದಾ.—ನಷ್ಟಜಾತಕ ಪ್ರಶ್ನಕಾಲದ ಚಂದ್ರಸ್ಫುಟ = ರಾ ೬ ಭಾ ೧೪ ಕ ೩೦; ಚಂದ್ರನು ಸ್ವಾತೀ ನಕ್ಷತ್ರದಲ್ಲಿರುವುದರಿಂದ ಚಿತ್ತೆ ಮತ್ತು ಸ್ವಾತೀ ನಕ್ಷತ್ರಗಳಿಂದ ಕೂಡಿದ ಚೈತ್ರವು ಜನ್ಮಮಾಸವಾಗುತ್ತದೆ. ಒಂದು ನಕ್ಷತ್ರಕ್ಕೆ ೮೦೦ ಕಲೆಗಳಂತೆ ಚೈತ್ರ ಮಾಸಕ್ಕೆ ೧೬೦೦ ಕಲೆಗಳಾಗುತ್ತವೆ. ೧೬೦೦ ಕಲೆಗಳಿಗೆ ೩೦ ತಿಥಿಗಳು ಸಮವಾದರೆ ಆ ಚೈತ್ರ ತಿಂಗಳಿನಲ್ಲಿ ಚಂದ್ರನಿಂದ ಭುಕ್ತವಾದ ೧೨೭೦ ಕಲೆಗಳಿಗೆ ಎಷ್ಟು? ಎಂದು ಅನುಪಾತಮಾಡಿದರೆ—

$$\frac{೧೨೭೦ \times ೩೦}{೧೬೦೦} = \frac{೩೮೧೦೦}{೧೬೦೦} = ೨೩ \text{ ತಿಥಿ } \frac{೧೩೦೦ \times ೬೦}{೧೬೦೦} = \frac{೭೮೦೦೦}{೧೬೦೦}$$

$$= ೪೮ \text{ ಘ } \frac{೧೨೦೦ \times ೬೦}{೧೬೦೦} = \frac{೭೨೦೦೦}{೧೬೦೦} = ೪೫ \text{ ವಿಘ.}$$

೨೩ ತಿಥಿ ಕಳೆದು ೨೪ನೇ ತಿಥಿಯಲ್ಲಿ ೪೮ ಘಳಿಗೆ ೪೫ ವಿಘಳಿಗೆಗಳು ಗತವಾಗಿರು

---

[1] ದ ವೆಶ (ಕ ಗ) [2] ಲವಂ (ಕ ಗ).

(ಪ್ರಕಾರಾಂತರದಿಂದ ನಕ್ಷತ್ರಾನಯನ)

ಸಮನಿಸಿದ ಪೃಚ್ಛಕನ ಪೆಸ
ರ ಮಾತ್ರೆಯೊಳ್ ಕೂಡಿಕೊಂಡು ಛಾಯಾಂಗುಲಮಾ
ನಮನಿಪ್ಪತ್ತೇೞಱಿನೆ
[1]ತ್ತೆ[1] ಮಿಕ್ಕುದಕ್ಕುಂ ಧನಿಷ್ಠೆ ಮೊದಲೆನೆ ಭಗಣಂ ೧೫

(ಜನ್ಮಗೃಹಜ್ಞಾನ)

ನವ ಪಂಚಮ ಪೃಚ್ಛಕಲ
ಗ್ನ[2]ವಿ[2]ವಱೊಳತಿಬಲಯುತಾಲಯಂ ಮೇಣ್ ಬೆಸಗೊಂ
ಡವನಿರ[3]ದೊಂ[3]ದಿರೆ ತನ್ನವ
ಯವ[4]ಮಂ ತತ್ಸಾ[4]ನಗೇಹಮದು ಜನ್ಮಗೃಹಂ ೧೬

---

ತ್ತವೆ. ಆದುದರಿಂದ ಪೃಚ್ಛಕನು ಚೈತ್ರ ಮಾಸದ ೨೪ನೇ ತಿಥಿಯಲ್ಲಿ ಎಂದರೆ ಕೃಷ್ಣಪಕ್ಷಾದಿ ಮಾಸಗಣನೆಯಂತೆ ಶುಕ್ಲ ಪಕ್ಷದ ನವಮೀ ತಿಥಿಯಲ್ಲಿ ೪೮ ಘಳಿಗೆ ೪೫ ವಿಘಳಿಗೆಗಳು ಗತವಾಗಿರುವ ಕಾಲದಲ್ಲಿ ಹುಟ್ಟಿದವನೆಂದು ಗಣಿತದಿಂದ ತಿಳಿದುಬರುತ್ತದೆ.

೧೫. ಪೃಚ್ಛಕನ ಹೆಸರಿನಲ್ಲಿರುವ ಮಾತ್ರೆಗಳಿಗೆ ಪ್ರಶ್ನಕಾಲದ ಛಾಯಾಂಗುಲವನ್ನು ಕೂಡಿಕೊಂಡು ಇಪ್ಪತ್ತೇಳರಿಂದ ಭಾಗಿಸಿ ನಿಂತ ಶೇಷವೇ ಧನಿಷ್ಠೆ ಮೊದಲಾದ ನಕ್ಷತ್ರಗಳು.

ವಿ—ಲಘ್ವಕ್ಷರಕ್ಕೆ ಒಂದು ಮಾತ್ರೆಯಂತೆಯೂ, ಗುರ್ವಕ್ಷರಕ್ಕೆ ಎರಡು ಮಾತ್ರೆಗಳಂತೆಯೂ ಲೆಕ್ಕ ಮಾಡಿ ಪೃಚ್ಛಕನ ನಾಮಕರಣದ ಹೆಸರಿನಲ್ಲಿರುವ ಮಾತ್ರೆಗಳನ್ನು ತಿಳಿದುಕೊಂಡು ಅದಕ್ಕೆ ಪ್ರಶ್ನಕಾಲದಲ್ಲಿ ಹನ್ನೆರಡು ಅಂಗುಲದ ಶಂಕುವಿನಿಂದ ಉಂಟಾಗುವ ಛಾಯಾಂಗುಲಗಳನ್ನು ಕೂಡಿಸಿ ಇಪ್ಪತ್ತೇಳರಿಂದ ಭಾಗಿಸಿ ನಿಂತ ಶೇಷ ಸಂಖ್ಯೆಗೆ ಸಮನಾದ ಧನಿಷ್ಠೆಯಿಂದ ಪ್ರಾರಂಭಿಸಿ ಲೆಕ್ಕ ಮಾಡಿ ಬಂದ ನಕ್ಷತ್ರವೇ ಜನ್ಮನಕ್ಷತ್ರವಾಗುತ್ತದೆ. ಬೃಹಜ್ಜಾತಕದಲ್ಲಿ ಸಂಸ್ಕಾರ ನಾಮ ಮಾತ್ರೆಗಳನ್ನು ದ್ವಿಗುಣ ಮಾಡಿ ಛಾಯಾಂಗುಲಗಳನ್ನು ಸೇರಿಸಬೇಕೆಂದಿದೆ. ಪದ್ಯದಲ್ಲಿರುವ 'ಸಮನಿಸಿದ' ಎನ್ನುವುದನ್ನು 'ಸಮನೆರೆದ' ಎಂದು ವ್ಯತ್ಯಾಸ ಮಾಡಿಕೊಂಡರೆ 'ತನ್ನ ಸಮಾನವಾದ ಮಾತ್ರೆಗಳಿಂದ ಕೂಡಿದ ಪೃಚ್ಛಕನ ಹೆಸರಿನ ಮಾತ್ರೆಗಳಲ್ಲಿ' ಎಂದು ಅರ್ಥವಾಗುವುದರಿಂದ 'ದ್ವಿಗುಣ' ಮಾಡಿದಂತಾಗುತ್ತದೆ.

೧೬. ಪ್ರಶ್ನಲಗ್ನದಿಂದ ಒಂಬತ್ತನೆಯ ರಾಶಿ, ಐದನೆಯ ರಾಶಿ, ಪ್ರಶ್ನೆ ಲಗ್ನ ಈ ಮೂರರಲ್ಲಿ ಅತಿಬಲಿಷ್ಠವಾದ ರಾಶಿ ಅಥವಾ ಪ್ರಶ್ನೆ ಮಾಡುವವನು ಪ್ರಶ್ನೆ ಮಾಡುವ ಕಾಲದಲ್ಲಿ ಮುಟ್ಟುವ ಅವಯವಕ್ಕೆ ಕಾಲಪುರುಷನ ಅವಯವ ವಿಭಾಗದಂತೆ ಆಗುವ ರಾಶಿ ಜನ್ಮರಾಶಿಯಾಗುತ್ತದೆ.

ವಿ—ಕಾಲಪುರುಷನ ಅಂಗವಿಭಾಗವು ಸಂಜ್ಞಾಪ್ರಕರಣದ ೨೦ನೇ ಪದ್ಯದಲ್ಲಿದೆ. ಪ್ರಶ್ನಲಗ್ನ ಅಥವಾ ಅದಕ್ಕೆ ಐದನೆಯ ರಾಶಿ ಅಥವಾ ಒಂಬತ್ತನೆಯ

---

[1] ತ್ತ (ಕ ಗ) [2] ಮ (ಕ ಗ) [3] ದಂ (ಕ ಗ) [4] ಮಂತವಸ್ಥಾ (ಕ) ಮಂ ತತಸ್ಥಾ (ಗ).

(ಮತಾಂತರದಂತೆ ಜನ್ಮರಾಶಿಜ್ಞಾನ)

ಬಂದು ಬೆಸಗೊಂಡ ಲಗ್ನಮ
ನಿಂದುವ ನೆಲೆವರೆಗವೆಣಿಸಿ ತದ್ಗೃಹದಿಂದಂ
ಪಿಂದಣ ಗೃಹಪರಿ[1]ಮಿತಿ[1]ಯಿಂ
ಮುಂದಣ ಗೃಹಮದುವೆ ಜನ್ಮಗೃಹಮೆನೆ ನೆಗಟ್ಟುಂ ೧೭

[2]ತರೆ ಭಕ್ಷ್ಯಾ[2]ಳಿಯನಕ್ಕೆ ಮೇಣ್ ವೃಷಭ ಮಾರ್ಜಾರಾದಿ ರೂಪಂಗಳೊಳ್
ಸರಮಂತೊಂದನೆ [3]ಕೇಳೆ ತ[3]ತ್ಸಮಯದೊಳ್ ತದ್ವಸ್ತು ಸಂಬಂಧಮಂ
ದಿರಮಾ ಮರ್ತ್ಯನ ಜನ್ಮಮಂದಿರವೆನಿಕ್ಕುಂ ಮೀನಗೇಹೋದಯಂ
ಬರೆ ತತ್ಪ್ರಶ್ನವಿಲಗ್ನಮಾ ಗೃಹವೆ ಜನ್ಮಾವಾಸಮವ್ಯಾಜದಿಂ ೧೮

---

ರಾಶಿ ಇವುಗಳಲ್ಲಿ ಯಾವ ರಾಶಿಯು ಪ್ರಶ್ನಕಾಲದಲ್ಲಿ ಬಲಿಷ್ಠವಾಗಿರುತ್ತದೆಯೋ ಆ ರಾಶಿಯಲ್ಲಿ ಅಥವಾ ಪ್ರಶ್ನಕಾಲದಲ್ಲಿ ಪೃಚ್ಛಕನು ಮುಟ್ಟುವ ಅವಯವವು ಕಾಲಪುರುಷನ ಅವಯವ ವಿಭಾಗದಂತೆ ಆಗುವ ರಾಶಿಯಲ್ಲಿ ಚಂದ್ರನಿರುತ್ತಾನೆ.

೧೭. ನಷ್ಟಜಾತಕನು ಬಂದು ಪ್ರಶ್ನೆಮಾಡಿದ ಲಗ್ನದಿಂದ ಚಂದ್ರನಿರುವ ರಾಶಿವರೆಗೆ ಎಣಿಸಿ ಬಂದ ರಾಶಿಪ್ರಮಾಣ ಸಂಖ್ಯೆಯಷ್ಟು ಚಂದ್ರನಿರುವ ರಾಶಿಯಿಂದ ಮುಂದಕ್ಕೆ ಕ್ರಮವಾಗಿ ಎಣಿಸಿ ಬರುವ ರಾಶಿಯೇ ಪೃಚ್ಛಕನ ಜನ್ಮರಾಶಿಯಾಗುತ್ತದೆ.

ವಿ—ಉದಾ.—ಲಗ್ನಸ್ಫುಟ= ರಾ ೧೧ ಭಾ ೨೧ ಕ ೪೧. ಚಂದ್ರಸ್ಫುಟ = ರಾ ೬ ಭಾ ೧೪ ಕ ೩೦. ಈ ಉದಾಹರಣೆಯಲ್ಲಿ ಪ್ರಶ್ನಲಗ್ನರಾಶಿ ಮೀನವೂ ಚಂದ್ರನಿರುವ ರಾಶಿ ತುಲಾವೂ ಆಗಿರುತ್ತದೆ. ಪ್ರಶ್ನಲಗ್ನರಾಶಿಯಿಂದ ಚಂದ್ರನು ಎಂಟನೆಯ ರಾಶಿಯಲ್ಲಿರುತ್ತಾನೆ. ಚಂದ್ರನಿರುವ ರಾಶಿಯಿಂದ ಎಂಟನೆಯದು ವೃಷಭ ರಾಶಿಯಾಗುತ್ತದೆ. ಆದುದರಿಂದ ಪೃಚ್ಛಕನ ಜನ್ಮರಾಶಿ ವೃಷಭ.

೧೮. ಪ್ರಶ್ನಕಾಲದಲ್ಲಿ ತಿಂಡಿ ಮೊದಲಾದ ತಿನ್ನುವ ಪದಾರ್ಥಗಳನ್ನು ಯಾರಾದರೂ ತಂದರೆ ಅಥವಾ ಎತ್ತು ಬೆಕ್ಕು ಮೊದಲಾದ ಪ್ರಾಣಿಗಳನ್ನು ನೋಡಿದರೆ ಅಥವಾ ಅವುಗಳ ಸ್ವರವನ್ನು (ಕೂಗುವಿಕೆ) ಕೇಳಿದರೆ ಆಯಾ ವಸ್ತುಗಳಿಗೆ ಮತ್ತು ಪ್ರಾಣಿಗಳಿಗೆ ಸಂಬಂಧಪಟ್ಟ ರಾಶಿ ಆ ನಷ್ಟಜಾತಕನ ಜನ್ಮರಾಶಿಯಾಗುತ್ತದೆ. ಮೀನರಾಶಿ ಪ್ರಶ್ನಲಗ್ನವಾದರೆ ಯಾವ ವ್ಯಾಜವೂ ಇಲ್ಲದೆ ಮೀನವೇ ಜನ್ಮರಾಶಿಯಾಗುತ್ತದೆ.

ವಿ—ನಷ್ಟಜಾತಕ ಪ್ರಶ್ನಕಾಲದಲ್ಲಿ ಯಾವ ರಾಶಿಯ ಪ್ರಾಣಿಗಳಿಗೆ ಸಂಬಂಧಿಸಿದ ವಿಷಯಗಳು ಅಥವಾ ಭಕ್ಷ್ಯವಸ್ತುಗಳು ಅಥವಾ ಪ್ರಾಣಿಗಳು ಕಣ್ಣಿಗೆ ಕಾಣುತ್ತವೆಯೋ ಅಥವಾ ಯಾವ ಪ್ರಾಣಿಯ ಧ್ವನಿ ಕೇಳಿಸುತ್ತದೆಯೋ ಆ

---

[1] ಣತ (ಗ) [2] ತರೆ ಭಕ್ಷಾ (ಕ) ತರಭಕ್ಷ್ಯಾ (ಗ) [3] ಯಕಳೆವ (ಕ).

(ಜನ್ಮಲಗ್ನವನ್ನು ತಿಳಿಯುವ ಕ್ರಮ)

ಬೆಸಗೊಂಡಂದುದಯದ್ಯುನಾಲಯಮೆ ಕುಳ್ಳಿರ್ದಂದು [1]ಪಟ್ಟ[1]ರ್ದವಂ
ಬೆಸಗೊಂಡಂದು ಚತುರ್ಥಗೇಹದುದಯಂ ಕುಳ್ಳಿರ್ದು ತಾನೇಳುತಂ
ಬೆಸಗೊಂ[2]ಡಂದು ಜ[2]ಯಾಲಯಂ ತದುದಯಂ ನಿಂದಿರ್ದು ತತ್ಪೃಚ್ಛಕಂ
ಬೆಸಗೊಂಡಂದಖಿ ಪೃಚ್ಛಕೋದಯಮೆ ತನ್ಮರ್ತ್ಯಂಗೆ ಜನ್ಮೋದಯಂ ೧೯

ಉದ[3]ಯಾಂಶ[3]ದ್ರೇಕ್ಕಾಣಂ
ಮೊದಲಾಗಿರೆ ತೀಕ್ಷ್ಣಕರಗ [4]ದ್ರೇಕ್ಕಾಣಂ ಲೆ
ಕ್ಕ[4]ದಿನೆಣಿಸಿ ತತ್ಪ್ರಮಾಣದ
ಸದನಮೆ ತಜ್ಜನ್ಮಲಗ್ನಸದನಮೆನಿಕ್ಕುಂ ೨೦

---

ಭಕ್ಷ್ಯ ಅಥವಾ ಪ್ರಾಣಿಗೆ ಸಂಬಂಧಪಟ್ಟ ರಾಶಿಯೇ ಜನ್ಮರಾಶಿಯಾಗುತ್ತದೆ. ಬೆಕ್ಕು ನಾಯಿ ಮೊದಲಾದ ಪ್ರಾಣಿಗಳ ಭಕ್ಷ್ಯವಸ್ತುವನ್ನಾಗಲಿ ಆ ಪ್ರಾಣಿಗಳನ್ನಾಗಲಿ ನೋಡಿದರೆ ಸಿಂಹರಾಶಿಯೂ ವೃಷಭ ಮಹಿಷ ಮೊದಲಾದ ಪ್ರಾಣಿಗಳನ್ನು ನೋಡಿದರೆ ವೃಷಭರಾಶಿಯೂ ಸತಿಪತಿಯರ ವಿನೋದವಾರ್ತೆಯನ್ನು ಕೇಳಿದರೆ ಅಥವಾ ನೋಡಿದರೆ ಮಿಥುನರಾಶಿಯೂ ಕನ್ನೆಯನ್ನು ನೋಡಿದರೆ ಅಥವಾ ಆಕೆಯ ಧ್ವನಿಯನ್ನು ಕೇಳಿದರೆ ಕನ್ಯಾರಾಶಿಯೂ ಕುದುರೆಯನ್ನು ಕಂಡರೆ ಅಥವಾ ಕುದುರೆ ಕೆನೆಯುವುದನ್ನು ಕೇಳಿದರೆ ಧನೂರಾಶಿಯೂ ಜನ್ಮರಾಶಿಯಾಗುತ್ತದೆ. ಇದೇ ಕ್ರಮದಲ್ಲಿ ಪ್ರಶ್ನಕಾಲದಲ್ಲಿ ಕಂಡುಬರುವ ರೂಪಸಾದೃಶ್ಯದಿಂದಲೂ ಕೇಳುವ ಧ್ವನಿಯಿಂದಲೂ ಜನ್ಮರಾಶಿಯನ್ನು ಊಹಿಸಿ ತಿಳಿಯಬೇಕು.

೧೯. ನಷ್ಟಜಾತಕನು ಕುಳಿತುಕ್ಕೊಂಡು ಪ್ರಶ್ನೆ ಮಾಡಿದರೆ ಪ್ರಶ್ನಲಗ್ನದಿಂದ ಏಳನೆಯ ರಾಶಿಯೂ ಮಲಗಿಕ್ಕೊಂಡು ಪ್ರಶ್ನೆ ಮಾಡಿದರೆ ನಾಲ್ಕನೆಯ ರಾಶಿಯೂ ಕುಳಿತಿದ್ದವನು ಏಳುತ್ತ ಪ್ರಶ್ನೆ ಮಾಡಿದರೆ ಹತ್ತನೆಯ ರಾಶಿಯೂ ನಿಂತುಕೊಂಡೇ ಪ್ರಶ್ನೆ ಮಾಡಿದರೆ ಪ್ರಶ್ನಲಗ್ನವೂ ಆ ಪೃಚ್ಛಕನ ಜನ್ಮಲಗ್ನವಾಗುತ್ತದೆ.

ವಿ–ಪ್ರಶ್ನಲಗ್ನರಾಶಿ ಅಥವಾ ಅದಕ್ಕೆ ಕೇಂದ್ರರಾಶಿಗಳಲ್ಲೊಂದು ಜನ್ಮಲಗ್ನವಾಗುತ್ತದೆ.

೨೦. ಪ್ರಶ್ನಲಗ್ನದ್ರೇಕ್ಕಾಣದಿಂದ ಆ ಕಾಲದಲ್ಲಿ ಸೂರ್ಯನಿರುವ ದ್ರೇಕ್ಕಾಣದ ವರೆಗೆ ಲೆಕ್ಕ ಮಾಡಿ ಬರುವ ಸಂಖ್ಯೆಯಷ್ಟು ಲಗ್ನದಿಂದ ಎಣಿಸಿದರೆ ಬರುವ ರಾಶಿಯೇ ಜನ್ಮಲಗ್ನವಾಗುತ್ತದೆ.

ವಿ–ಪ್ರಶ್ನಲಗ್ನ ದ್ರೇಕ್ಕಾಣದಿಂದ ಸೂರ್ಯನಿರುವ ದ್ರೇಕ್ಕಾಣ ಹನ್ನೆರಡಕ್ಕಿಂತ ಅಧಿಕವಾಗಿದ್ದರೆ ಹನ್ನೆರಡನ್ನು ಕಳೆಯಬೇಕು; ಇಪ್ಪತ್ತನಾಲ್ಕಕ್ಕಿಂತ ಅಧಿಕವಾಗಿದ್ದರೆ ಇಪ್ಪತ್ತನಾಲ್ಕನ್ನು ಕಳೆದು ಉಳಿದ ಸಂಖ್ಯೆಯಷ್ಟು ಪ್ರಶ್ನಲಗ್ನರಾಶಿಯಿಂದ ಎಣಿಸಿದರೆ ಬರುವ ರಾಶಿಯೇ ಜನ್ಮಲಗ್ನರಾಶಿಯಾಗುತ್ತದೆ. ಲಗ್ನ

---

[1] ಪುಟ್ಟಿಕುಳ್ಳಿ (ಕ) ಪು (ಗ) [2] ಡಂದುದೆ (ಕ) ದುದ (ಗ) [3] ಯಾಸ (ಕ) ಯಾಂಸ (ಗ)
[4] ತದ್ರೇಕ್ಕಾಣಂ ಕ (ಕ) ತಿದ್ರೇಕ್ಕಾಣಂ ಲೆಕ್ಕ (ಗ).

ಬಂ[1]ದ[1] ಪೃಚ್ಛಕಲಗ್ನದೊಳಿರ್ದ ಗ್ರಹಂಗಳೊಳ್ ಸಬಲನುಂ ಬಲಹೀನನ
ಪ್ಪೊಂದು [2]ನಿಂ[2]ದೊಡಮು[3]ದಱ[3]ಲ್ಲಿ ಗ್ರಹಮಿಲ್ಲದಿರೆ ಪೆಱತೆಡೆಯೊಳ್ ಬಲಾನ್ವಿತನ
ಪ್ಪೊಂದನಕ್ಕೆ ಲಿಪ್ತೀಪಿಂಡಂ [4]ಮಾ[4]ಡ ತತ್ಕಾಲಶಂಕುಚ್ಛಾಯಾಂಗುಲದಿಂ [5]ಪೆರ್ಚಿ
ರ್ದಂ[5]ದು ತದ್ದ್ವಾದಶಾಪ್ತಾವಶೇಷಮ ಮೇಷಾದಿ ಜನ್ಮಲಗ್ನಂಗಳಕ್ಕುಂ ೨೧

ಬೆಸಗೊಂಡ ಲಗ್ನದೊಳ್ ವ
ರ್ತಿಸುವ ನವಾಂಶಕದ ಗೃಹಮೆ [6]ಜನ್ಮವಿ[6]ಲಗ್ನಾ
ವಸಥಂ ತನ್ಮರ್ತ್ಯಂಗೆಂ
ದುಸಿರ್ವುದು ನಿಶ್ಚಯಿಸಿ ನಷ್ಟಜಾತಕಕುಶಲಂ ೨೨

---

ದಿಂದ ಗಣನೆ ಮಾಡಬೇಕೆನ್ನುವ ವಿಚಾರದಲ್ಲಿ ಮತಭೇದಗಳು ಕಂಡುಬರುತ್ತವೆ. ಬೃಹಜ್ಜಾತಕದಲ್ಲಿ 'ಲಗ್ನಾದ್ರವಿರ್ಯಾವತಿ ವಾ ದೃಗಾಣೇ ತಸ್ಮಾದ್ವದೇತ್ತಾವತಿ ವಾ ವಿಲಗ್ನಂ' ಎಂದಿದೆ; ಇಲ್ಲಿ 'ತಸ್ಮಾದ್ವದೇತ್' ಎನ್ನುವುದಕ್ಕೆ ಪ್ರತಿಯಾಗಿ 'ಚಂದ್ರಾದ್ವದೇತ್' ಎನ್ನುವ ಪಾಠವನ್ನು ಒಪ್ಪಿಕೊಂಡು ಚಂದ್ರನಿಂದ ಗಣನೆ ಮಾಡಬೇಕೆಂದು ಮತ್ತೆ ಕೆಲವರು ಹೇಳುತ್ತಾರೆ. ಆದರೆ ಲಗ್ನರಾಶಿಯಿಂದ ಗಣನೆ ಮಾಡಬೇಕೆನ್ನುವುದೇ ಬಹುಸಮ್ಮತವಾಗಿ ಕಂಡುಬರುತ್ತದೆ.

೨೧. ನಷ್ಟಜಾತಕ ಪ್ರಶ್ನಲಗ್ನದಲ್ಲಿರುವ ಗ್ರಹಗಳಲ್ಲಿ ಬಲಿಷ್ಠವಾದ ಒಂದು ಗ್ರಹವೂ ದುರ್ಬಲವಾದ ಮತ್ತೊಂದು ಗ್ರಹವೂ ಇದ್ದರೆ ಆ ಗ್ರಹಗಳಲ್ಲಿ ಅಥವಾ ಲಗ್ನದಲ್ಲಿ ಗ್ರಹವಿಲ್ಲದಿದ್ದರೆ ಬೇರೆ ಸ್ಥಾನದಲ್ಲಿರುವ ಗ್ರಹಗಳಲ್ಲಿ ಬಲಿಷ್ಠಗ್ರಹದ ಸ್ಫುಟವನ್ನು ಕಲೆಗಳನ್ನಾಗಿ ಮಾಡಿ ಪ್ರಶ್ನಕಾಲದ ಶಂಕುಚ್ಛಾಯಾಂಗುಲದಿಂದ ಗುಣಿಸಿ ಹನ್ನೆರಡರಿಂದ ಭಾಗಿಸಿ ಬಂದ ಶೇಷಸಂಖ್ಯೆಯಷ್ಟು ಮೇಷ ಮೊದಲು ಲೆಕ್ಕ ಮಾಡಿದರೆ ಬರುವ ರಾಶಿಯೇ ಜನ್ಮಲಗ್ನವಾಗುತ್ತದೆ.

ವಿ–ಪ್ರಶ್ನಲಗ್ನದಲ್ಲಿ ಗ್ರಹವಿರುವಾಗ ಅಲ್ಲಿರುವ ಬಲಿಷ್ಠಗ್ರಹದಿಂದಲೂ ಲಗ್ನದಲ್ಲಿ ಗ್ರಹವಿಲ್ಲದಿರುವಾಗ ಆ ಕಾಲದಲ್ಲಿ ಬಲಿಷ್ಠವಾದ ಗ್ರಹದಿಂದಲೂ ಜನ್ಮಲಗ್ನವನ್ನು ತಿಳಿಯಬೇಕು; ಬಲಿಷ್ಠ ಗ್ರಹದ ಸ್ಫುಟವನ್ನು ಕಲೆಗಳನ್ನಾಗಿ ಮಾಡಿ ಪ್ರಶ್ನಕಾಲದಲ್ಲಿ ಹನ್ನೆರಡಂಗುಲದ ಶಂಕುವನ್ನು ಸಮಭೂಮಿಯಲ್ಲಿ ನಿಲ್ಲಿಸಿ ಶಂಕುಚ್ಛಾಯೆಯನ್ನು ತಿಳಿದು ಅದರಿಂದ ಕಲೆಗಳನ್ನಾಗಿ ಮಾಡಿದ ಗ್ರಹಸ್ಫುಟವನ್ನು ಗುಣಿಸಿ ಹನ್ನೆರಡರಿಂದ ಭಾಗಿಸಿ ಬಂದ ಶೇಷ ಒಂದಾದರೆ ಮೇಷ ಎರಡಾದರೆ ವೃಷಭ ಈ ರೀತಿ ಕ್ರಮವಾಗಿ ಎಣಿಸಿ ಬಂದ ರಾಶಿಯೇ ಜನ್ಮಲಗ್ನವಾಗುತ್ತದೆ.

೨೨. ನಷ್ಟಜಾತಕ ಪ್ರಶ್ನಲಗ್ನದಲ್ಲಿ ಉದಯಿಸಿರುವ ನವಾಂಶರಾಶಿಯೇ ಆ ನಷ್ಟಜಾತಕನಿಗೆ ಜನ್ಮಲಗ್ನವಾಗುತ್ತದೆಂದು ನಷ್ಟಜಾತಕ ಕುಶಲನು ನಿಶ್ಚಯಿಸಿ ಹೇಳುವುದು.

ವಿ–ಬೃಹಜ್ಜಾತಕದಲ್ಲಿ 'ಹೋರಾನವಾಂಶಪ್ರತಿಮಂ ವಿಲಗ್ನಂ' ಎಂದಿರುವುದನ್ನು 'ಬೆಸಗೊಂಡ ಲಗ್ನದೊಳ್ ವರ್ತಿಸುವ ನವಾಂಶಕದ ಗೃಹಮೆ ಜನ್ಮವಿಲಗ್ನಾ-

---

[1] ದು (ಕ ಗ) [2] ಗ್ರಹಂ ನಿಂ (ಕ ಗ) [3] ದನ (ಕ) ವನ (ಗ) [4] ಮಗಿರಾಗಿ ವಾ (ಕ)
[5] ದ ಮೆಚ್ಚಿದಂ (ಕ) ದ ಮೆತ್ತಿದಂ (ಗ) [6] ತಜನ್ಮವಿ (ಕ) ತಜ್ಜನ್ಮ (ಗ).

(ರಾಶಿ ಮತ್ತು ಗ್ರಹಗುಣಕಾರ)

ಹರಿ ವೃಷಭಕ್ಕೆ ಹತ್ತು ಮಿಥುನ[1]ಕ್ಕಳಿ[1]ಗೆಂಟಜತೌಳಿಗೇಟು [2]ಸುಂ
ದರಿಗೆ[2] ಮೃಗಕ್ಕವೈದು ಗುಣಕಾರಮನುಕ್ರಮದಿಂದ[3]ಮಂ[3]ಗಿರೋ
ದ[4]ರಿ[4] ಕುಜ ಶುಕ್ರ ಸೋಮಸುತರ್ಗ*ಗುಣಕಾರಮಮೆ ಚಂದ್ರ ಮಂದ ಭಾ
ಸ್ಕರರ್ಗೆ ಬುಧೋಕ್ತ[5]ಮ[5]ಕ್ಕು[ಮ]ವಶೇಷ ಗೃಹಕ್ಕೆ ತದಾಲಯಕ್ರಮಂ ೨೩

---

ವಸಥಂ' ಎಂದು ಶ್ರೀಧರನು ಕನ್ನಡಿಸಿರುತ್ತಾನೆ. ಪ್ರಶ್ನಲಗ್ನದಲ್ಲಿ ಉದಯಿಸಿ ರುವ ನವಾಂಶ ಸಂಖ್ಯೆಗೆ ಸಮನಾದ ರಾಶಿ ಲಗ್ನವಾಗುತ್ತದೆ; ಅಥವಾ ಲಗ್ನದಲ್ಲಿ ಉದಯಿಸಿರುವ ದ್ವಾದಶಾಂಶ ಸಂಖ್ಯೆಗೆ ಸಮನಾದ ರಾಶಿ ಲಗ್ನವಾಗುತ್ತದೆ; ಎಂದು ಸುಬೋಧಿನೀ ವ್ಯಾಖ್ಯಾನಕಾರರ ಅಭಿಪ್ರಾಯ. ಇದು ಉಳಿದ ವ್ಯಾಖ್ಯಾನಕಾರರಿಗೆ ಸಮ್ಮತವಾಗಿರುವಂತೆ ಕಂಡುಬರುವುದಿಲ್ಲ. ಉದಾ.—ಪ್ರಶ್ನ ಲಗ್ನ ಸ್ಫುಟ = ರಾ ೧೧ ಭಾ ೨೧ ಕ ೪೧. ಈ ಪ್ರಶ್ನಲಗ್ನದಲ್ಲಿ ಮಕರ ನವಾಂಶ ಉದಿತವಾಗಿರುವುದರಿಂದ ಈ ಪದ್ಯದಲ್ಲಿ ಹೇಳಿರುವ ಕ್ರಮದಂತೆ ನಷ್ಟ ಜಾತಕನು ಮಕರ ಲಗ್ನದಲ್ಲಿ ಜನಿಸಿರುವವನೆಂದು ತಿಳಿದುಬರುತ್ತದೆ.

೨೩. 'ಸಿಂಹ-ವೃಷಭ ರಾಶಿಗಳಿಗೆ ಹತ್ತು; ಮಿಥುನ-ವೃಶ್ಚಿಕಗಳಿಗೆ ಎಂಟು; ಮೇಷ-ತುಲಾಗಳಿಗೆ ಏಳು; ಕನ್ಯಾ-ಮಕರಗಳಿಗೆ ಐದು; ಕ್ರಮವಾಗಿ ಈ ಸಂಖ್ಯೆಗಳು ಆಯಾ ರಾಶಿಗಳಿಗೆ ಗುಣಕಾರಗಳು. ಗುರು ಅಂಗಾರಕ ಶುಕ್ರ ಬುಧ ಈ ನಾಲ್ಕು ಗ್ರಹಗಳಿಗೂ ಕ್ರಮವಾಗಿ ಇದೇ ಸಂಖ್ಯೆಗಳು ಗುಣಕಾರಗಳಾ ಗುತ್ತವೆ. ಚಂದ್ರ ಶನಿ ಸೂರ್ಯ ಈ ಮೂರುಗ್ರಹಗಳಿಗೂ ಬುಧನಿಗೆ ಹೇಳಿರುವ ಸಂಖ್ಯೆಯೇ ಗುಣಕಾರವಾಗುತ್ತದೆ. ಉಳಿದ ರಾಶಿಗಳಿಗೆ ಮೇಷದಿಂದ ಆ ರಾಶಿ ವರೆಗೆ ಲೆಕ್ಕ ಮಾಡಿದರೆ ಬರುವ ಸಂಖ್ಯೆಯೇ ಆಯಾ ರಾಶಿಯ ಗುಣಕಾರವಾ ಗುತ್ತದೆ.

**ರಾಶಿಗುಣಕಾರ**

| ರಾಶಿ | ಮೇಷ | ವೃಷಭ | ಮಿಥುನ | ಕರ್ಕಾಟಕ | ಸಿಂಹ | ಕನ್ಯಾ | ತುಲಾ | ವೃಶ್ಚಿಕ | ಧನಸ್ಸು | ಮಕರ | ಕುಂಭ | ಮೀನ |
|---|---|---|---|---|---|---|---|---|---|---|---|---|
| ಗುಣಕಾರ ಸಂಖ್ಯೆ | ೭ | ೧೦ | ೮ | ೪ | ೧೦ | ೫ | ೭ | ೮ | ೯ | ೫ | ೧೧ | ೧೨ |

---

1. ಕ್ಕಳೆ (ಕ) ಕ್ಕೇಳಿ (ಗ) 2. ಸಂಧರಿಗ (ಕ) ಸುಂದರಿಗ (ಗ) 3. ಮಾಂ (ಗ) 4. ರ (ಗ)
5. ನ (ಕ) * ಇಲ್ಲಿಂದ ೨೮ನೇ ಪದ್ಯ ಪೂರ್ತಿ (ಗ) ಪ್ರತಿಯಲ್ಲಿ ಗ್ರಂಥವಿಲ್ಲ.

(ಜನ್ಮನಕ್ಷತ್ರಾನಯನ)

ಚರರಾಶಿ ನವಯುತಂ ದ್ವ್ಯಂ
ಗರಾಶಿ ಸಂಭವಿಸಿದಂದು ನವಪರಿಶೋಧ್ಯಂ
ಸ್ಥಿರರಾಶಿ ದಾನಶೋಧನ
ವಿರಹಿತ[1]ಮಾ[1] ಜನ್ಮತಾರೆಯಂ ತ[2]ರ್ಪೆ[2]ಡೆಯೊಳ್ ೨೪

## ಗ್ರಹಗುಣಕಾರ

| ಗ್ರಹ | ಸೂರ್ಯ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|---|
| ಗುಣಕಾರ ಸಂಖ್ಯೆ | ೫ | ೫ | ೮ | ೫ | ೧೦ | ೭ | ೫ |

ವಿ—ಪ್ರಶ್ನಕಾಲದ ಲಗ್ನಸ್ಫುಟವನ್ನು ಕಲೆಗಳನ್ನಾಗಿ ಮಾಡಿ ಆ ಲಗ್ನ ರಾಶಿಯ ಗುಣಕಾರದಿಂದ ಮೊದಲು ಕಲಾಪಿಂಡವನ್ನು ಗುಣಿಸಬೇಕು ; ಲಗ್ನದಲ್ಲಿ ಗ್ರಹವಿದ್ದರೆ ಗ್ರಹಗುಣಕಾರದಿಂದಲೂ ಅದನ್ನು ಗುಣಿಸಿ ಮುಂದೆ ತಿಳಿಸುವ ಕ್ರಮದಂತೆ ನಷ್ಟಜಾತಕವನ್ನು ತಿಳಿಯಬೇಕು.

೨೪. ಜನ್ಮನಕ್ಷತ್ರವನ್ನು ತಿಳಿಯುವಾಗ ಪ್ರಶ್ನಲಗ್ನ ಚರರಾಶಿಯಾದರೆ ಒಂಬತ್ತನ್ನು ಸೇರಿಸಬೇಕು ; ದ್ವಿಸ್ವಭಾವರಾಶಿಯಾದರೆ ಒಂಬತ್ತನ್ನು ಕಳೆಯ ಬೇಕು ; ಸ್ಥಿರರಾಶಿಯಾದರೆ ಒಂಬತ್ತನ್ನು ಸೇರಿಸುವುದಾಗಲಿ ಕಳೆಯುವುದಾಗಲಿ ಇರುವುದಿಲ್ಲ.

ವಿ—೨೫ನೇ ಪದ್ಯದಲ್ಲಿ ಜನ್ಮನಕ್ಷತ್ರಾನಯನಕ್ರಮವಿದೆ. ಪ್ರಶ್ನಕಾಲದ ಲಗ್ನ ಸ್ಫುಟವನ್ನು ಕಲೆಗಳನ್ನಾಗಿ ಮಾಡಿ ರಾಶಿ ಮತ್ತು ಗ್ರಹಗುಣಕಾರಗಳಿಂದ ಗುಣಿಸಿ ಬಂದ ಲಬ್ಧಿಯನ್ನು ಪುನಃ ಏಳರಿಂದ ಗುಣಿಸಿ ೨೪ನೇ ಪದ್ಯದಲ್ಲಿ ತಿಳಿಸಿರುವಂತೆ ಪ್ರಶ್ನಲಗ್ನರಾಶಿ ಚರವಾದರೆ ಅದಕ್ಕೆ ಒಂಬತ್ತನ್ನು ಸೇರಿಸಬೇಕು; ದ್ವಿಸ್ವಭಾವವಾದರೆ ಒಂಬತ್ತನ್ನು ಕಳೆಯಬೇಕು; ಇದಕ್ಕೆ ನವಕದಾನ ವಿಶೋಧನವೆಂದು ಹೆಸರು. ಅನಂತರ ಬಂದದ್ದನ್ನು ಇಪ್ಪತ್ತೇಳರಿಂದ ಭಾಗಿಸಿ ಬಂದ ಶೇಷಸಂಖ್ಯೆಗೆ ಸಮನಾದ ಅಶ್ವಿನೀ ನಕ್ಷತ್ರದಿಂದ ಕ್ರಮವಾಗಿ ಎಣಿಸಿ ಬರುವ ನಕ್ಷತ್ರವೇ ಜನ್ಮನಕ್ಷತ್ರ. ಒಂಬತ್ತನ್ನು ಚರರಾಶಿಯಾದರೆ ಸೇರಿಸಬೇಕು, ದ್ವಿಸ್ವಭಾವರಾಶಿಯಾದರೆ ಕಳೆಯ ಬೇಕು ಎನ್ನುವ ಅಭಿಪ್ರಾಯ ಭಟ್ಟೋತ್ಪಲರಿಗೆ ಸಮ್ಮತವಾಗಿರುವುದಿಲ್ಲ. 'ಪ್ರಶ್ನ ಲಗ್ನದಲ್ಲಿ ಉದಯಿಸಿರುವುದು ಮೊದಲನೆಯ ದ್ರೇಕ್ಕಾಣವಾದರೆ ಒಂಬತ್ತನ್ನು ಸೇರಿಸಬೇಕು ; ಮೂರನೆಯ ದ್ರೇಕ್ಕಾಣವಾದರೆ ಒಂಬತ್ತನ್ನು ಕಳೆಯಬೇಕು ; ಎರಡನೆಯ ದ್ರೇಕ್ಕಾಣವಾದರೆ ಒಂಬತ್ತನ್ನು ಸೇರಿಸುವುದಾಗಲಿ ಕಳೆಯುವುದಾಗಲಿ

[1] ನಾ (ಕ) [2] ಪ್ಪೆ (ಕ).

ಅನಿತುಂ ಪೂರ್ವಾಪರಗ್ರಹ
ಮನೇಟರಿಂದಿಱಿದು ಮಾಡ ನವದಾನವಿಶೋ
ಧನಮಂ ಸಪ್ತಾವಿಂಶತಿ
ಯಿನೆತ್ತುಗವಶೇಷಮಶ್ವಿನೀ ಪ್ರಮುಖರ್ಕ್ಷಂ ೨೫

---

ಇರುವುದಿಲ್ಲ' ಎನ್ನುವುದೇ ಅವರ ಅಭಿಪ್ರಾಯ; ನವಕದಾನವಿಶೋಧನ ಕ್ರಿಯೆಯನ್ನು ರಾಶಿಯ ಸಂಖ್ಯೆಗೇ ಮಾಡಬೇಕೆಂದು ಕೆಲವರು ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ಇದು ಭಟ್ಟೋತ್ಪಲ ವಿವರಣ ಮೊದಲಾದ ವ್ಯಾಖ್ಯಾನ ಕಾರರಿಗೆ ಸಮ್ಮತವಾಗಿರುವುದಿಲ್ಲ.

೨೫. ಪ್ರಶ್ನಕಾಲ ಲಗ್ನದಲ್ಲಿರುವ ರಾಶಿ ಅಂಶ ಮೊದಲಾದುವೆಲ್ಲವನ್ನೂ ಏಳರಿಂದ ಗುಣಿಸಿ ಒಂಬತ್ತನ್ನು ಸೇರಿಸಿ ಅಥವಾ ಕಳೆದು ಬಂದಿರುವುದನ್ನು ಇಪ್ಪತ್ತೇಳರಿಂದ ಭಾಗಿಸಬೇಕು. ಭಾಗಿಸಿ ಬಂದ ಶೇಷಸಂಖ್ಯೆಗೆ ಅಶ್ವಿನೀ ಮೊದಲಾದ ನಕ್ಷತ್ರಗಣನೆಯಿಂದ ಬರುವುದೇ ಜನ್ಮನಕ್ಷತ್ರ.

ವಿ–ಉದಾ.—ಲಗ್ನಸ್ಫುಟ = ರಾ ೧೧ ಭಾ ೨೧ ಕ ೪೧ = ೨೧೧೦೧ ಕಲೆಗಳು. ಲಗ್ನವು ಮೀನರಾಶಿಯಾಗಿರುವುದರಿಂದ ಈ ಕಲಾಪಿಂಡವನ್ನು ಮೀನ ರಾಶಿಯ ಗುಣಕಾರ ೧೨ ರಿಂದ ಗುಣಿಸಬೇಕು. ಬಂದ ಲಬ್ಧಿಯನ್ನು ಪುನಃ ೭ರಿಂದ ಗುಣಿಸಿ ಬಂದ ಲಬ್ಧಿಯಲ್ಲಿ ಒಂಬತ್ತನ್ನು ಕಳೆದು ನಿಂತ ಶೇಷವನ್ನು ೨೭ರಿಂದ ಭಾಗಿಸಿ ನಿಂತ ಶೇಷಸಂಖ್ಯೆಯೇ ಅಶ್ವಿನ್ಯಾದಿ ನಕ್ಷತ್ರಸಂಖ್ಯೆಯಾಗುತ್ತದೆ.

$$= ೨೧೧೦೧ \times ೧೨ \times ೭ = ೧೭೭೨೪೮೪ - ೯ = ೧೭೭೨೪೭೫.$$

$$\frac{೧೭೭೨೪೭೫}{೨೭} = \text{ಲಬ್ಧಿ ೬೫೬೪೭ ಶೇಷ ೬.}$$

ಅಶ್ವಿನಿಯಿಂದ ಎಣಿಸಿದರೆ ಆರನೆಯ ನಕ್ಷತ್ರ ಆರ್ದ್ರ ಆಗುತ್ತದೆ. ಆದುದರಿಂದ ನಷ್ಟಜಾತಕನ ಜನ್ಮನಕ್ಷತ್ರ ಆರ್ದ್ರ.

**ಮತಾಂತರ—**

ಲಗ್ನಸ್ಫುಟ × ರಾಶಿಗುಣಕಾರ = ರಾ ೧೧ ಭಾ ೨೧ ಕ ೪೧ × ೧೨ = ರಾ ೮ ಭಾ ೨೦ ಕ ೧೨.

ರಾ ೮ ಭಾ ೨೦ ಕ ೧೨ × ೭ = ರಾ ೬೦ ಭಾ ೨೧ ಕ ೨೪. ಇದರಲ್ಲಿ ಒಂಬತ್ತನ್ನು ಕಳೆದರೆ = ರಾ ೫೧ ಭಾ ೨೧ ಕ ೨೪. ಇದನ್ನು ೨೭ ನಕ್ಷತ್ರಗಳ ರಾಶಿಪ್ರಮಾಣ ೧೨ರಿಂದ ಭಾಗಿಸಿ ಬರುವ ಶೇಷ

$$= \frac{\text{ರಾ ೫೧ ಭಾ ೨೧ ಕ ೨೪}}{೧೨} = \text{ರಾ ೩ ಭಾ ೨೧ ಕ ೧೪.}$$

ಈ ಸ್ಫುಟಕ್ಕೆ ಸರಿಯಾದ ನಕ್ಷತ್ರ ಆಶ್ಲೇಷೆ. ಇದು ಮತಾಂತರದಂತೆ ಜನ್ಮ ನಕ್ಷತ್ರವಾಗುತ್ತದೆ.

[1]ಕೀಟರಾಶಿ—ಕರ್ಕಟಕರಾಶಿ

ಕುಜಾಷ್ಟಕವರ್ಗ—ಕುಜನು ತಾನಿರುವ ರಾಶಿಯಿಂದ ಶುಭಫಲಗಳನ್ನು ಕೊಡುವ ರಾಶಿಯನ್ನು ತಿಳಿಸುವ ಬಿಂದುಗಳ ಸಮೂಹ

ಕುಟುಂಬಸ್ಥಾನ—ಲಗ್ನದಿಂದ ಎರಡನೆಯ ಸ್ಥಾನ

ಕುಂಡಲೀ—ನಿರ್ದಿಷ್ಟಕಾಲದ ಗ್ರಹಸ್ಥಿತಿಯನ್ನು ತಿಳಿಸುವ ಹನ್ನೆರಡು ವಿಭಾಗ (ಮನೆ)ಗಳುಳ್ಳ ಒಂದು ಚಕ್ರ

ಕುಪುತ್ರ—ಕುಜ [ಭೂಮಿಯ ಮಗ]

ಕುಮುದಗಹನ ಬಂಧು }—ಚಂದ್ರ
ಕುಮುದಾಕರ ಬಂಧು }

ಕುಂಭಧರ—ಕುಂಭರಾಶಿ

ಕುವಲಯಸಖ—ಚಂದ್ರ

ಕುಳೀರ—ಕರ್ಕಟಕ ರಾಶಿ

ಕೃಷ್ಣಪಕ್ಷ—ಪೂರ್ಣಿಮಾದಿನದ ಮರುದಿನದಿಂದ ಅಮಾವಾಸ್ಯಾ ತಿಥಿ ಪೂರ್ತಿ ಇರುವ ಹದಿನೈದು ತಿಥಿಗಳ ಕಾಲ

ಕೇತು—ಒಂದುಗ್ರಹ, ಬೆಂಕಿ ಇಲ್ಲದ ಕಡೆ ಬೆಂಕಿ ಇರುವಂತೆ ಕಾಣುವುದು [ವಿವರ ೬೨ನೇ ಪುಟದಲ್ಲಿದೆ]

ಕೇದಾರ—ಸಂಖ್ಯಾಯೋಗಗಳಲ್ಲಿ ಒಂದು [ಏಳು ಗ್ರಹಗಳೂ ನಾಲ್ಕು ರಾಶಿಗಳಲ್ಲಿರುವುದು]

ಕೇಂದ್ರ—ಲಗ್ನ ನಾಲ್ಕು ಏಳು ಹತ್ತನೆಯ ಸ್ಥಾನಗಳು

ಕೇಮದ್ರುಮ—ಚಾಂದ್ರಯೋಗಗಳಲ್ಲಿ ಒಂದು [ಚಂದ್ರನಿಗೆ ಎರಡು ಹನ್ನೆರಡನೇ ಸ್ಥಾನಗಳಲ್ಲಿ ತಾರಾಗ್ರಹಗಳಿಲ್ಲದಿರುವುದು]

ಕೇಸರಿ—ಸಿಂಹರಾಶಿ

ಕೋಕನದ+ಅಹಿತ, +ಪ್ರದ್ವಿಷ—ಚಂದ್ರ

ಕೋಣ—ಶನಿ

ಕೋದಂಡ—ಧನೂರಾಶಿ

ಕೋದಯ—ಶೀರ್ಷೋದಯ [ಸಿಂಹ ಕನ್ಯಾ ವೃಶ್ಚಿಕ ಕುಂಭ ರಾಶಿಗಳು]

ಕೌರ್ಪಿ—ವೃಶ್ಚಿಕರಾಶಿ

ಕ್ರೂರ ಗ್ರಹಗಳು—ಸೂರ್ಯ ಕುಜ ಶನಿ ಕ್ಷೀಣಚಂದ್ರ ಕ್ರೂರಗ್ರಹದೊಡನಿರುವ ಬುಧ

ಕ್ರೂರದೃಕ್—ಕುಜ

ಕ್ರೂರ ರಾಶಿಗಳು—ಕ್ರೂರಗ್ರಹದ ರಾಶಿಗಳು

ಕ್ರೂರೋದಯಹರಣ—ಜನ್ಮಲಗ್ನದಲ್ಲಿ ಪಾಪಗ್ರಹಗಳಿದ್ದರೆ ಕಡಮೆಮಾಡುವ ಆಯುಸ್ಸಿನ ಪ್ರಮಾಣ

ಕ್ಷತಸ್ಥಾನ—ಆರನೆಯ ಸ್ಥಾನ

ಕ್ಷಪಾ+ಕರ, +ನಾಥ—ಚಂದ್ರ

[2]ಕ್ಷಯಮಾಸ—ಒಂದು ಚಾಂದ್ರಮಾಸದಲ್ಲಿ ಎರಡು ಸಂಕ್ರಮಣಗಳಿರುವುದು

---

[1] ವೃಶ್ಚಿಕರಾಶಿಯನ್ನೇ 'ಕೀಟ' ವೆಂದು ಬಹುಮಂದಿ ಜ್ಯೋತಿಷಾಚಾರ್ಯರು ಕರೆದಿರುತ್ತಾರೆ

[2] ಕಾರ್ತಿಕ ಮಾರ್ಗಶಿರ ಪುಷ್ಯ ಈ ಮೂರು ತಿಂಗಳುಗಳಲ್ಲಿ ಮಾತ್ರ ಕ್ಷಯಮಾಸ ಬರುತ್ತದೆ. ಕ್ಷಯಮಾಸವು ೧೯ ಅಥವಾ ೪೪ ವರ್ಷಗಳಿಗೊಂದು ಸಲ ಬರುತ್ತದೆ.

[1] ಕ್ಷಿತಿಜ—ಆಕಾಶವೂ ಭೂಮಿಯೂ ಸೇರಿದಂತೆ ಕಾಣುವ ಪ್ರದೇಶ
[2] ಕ್ಷೀಣೇಂದು—ಕೃಷ್ಣಾಷ್ಟಮಿಯಿಂದ ಶುಕ್ಲಾಷ್ಟಮಿಯವರೆಗಿನ ಚಂದ್ರ
ಕ್ಷೇಮತಾರೆ—ಜನ್ಮನಕ್ಷತ್ರದಿಂದ ೪-೧೩-೨೨ನೇ ನಕ್ಷತ್ರಗಳು
ಖ—ಸೊನ್ನೆ, ಸಂಖ್ಯೆ ಎರಡು
ಖಗತ್ರ್ಯಂಶ—ಮಿಥುನ ತುಲಾರಾಶಿಗಳ ಎರಡನೆಯ ದ್ರೇಕ್ಕಾಣ ಮತ್ತು ಸಿಂಹ ಕುಂಭರಾಶಿಗಳ ಒಂದನೆಯ ದ್ರೇಕ್ಕಾಣ
ಖರ+ಅಂಶು, +ಕರ, +ಕಿರಣ—ಸೂರ್ಯ
ಗ—ಸಂಖ್ಯೆ ಮೂರು
ಗಗನ—ಸೊನ್ನೆ
ಗಗನಚರ—ಗ್ರಹ
ಗಜ—ಸಂಖ್ಯೆ ಎಂಟು
ಗಣಿತಸ್ಕಂಧ—ಜ್ಯೋತಿಶ್ಶಾಸ್ತ್ರದ ಮೂರು ವಿಭಾಗಗಳಲ್ಲಿ ಗ್ರಹಗಳ ವಿದ್ಯಮಾನವನ್ನು ಗಣನೆಮಾಡಿ ತಿಳಿಸುವ ವಿಭಾಗ
ಗದಾಯೋಗ—ಆಕೃತಿಯೋಗಗಳಲ್ಲಿ ಒಂದು [ಆಸನ್ನ ಕೇಂದ್ರಗಳೆರಡರಲ್ಲಿ ಏಳು ಗ್ರಹಗಳೂ ಇರುವುದು]
ಗಲಿತೇಂದು—ಕ್ಷೀಣಚಂದ್ರ
ಗಿರಿ—ಸಂಖ್ಯೆ ಏಳು
ಗುಣ—ಸಂಖ್ಯೆ ಮೂರು
ಗುರು—ಪುಷ್ಯ ನಕ್ಷತ್ರ, ಒಂಬತ್ತು, ಗ್ರಹಗಳಲ್ಲಿ ಒಂದು
ಗುರುಸ್ಥಾನ—ಒಂಬತ್ತನೆಯ ಸ್ಥಾನ
ಗುರ್ವಷ್ಟಕವರ್ಗ—ಗುರುವು ತಾನಿರುವ ರಾಶಿಯಿಂದ ಶುಭಫಲಗಳನ್ನು ಕೊಡುವ ರಾಶಿಯನ್ನು ತಿಳಿಸುವ ಬಿಂದುಗಳ ಸಮೂಹ
ಗೃಹ - ರಾಶಿ, ನಾಲ್ಕನೆಯ ಸ್ಥಾನ
ಗೇಹ—ರಾಶಿ
ಗೋಚರಫಲ—ಇಷ್ಟಕಾಲದಲ್ಲಿ ಜನ್ಮರಾಶಿಯಿಂದ ಗ್ರಹವಿರುವ ಸ್ಥಳವನ್ನು ತಿಳಿದು ಫಲವನ್ನು ತಿಳಿಸುವುದು
ಗೋಳಯೋಗ—ಸಂಖ್ಯಾಯೋಗಗಳಲ್ಲಿ ಒಂದು [ಏಳು ಗ್ರಹಗಳೂ ಒಂದೇ ರಾಶಿಯಲ್ಲಿರುವುದು]
ಗ್ರಹ—ಸೂರ್ಯ ಚಂದ್ರ ಕುಜ ಬುಧ ಗುರು ಶುಕ್ರ ಶನಿ ರಾಹು ಕೇತುಗಳು, ಸಂಖ್ಯೆ ಒಂಬತ್ತು
ಗ್ರಹಗತಿ—ಮಂದೋಚ್ಚ ಶೀಘ್ರೋಚ್ಚ ಪಾತಗಳೆಂಬ ಶಕ್ತಿಗಳಿಂದ ಉಂಟಾಗುವ ಗ್ರಹಗಳ ಸಂಚಾರದ ವೇಗ
ಗ್ರಹಯುದ್ಧ—ಒಂದೇ ಕಾಲದಲ್ಲಿ ಎರಡು ತಾರಾಗ್ರಹಗಳು ಒಂದೇ ದಕ್ಷಿಣೋತ್ತರ ರೇಖೆಯಲ್ಲಿ ನಿರ್ದಿಷ್ಟಾಂತರದಲ್ಲಿ ಇರುವಂತೆ ಕಾಣುವುದು
ಗ್ರಾಮ್ಯರಾಶಿ—ಕನ್ಯಾ ಮಿಥುನ ತುಲಾ ಕುಂಭ ಮತ್ತು ಧನೂರಾಶಿಯ ಪೂರ್ವಾರ್ಧ
ಗ್ರೀಷ್ಮ—ಒಂದು ಋತು [ಜ್ಯೇಷ್ಠ-ಆಷಾಢ ಮಾಸಗಳು]

---

[1] ಪೂರ್ವ ದಿಕ್ಕಿನಲ್ಲಿ ಕಾಣುವುದು ಪೂರ್ವಕ್ಷಿತಿಜ, ಪಶ್ಚಿಮ ದಿಕ್ಕಿನಲ್ಲಿ ಕಾಣುವುದು ಪಶ್ಚಿಮ ಕ್ಷಿತಿಜ [2] ಇದರಲ್ಲಿ ಮತಾಂತರಗಳೂ ಉಂಟು.

ಘ—ಸಂಖ್ಯೆ ನಾಲ್ಕು

ಘಟ—ಕುಂಭರಾಶಿ

ಘಟೀ—ಒಂದು ಘಳಿಗೆ [ಇಪ್ಪತ್ತನಾಲ್ಕು ನಿಮಿಷಗಳ ಕಾಲ]

ಘರ್ಮರುಚಿ—ಸೂರ್ಯ

ಘರ್ಮಾಂಶುಪುತ್ರ—ಶನಿ [ಸೂರ್ಯನ ಮಗ]

ಘ್ನ—ಗುಣಿಸುವುದು

ಙ—ಸಂಖ್ಯೆ ಐದು

ಚ—ಸಂಖ್ಯೆ ಆರು

ಚಕ್ರಯೋಗ—ಆಕೃತಿ ಯೋಗಗಳಲ್ಲಿ ಒಂದು [ಲಗ್ನದಿಂದ ಪ್ರಾರಂಭಿಸಿ ಏಕಾಂತರ ರಾಶಿಗಳಲ್ಲಿ ಏಳುಗ್ರಹಗಳೂ ಇರುವುದು]

ಚಕ್ರ—ಕುಂಡಲಿ

ಚಕ್ರಪಾತಹರಣ—ಲಗ್ನದಿಂದ ೭-೮-೯-೧೦-೧೧-೧೨ನೇ ಸ್ಥಾನಗಳಲ್ಲಿರುವ ಗ್ರಹಗಳು ಆಯುರ್ದಾಯದಲ್ಲಿ ಕಡಮೆಮಾಡುವ ಆಯುಸ್ಸಿನ ಪ್ರಮಾಣ

ಚತುರಶ್ರ—ಲಗ್ನದಿಂದ ನಾಲ್ಕು ಮತ್ತು ಎಂಟನೆಯ ಸ್ಥಾನಗಳು

ಚತುರ್ಮುಖ—ರೋಹಿಣಿ [೪ನೇ ನಕ್ಷತ್ರ]

ಚತುಷ್ಟಯ—ಲಗ್ನ ನಾಲ್ಕು ಏಳು ಹತ್ತನೆಯ ಸ್ಥಾನಗಳು

ಚತುಷ್ಪದರಾಶಿ—ಮೇಷ ವೃಷಭ ಸಿಂಹ ಧನುಸ್ಸಿನ ಉತ್ತರಾರ್ಧ ಮತ್ತು ಮಕರ ರಾಶಿಯ ಪೂರ್ವಾರ್ಧ

ಚಂದ್ರ—ಒಂದು ಗ್ರಹ, ಸಂಖ್ಯೆ ಒಂದು

ಚಂದ್ರ+ಜ, +ನಂದನ, +ಸುತ—ಬುಧ [ಚಂದ್ರನ ಮಗ]

ಚಂದ್ರನಕ್ಷತ್ರ—ಮೃಗಶಿರೆ [೫ನೇ ನಕ್ಷತ್ರ]

ಚಂದ್ರಾಷ್ಟಕವರ್ಗ—ಚಂದ್ರನು ತಾನಿರುವ ರಾಶಿಯಿಂದ ಶುಭಫಲಪ್ರದ ರಾಶಿಯನ್ನು ತಿಳಿಸುವ ಬಿಂದುಗಳ ಸಮೂಹ

ಚರಕರಣ—ಬವ ಬಾಲವ ಕೌಲವ ತೈತುಲೆ ಗರಜೆ ವಣಿಜೆ ಭದ್ರೆ ಈ ಏಳು ಕರಣಗಳು

ಚರರಾಶಿ—ಮೇಷ ಕರ್ಕಟಕ ತುಲಾ ಮಕರರಾಶಿಗಳು

ಚಾಂದ್ರಮಾಸ—ಎರಡು ಅಮಾವಾಸ್ಯೆಗಳ ಮಧ್ಯವರ್ತಿಕಾಲ

ಚಾಂದ್ರಿ—ಬುಧ [ಚಂದ್ರನ ಮಗ]

ಚಾಪಯೋಗ—ಆಕೃತಿಯೋಗಗಳಲ್ಲೊಂದು [ಲಗ್ನಕ್ಕೆ ಹತ್ತನೆಯ ರಾಶಿಯಿಂದ ನಾಲ್ಕನೆಯ ರಾಶಿಯವರೆಗಿರುವ ಏಳು ರಾಶಿಗಳಲ್ಲೂ ಗ್ರಹವಿರುವುದು]

ಚಾಪ<br>ಚಾಪಧರ —ಧನೂರಾಶಿ

ಚಾರ—ಗ್ರಹದ ಸಂಚಾರ [ಇಷ್ಟಕಾಲದಲ್ಲಿ ಗ್ರಹವಿರುವ ಸ್ಥಳವನ್ನು ತಿಳಿಸುವುದು]

ಚಿತ್ತೋತ್ಥ— ಏಳನೆಯ ಸ್ಥಾನ

ಚೇಷ್ಟಾಬಲ—ಗ್ರಹ ಷಡ್ಬಲಗಳಲ್ಲಿ ಒಂದು [ವಿವರ ೧೮ನೇ ಪುಟದಲ್ಲಿದೆ]

ಛ—ಸಂಖ್ಯೆ ಏಳು

ಛತ್ರ—ಆಕೃತಿ ಯೋಗಗಳಲ್ಲಿ ಒಂದು [ಲಗ್ನಕ್ಕೆ ಏಳನೆಯ ರಾಶಿಯಿಂದ ಲಗ್ನದ ವರೆಗಿರುವ ಏಳು ರಾಶಿಗಳಲ್ಲೂ ಗ್ರಹವಿರುವುದು]

ಛಾಯಾಗ್ರಹ—ರಾಹು, ಕೇತು

ಛಾಯಾಂಗುಲ—ಹನ್ನೆರಡಂಗುಲದ ಶಂಕುವಿನಿಂದ ಉಂಟಾಗುವ ನೆರಳಿನ ಅಳತೆ [ಅಂಗುಲಗಳಲ್ಲಿ]

ಛಾಯಾಪುತ್ರ—ಶನಿ

ಛಿದ್ರ—ಲಗ್ನದಿಂದ ಎಂಟನೆಯ ಸ್ಥಾನ

ಜ—ಸಂಖ್ಯೆ ಎಂಟು

ಜನನಲಗ್ನ—ಜನ್ಮಕಾಲದಲ್ಲಿ ಪೂರ್ವಕ್ಷಿತಿಜದಲ್ಲಿ ಉದಯಿಸುವ ರಾಶಿ

ಜನ್ಮತಾರೆ—ಜನ್ಮನಕ್ಷತ್ರ, ಜನ್ಮನಕ್ಷತ್ರದಿಂದ ಹತ್ತು ಮತ್ತು ಹತ್ತೊಂಬತ್ತನೆಯ ನಕ್ಷತ್ರಗಳು

ಜನ್ಮನಕ್ಷತ್ರ—ಜನ್ಮಕಾಲದಲ್ಲಿ ಚಂದ್ರನಿರುವ ನಕ್ಷತ್ರ

ಜನ್ಮ+ಆವಾಸ, +ಮಂದಿರ, +ರಾಶಿ—ಜನನಕಾಲದಲ್ಲಿ ಚಂದ್ರನಿರುವ ರಾಶಿ

ಜಯಾಲಯ—ಲಗ್ನದಿಂದ ಹತ್ತನೆಯ ರಾಶಿ

ಜಲಚರ ರಾಶಿ—ಕರ್ಕಟಕ ಮೀನ ಮತ್ತು ಮಕರರಾಶಿಯ ಉತ್ತರಾರ್ಧ

ಜಲಜಸಖ<br>ಜಲಜಾತಪ್ರಿಯ } —ಸೂರ್ಯ

ಜಲಧರ—ಕುಂಭರಾಶಿ

ಜಲಧಿ—ಸಂಖ್ಯೆ ನಾಲ್ಕು

ಜಲರುಹಬಂಧು—ಸೂರ್ಯ

ಜಾತಕ—ಮಾನವನಿಗೆ ಶುಭಾಶುಭ ಫಲಗಳನ್ನು ತಿಳಿಸುವ ಜನನಕಾಲದ ಗ್ರಹ ಸನ್ನಿವೇಶ

ಜಾತಕಸ್ಕಂಧ—ಮಾನವನು ಅನುಭವಿಸುವ ಶುಭಾಶುಭ ಫಲಗಳನ್ನು ಜಾತಕದಿಂದ ತಿಳಿಸುವ ಜ್ಯೋತಿಶ್ಶಾಸ್ತ್ರದ ಒಂದು ವಿಭಾಗ

ಜಾಮಿತ್ರ<br>ಜಾಯಾ } —ಲಗ್ನದಿಂದ ಏಳನೆಯ ಸ್ಥಾನ

ಜಿತುಮ—ಮಿಥುನ ರಾಶಿ

ಜಿನ—ಸಂಖ್ಯೆ ಇಪ್ಪತ್ತನಾಲ್ಕು

ಜೀವ—ಗುರು

ಜೀವಗೇಹ—ಗುರುವಿನ ರಾಶಿ [ಧನುಸ್ಸು ಮತ್ತು ಮೀನ ರಾಶಿ]

ಜೀವಶರ್ಮಾಯು—ಜನನಕಾಲದಲ್ಲಿ ಲಗ್ನ ಸೂರ್ಯ ಚಂದ್ರ ಈ ಮೂರೂ ದುರ್ಬಲವಾಗಿದ್ದರೆ ಆಯುರ್ದಾಯವನ್ನು ತರುವ ಕ್ರಮ

ಜೊನ್ನಪಕ್ಷ—ಶುಕ್ಲಪಕ್ಷ

ಜ್ವಲನ—ಕೃತ್ತಿಕೆ [೩ನೇ ನಕ್ಷತ್ರ]

ಝ—ಸಂಖ್ಯೆ ಒಂಬತ್ತು

ಝಮ—ಕರ್ಕಟಕ ರಾಶಿ

ಝಷ—ಮೀನ ರಾಶಿ

ಟ—ಸಂಖ್ಯೆ ಒಂದು

ಠ— ,, ಎರಡು

ಡ— ,, ಮೂರು

ಢ— ,, ನಾಲ್ಕು

೫—ಐದು

೬—ಆರು

ತತ್ತ್ವ—ಸಂಖ್ಯೆ ಇಪ್ಪತ್ತೈದು

ತತ್ಕಾಲ ಮಿತ್ರ—ಇಷ್ಟಕಾಲದಲ್ಲಿ ಗ್ರಹವಿರುವ ಸ್ಥಾನದಿಂದ ೨-೩-೪-೧೦-೧೧-೧೨ ನೇ ಸ್ಥಾನಗಳಲ್ಲಿರುವ ಗ್ರಹ

ತತ್ಕಾಲ ಶತ್ರು—ಇಷ್ಟಕಾಲದಲ್ಲಿ ಗ್ರಹವಿರುವ ಸ್ಥಾನ ಮತ್ತು ಅದರಿಂದ ೫-೬-೭-೮-೯ನೇ ಸ್ಥಾನಗಳಲ್ಲಿರುವ ಗ್ರಹ

ತನಯಸ್ಥಾನ—ಲಗ್ನದಿಂದ ಐದನೆಯ ಸ್ಥಾನ

ತನು—ಲಗ್ನ

ತನೂ+ಜ, +ಭವ—ಲಗ್ನದಿಂದ ಐದನೆಯ ಸ್ಥಾನ

ತಪಸ್ಸ್ಥಾನ—ಲಗ್ನದಿಂದ ಒಂಬತ್ತನೆಯ ಸ್ಥಾನ

ತಮೋಗ್ರಹ—ಕುಜ, ಶನಿ, ರಾಹು

ತರಣಿಪುತ್ರೋದ್ಭವ—ಶನಿ [ಸೂರ್ಯನ ಮಗ]

ತರುಣೀಗೃಹ—ಕನ್ಯಾರಾಶಿ

ತರ್ಕ—ಸಂಖ್ಯೆ ಆರು

ತಾಮರಸಪ್ರಿಯ—ಸೂರ್ಯ

ತಾರಾ+ಅಧಿನಾಯಕ, +ಅಧಿಪ, +ಈಶ—ಚಂದ್ರ

ತಾರಾಗ್ರಹ—ಕುಜ, ಬುಧ, ಗುರು, ಶುಕ್ರ, ಶನಿಗಳು

ತಾರಾಧೀಶಪುತ್ರ—ಬುಧ [ಚಂದ್ರನ ಮಗ]

[1] ತಾರಾಬಲ—ಜನ್ಮನಕ್ಷತ್ರದಿಂದ ಇಷ್ಟದಿನದ ನಕ್ಷತ್ರದವರೆಗೆ ಲೆಕ್ಕಮಾಡಿ ಬರುವ ಸಂಖ್ಯೆಯನ್ನು ೯ ರಿಂದ ಭಾಗಿಸಿ ನಿಂತ ಸಂಖ್ಯೆಯಿಂದ ಶುಭಾಶುಭಫಲಗಳನ್ನು ತಿಳಿಸುವ ನಕ್ಷತ್ರಬಲ.

ತಾವುರಿ (ತಾಬುರಿ)—ವೃಷಭರಾಶಿ

ತಿಗ್ಮಾಂಶು—ಸೂರ್ಯ

[2] ತಿಥಿ—ಸೂರ್ಯಚಂದ್ರಾಂತರ ; ಸಂಖ್ಯೆ ಹದಿನೈದು

---

[1] ಶೇಷಸಂಖ್ಯೆ ೧ ಆದರೆ ಜನ್ಮ ೨ ಸಂಪತ್ತು ೩ ವಿಪತ್ತು ೪ ಕ್ಷೇಮ ೫ ಪ್ರತ್ಯರ ೬ ಸಾಧನ ೭ ನೈಧನ ೮ ಮೈತ್ರ ೯ ಪರಮ ಮೈತ್ರ ತಾರೆ ಎಂದು ಹೆಸರು.

[2] ಸೂರ್ಯಚಂದ್ರಾಂತರವು ೧೨ ಅಂಶಗಳೊಳಗಿದ್ದರೆ ಪ್ರಥಮಾತಿಥಿಃ ; ೧೨ರಿಂದ ೨೪ ಅಂಶಗಳೊಳಗಿದ್ದರೆ ದ್ವಿತೀಯಾತಿಥಿ ; ೨೪ರಿಂದ ೩೬ ಅಂಶಗಳೊಳಗಿದ್ದರೆ ತೃತೀಯಾತಿಥಿ ; ೩೬ರಿಂದ ೪೮ ಅಂಶಗಳೊಳಗಿದ್ದರೆ ಚತುರ್ಥೀತಿಥಿ ; ೪೮ರಿಂದ ೬೦ ಅಂಶಗಳೊಳಗಿದ್ದರೆ ಪಂಚಮೀತಿಥಿ ; ೬೦ರಿಂದ ೭೨ ಅಂಶಗಳೊಳಗಿದ್ದರೆ ಷಷ್ಠೀತಿಥಿ ; ೭೨ರಿಂದ ೮೪ ಅಂಶಗಳೊಳಗಿದ್ದರೆ ಸಪ್ತಮೀತಿಥಿ ; ೮೪ರಿಂದ ೯೬ ಅಂಶಗಳೊಳಗಿದ್ದರೆ ಅಷ್ಟಮೀತಿಥಿ ; ೯೬ರಿಂದ ೧೦೮ ಅಂಶಗಳೊಳಗಿದ್ದರೆ ನವಮೀತಿಥಿ ; ೧೦೮ರಿಂದ ೧೨೦ ಅಂಶಗಳೊಳಗಿದ್ದರೆ ದಶಮೀತಿಥಿ ; ೧೨೦ರಿಂದ ೧೩೨ ಅಂಶಗಳೊಳಗಿದ್ದರೆ ಏಕಾದಶೀತಿಥಿ ; ೧೩೨ರಿಂದ ೧೪೪ ಅಂಶಗಳೊಳಗಿದ್ದರೆ ದ್ವಾದಶೀತಿಥಿ ; ೧೪೪ರಿಂದ ೧೫೬ ಅಂಶಗಳೊಳಗಿದ್ದರೆ ತ್ರಯೋದಶೀತಿಥಿ ; ೧೫೬ರಿಂದ ೧೬೮ ಅಂಶಗಳೊಳಗಿದ್ದರೆ ಚತುರ್ದಶೀತಿಥಿ ; ಈ ಹದಿನಾಲ್ಕು ಶುಕ್ಲಪಕ್ಷದ ತಿಥಿಗಳು ; ಈ ಅಂಶಗಳಿಗೆ ೧೮೦ ಅಂಶಗಳನ್ನು ಸೇರಿಸಿದರೆ ಕ್ರಮವಾಗಿ ಕೃಷ್ಣಪಕ್ಷದ ಹದಿನಾಲ್ಕು ತಿಥಿಗಳ ಕಾಲವಾಗುತ್ತದೆ. ೧೬೮ರಿಂದ ೧೮೦ ಅಂಶಗಳೊಳಗಿದ್ದರೆ ಪೂರ್ಣಿಮೆಯೂ ೩೪೮ ರಿಂದ ೩೬೦ ಅಂಶಗಳೊಳಗಿದ್ದರೆ ಅಮಾವಾಸ್ಯೆಯೂ ಆಗುತ್ತದೆ. ತಿಥಿ ಇರುವ ಕಾಲವನ್ನು ಘಳಿಗೆ ವಿಘಳಿಗೆಗಳಲ್ಲಿ ತಿಳಿಸುವುದು ರೂಢಿಯಲ್ಲಿದೆ. ಸಾಮಾನ್ಯವಾಗಿ ಒಂದು ತಿಥಿಯ ಪ್ರಮಾಣ ೬೦ ಘಳಿಗೆಗಳು ; ಈ ವಿಧವಾದ ತಿಥಿಗೆ ಪರ್ವತಿಥಿಯೆಂದು ಹೆಸರು. ೬೦ ಘಳಿಗೆಗಳಿಗಿಂತ ಕಡಮೆ ಇರುವ ತಿಥಿಗೆ ಹಿಂಸ್ರವೆಂದೂ ಹೆಚ್ಚಾಗಿ ಇರುವ ತಿಥಿಗೆ ದರ್ಪವೆಂದೂ ಹೆಸರು.

ತಿಮಿಯುಗ—ಮೀನರಾಶಿ
ತೀಕ್ಷ್ಣ+ಅಂಶು, +ಗು—ಸೂರ್ಯ
ತೀಕ್ಷ್ಣಾಂಶುತನಯ—ಶನಿ [ಸೂರ್ಯನ ಮಗ]
ತುಂಗ—ಉಚ್ಚಕ್ಷೇತ್ರ
ತುರಗ—ಸಂಖ್ಯೆ ಏಳು, ಅಶ್ವಿನೀ ನಕ್ಷತ್ರ
ತುರೀಯ } —ಲಗ್ನದಿಂದ ನಾಲ್ಕನೆಯ ಸ್ಥಾನ
ತುರ್ಯ }
ತುಲಾಧರ—ತುಲಾರಾಶಿ
ತುಷಾರ+ಅಂಶು, +ಕರ, +ದ್ಯುತಿ, +ರುಚಿ—ಚಂದ್ರ
ತುಷಾರಾಂಶುಜ—ಬುಧ [ಚಂದ್ರನ ಮಗ]
ತುಹಿನ+ಅಂಶು, +ಕರ, +ಪ್ರದ್ಯೋತ—ಚಂದ್ರ
ತೂಣೀರ—ಧನೂರಾಶಿ
ತೂಬರ—ಮೇಷರಾಶಿ
ತೊಲೆ—ತುಲಾರಾಶಿ
ತೋಯ—ಪೂರ್ವಾಷಾಢಾ (೨೦ನೇ ನಕ್ಷತ್ರ)
ತೌಕ್ಷಿಕ—ಧನೂರಾಶಿ
ತೌಳಿ—ತುಲಾರಾಶಿ
ತ್ರಿಕೋಣಸ್ಥಾನ—ಲಗ್ನ ಅಥವಾ ಇಷ್ಟಸ್ಥಾನದಿಂದ ಐದು ಒಂಬತ್ತನೆಯ ಸ್ಥಾನಗಳು
ತ್ರಿ ತ್ರಿಕೋಣ—ಲಗ್ನ ಅಥವಾ ಇಷ್ಟಸ್ಥಾನದಿಂದ ಒಂಬತ್ತನೆಯ ಸ್ಥಾನ
ತ್ರಿದಶ+ಅಧಿಪಮಂತ್ರಿ, +ಇಂದ್ರಮಂತ್ರಿ—ಗುರು
ತ್ರಿದಶಾಹಿತಮಂತ್ರಿ—ಶುಕ್ರ
ತ್ರಿಂಶಾಂಶ—ರಾಶಿಪ್ರಮಾಣದ ಮೂವತ್ತನೆಯ ಒಂದು ಭಾಗ [ವಿವರ ೮ನೇ ಪುಟದಲ್ಲಿದೆ]
ತ್ರ್ಯಂಶ—ರಾಶಿಪ್ರಮಾಣದ ಮೂರನೆಯ ಒಂದು ಭಾಗ [ವಿವರ ೭ನೇ ಪುಟದಲ್ಲಿದೆ]
ತ್ವಷ್ಟೃ—ಚಿತ್ತೆ (೧೪ನೇ ನಕ್ಷತ್ರ)
ಥ—ಸಂಖ್ಯೆ ಏಳು
ದ—ಸಂಖ್ಯೆ ಎಂಟು
ದಂಡಯೋಗ—ಆಕೃತಿಯೋಗಗಳಲ್ಲಿ ಒಂದು [ಹತ್ತನೆಯ ಸ್ಥಾನದಿಂದ ಲಗ್ನ ಭಾವ ಪೂರ್ತಿ ಎಲ್ಲ ಗ್ರಹಗಳೂ ಇರುವುದು]
ದಕ್ಷಿಣಾಯನ—ಸೂರ್ಯನು ಕರ್ಕಾಟಕ ಮೊದಲು ಆರು ರಾಶಿಗಳಲ್ಲಿ ಸಂಚರಿಸುವ ಕಾಲ
ದನುಜ+ಅಧೀಶ, +ಇಜ್ಯ, +ಇಂದ್ರವಂದ್ಯ, +ಗುರು—ಶುಕ್ರ
ದಂತ—ಮೂವತ್ತೆರಡು
ದಂದಶೂಕ—ದಿನದ ಎರಡನೆಯ ಮುಹೂರ್ತ [ಸೂರ್ಯೋದಯವಾದ[1] ೪೮ ನಿಮಿಷಗಳ ಮೇಲೆ ೧ ಗಂಟೆ ೩೬ ನಿಮಿಷಗಳೊಳಗಿರುವ ಕಾಲ]

---

[1] ಹಗಲಿನ ಪ್ರಮಾಣದ ವ್ಯತ್ಯಾಸದಿಂದ ಮುಹೂರ್ತಪ್ರಮಾಣದಲ್ಲಿ ಕೆಲವು ನಿಮಿಷಗಳು ವ್ಯತ್ಯಾಸವಾಗುತ್ತದೆ.

ದಂಪತಿ—ಮಿಥುನರಾಶಿ

ದರ್ಶ—ಅಮಾವಾಸ್ಯೆ

ದಲ—ಅರ್ಧಭಾಗ

[1] ದಶಮಲಗ್ನ – ಮಧ್ಯಲಗ್ನ [ಜನನಕಾಲದಲ್ಲಿ ಜನ್ಮದೇಶದ ಮಧ್ಯಾಹ್ನರೇಖೆಯಲ್ಲಿರುವ ರಾಶಿ]

ದಶಾನಾಥ – ದಶಾಕಾಲದ ಅಧಿಪತಿ

ದಶೆ—ಜೀವಿತದ ಒಟ್ಟು ಕಾಲದಲ್ಲಿ ಫಲಕೊಡಲು ಒಂದೊಂದು ಗ್ರಹಕ್ಕೂ ಪ್ರತ್ಯೇಕವಾಗಿ ವಿಭಕ್ತವಾಗಿರುವ ನಿರ್ದಿಷ್ಟವಾದ ಕಾಲ

ದಸ್ರ—ಅಶ್ವಿನಿ (೧ನೇ ನಕ್ಷತ್ರ)

ದಾನವಪೂಜಿತ—ಶುಕ್ರ

---

[1] ದಶಮಲಗ್ನಾನಯನಕ್ರಮ—ಇಷ್ಟಕಾಲದ ನತಘಳಿಗೆಗಳನ್ನು ಇಷ್ಟಕಾಲವೆಂದು ಭಾವಿಸಿ ಲಂಕಾದೇಶದ ಲಗ್ನಪ್ರಮಾಣವನ್ನಿಟ್ಟುಕೊಂಡು ಲಗ್ನಸ್ಫುಟವನ್ನು ತರುವಂತೆಯೇ ದಶಮ ಲಗ್ನವನ್ನು ಆನಯನ ಮಾಡಬೇಕು.

ಉದಾ—ತಾ॥ ೫-೯-೧೯೫೮ನೇ ಶುಕ್ರವಾರ ಬೆಳಗ್ಗೆ ೧೧ ಗಂಟೆಗೆ ಮೈಸೂರು ನಗರದಲ್ಲಿ ಇರುವ ದಶಮ ಲಗ್ನಾನಯನ. ಈ ದಿವಸ ಸೂರ್ಯೋದಯ ಬೆಳಗ್ಗೆ ೬ ಗಂಟೆ ೧೨ ನಿ.ಪ. ಹಗಲಿನ ಪ್ರಮಾಣ ೩೦ಘಟಿ ೩೨ವಿಘಟಿ.

ನತಕಾಲ= ಅಹರರ್ಧ—ಇಷ್ಟಕಾಲ= (೧೫ಘ. ೧೬ವಿಘ.)—(೧೨ಘ. ೦ವಿಘ.)= ೩ಘ. ೧೬ವಿಘ. ಅಹರರ್ಧಕ್ಕಿಂತ ಇಷ್ಟಕಾಲ ಕಡಮೆಯಾಗಿರುವುದರಿಂದ ಇದು ಪ್ರಾಙ್ನತಕಾಲ.

ಇಷ್ಟಕಾಲದ ಸಾಯನ ಸೂರ್ಯಸ್ಫುಟ = ರಾ೫ ಭಾ೧೩ ಕ೩೦ ವಿಕ೪೫; ಸಾಯನ ಸೂರ್ಯನು ಕನ್ಯಾರಾಶಿಯಲ್ಲಿರುವನು. ಕನ್ಯಾರಾಶಿಯಲ್ಲಿ ಸಾಯನರವಿಯಿಂದ ಭುಕ್ತಭಾಗ = ೧೩ಭಾ ೩೦ಕ ೪೫ವಿಕ= ೮೧೦·೭೫ ಕಲೆಗಳು.

ಲಂಕಾದೇಶದಲ್ಲಿ ಕನ್ಯಾರಾಶಿಯ ಪ್ರಮಾಣ= ೫ಘ. ೨೨ವಿಘ.

ಕನ್ಯಾರಾಶಿಯಲ್ಲಿ ಗತ (ಕಳೆದಿರುವ) ಭಾಗವನ್ನು ಘಟಿ ವಿಘಟಿಗಳಲ್ಲಿ ಅನುಪಾತ ಮಾಡಿ ತಿಳಿಯಬೇಕು. ಅನುಪಾತಕ್ರಮ—

ರಾಶಿಪ್ರಮಾಣ ೧೮೦೦ ಕಲೆಗಳಿಗೆ ೩೨೨ ವಿಘಟಿಗಳಾದರೆ

ರಾಶಿಯಲ್ಲಿ ಗತ ೮೧೦.೭೫ ಕಲೆಗಳಿಗೆ

$$= \frac{೮೧೦·೭೫ \times ೩೨೨}{೧೮೦೦} = \frac{೨೬೧೦೬೧·೫}{೧೮೦೦} = ೧೪೫ \text{ ವಿಘ.} = ೨\text{ಘ. } ೨೫\text{ವಿಘ.}$$

ಇದನ್ನು ನತಕಾಲದಲ್ಲಿ ಕಳೆದರೆ ಉಳಿಯುವುದು= (೩ಘ. ೧೬ವಿಘ.)—(೨ಘ. ೨೫ವಿಘ.) = ೫೧ ವಿಘ. ಇದು ಸಿಂಹರಾಶಿಯಲ್ಲಿ ಉಳಿದಿರುವ ಭಾಗ. ಲಂಕಾದೇಶದ ಸಿಂಹರಾಶಿ ಪ್ರಮಾಣ ೪ಘ. ೫೯ವಿಘ. ಇದರಿಂದ ಅನುಪಾತಮಾಡಿ ಸಿಂಹರಾಶಿಯಲ್ಲಿ ಉಳಿದಿರುವುದನ್ನು ಭಾಗ ಕಲೆ ವಿಕಲೆಗಳಲ್ಲಿ ತಿಳಿಯಬೇಕು ಅನುಪಾತಕ್ರಮ—

ಸಿಂಹರಾಶಿಪ್ರಮಾಣ ೨೯೯ ವಿಘಟಿಗಳಿಗೆ ರಾಶಿಪ್ರಮಾಣ ೧೮೦೦ ಕಲೆಗಳು ಸಮವಾದರೆ ಸಿಂಹರಾಶಿಯಲ್ಲಿ ಮಿಷ್ಯ ೫೧ ವಿಘಳಿಗೆಗಳಿಗೆ ಎಷ್ಟು ?

$$= \frac{೧೮೦೦ \times ೫೧}{೨೯೯} = \frac{೯೧೮೦೦}{೨೯೯} = ೩೫೪\text{ಕ } ೨೬\text{ವಿಕ.}$$ ∴ ಸಿಂಹರಾಶಿಯಲ್ಲಿ ಭುಕ್ತ = ೨೪ಭಾ ೫ಕ ೩೪ವಿಕ. ಸಾಯನ ದಶಮಲಗ್ನ= ೪ರಾ ೨೪ಭಾ ೫ಕ ೩೪ ವಿಕ. ಇದರಲ್ಲಿ ಅಯನಾಂಶ ೨೩ಭಾ ೧೫ಕ ೩೫ವಿಕಲೆಗಳನ್ನು ಕಳೆದು ಉಳಿದುದು = ೪ರಾ ೦ಭಾ ೪೯ಕ ೫೯ವಿಕ. ಇದೇ ದಶಮಲಗ್ನ.

ದಾಮ—ಸಂಖ್ಯಾಯೋಗಗಳಲ್ಲಿ ಒಂದು [ಏಳು ಗ್ರಹಗಳೂ ಆರು ರಾಶಿಗಳಲ್ಲಿರುವುದು]

ದಾಯ—ಗ್ರಹವು ಜಾತಕನಿಗೆ ಕೊಡುವ ಆಯುಸ್ಸಿನ ಪ್ರಮಾಣ, ದಶಾಕಾಲ

ದಿಕ್—ಸಂಖ್ಯೆ ಹತ್ತು

ದಿಗ್ಬಲ—ಗ್ರಹಷಡ್ಬಲಗಳಲ್ಲಿ ಒಂದು [ವಿವರ ೧೮ನೇ ಪುಟದಲ್ಲಿದೆ]

ದಿತಿಜೇಜ್ಯ, ದಿತಿಪುತ್ರೇಜ್ಯ — ಶುಕ್ರ

ದಿನ+ಕೃತ್, +ನಾಥ, +ಪ, +ಪತಿ—ಸೂರ್ಯ

ದಿನಕೃತ್ಸುತ, ದಿನಾಧಿನಾಥಸುತ —ಶನಿ [ಸೂರ್ಯನ ಮಗ]

ದಿವಸಕರ, ದಿವಾಕರ — ಸೂರ್ಯ

ದಿವಸೇಂದ್ರ—ಸೂರ್ಯ

ದಿವಸೇಂದ್ರಾತ್ಮಜ ಶನಿ [ಸೂರ್ಯನ ಮಗ]

ದಿನಾಪ್ರಮಾಣ - ಸೂರ್ಯೋದಯದಿಂದ ಸೂರ್ಯಾಸ್ತದವರೆಗಿನ ಕಾಲ

ದಿವಿಜಾಮಾತ್ಯ, ದಿವಿಜೇಜ್ಯ, ದಿವಿಜೇಂದ್ರಾರ್ಚಿತ —ಗುರು

ದುರುಧುರಾ—ಚಾಂದ್ರಯೋಗಗಳಲ್ಲಿ ಒಂದು [ಚಂದ್ರನಿಗೆ ೨-೧೨ನೇ ಸ್ಥಾನಗಳಲ್ಲಿ ತಾರಾಗ್ರಹವಿರುವುದು]

ದುಶ್ಚಿಕ್ಯ—ಲಗ್ನದಿಂದ ಮೂರನೆಯ ಸ್ಥಾನ

ದುಸ್ಸ್ಥಾನ—ಲಗ್ನದಿಂದ ಆರು ಎಂಟು ಹನ್ನೆರಡನೆಯ ಸ್ಥಾನಗಳು

ದೃಗಾಣ—ದ್ರೇಕ್ಕಾಣ [ರಾಶಿಯ ಮೂರನೆಯ ಒಂದು ಭಾಗ]

ದೃಶ್ಯ ಚಕ್ರಾರ್ಧ—ಲಗ್ನರಾಶಿಯಲ್ಲಿ ಕಳೆದಿರುವ ಭಾಗ, ೧೨-೧೧-೧೦-೯-೮ನೇ ರಾಶಿಗಳು ಮತ್ತು ೭ನೇ ರಾಶಿಯ ಅಂತ್ಯದಲ್ಲಿ ಲಗ್ನದಲ್ಲಿ ಕಳೆದಿರುವಷ್ಟು ಭಾಗ

[1] ದೃಷ್ಟಿ—ಗ್ರಹವು ತಾನಿರುವ ಸ್ಥಾನದಿಂದ ಮತ್ತೊಂದು ಗ್ರಹವನ್ನಾಗಲಿ ಸ್ಥಾನವನ್ನಾಗಲಿ ನೋಡುವುದು

ದೇವ+ಗುರು, +ಪುರೋಹಿತ, +ಪೂಜ್ಯ—ಗುರು

ದೇಶಾಂತರ—ನಮ್ಮ ದೇಶಕ್ಕೂ ನಿರಕ್ಷ [ಶೂನ್ಯಾಕ್ಷಾಂಶ] ದೇಶಕ್ಕೂ ಒಂದೇ ವೇಳೆಯಲ್ಲಿ ಇರುವ ಕಾಲದ ಅಂತರ

ದೈತ್ಯ+ಅರ್ಚಿತ, +ಅಧಿಪಾಮಾತ್ಯ, +ಅಮಾತ್ಯ, +ಇಜ್ಯ, +ಮಹತ್ತರ—ಶುಕ್ರ

ದೈವಾಕರಿ—ಶನಿ

ದೋಷಾ+ಕರ, +ಪತಿ—ಚಂದ್ರ

ದ್ಯು+ಚರ, +ಸದ—ಗ್ರಹ

ದ್ಯುನ (ದ್ಯೂನ)—ಲಗ್ನದಿಂದ ಏಳನೆಯ ಸ್ಥಾನ

ದ್ರೇಕ್ಕಾಣ—ರಾಶಿಯ ಮೂರನೆಯ ಒಂದು ಅಂಶ

---

[1] ಗ್ರಹವು ತಾನಿರುವ ಸ್ಥಾನದಿಂದ ಏಳನೆಯ ಸ್ಥಾನ (೧೮೦ನೇ ಅಂಶ) ವನ್ನು ಪೂರ್ಣ ದೃಷ್ಟಿಯಿಂದ ನೋಡುತ್ತದೆ.

ದ್ವಂದ್ವರ್ಕ್ಷ, ದ್ವ್ಯಂಗರಾಶಿ
ದ್ವಿದೇಹಗೃಹ
—ದ್ವಿಸ್ವಭಾವರಾಶಿ [ಮಿಥುನ, ಕನ್ಯಾ, ಧನುಸ್ಸು, ಮೀನ ರಾಶಿಗಳು]

ದ್ವಾದಶಾಂಶ
ದ್ವಿರಸಾಂಶ
—ರಾಶಿಯ ಹನ್ನೆರಡನೆಯ ಒಂದು ಅಂಶ

ದ್ವಿಟ್‌ಕ್ಷೇತ್ರ ಲಗ್ನದಿಂದ ಆರನೆಯ ಸ್ಥಾನ

ದ್ವೀನ—ಸಂಖ್ಯೆ ಏಳು

ಧ—ಸಂಖ್ಯೆ ಒಂಬತ್ತು

ಧಟ—ತುಲಾರಾಶಿ

ಧನುರ್ಧರ—ಧನೂರಾಶಿ

ಧರಣಿ—ಸಂಖ್ಯೆ ಒಂದು

ಧರಣಿ + ಜ, + ನಂದನ, + ಸುತ
ಧಾತ್ರೀ + ತನೂಜಾತ, + ಸುತ
—ಕುಜ [ಭೂಮಿಯ ಮಗ]

ಧರ್ಮಸ್ಥಾನ—ಲಗ್ನದಿಂದ ಒಂಬತ್ತನೆಯ ಸ್ಥಾನ

ಧಾಮ—ರಾಶಿ, ಸ್ಥಾನ

ಧೀ ಸ್ಥಾನ—ಲಗ್ನದಿಂದ ಐದನೆಯ ಸ್ಥಾನ

ಧ್ವಜ—ಕೇತು

ನಕ್ರರಾಶಿ—ಮಕರರಾಶಿ

[1] ನಕ್ಷತ್ರ—ಅಂತರಿಕ್ಷದಲ್ಲಿ ಮಿನುಗುತ್ತಿರುವ ತಾರೆಗಳು

ನಗ—ಸಂಖ್ಯೆ ಏಳು

[2] ನತ—ಅಹರರ್ಧಕ್ಕೂ [ಮಧ್ಯಾಹ್ನ ಕಾಲಕ್ಕೂ] ಇಷ್ಟ ಕಾಲಕ್ಕೂ ಇರುವ ಅಂತರ

ನಂದ—ಸಂಖ್ಯೆ ಒಂಬತ್ತು

ನಪುಂಸಕಗ್ರಹ—ಶನಿ ಬುಧರು

ನಭ—ಲಗ್ನದಿಂದ ಹತ್ತನೆಯ ಸ್ಥಾನ

ನಭಶ್ಚರ - ಗ್ರಹ

ನಯನ—ಸಂಖ್ಯೆ ಎರಡು

ನರಯುಗ್ಮ—ಮಿಥುನರಾಶಿ

ನರರಾಶಿ—ಮಿಥುನ ಕನ್ಯಾ ತುಲಾ ಕುಂಭ ರಾಶಿಗಳು ಮತ್ತು ಧನೂರಾಶಿಯ ಪೂರ್ವಾರ್ಧ

---

[1] ಈ ನಕ್ಷತ್ರಗಳಲ್ಲಿ ಇಪ್ಪತ್ತೇಳು ನಕ್ಷತ್ರ (ಗುಂಪು) ಗಳನ್ನು ಮಾತ್ರ ಫಲಜ್ಯೋತಿಷದಲ್ಲಿ ಮುಖ್ಯವಾಗಿ ಗಣನೆಗೆ ತೆಗೆದುಕೊಂಡಿರುತ್ತಾರೆ. ಈ ನಕ್ಷತ್ರಗಳ ಚಕ್ರಕ್ಕೆ ಭಚಕ್ರವೆಂದು ಹೆಸರು. ೨೭ ನಕ್ಷತ್ರಗಳಿಗೆ ಭಚಕ್ರ ಪ್ರಮಾಣ ೨೧೬೦೦ ಕಲೆಗಳು ಸಮವಾದರೆ ಒಂದು ನಕ್ಷತ್ರದ ಪ್ರಮಾಣವೆಷ್ಟು? ಎಂದು ಅನುಪಾತ ಮಾಡಿದರೆ ೮೦೦ ಕಲೆಗಳು ಬರುತ್ತವೆ. ಇದೆ ಒಂದು ನಕ್ಷತ್ರ ಪ್ರಮಾಣ.

ಸೂರ್ಯನಿರುವ ನಕ್ಷತ್ರಕ್ಕೆ ಮಹಾ ನಕ್ಷತ್ರವೆಂದೂ ಚಂದ್ರನಿರುವ ನಕ್ಷತ್ರಕ್ಕೆ ದೈನಂದಿನ ನಕ್ಷತ್ರವೆಂದೂ ಹೆಸರು. ಅಶ್ವಿನಿ ಭರಣಿ ಕೃತ್ತಿಕೆ ರೋಹಿಣಿ ಮೃಗಶಿರೆ ಆರ್ದ್ರೆ ಪುನರ್ವಸು ಪುಷ್ಯ ಆಶ್ಲೇಷೆ ಮಖೆ ಪುಬ್ಬೆ ಉತ್ತರೆ ಹಸ್ತ ಚಿತ್ತೆ ಸ್ವಾತಿ ವಿಶಾಖ ಅನೂರಾಧೆ ಜ್ಯೇಷ್ಠ ಮೂಲ ಪೂರ್ವಾಷಾಢ ಉತ್ತರಾಷಾಢ ಶ್ರವಣ ಧನಿಷ್ಠೆ ಶತಭಿಷೆ ಪೂರ್ವಾಭಾದ್ರೆ ಉತ್ತರಾಭಾದ್ರೆ ರೇವತಿ ಈ ಇಪ್ಪತ್ತೇಳು ಗ್ರಹಗಳು ಸಂಚರಿಸುವ ನಕ್ಷತ್ರಗಳು.

[2] ನತಕಾಲವು ಪ್ರಾಙ್ನತ ಪಶ್ಚಾನ್ನತ ಎಂದು ಎರಡು ವಿಧ. ಅಹರರ್ಧಕ್ಕಿಂತ ಇಷ್ಟಕಾಲವು ಕಡಮೆಯಾಗಿದ್ದರೆ ಪ್ರಾಙ್ನತ. ಅಧಿಕವಾಗಿದ್ದರೆ ಪಶ್ಚಾನ್ನತ.

ನವಮರಾಶಿ—ಧನೂರಾಶಿ

ನವಾಂಶ—ರಾಶಿಯ ಒಂಬತ್ತನೆಯ ಒಂದು ಭಾಗ

ನಳ—ಆಶ್ರಯಯೋಗಗಳಲ್ಲಿ ಒಂದು [ಏಳು ಗ್ರಹಗಳೂ ದ್ವಿಸ್ವಭಾವರಾಶಿಗಳಲ್ಲಿರುವುದು]

ನಾಡಿ<br>ನಾಟಿಕೆ } —ಒಂದು ಘಳಿಗೆ [೨೪ ನಿಮಿಷಗಳ ಕಾಲ]

ನಾಭಸಯೋಗ—ಎಲ್ಲ ಕಾಲಗಳಲ್ಲೂ ಫಲಿಸುವ ಆಕೃತಿ ಸಂಖ್ಯಾ ಆಶ್ರಯ ಮತ್ತು ದಲ ಈ ನಾಲ್ಕು ವಿಧ ಯೋಗಗಳ ಗುಂಪು

ನಾಶಸ್ಥಾನ—ಲಗ್ನದಿಂದ ಎಂಟನೆಯ ಸ್ಥಾನ

ನಿಕೇತನ—ರಾಶಿ

ನಿಗಳದ್ರೇಕ್ಕಾಣ—ಮಕರ ರಾಶಿಯ ಒಂದನೆಯ ದ್ರೇಕ್ಕಾಣ

ನಿಡಳೀ—ಕರ್ಕಟಕ ರಾಶಿ

ನಿಧನ+ಆಗರ, +ಆಲಯ—ಎಂಟನೆಯ ಸ್ಥಾನ

ನಿಧಿ—ಒಂಬತ್ತು

ನಿರಭಿಭೂತ—ಗ್ರಹವು ಯುದ್ಧದಲ್ಲಿ ಸೋಲದಿರುವುದು

ನಿರ್ಗಮಸ್ಥಾನ—ಹನ್ನೆರಡನೆಯ ಸ್ಥಾನ

ನಿರ್ಘಾತ—ಗಾಳಿ ಪರಸ್ಪರ ಹೊಡೆತದಿಂದ ಶಬ್ದಮಾಡುತ್ತಾ ಆಕಾಶದಿಂದ ಭೂಮಿಗೆ ಬೀಳುವಂತಾಗುವುದು

ನಿಶಾ+ಕರ, +ನಾಥ, +ಪತಿ, +ವಲ್ಲಭ—ಚಂದ್ರ

ನಿಶಾಕರಸುತ<br>ನಿಶಾಪತಿಜ } —ಬುಧ [ಚಂದ್ರನ ಮಗ]

[1] ನಿಸರ್ಗಮಿತ್ರ—ಸಹಜಮಿತ್ರಗ್ರಹ

---

[1] ಅಭೀಷ್ಟಗ್ರಹದ ಮೂಲತ್ರಿಕೋಣ ರಾಶಿಯಿಂದ ೨-೪-೫-೮-೯-೧೨ನೇ ರಾಶಿಗಳು ಮತ್ತು ಆ ಗ್ರಹದ ಉಚ್ಚರಾಶಿ ಇವುಗಳ ಅಧಿಪತಿಗಳು ಆ ಗ್ರಹಕ್ಕೆ ನಿಸರ್ಗಮಿತ್ರರಾಗುತ್ತಾರೆ. ತಾರಾಗ್ರಹಗಳಿಗೆ ಎರಡೆರಡು ರಾಶಿಗಳ ಆಧಿಪತ್ಯವಿರುವುದರಿಂದ ಆ ಎರಡು ರಾಶಿಗಳೂ ಮೇಲೆ ತಿಳಿಸಿರುವ ಆರುಸಂಖ್ಯೆಗಳಲ್ಲಿ ಅಂತರ್ಗತವಾದಾಗ ಮಾತ್ರ ಅದು ನಿಸರ್ಗಮಿತ್ರ ಗ್ರಹವಾಗುತ್ತದೆ ಒಂದು ರಾಶಿ ಮಾತ್ರಅಂತರ್ಗತವಾದರೆ ನಿಸರ್ಗಸಮ. ಒಂದೂ ಇಲ್ಲದಿದ್ದರೆ ನಿಸರ್ಗಶತ್ರು.

ಉದಾ.—ಇಷ್ಟಗ್ರಹ ಕುಜ. ಕುಜನಿಗೆ ಮೇಷವು ಮೂಲತ್ರಿಕೋಣರಾಶಿ. ಮೇಷದಿಂದ ಲೆಕ್ಕಮಾಡಿದರೆ ವೃಷಭ ಕರ್ಕಟಕ ಸಿಂಹ ವೃಶ್ಚಿಕ ಧನುಸ್ಸು ಮೀನ ಈ ಆರುರಾಶಿಗಳು ಕ್ರಮವಾಗಿ ೨-೪-೫-೮-೯-೧೨ನೇ ರಾಶಿಗಳಾಗುತ್ತವೆ. ಎರಡನೆಯರಾಶಿ ವೃಷಭ; ಇದಕ್ಕೆ ಅಧಿಪತಿ ಶುಕ್ರ. ಇದರಂತೆ ತುಲಾರಾಶಿಗೂ ಆತನೇ ಅಧಿಪತಿ. ಆದರೆ ತುಲಾರಾಶಿಯು ಮೇಲೆ ತಿಳಿಸಿರುವ ಆರು ರಾಶಿಗಳಲ್ಲಿ ಸೇರದಿರುವುದರಿಂದ ಶುಕ್ರನು ನಿಸರ್ಗಮಿತ್ರನಲ್ಲ; ನಿಸರ್ಗಸಮನಾಗುತ್ತಾನೆ. ನಾಲ್ಕನೆಯ ರಾಶಿ ಕರ್ಕಟಕ; ಇದಕ್ಕೆ ಚಂದ್ರ ಅಧಿಪತಿ; ಚಂದ್ರನಿಗೆ ಒಂದೇ ರಾಶಿಯ ಆಧಿಪತ್ಯವಿರುವುದರಿಂದ ಚಂದ್ರ ಕುಜನಿಗೆ ನಿಸರ್ಗಮಿತ್ರ. ಐದನೆಯ ರಾಶಿ ಸಿಂಹ; ಇದಕ್ಕೆ ಅಧಿಪತಿ ಸೂರ್ಯ. ಸೂರ್ಯನಿಗೂ ಒಂದೇರಾಶಿಯ ಆಧಿಪತ್ಯವಿರುವುದರಿಂದ ಸೂರ್ಯ ಕುಜನಿಗೆ ನಿಸರ್ಗಮಿತ್ರ. ಎಂಟನೆಯದು ವೃಶ್ಚಿಕ ರಾಶಿ. ಇದು ಕುಜನ ರಾಶಿ ಆಗುತ್ತದೆ. ಒಂಬತ್ತು ಮತ್ತು ಹನ್ನೆರಡನೆಯ ರಾಶಿಗಳಿಗೆ ಗುರುವೇ ಅಧಿಪತಿಯಾದುದರಿಂದ ಗುರು ಕುಜನಿಗೆ ನಿಸರ್ಗಮಿತ್ರ. ಕುಜನಿಗೆ ಉಚ್ಚಕ್ಷೇತ್ರ ಮಕರ. ಈ ರಾಶಿಗೆ ಶನಿ ಅಧಿಪತಿ. ಈತನಿಗೆ ಕುಂಭ ರಾಶಿಯ ಆಧಿಪತ್ಯವೂ ಇದೆ. ಆದರೆ ಕುಂಭರಾಶಿಯು ಮೇಲೆ ತಿಳಿಸಿರುವ ಆರು ರಾಶಿಗಳಲ್ಲಿ ಸೇರಿಲ್ಲ. ಆದಕಾರಣ ಶನಿ ನಿಸರ್ಗಸಮನಾಗುತ್ತಾನೆ. ಒಟ್ಟನಲ್ಲಿ ಗುರು ಚಂದ್ರ ರವಿಗಳು ಕುಜನಿಗೆ ನಿಸರ್ಗಮಿತ್ರರು. ಶನಿಶುಕ್ರರು ನಿಸರ್ಗಸಮರು; ಬುಧನು ಶತ್ರು. ಇದೇ ಕ್ರಮದಲ್ಲಿ ಉಳಿದ ಗ್ರಹಗಳಿಗೂ ನಿಸರ್ಗ ಶತ್ರು ಸಮ ಮಿತ್ರಗ್ರಹಗಳನ್ನು ನಿಶ್ಚಯಿಸಬೇಕು




ನಿಸರ್ಗಶತ್ರು—ಸಹಜಶತ್ರುಗ್ರಹ

ನಿಸರ್ಗಸಮ—ಸಹಜಸಮಗ್ರಹ

ನಿಳಯ—ರಾಶಿ

ನೀಚಕ್ಷೇತ್ರ—ಉಚ್ಚಕ್ಷೇತ್ರದಿಂದ ಏಳನೆಯ ಕ್ಷೇತ್ರ

ನೀಚಾಭಿರಾಶಿ—ತನ್ನ ನೀಚಕ್ಷೇತ್ರದಿಂದ ಹನ್ನೆರಡನೆಯ ರಾಶಿಯ ಒಂಬತ್ತನೆಯ ನವಾಂಶದಲ್ಲಿರುವ ಗ್ರಹ

ನೃಯುಗ್ಮ—ಮಿಥುನರಾಶಿ

ನೇತ್ರ—ಸಂಖ್ಯೆ ಎರಡು

ನೈಧನತಾರೆ—ಜನ್ಮನಕ್ಷತ್ರದಿಂದ ೭—೧೬—೨೫ನೇ ನಕ್ಷತ್ರಗಳು

ನೈಸರ್ಗಿಕಬಲ—ಗ್ರಹಗಳ ಸ್ವಾಭಾವಿಕ ಬಲ [ಗ್ರಹಷಡ್ಬಲಗಳಲ್ಲೊಂದು]

ನೈಸರ್ಗಿಕಾಯು—ಜಾತಕದಲ್ಲಿ ಚಂದ್ರನು ಬಲಿಷ್ಠನಾಗಿದ್ದರೆ ಲೆಕ್ಕಮಾಡುವ ಆಯುರ್ದಾಯ ಗಣಿತ

ನೌಯೋಗ—ಆಕೃತಿಯೋಗಗಳಲ್ಲಿ ಒಂದು [ಲಗ್ನದಿಂದ ಮೊದಲುಮಾಡಿ ಏಳು ರಾಶಿಗಳಲ್ಲಿ ಸಾಲಾಗಿ ಎಲ್ಲ ಗ್ರಹಗಳೂ ಇರುವುದು]

ಪ—ಸಂಖ್ಯೆ ಒಂದು

ಪಂಕಜ+ಪ್ರಿಯ, +ಮಿತ್ರ, +ವಲ್ಲಭ—ಸೂರ್ಯ

ಪಂಕಜಾಸನ—ರೋಹಿಣಿ (೪ನೇ ನಕ್ಷತ್ರ)

ಪಂಕರುಹಾರಾತಿಸುತ— ಬುಧ [ಚಂದ್ರನ ಮಗ]

ಪಂಕೇರುಹಮಿತ್ರ—ಸೂರ್ಯ

ಪಂಗು—ಶನಿ

[1] ಪಕ್ಷ—ತಿಂಗಳಿನ ಅರ್ಧಭಾಗ

ಪಕ್ಷಿದ್ರೇಕ್ಕಾಣ—ತುಲಾ ಕುಂಭರಾಶಿಗಳ ಮೊದಲನೆಯ ಮತ್ತು ಮಿಥುನ ಸಿಂಹ ರಾಶಿಗಳ ಎರಡನೆಯ ದ್ರೇಕ್ಕಾಣ

ಪಂಚಾಂಗ—ತಿಥಿ ವಾರ ನಕ್ಷತ್ರ ಯೋಗ ಕರಣ ಈ ಐದು ಅಂಗಗಳು

ಪಂಚಾನನ - ಸಿಂಹರಾಶಿ

ಪದ—ವರ್ಗಮೂಲ

ಪದ್ಮಪ್ರಿಯ—ಸೂರ್ಯ

ಪನ್ನಗತ್ರ್ಯಂಶ—ಸರ್ಪದ್ರೇಕ್ಕಾಣ

ಪಯಶ್ಚರ ರಾಶಿ—ಜಲಚರರಾಶಿ

ಪಯೋಜಸಖ—ಸೂರ್ಯ

ಪರಕ್ಷೇತ್ರ—ಉದಾಸೀನ [ಶತ್ರುವೂ ಮಿತ್ರನೂ ಅಲ್ಲದ] ಗ್ರಹದ ರಾಶಿ

ಪರಮನೀಚ—ಪರಮೋಚ್ಚಾಂಶದಿಂದ ೧೮೦ನೇ ಅಂಶ

ಪರಮಮೈತ್ರತಾರೆ—ಜನ್ಮ ನಕ್ಷತ್ರದಿಂದ ೯-೧೮-೨೭ನೇ ನಕ್ಷತ್ರ

---

[1] ಶುಕ್ಲ ಕೃಷ್ಣ ಎಂದು ಪಕ್ಷಗಳು ಎರಡು. ಪ್ರಥಮಾ ತಿಥಿಯಿಂದ ಪೂರ್ಣಿಮಾ ತಿಥಿ ಪೂರ್ತಿ ಇರುವ ಕಾಲಕ್ಕೆ ಶುಕ್ಲಪಕ್ಷವೆಂದೂ ಪೂರ್ಣಿಮೆಯಾದ ಮರುದಿನ [ಪ್ರಥಮಾ]ದಿಂದ ಅಮಾವಾಸ್ಯೆ ತಿಥಿ ಪೂರ್ತಿ ಇರುವ ಕಾಲಕ್ಕೆ ಕೃಷ್ಣಪಕ್ಷವೆಂದೂ ಹೆಸರು. ಎರಡರಲ್ಲೂ ಸೂರ್ಯೋದಯಕಾಲದಲ್ಲಿ ಪ್ರಥಮಾ ತಿಥಿ ಇರುವ ದಿನದಿಂದ ಪಕ್ಷಾರಂಭವಾಗುತ್ತದೆ.

[1] ಪರಮಾಯುಸ್ಸು—ಜೀವಿತದ ಅವಧಿ

ಪರಮೋಚ್ಚ—ಗ್ರಹಗಳ ಉಚ್ಚರಾಶಿಯಲ್ಲಿ ಅತ್ಯುಚ್ಚಾಂಶ

ಪರಾಭವಸ್ಥಾನ – ಎಂಟನೆಯ ಸ್ಥಾನ

ಪರಿಭವ—ಗ್ರಹವು ಯುದ್ಧದಲ್ಲಿ ಸೋಲುವುದು

ಪರಿವೇಷ—ಗ್ರಹಮಂಡಲದ ಸುತ್ತಲೂ ಕಂಡುಬರುವ ಒಂದು ವೃತ್ತಾಕಾರದ ಗುರುತು

ಪವನ—ಸಂಖ್ಯೆ ಏಳು, ಸ್ವಾತಿ (೧೫ನೇ ನಕ್ಷತ್ರ)

ಪಾಕ— ದಶಾಕಾಲ

ಪಾಕ+ಈಶ್ವರ, +ನಾಥ, +ಪ, +ಸ್ವಾಮಿ— ದಶಾಧಿಪತಿ

ಪಾತಾಳ— ಲಗ್ನದಿಂದ ನಾಲ್ಕನೆಯ ಸ್ಥಾನ

ಪಾಥೋನ—ಕನ್ಯಾರಾಶಿ

ಪಾದದೃಷ್ಟಿ—ಗ್ರಹವು ತನ್ನ ಸ್ಥಾನದಿಂದ ಮೂರು ಹತ್ತನೆಯ ಸ್ಥಾನಗಳನ್ನು ನೋಡುವುದು

ಪಾವಕ—ಕೃತ್ತಿಕೆ (೩ನೇ ನಕ್ಷತ್ರ) ಸಂಖ್ಯೆ ಮೂರು

ಪಾಶ—ಸಂಖ್ಯಾ ಯೋಗಗಳಲ್ಲಿ ಒಂದು [ಏಳು ಗ್ರಹಗಳೂ ಐದು ರಾಶಿಗಳಲ್ಲಿ ರುವುದು]

ಪಾಶದ್ರೇಕ್ಕಾಣ—ವೃಶ್ಚಿಕರಾಶಿಯ ಎರಡನೆಯ ದ್ರೇಕ್ಕಾಣ

ಪಿತೃದ—ಮಖೆ (೧೦ನೇ ನಕ್ಷತ್ರ)

ಪಿತೃಸ್ಥಾನ—ಲಗ್ನದಿಂದ ಒಂಬತ್ತನೆಯ ಸ್ಥಾನ

ಪುತ್ರಸ್ಥಾನ— ಲಗ್ನದಿಂದ ಐದನೆಯ ಸ್ಥಾನ

ಪುರ — ಸಂಖ್ಯೆ ಮೂರು

ಪುರುಷಗ್ರಹ—ರವಿ ಕುಜ ಗುರು ಈ ಮೂರುಗ್ರಹಗಳು

ಪುರುಷರಾಶಿ—ಮೇಷ ಮಿಥುನ ಸಿಂಹ ತುಲಾ ಧನಸ್ಸು ಕುಂಭ ಈ ಆರು ರಾಶಿಗಳು

ಪುರುಹೂತಾರ್ಚಿತ }
ಪುರಂದರಾರ್ಚಿತ } —ಗುರು

ಪೂರ್ವಾತ್ರಯ— ಪುಬ್ಬೆ ಪೂರ್ವಾಷಾಢ ಪೂರ್ವಾಭಾದ್ರೆ ಈ ಮೂರುನಕ್ಷತ್ರಗಳು

ಪೂಷಾ— ರೇವತಿ (೨೭ನೇ ನಕ್ಷತ್ರ)

ಪೃಚ್ಛಕಲಗ್ನ— ಪ್ರಶ್ನಕಾಲದ ಲಗ್ನ

ಪೃಥುರೋಮಾ— ಮೀನರಾಶಿ

ಪೃಷ್ಠೋದಯರಾಶಿ—ಮೇಷ ವೃಷಭ ಕರ್ಕಟಕ ಧನುಸ್ಸು ಮಕರ ಈ ಐದು ರಾಶಿಗಳು

ಪೈಂಡಾಯು —ಜಾತಕದಲ್ಲಿ ಸೂರ್ಯನು ಬಲಿಷ್ಠನಾಗಿರುವಾಗ ಲೆಕ್ಕಮಾಡುವ ಆಯುರ್ದಾಯ

ಪೌಷ್ಣ— ರೇವತಿ (೨೭ನೇ ನಕ್ಷತ್ರ)

---

[1] ಮನುಷ್ಯ ಮತ್ತು ಆನೆಗೆ ೧೨೦ ವರ್ಷ ೫ ದಿನ ; ಕುದುರೆಗೆ ೩೨ ವರ್ಷ; ಕತ್ತೆ ಮತ್ತು ಒಂಟೆಗೆ ೨೫ ವರ್ಷ ; ಹಸು ಎಮ್ಮೆ ಈ ವರ್ಗದ ಪ್ರಾಣಿಗಳಿಗೆ ೨೪ ವರ್ಷ; ನಾಯಿಗೆ ೧೨ ವರ್ಷ ; ಆಡಿಗೆ ೧೬ ವರ್ಷ ; ಇದು ಪರಮಾಯುಸ್ಸಿನ ಪ್ರಮಾಣ.

ಪ್ರತಿಭಾಸ್ಥಾನ—ಲಗ್ನದಿಂದ ಐದನೆಯ ಸ್ಥಾನ
ಪ್ರತ್ಯರತಾರೆ—ಜನ್ಮನಕ್ಷತ್ರದಿಂದ ೫-೧೪-೨೩ನೇ ನಕ್ಷತ್ರಗಳು
ಪ್ರಭಾಕರ—ಸೂರ್ಯ
ಪ್ರಮದಾ—ಕನ್ಯಾರಾಶಿ
ಪ್ರಶ್ನಲಗ್ನ—ಪ್ರಶ್ನಕಾಲದಲ್ಲಿ ಪೂರ್ವಕ್ಷಿತಿಜದಲ್ಲಿ ಉದಯಿಸಿರುವ ರಾಶಿ
ಪ್ರಾಚೇತಸ—ಶತಭಿಷೆ (೨೪ನೇ ನಕ್ಷತ್ರ)
ಪ್ರಾತಃಕಾಲ—ಸೂರ್ಯೋದಯಕಾಲದಿಂದ ಆರು ಘಳಿಗೆಕಾಲ [ಹಗಲಿನ ಪ್ರಮಾಣದ ಐದನೇ ಒಂದು ಅಂಶ]
ಪ್ರಾಪ್ತಿ—ಲಗ್ನದಿಂದ ಹನ್ನೊಂದನೆಯ ಸ್ಥಾನ
ಪ್ರಾಭಾಕರಿ—ಶನಿ
ಪ್ರೋಷ್ಠಪದ—ಪೂರ್ವಾಭಾದ್ರ (೨೫ನೇ ನಕ್ಷತ್ರ)
ಫ—ಸಂಖ್ಯೆ ಎರಡು
ಫಣಪರ—ಲಗ್ನದಿಂದ ೨-೫-೮-೧೧ನೇ ಸ್ಥಾನಗಳು
ಫಣಿಪತಿ—ರಾಹು
ಬ—ಸಂಖ್ಯೆ ಮೂರು
ಬಂಧುಸ್ಥಾನ—ಲಗ್ನದಿಂದ ನಾಲ್ಕನೆಯ ಸ್ಥಾನ
ಬಲಭಿದ್ಗುರು—ಗುರು
ಬಾಣ—ಸಂಖ್ಯೆ ಐದು
ಬಾಹು—ಸಂಖ್ಯೆ ಎರಡು
ಬಿಸರುಹಸಖ—ಸೂರ್ಯ
ಬುಧಾಷ್ಟಕವರ್ಗ—ಬುಧನು ತಾನಿರುವ ರಾಶಿಯಿಂದ ಶುಭಫಲಗಳನ್ನು ಕೊಡುವ ರಾಶಿಯನ್ನು ತಿಳಿಸುವ ಬಿಂದುಗಳ ಸಮೂಹ
ಬುದ್ಧಿಸ್ಥಾನ—ಲಗ್ನದಿಂದ ಐದನೆಯ ಸ್ಥಾನ
ಬೃಹಸ್ಪತಿ—ಗುರು
ಬೋಧನ—ಬುಧ
ಬ್ರಹ್ಮ—ರೋಹಿಣಿ (೪ನೇ ನಕ್ಷತ್ರ)
ಭ—ಸಂಖ್ಯೆ ನಾಲ್ಕು, ನಕ್ಷತ್ರ, ರಾಶಿ, ಸಂಖ್ಯೆ ಇಪ್ಪತ್ತೇಳು
[1] ಭಗ—ಪುಬ್ಬೆ (೧೧ನೇ ನಕ್ಷತ್ರ)
ಭರಣ—ಉಚ್ಚಕ್ಷೇತ್ರ ಮೊದಲಾದೆಡೆಗಳಲ್ಲಿರುವ ಗ್ರಹನ್ನುವೇಶದಿಂದ ಆಯುರ್ದಾಯದಲ್ಲುಂಟಾಗುವ ವೃದ್ಧ್ಯಂಶ
ಭವಸ್ಥಾನ—ಲಗ್ನದಿಂದ ಹನ್ನೊಂದನೆಯ ಸ್ಥಾನ
ಭವನ—ರಾಶಿ
ಭಾಗ—ಅಂಶ
ಭಾಗ್ಯ—ಪೂರ್ವ ಫಲ್ಗುನಿ (೧೧ನೇ ನಕ್ಷತ್ರ), ಲಗ್ನದಿಂದ ಒಂಬತ್ತನೆಯ ಸ್ಥಾನ
ಭಾನು—ಸೂರ್ಯ
ಭಾನುನಂದನ—ಶನಿ [ಸೂರ್ಯನ ಮಗ]
ಭಾರ್ಗವ—ಶುಕ್ರ

---

[1] ಕೆಲವು ಆಚಾರ್ಯರು ಉತ್ತರಾನಕ್ಷತ್ರವೆಂದು ಹೇಳಿರುತ್ತಾರೆ.

[1] ಭಾವ—ಜಾತಕನಿಗೆ ಸಂಭವಿಸುವ ಫಲವಿಚಾರಗಳನ್ನು ನಿರ್ದಿಷ್ಟವಾಗಿ ತಿಳಿಸುವ ಸ್ಥಾನ

ಭಾಸ್ಕರ—ಸೂರ್ಯ

ಭಾಸ್ಕರ+ಅಪತ್ಯ, +ಪುತ್ರ
ಭಾಸ್ಕರಿ } —ಶನಿ [ಸೂರ್ಯನ ಮಗ]

ಭುಕ್ತಿ—ಗ್ರಹಗಳು ಸಂಚರಿಸುವ ದೈನಂದಿನ ವೇಗ, ಅಂತರ್ದಶಾವಿಭಾಗ

ಭುಜಂಗ—ಆಶ್ಲೇಷೆ (೯ನೇ ನಕ್ಷತ್ರ)

ಭೂತ—ಸಂಖ್ಯೆ ಐದು

ಭೂನಂದನ
ಭೂಮಿತನಯ } —ಕುಜ [ಭೂಮಿಯ ಮಗ]

ಭೃಗು+ಜ, +ನಂದನ, +ಪುತ್ರ, +ಪ್ರಭವ, +ಸುತ—ಶುಕ್ರ

ಭೇಶ—ರಾಶಿಯ ಅಧಿಪತಿ

ಭುಕ್ತಭಾಗ—ಕಳೆದಿರುವ ಭಾಗ

ಭೋಗ್ಯಭಾಗ—ಉಳಿದಿರುವ ಭಾಗ

ಭೌಮ—ಕುಜ

ಭ್ರಾತೃಸ್ಥಾನ—ಲಗ್ನದಿಂದ ಮೂರನೆಯ ಸ್ಥಾನ

ಮ—ಸಂಖ್ಯೆ ಐದು

ಮದಸ್ಥಾನ—ಲಗ್ನದಿಂದ ಏಳನೆಯ ಸ್ಥಾನ

ಮಧ್ಯಗ್ರಹ—ಮಧ್ಯಮ [ಸರಾಸರಿ] ಮಾನದಿಂದ ಗಣಿತಮಾಡಿ ರಾಶಿ ಅಂಶ ಕಲಾದಿಗಳಲ್ಲಿ ತಿಳಿದುಬರುವ ಗ್ರಹವಿರುವ ಸನ್ನಿವೇಶ

ಮಧ್ಯಲಗ್ನ—ದಶಮಲಗ್ನ [ಇಷ್ಟಕಾಲದಲ್ಲಿ ಮಧ್ಯಾಹ್ನರೇಖೆಯಲ್ಲಿರುವ ರಾಶಿ]

ಮಧ್ಯಸ್ಥಾನ—ಲಗ್ನದಿಂದ ಹತ್ತನೆಯ ಸ್ಥಾನ

ಮಧ್ಯಾಹ್ನ—ಸಂಗವಕಾಲದಿಂದ ಮುಂದೆ [ಸೂರ್ಯೋದಯಾನಂತರ ೧೨ ಘಳಿಗೆ ಮೇಲೆ] ಆರು ಘಳಿಗೆಗಳ ಕಾಲ [ಅಹಸ್ಸಿನ ಐದನೇ ಒಂದು ಭಾಗ]

ಮನುಷ್ಯರಾಶಿ—ಮಿಥುನ ಕನ್ಯಾ ತುಲಾ ಕುಂಭ ಧನುಸ್ಸಿನ ಪೂರ್ವಾರ್ಧ ಈ ರಾಶಿಗಳು

ಮಂತ್ರಿ—ಗುರು

ಮಂದ—ಶನಿ

ಮಹಾಪಾತ—ಸೂರ್ಯ ಚಂದ್ರರ ಸ್ಫುಟಗಳ ಯೋಗವು ೧೮೦ ಅಥವಾ ೩೬೦ ಅಂಶಗಳಿಗೆ ಸಮನಾಗಿರುವಾಗ ಅವರಿಗೆ ಕ್ರಾಂತಿ ಸಾಮ್ಯವಿರುವುದು

ಮಹೀತನಯ—ಕುಜ

ಮಾಂಗಲ್ಯಸ್ಥಾನ—ಸ್ತ್ರೀಜಾತಕದಲ್ಲಿ ಲಗ್ನದಿಂದ ಎಂಟನೆಯ ಸ್ಥಾನ

ಮಾತೃಸ್ಥಾನ—ಲಗ್ನದಿಂದ ನಾಲ್ಕನೆಯ ಸ್ಥಾನ

ಮಾತ್ರೆ—ಒಂದು ಲಘ್ವಕ್ಷರವನ್ನು ಉಚ್ಚರಿಸುವ ಕಾಲ

ಮಾನಸ್ಥಾನ—ಲಗ್ನದಿಂದ ಹತ್ತನೆಯ ಸ್ಥಾನ

ಮಾರ್ತಾಂಡ—ಸೂರ್ಯ

ಮಾರ್ತಾಂಡ+ನಂದನ, +ಪುತ್ರ, +ಸುತ—ಶನಿ [ಸೂರ್ಯನ ಮಗ]

---

[1] ಭಾವಸ್ಫುಟಾನಯನ ಕ್ರಮವನ್ನು ೩೮೪-೩೮೬ ನೇ ಪುಟಗಳಲ್ಲಿ ವಿವರಿಸಿದೆ.

ಮಾಲಾಯೋಗ—ದಲಯೋಗಗಳಲ್ಲಿ ಒಂದು [ಮೂರು ಕೇಂದ್ರಸ್ಥಾನಗಳಲ್ಲಿ ಶುಭ ಗ್ರಹ ಮಾತ್ರ ಇರುವುದು]
ಮಾಸ—ತಿಂಗಳು
ಮಾಹೇಯ—ಕುಜ [ಭೂಮಿಯ ಮಗ]
ಮಿತ್ರ—ಸೂರ್ಯ, ಅನೂರಾಧೆ (೧೭ನೇ ನಕ್ಷತ್ರ)
ಮಿತ್ರಕ್ಷೇತ್ರ—ಮಿತ್ರ ಗ್ರಹದ ರಾಶಿ
ಮಿತ್ರಪುತ್ರ—ಶನಿ [ಸೂರ್ಯನ ಮಗ]
ಮಿಥುನ—ಮೂರನೆಯ ರಾಶಿ
ಮಿಹಿರ—ಸೂರ್ಯ
ಮೀನ—ಹನ್ನೆರಡನೆಯ ರಾಶಿ
ಮುಕ್ಕಾಲು ದೃಷ್ಟಿ—ಗ್ರಹವು ತಾನಿರುವ ಸ್ಥಾನದಿಂದ ೯೦ನೇ ಅಂಶ [ನಾಲ್ಕನೆಯ ಸ್ಥಾನ] ೨೧೦ನೇ ಅಂಶ [ಎಂಟನೆಯ ಸ್ಥಾನ] ಗಳನ್ನು ನೋಡುವುದು
ಮುನಿ—ಸಂಖ್ಯೆ ಏಳು
ಮುಸಲ—ಆಶ್ರಯಯೋಗಗಳಲ್ಲಿ ಒಂದು [ಸ್ಥಿರರಾಶಿಗಳಲ್ಲಿ ಏಳುಗ್ರಹಗಳೂ ಇರುವುದು]
[1] ಮುಹೂರ್ತ—ಎರಡು ಘಳಿಗೆಗಳ ಕಾಲ [ವಿವರ ೭೨ನೇ ಪುಟದಲ್ಲಿದೆ]
ಮುಹೂರ್ತ—ಶುಭಕಾರ್ಯಗಳನ್ನು ಮಾಡಲು ಯೋಗ್ಯವಾದ ಕಾಲ
ಮೂರ್ತಕಾಲ—ಸ್ಥೂಲಕಾಲ [ಪ್ರಾಣಕಾಲದಿಂದ ಮುಂದಿನ ವಿನಾಡಿ ನಾಡಿ ಮೊದಲಾದ ಕಾಲ]
ಮೂರ್ತಿ—ಲಗ್ನ
[2] ಮೂಲತ್ರಿಕೋಣ—ಗ್ರಹಗಳು ಉಚ್ಚಕ್ಷೇತ್ರಫಲಕ್ಕೆ ಸಮನಾದ ಫಲಕೊಡುವ ರಾಶಿ
ಮೃಗ—ಮಕರರಾಶಿ, ಮೃಗಶಿರೆ (೫ನೇ ನಕ್ಷತ್ರ)
ಮೃಗ+ಅಂಕ, +ಧರ—ಚಂದ್ರ
ಮೃಗ+ಅಧಿಪ, +ಅಧೀಶ, +ಇಂದ್ರ, +ಪತಿ, +ರಾಜ—ಸಿಂಹರಾಶಿ
ಮೃಗನಿಲಯ—ಮಕರರಾಶಿ
ಮೃಗಲಕ್ಷ್ಮಾತ್ಮಜ—ಬುಧ [ಚಂದ್ರನ ಮಗ]
ಮೃತಿಸ್ಥಾನ } —ಲಗ್ನದಿಂದ ಎಂಟನೆಯ ಸ್ಥಾನ
ಮೃತ್ಯುಗೃಹ }
ಮೇಷೂರಣ—ಹತ್ತನೆಯ ಸ್ಥಾನ
ಮೈತ್ರತಾರೆ—ಜನ್ಮನಕ್ಷತ್ರದಿಂದ ೮–೧೭–೨೬ನೇ ನಕ್ಷತ್ರಗಳು

---

[1] ಹಗಲು ರಾತ್ರಿ ಪ್ರಮಾಣಗಳು ಸಮನಾಗಿದ್ದಾಗ ಮಾತ್ರ ಮುಹೂರ್ತಕಾಲವು ಎರಡು ಘಳಿಗೆಗೆ ಸಮನಾಗುತ್ತದೆ. ಅವುಗಳ ನ್ಯೂನಾಧಿಕ್ಯದಿಂದ ಮುಹೂರ್ತಕಾಲದ ಪ್ರಮಾಣದಲ್ಲೂ ಕೆಲವು ನಿಮಿಷಗಳು ಹೆಚ್ಚುಕಡಮೆಯಾಗಬಹುದು.

[2] ಚಂದ್ರನನ್ನು ಬಿಟ್ಟು ಉಳಿದ ಗ್ರಹಗಳ ಮೂಲತ್ರಿಕೋಣವು ಸ್ವಕ್ಷೇತ್ರವೇ ಆಗಿರುತ್ತದೆ. ಸೂರ್ಯನಿಗೆ ಸಿಂಹರಾಶಿಯಲ್ಲಿ ಮೊದಲ ೨೦ ಅಂಶಗಳು ; ಚಂದ್ರನಿಗೆ ವೃಷಭರಾಶಿಯಲ್ಲಿ ೪ನೇ ಅಂಶದಿಂದ (೨೭ ಅಂಶಗಳು); ಕುಜನಿಗೆ ಮೇಷರಾಶಿಯಲ್ಲಿ ಮೊದಲ ೧೨ ಅಂಶಗಳು ; ಬುಧನಿಗೆ ಕನ್ಯಾರಾಶಿಯಲ್ಲಿ ೧೬ನೇ ಅಂಶದಿಂದ ೧೫ ಅಂಶಗಳು ; ಗುರುವಿಗೆ ಧನೂರಾಶಿಯಲ್ಲಿ ಮೊದಲ ೧೦ ಅಂಶಗಳು ; ಶುಕ್ರನಿಗೆ ತುಲಾರಾಶಿಯಲ್ಲಿ ಮೊದಲ ೫ ಅಂಶಗಳು ; ಶನಿಗೆ ಕುಂಭ ರಾಶಿಯಲ್ಲಿ ಮೊದಲ ೨೦ ಅಂಶಗಳು ; ಇವು ಗ್ರಹಗಳ ಮೂಲತ್ರಿಕೋಣಭಾಗಗಳು. ಈ ಅಂಶ ದಲ್ಲಿದ್ದಾಗ ಗ್ರಹವು ಮೂಲತ್ರಿಕೋಣದಲ್ಲಿದೆ ಎಂದು ತಿಳಿಯಬೇಕು.

ಯ—ಸಂಖ್ಯೆ ಒಂದು

ಯಮ—ಭರಣಿ (ಎನೇ ನಕ್ಷತ್ರ)

ಯಮಾಶೆ—ದಕ್ಷಿಣದಿಕ್ಕು

ಯವ—ಆಕೃತಿಯೋಗಗಳಲ್ಲಿ ಒಂದು [ಲಗ್ನ ಮತ್ತು ಏಳನೆಯ ಸ್ಥಾನಗಳಲ್ಲಿ ಪಾಪಗ್ರಹಗಳೂ ನಾಲ್ಕು ಮತ್ತು ಹತ್ತನೆಯ ಸ್ಥಾನಗಳಲ್ಲಿ ಶುಭಗ್ರಹಗಳೂ ಇರುವುದು]

ಯಾಮಿನೀಸ್ವಾಮಿ—ಚಂದ್ರ

ಯುಗ—ಸಂಖ್ಯೆ ನಾಲ್ಕು, ಸಂಖ್ಯಾಯೋಗಗಳಲ್ಲಿ ಒಂದು [ಏಳು ಗ್ರಹಗಳೂ ಎರಡು ರಾಶಿಗಳಲ್ಲಿರುವುದು]

ಯುವತೀ—ಕನ್ಯಾರಾಶಿ

ಯೂಪಯೋಗ—ಆಕೃತಿಯೋಗಗಳಲ್ಲಿ ಒಂದು [ಎಲ್ಲ ಗ್ರಹಗಳೂ ಲಗ್ನದಿಂದ ನಾಲ್ಕು ಸ್ಥಾನಗಳಲ್ಲಿರುವುದು]

ಯೋಗ—ಸೂರ್ಯಚಂದ್ರರ ಸ್ಫುಟಗಳನ್ನು ಸೇರಿಸಿ ಬರುವ ಯೋಗಸ್ಫುಟದ ಸನ್ನಿವೇಶವನ್ನು ತಿಳಿಸುವುದು [1][ಇದಕ್ಕೆ ನಿತ್ಯಯೋಗವೆಂದು ಹೆಸರು]. ಗೊತ್ತಾದ ಗ್ರಹ ಸನ್ನಿವೇಶ. ತಿಥಿ ವಾರ ನಕ್ಷತ್ರಗಳ ಸೇರುವಿಕೆಯಿಂದ ಫಲಗಳನ್ನು ತಿಳಿಸುವುದು.

ಯೋಗಾಯುರ್ದಾಯ—ಗಣಿತವಿಲ್ಲದೆ ಜನನ ಕಾಲದ ಯೋಗದಿಂದ ಉಂಟಾಗುವ ಆಯುರ್ದಾಯ

ರ—ಸಂಖ್ಯೆ ಎರಡು

ರಕ್ಷೋಗುರು—ಶುಕ್ರ

ರಜನಿ+ಕರ, +ನಾಥ—ಚಂದ್ರ

ರಜನೀಪ್ರಮಾಣ—ರಾತ್ರಿಯ ಪ್ರಮಾಣ

ರಜ್ಜು—ಆಶ್ರಮಯೋಗಗಳಲ್ಲಿ ಒಂದು [ಏಳು ಗ್ರಹಗಳೂ ಚರರಾಶಿಗಳಲ್ಲಿರುವುದು]

ರಜೋಗ್ರಹ—ಬುಧ ಶುಕ್ರರು

ರತ್ನ—ಸಂಖ್ಯೆ ಒಂಬತ್ತು

ರದನರಿಪು—ಸಿಂಹರಾಶಿ

ರಂಧ್ರ—ಸಂಖ್ಯೆ ಒಂಬತ್ತು, ಲಗ್ನದಿಂದ ಎಂಟನೆಯ ಸ್ಥಾನ

ರವಿ—ಸೂರ್ಯ

ರವಿಜ—ಶನಿ

ರಸ—ಸಂಖ್ಯೆ ಆರು

ರಸಾತಲ—ಲಗ್ನದಿಂದ ನಾಲ್ಕನೆಯ ಸ್ಥಾನ

ರಾತ್ರೀಶ—ಚಂದ್ರ

ರಾಶಿ—ಮೂವತ್ತು ಅಂಶಗಳು [ಭಚಕ್ರದ ಹನ್ನೆರಡನೆಯ ಒಂದು ಭಾಗ]

ರಿಕ್ತದಶೆ—ದುರ್ಬಲ ಗ್ರಹದ ದಶೆ

ರಿಪುಸ್ಥಾನ—ಲಗ್ನದಿಂದ ಆರನೆಯ ಸ್ಥಾನ

ರಿಃಫ—ಲಗ್ನದಿಂದ ಹನ್ನೆರಡನೆಯ ಸ್ಥಾನ

---

[1] ವಿಷ್ಕಂಭ ಪ್ರೀತಿ ಆಯುಷ್ಮಾನ್ ಸೌಭಾಗ್ಯ ಶೋಭನ ಅತಿಗಂಡ ಸುಕರ್ಮ ಧೃತಿ ಶೂಲ ಗಂಡ ವೃದ್ಧಿ ಧ್ರುವ ವ್ಯಾಘಾತ ಹರ್ಷಣ ವಜ್ರ ಸಿದ್ಧಿ ವ್ಯತೀಪಾತ ವರೀಯಾನ್ ಪರಿಘ ಶಿವ ಸಿದ್ಧ ಸಾಧ್ಯ ಶುಭ ಶುಕ್ಲ ಬ್ರಹ್ಮ ಐಂದ್ರ ವೈಧೃತಿ ಈ ಇಪ್ಪತ್ತೇಳು ನಿತ್ಯಯೋಗಗಳು. ನಕ್ಷತ್ರದಂತೆ ಒಂದು ಯೋಗಪ್ರಮಾಣ ೮೦೦ ಕಲೆಗಳು. ನಿರ್ದಿಷ್ಟಕಾಲದ ಯೋಗವನ್ನು ಆ ಕಾಲದ ಸೂರ್ಯಚಂದ್ರರ ಸ್ಫುಟಯೋಗದಿಂದ ಗಣಿತಮಾಡಿ ತಿಳಿಯಬೇಕು.

ರುದ್ರ—ಸಂಖ್ಯೆ ಹನ್ನೆರಡು

ರಥಿರ—ಕುಜ

ರೇಖಾಂಶ—ರೇಖಾದೇಶಕ್ಕೂ ನಮ್ಮ ದೇಶಕ್ಕೂ ಇರುವ ಪೂರ್ವಾಪರಾಂತರ [ತೊಂಬತ್ತು ಅಂಶಗಳಲ್ಲಿ ಅಕ್ಷಾಂಶವನ್ನು ಕಳೆದುಳಿದ ಅಂಶಗಳು]

ರೋಹಿಣಿ+ಈಶ, +ಭವ—ಚಂದ್ರ

ರೌದ್ರ—ಆರ್ದ್ರ (೬ನೇ ನಕ್ಷತ್ರ) ದಿನದ ಮೊದಲನೆಯ ಮುಹೂರ್ತ [ಸೂರ್ಯೋದಯದಿಂದ ನಲವತ್ತೆಂಟು ನಿಮಿಷಗಳ ಕಾಲ]

ಲ—ಸಂಖ್ಯೆ ಮೂರು

[1] ಲಗ್ನ—ಇಷ್ಟಕಾಲದಲ್ಲಿ ಪೂರ್ವಕ್ಷಿತಿಜದಲ್ಲಿ ಉದಯಿಸಿರುವ ರಾಶಿ

---

[1] ಲಗ್ನ ಮತ್ತು ಭಾವಗಳ ಆನಯನ ಕ್ರಮ—

ಇಷ್ಟಕಾಲದ ಸೂರ್ಯಸ್ಫುಟಕ್ಕೆ ಆ ಕಾಲದ ಅಯನಾಂಶವನ್ನು ಸೇರಿಸಿದರೆ ಸಾಯನ ಸೂರ್ಯಸ್ಫುಟವಾಗುತ್ತದೆ. ಸಾಯನ ಸೂರ್ಯನು ಇರುವ ರಾಶಿಯಲ್ಲಿ ಉಳಿಕೆಯಾದ ಅಂಶಗಳನ್ನು ನಾಡಿ ವಿನಾಡಿಗಳಲ್ಲಿ ಅನುಪಾತಮಾಡಿ ತಿಳಿದುಕೊಳ್ಳಬೇಕು. ಅನುಪಾತಕ್ರಮ—

ಮೂವತ್ತು ಅಂಶಗಳಿಗೆ ಸಾಯನ ಸೂರ್ಯನಿರುವ ಇಷ್ಟದೇಶದ ರಾಶಿ ಪ್ರಮಾಣವಾದರೆ ಅದೇ ರಾಶಿಯಲ್ಲಿ ಉಳಿದಿರುವ ಅಂಶಗಳಿಗೆ ಎಷ್ಟು? ಎಂದು ಅನುಪಾತ ಮಾಡಿ ಬರುವುದು ಇಷ್ಟಕಾಲದ ಸಾಯನ ಸೂರ್ಯನಿರುವ ರಾಶಿಯಲ್ಲಿ ಏಷ್ಯಘಳಿಗೆಗಳಾಗುತ್ತವೆ. ಈ ಏಷ್ಯಘಳಿಗೆಗೆ ಇಷ್ಟಕಾಲಕ್ಕೆ ಸಮನಾಗುವವರೆಗೂ ಮುಂದಿನ ರಾಶಿಗಳ ಕಾಲ ಪ್ರಮಾಣವನ್ನು ಕ್ರಮವಾಗಿ ಕೂಡಿಸಬೇಕು. ಕೊನೆಯ ಅಪೂರ್ಣ ರಾಶಿಯಲ್ಲಿ ಎಷ್ಟು ಕಾಲ ಗತವಾಗುತ್ತದೆಯೋ ಅದನ್ನು ತಿಳಿದು ಮೊದಲಿನಂತೆ ಪುನಃ ಅನುಪಾತಮಾಡಿ ಆ ರಾಶಿಯಲ್ಲಿ ಕಳೆದಿರುವ ಅಂಶ ಕಲೆಗಳನ್ನು ತಿಳಿಯಬೇಕು. ಇದು ಸಾಯನ ಲಗ್ನಸ್ಫುಟವಾಗುತ್ತದೆ. ಇದರಲ್ಲಿ ಅಯನಾಂಶವನ್ನು ಕಳೆದರೆ ಇಷ್ಟಕಾಲದ ಲಗ್ನಸ್ಫುಟವಾಗುತ್ತದೆ.

ಉದಾ.—ತಾ ೫.೯-೧೯೫೮ನೇ ಶುಕ್ರವಾರ ಬೆಳಗ್ಗೆ ೧೧ ಗಂಟೆಗೆ ಮೈಸೂರು ನಗರದಲ್ಲಿ ಉದಯಿಸಿರುವ ಲಗ್ನದ ಗಣಿತ. ಮೈಸೂರಿನಲ್ಲಿ ಆ ದಿವಸದ ಸೂರ್ಯೋದಯ ೬ ಗಂ. ೧೨ ನಿ.

ಇಷ್ಟಕಾಲ= ೧೧ ಗಂ. — ೬ ಗಂ. ೧೨ ನಿ. = ೪ ಗಂ. ೪೮ ನಿ. =೧೨ ಘಳಿಗೆಗಳು.

ಈ ಕಾಲದ ಸಾಯನ ಸೂರ್ಯಸ್ಫುಟ = ೫ ರಾ ೧೩ ಅಂ ೩೦ ಕ ೪೫ ವಿಕ. ಸಾಯನ ಸೂರ್ಯನು ಕನ್ಯಾ ರಾಶಿಯಲ್ಲಿರುತ್ತಾನೆ. ಈ ರಾಶಿಯಲ್ಲಿ ರವಿಯಿಂದ ಭುಕ್ತವಾಗದೆ ಉಳಿದಿರುವುದು = ೧೬ ಅಂ ೨೯ ಕ ೧೫ ವಿಕ = ೯೮೯.೨೫ ಕಲೆಗಳು. ಮೈಸೂರಿನಲ್ಲಿ ಕನ್ಯಾಲಗ್ನ ಪ್ರಮಾಣ= ೩೦೪ ವಿಘ.

ರಾಶಿ ಪ್ರಮಾಣ ೧೮೦೦ ಕಲೆಗಳಿಗೆ ೩೦೪ ವಿಘ. ಸಮನಾದರೆ

ಏಷ್ಯ ೯೮೯.೨೫ ಕಲೆಗಳಿಗೆ ಎಷ್ಟು?

$$= \frac{೯೮೯\cdot೨೫ \times ೩೦೪}{೧೮೦೦} = \frac{೩೦೦೭೩೨}{೧೮೦೬} = ೧೬೭ \text{ ವಿಘಳಿಗೆಗಳು}$$

| | ಘ. | ವಿಘ. |
|---|---|---|
| ∴ ಸಾಯನ ಸೂರ್ಯನಿರುವ ರಾಶಿಯಲ್ಲಿ ಏಷ್ಯಕಾಲ | = ೨ | ೪೭ |
| ಮುಂದಿನ ತುಲಾರಾಶಿಯ ಪ್ರಮಾಣ | = ೫ | ೪ |
| | ೭ | ೫೧ |

---

ಅಪೂರ್ಣರಾಶಿ ವೃಶ್ಚಿಕ ; ಇದರಲ್ಲಿ ಕಳೆದಿರುವುದು =ಇಷ್ಟಕಾಲ—೭ ಘ. ೫೧ ವಿಘ.= (೧೨ ಘ ೦ ವಿಘ)—(೭ ಘ ೫೧ ವಿಘ)= ೪ ಘ ೯ ವಿಘ.

ವೃಶ್ಚಿಕರಾಶಿ ಪ್ರಮಾಣ ೩೨೦ ವಿಘಳಿಗೆಗಳಿಗೆ ೧೮೦೦ ಕಲೆಗಳು ಸಮನಾದರೆ ವೃಶ್ಚಿಕರಾಶಿಯಲ್ಲಿ ಗತ ೨೪೯ ವಿಘಳಿಗೆಗಳಿಗೆ ಎಷ್ಟು ?

$$= \frac{೧೮೦೦ \times ೨೪೯}{೩೨೦} = \frac{೪೪೮೨೦೦}{೩೨೦} = ೧೪೦೦ \text{ ಕ } \frac{೨೦೦}{೩೨೦} \quad ೩೭ \text{ ವಿಕ}^{*}$$

∴ ಸಾಯನ ಲಗ್ನ ಸ್ಫುಟ = ೭ ರಾ ೨೩ ಅಂ ೨೦ ಕ ೩೭ ವಿಕ

ಇದರಲ್ಲಿ ಅಯನಾಂಶ ೨೩ ಅಂ ೧೫ ಕ ೩೫ವಿಕಲೆಗಳನ್ನು ಕಳೆದರೆ

ಬರುವುದು= ೭ ರಾ ೦ ಅಂ ೫ ಕ ೨ ವಿಕ. ಇದು ಲಗ್ನಸ್ಫುಟವಾಗುತ್ತದೆ.

ಇದಕ್ಕೆ ಆರು ರಾಶಿಗಳನ್ನು ಸೇರಿಸಿದರೆ ೧ ರಾ ೦ ಅಂ ೫ ಕ ೨ ವಿಕ. ಇದು ಸಪ್ತಮ ಲಗ್ನವಾಗುತ್ತದೆ. ಇದೇ ಕಾಲದಲ್ಲಿ ೪ ರಾ ೦ ಭಾ ೪೯ ಕ ೫೯ ವಿಕ. ಇದು [1] ದಶಮಲಗ್ನ ವಾಗುತ್ತದೆ. ಈ ದಶಮ ಲಗ್ನ ಸ್ಫುಟಕ್ಕೆ ಆರು ರಾಶಿಗಳನ್ನು ಸೇರಿಸಿದರೆ ಚತುರ್ಥ ಲಗ್ನ ಸ್ಫುಟವಾಗುತ್ತದೆ. ಈ ನಾಲ್ಕು ಸ್ಫುಟಗಳಿಂದ ಉಳಿದ ಭಾವಗಳ ಸ್ಫುಟಗಳನ್ನೂ ಭಾವಸಂಧಿ ಗಳನ್ನೂ ಅನಯನ ಮಾಡಬೇಕು.

ಲಗ್ನ ಸ್ಫುಟವನ್ನು ಚತುರ್ಥಭಾವ ಸ್ಫುಟದಲ್ಲಿ ಕಳೆದು ಉಳಿದುದನ್ನು ಆರರಿಂದ ಭಾಗಿಸಿ ಬಂದ ಲಬ್ಧವನ್ನು ಲಗ್ನಸ್ಫುಟಕ್ಕೆ ಸೇರಿಸಿದರೆ ಲಗ್ನ ದ್ವಿತೀಯ ಭಾವಗಳ ಸಂಧಿ ಸ್ಫುಟ ವಾಗುತ್ತದೆ. ಈ ಸಂಧಿ ಸ್ಫುಟಕ್ಕೆ ಆರರಿಂದ ಭಾಗಿಸಿ ಬಂದಿರುವ ಲಬ್ಧವನ್ನು ಸೇರಿಸಿದರೆ ದ್ವಿತೀಯಭಾವದ ಸ್ಫುಟವಾಗುತ್ತದೆ. ಹೀಗೆಯೇ ಚತುರ್ಥಭಾವದವರೆಗಿನ ಸಂಧಿ ಮತ್ತು ಭಾವ ಸ್ಫುಟಗಳು ಪುನಃ ಪುನಃ ಷಷ್ಠಾಂಶವನ್ನು ಸೇರಿಸುವುದರಿಂದ ಬರುತ್ತವೆ.

ಉದಾ.—ಲಗ್ನಸ್ಫುಟ= ೭ ರಾ ೦ ಅಂ ೫೭ ಕ ೨ ವಿಕ ಇದನ್ನು ಚತುರ್ಥಭಾವಸ್ಫುಟ ೧೦ ರಾ ೦ ಅಂ ೪೯ ಕ ೫೯ ವಿಕ. ಇವರಲ್ಲಿ ಕಳೆದು ಉಳಿದುದರ ಆರನೆಯ ಒಂದು ಭಾಗ = $\frac{೩ \text{ ರಾ } ೦ \text{ ಅಂ } ೪೪ \text{ ಕ } ೫೭ \text{ ವಿಕ}}{೬}$ = ೧೫ ಅಂ ೭ ಕ ೨೯.೫ ವಿಕ. ಇದನ್ನು ಲಗ್ನಸ್ಫುಟಕ್ಕೆ ಸೇರಿಸಿದರೆ ಲಗ್ನ ದ್ವಿತೀಯ ಭಾವಗಳ ಸಂಧಿಸ್ಫುಟ =(೭ ರಾ ೦ ಅಂ ೫೭ ಕ ೨ ವಿಕ)+(೧೫ ಅಂ ೭ ಕ ೨೯·೫ ವಿಕ)= ೭ ರಾ ೧೫ ಅಂ ೧೨ ಕ ೩೦·೫ ವಿಕ. ಇದಕ್ಕೆ ಷಷ್ಠಾಂಶ (೧೫ ಅಂ ೭ ಕ ೨೯.೫ ವಿಕ) ವನ್ನು ಸೇರಿಸಿದರೆ ಬರುವುದು = ೯ ರಾ ೦ ಅಂ ೨೦ ಕ ೧ ವಿಕ. ದ್ವಿತೀಯಭಾವ ಸ್ಫುಟವಾಗುತ್ತದೆ. ಇದಕ್ಕೆ ಷಷ್ಠಾಂಶವನ್ನು ಸೇರಿಸಿದರೆ ದ್ವಿತೀಯ ತೃತೀಯ ಭಾವಗಳ ಸಂಧಿಸ್ಫುಟವು ಬರುತ್ತದೆ= ೮ ರಾ ೧೫ ಅಂ ೨೭ಕ ೩೦.೫ ವಿಕ. ಇದಕ್ಕೆ ಷಷ್ಠಾಂಶ ವನ್ನು ಸೇರಿಸಿದರೆ ತೃತೀಯಭಾವ ಸ್ಫುಟವಾಗುತ್ತದೆ= ೯ ರಾ ೦ ಅಂ ೩೫ ಕ. ಇದಕ್ಕೆ ಷಷ್ಠಾಂಶವನ್ನು ಸೇರಿಸಿದರೆ ತೃತೀಯ ಚತುರ್ಥಭಾವಗಳ ಸಂಧಿಸ್ಫುಟವಾಗುತ್ತದೆ. = ೯ ರಾ ೧೫ ಅಂ ೪೨ ಕ ೨೯.೫ ವಿಕ. ಇದಕ್ಕೆ ಷಷ್ಠಾಂಶವನ್ನು ಸೇರಿಸಿದರೆ ಚತುರ್ಥಭಾವ ಸ್ಫುಟವಾಗುತ್ತದೆ. ಇದರಂತೆಯೆ ಚತುರ್ಥಭಾವ ಸ್ಫುಟವನ್ನು ಸಪ್ತಮಭಾವ ಸ್ಫುಟದಲ್ಲಿ ಕಳೆದು ಶೇಷವನ್ನು ಆರರಿಂದ ಭಾಗಿಸಿದರೆ ಬರುವ ಷಷ್ಠಾಂಶ= ೧೪ ಅಂ ೫೨ ಕ ೫೦.೫ ವಿಕ. ಇದನ್ನು ಚತುರ್ಥಭಾವ ಸ್ಫುಟಕ್ಕೆ ಮತ್ತೆ ಮತ್ತೆ ಸೇರಿಸುತ್ತ ಹೋದರೆ ಚತುರ್ಥಭಾವದಿಂದ ಸಪ್ತಮಭಾವದ ವರೆಗಿರುವ ಭಾವ ಮಧ್ಯ ಮತ್ತು ಭಾವಸಂಧಿ ಸ್ಫುಟಗಳಾಗುತ್ತವೆ. ಲಗ್ನ ಭಾವದಿಂದ ಸಪ್ತಮ ಭಾವದವರೆಗಿರುವ ಭಾವ ಮತ್ತು ಸಂಧಿಸ್ಫುಟಗಳಿಗೆ ಆರುರಾಶಿಗಳನ್ನು ಕೂಡಿದರೆ ಸಪ್ತಮಭಾವದಿಂದ ಲಗ್ನದವರೆಗಿರುವ ಭಾವಮಧ್ಯ ಮತ್ತು ಭಾವಸಂಧಿ ಸ್ಫುಟ ಗಳಾಗುತ್ತವೆ.

---

* ಗಣಿತ ಲಾಘವಕ್ಕಾಗಿ ಇಲ್ಲಿ ವಿಕಲಾಂಶ ಮಾತ್ರ ಗಣನೆಗೆ ತೆಗೆದುಕೊಂಡಿದೆ.

[1] ೩೭೫ ನೇ ಪುಟವನ್ನು ನೋಡಿ.

ಲಗ್ನ+ಆವಸಥ, +ಸದನ—ಲಗ್ನರಾಶಿ

ಲಗ್ನಾಷ್ಟಕವರ್ಗ— ಜನ್ಮಲಗ್ನದಿಂದ ಶುಭಫಲಗಳನ್ನು ಕೊಡುವ ರಾಶಿಯನ್ನು ತಿಳಿಸುವ ಬಿಂದುಗಳ ಸಮೂಹ

[1] ಲಂಕೋದಯ—ನಿರಕ್ಷದೇಶವಾದ ಲಂಕೆಯಲ್ಲಿ ಮೇಷ ಮೊದಲಾದ ರಾಶಿಗಳ ಘಟೀ ವಿಘಟೀ ಪ್ರಮಾಣ

ಲಲನಾ—ಕನ್ಯಾರಾಶಿ

ಲಾಭಗೃಹ—ಲಗ್ನದಿಂದ ಹನ್ನೊಂದನೆಯ ಸ್ಥಾನ

ಲಿಪ್ತಿ—ಕಲೆ, ಅಂಶದ ಅರುವತ್ತನೆಯ ಒಂದು ಭಾಗ

ಲೇಖಾ—ಲಗ್ನ

ಲೋಚನ—ಸಂಖ್ಯೆ ಎರಡು

ಲೋಹಿತಾಂಗ —ಕುಜ

| | | ರಾ | ಭಾ | ಕ | ವಿಕ |
|---|---|---|---|---|---|
| ಲಗ್ನಸ್ಫುಟ | ... | ೭ | ೦ | ೫ | ೨ |
| ಲಗ್ನ ದ್ವಿತೀಯ ಭಾವಸಂಧಿಸ್ಫುಟ | ... | ೭ | ೧೫ | ೧೨ | ೩೧.೫ |
| ದ್ವಿತೀಯ ಭಾವ ಸ್ಫುಟ | ... | ೮ | ೦ | ೨೦ | ೧ |
| ದ್ವಿತೀಯ ತೃತೀಯಭಾವ ಸಂಧಿಸ್ಫುಟ | ... | ೮ | ೧೫ | ೨೭ | ೩೦.೫ |
| ತೃತೀಯಭಾವ ಸ್ಫುಟ | ... | ೯ | ೦ | ೩೫ | ೦ |
| ದ್ವಿತೀಯ ಚತುರ್ಥಭಾವಸಂಧಿಸ್ಫುಟ | ... | ೯ | ೧೫ | ೪೨ | ೪೯.೫ |
| ಚತುರ್ಥಭಾವ ಸ್ಫುಟ | ... | ೧೦ | ೦ | ೪೯ | ೫೯ |
| ಚತುರ್ಥ ಪಂಚಮ ಭಾವಸಂಧಿಸ್ಫುಟ | ... | ೧೦ | ೧೫ | ೪೨ | ೨೯.೫ |
| ಪಂಚಮಭಾವ ಸ್ಫುಟ | ... | ೧೧ | ೦ | ೩೫ | ೦ |
| ಪಂಚಮ ಷಷ್ಠಭಾವ ಸಂಧಿಸ್ಫುಟ | ... | ೧೧ | ೧೫ | ೨೭ | ೩೦.೫ |
| ಷಷ್ಠಭಾವ ಸ್ಫುಟ | ... | ೦ | ೦ | ೨೦ | ೧ |
| ಷಷ್ಠಸಪ್ತಮ ಭಾವಸಂಧಿಸ್ಫುಟ | ... | ೦ | ೧೫ | ೧೨ | ೩೧.೫ |
| ಸಪ್ತಮಭಾವಸ್ಫುಟ | ... | ೧ | ೦ | ೫ | ೨ |
| ಸಪ್ತಮಾಷ್ಟಮ ಭಾವಸಂಧಿಸ್ಫುಟ | ... | ೧ | ೧೫ | ೧೨ | ೩೧.೫ |
| ಅಷ್ಟಮಭಾವ ಸ್ಫುಟ | ... | ೨ | ೦ | ೨೦ | ೧ |
| ಅಷ್ಟಮ ನವಮಭಾವ ಸಂಧಿಸ್ಫುಟ | ... | ೨ | ೧೫ | ೨೭ | ೩೦.೫ |
| ನವಮಭಾವ ಸ್ಫುಟ | ... | ೩ | ೦ | ೩೫ | ೦ |
| ನವಮದಶಮಭಾವಸಂಧಿ ಸ್ಫುಟ | ... | ೩ | ೧೫ | ೪೨ | ೪೯.೫ |
| ದಶಮಭಾವ ಸ್ಫುಟ | ... | ೪ | ೦ | ೪೯ | ೫೯ |
| ದಶಮ ಏಕಾದಶ ಭಾವಸಂಧಿ ಸ್ಫುಟ | ... | ೪ | ೧೫ | ೪೨ | ೨೯.೫ |
| ಏಕಾದಶಭಾವ ಸ್ಫುಟ | ... | ೫ | ೦ | ೩೫ | ೦ |
| ಏಕಾದಶ ದ್ವಾದಶಭಾವ ಸಂಧಿಸ್ಫುಟ | ... | ೫ | ೧೫ | ೨೭ | ೩೦.೫ |
| ದ್ವಾದಶಭಾವ ಸ್ಫುಟ | ... | ೬ | ೦ | ೨೦ | ೧ |
| ದ್ವಾದಶಲಗ್ನ ಭಾವಸಂಧಿ ಸ್ಫುಟ | ... | ೬ | ೧೫ | ೧೨ | ೩೧.೫ |

[1] ಎಲ್ಲ ರಾಶಿಗಳ ಪ್ರಮಾಣ ಮೂವತ್ತು ಅಂಶಗಳಾದರೂ ಪ್ರತಿದೇಶದ ಅಹೋರಾತ್ರ ವೃತ್ತವು ಬೇರೆ ಬೇರೆಯಾಗಿರುವುದರಿಂದ ಅಕ್ಷಾಂಶಕ್ಕೆ ತಕ್ಕಂತೆ ರಾಶಿಗಳ ಪ್ರಮಾಣವು ಘಟೀ ವಿಘಟೀಗಳಲ್ಲಿ ಬೇರೆ ಬೇರೆಯಾಗಿರುತ್ತವೆ. ದಶಮಲಗ್ನವನ್ನು ಅನುಮಾನ ಮಾಡುವಾಗ ಲಂಕೋದಯವನ್ನು ಗ್ರಹಿಸಬೇಕು.

ವಕ್ರ—ಕುಜ—ವ—ಸಂಖ್ಯೆ ನಾಲ್ಕು

[1] ವಕ್ರಗತಿ—ವಿಪರೀತಗತಿ [ಹಿಂದುಹಿಂದಕ್ಕೆ ಹೋಗುವುದು]

ವಕ್ರಾಲಯ—ಕುಜನ ರಾಶಿ [ಮೇಷ ವೃಶ್ಚಿಕಗಳು]

ವಜ್ರ—ಆಕೃತಿಯೋಗಗಳಲ್ಲಿ ಒಂದು [ಲಗ್ನ ಸಪ್ತಮ ಕೇಂದ್ರಗಳಲ್ಲಿ ಶುಭ ಗ್ರಹಗಳೂ ಚತುರ್ಥ ದಶಮ ಕೇಂದ್ರಗಳಲ್ಲಿ ಪಾಪಗ್ರಹಗಳೂ ಇರುವುದು]

ವಣಿಜೋದಯ—ತುಲಾಲಗ್ನ

ವಧೂಗ್ಗೃಹ—ಕನ್ಯಾರಾಶಿ

ವನಜ+ಅರಿ, +ದ್ವಿಟ್, +ರಿಪು—ಚಂದ್ರ

ವನಜಾತಾಹಿತ—ಚಂದ್ರ

ವನಜದ್ವಿಟ್ಸುತ<br>ವನಜಾತಾಹಿತಸೂನು } —ಬುಧ [ಚಂದ್ರನ ಮಗ]

ವರ್ಗ—ಷಡ್ವರ್ಗ

ವರ್ಗಣ—ಗುಣನ

ವರ್ಗೋತ್ತಮಾಂಶ—ಲಗ್ನರಾಶಿಯ ಹೆಸರಿನ ನವಾಂಶ

ವರ್ಷಋತು—ಶ್ರಾವಣ ಭಾದ್ರಪದ ಮಾಸಗಳು

ವಸಂತಋತು—ಚೈತ್ರ ವೈಶಾಖ ಮಾಸಗಳು

ವಸು—ಸಂಖ್ಯೆ ಎಂಟು, ಧನಿಷ್ಠೆ (೨೩ ನೇ ನಕ್ಷತ್ರ)

ವಸುಧಾ+ಜ, +ತನಯ, +ನಂದನ, +ಪುತ್ರ—ಕುಜ [ಭೂಮಿಯ ಮಗ]

ವಹ್ನಿ—ಮೂರು, ಕೃತ್ತಿಕೆ (೩ ನೇ ನಕ್ಷತ್ರ)

ವಾಕ್+ಈಶ, +ಪತಿ—ಗುರು

ವಾಪೀ—ಆಕೃತಿಯೋಗಗಳಲ್ಲೊಂದು [ನಾಲ್ಕು ಆಪೋಕ್ಲೀಮರಾಶಿಗಳಲ್ಲಾಗಲಿ ನಾಲ್ಕು ಪಣಫರ ರಾಶಿಗಳಲ್ಲಾಗಲಿ ಎಲ್ಲ ಗ್ರಹಗಳೂ ಇರುವುದು]

ವಾಯು—ಸಂಖ್ಯೆ ಏಳು, ಸ್ವಾತಿ (೧೫ ನೇ ನಕ್ಷತ್ರ)

ವಾರ—[2] ಏಳು ದಿನಗಳ ಕಾಲ

ವಾರ್ಧಕ್ಯ—ಗ್ರಹಗಳು ಸೂರ್ಯನ ಸಾಹಚರ್ಯದಿಂದ ಅಸ್ತವಾಗುವುದಕ್ಕೆ ಮೊದಲು ಇರುವ ಅವಸ್ಥೆ

ವಾಶ್ಚರ ರಾಶಿ—ಜಲರಾಶಿ

---

[1] ಆಕರ್ಷಣಶಕ್ತಿ ವಿಶೇಷದಿಂದ ತಾರಾಗ್ರಹಗಳಿಗೆ ಮಾತ್ರ ಈ ಗತಿ ಇರುತ್ತದೆ.

[2] ಈ ದಿವಸಗಳನ್ನು ಗ್ರಹಗಳ ಹೆಸರಿನಿಂದಲೇ ಕರೆಯುತ್ತಾರೆ. ನಿರಕ್ಷದೇಶವಾದ ಲಂಕೆಯಲ್ಲಿ ಅರ್ಧರಾತ್ರಿಗೆ ವಾರಪ್ರವೃತ್ತಿಯಾಗುತ್ತದೆಂದು ಸಿದ್ಧಾಂತ ಗ್ರಂಥಗಳಲ್ಲಿದೆ; ಸೂರ್ಯೋದಯದಿಂದ ವಾರಗಣನೆಯು ಈಗ ರೂಢಿಯಲ್ಲಿದೆ ವಾರಗಳಲ್ಲಿ ಗ್ರಹಾಧಿರಾಜನಾದ ಸೂರ್ಯನ ವಾರವೇ ಮೊದಲು ಅಲ್ಲಿಂದ ಮುಂದೆ ಕಕ್ಷಾಕ್ರಮವನ್ನನುಸರಿಸಿ [ಸೂರ್ಯ ಶುಕ್ರ ಬುಧ ಚಂದ್ರ ಶನಿ ಗುರು ಕುಜ] ಈ ಗ್ರಹಗಳು ಕ್ರಮವಾಗಿ ಮತ್ತೆ ಮತ್ತೆ ಒಂದೊಂದು ಗಂಟೆ ಕಾಲಕ್ಕೆ ಅಧಿಪತಿಗಳಾಗಿರುವುದರಿಂದ ಸೂರ್ಯನ ಆಧಿಪತ್ಯದ ಕಾಲದಿಂದ ೨೫ ನೇ ಗಂಟೆ ಎಂದರೆ ಮಾರನೆಯ ದಿನದ ಸೂರ್ಯೋದಯ ಕಾಲದಲ್ಲಿ ಚಂದ್ರನ ಆಧಿಪತ್ಯಕಾಲವಿರುವುದರಿಂದ ಆ ದಿವಸಕ್ಕೆ ಸೋಮವಾರವೆಂದೂ ಅಲ್ಲಿಂದ ೨೫ ನೇ ಗಂಟೆಯಲ್ಲಿ ಕುಜನ ಆಧಿಪತ್ಯ ಕಾಲವಿರುವುದರಿಂದ ಆ ದಿವಸಕ್ಕೆ ಮಂಗಳವಾರವೆಂದೂ ಇದೇ ಕ್ರಮದಲ್ಲಿ ಆಯಾ ದಿನಗಳ ಸೂರ್ಯೋದಯ ಕಾಲದಲ್ಲಿರುವ ಗ್ರಹದ ಕಾಲವಶದಿಂದ ಆಯಾ ದಿನವನ್ನು ಆಯಾ ಗ್ರಹದ ಹೆಸರಿನಿಂದಲೇ ಕರೆಯುವುದು ರೂಢಿಯಲ್ಲಿ ಬಂದಿದೆ. ಈ ಕ್ರಮವನ್ನನುಸರಿಸಿ ಭಾನು ಸೋಮ ಮಂಗಳ ಬುಧ ಗುರು ಶುಕ್ರ ಶನಿವಾರಗಳು ಕ್ರಮವಾಗಿ ಪುನಃ ಪುನಃ ಆವೃತ್ತಿಯಾಗಿ ಬರುತ್ತವೆ.

ವಿಕಲೆ—ಕಲೆಯ ಅರುವತ್ತನೆಯ ಒಂದು ಭಾಗ
ವಿಕ್ರಮಸ್ಥಾನ—ಲಗ್ನದಿಂದ ಮೂರನೆಯ ಸ್ಥಾನ
ವಿಘಟಿ—ವಿಘಳಿಗೆ [ಘಳಿಗೆಯ ಅರುವತ್ತನೆಯ ಒಂದು ಭಾಗ. ೨½ ವಿಘಳಿಗೆ = ೧ ನಿಮಿಷ]
ವಿತ್ತಸ್ಥಾನ—ಲಗ್ನದಿಂದ ಎರಡನೆಯ ಸ್ಥಾನ
ವಿಧು—ಚಂದ್ರ
ವಿಧುಂತುದ—ರಾಹು
ವಿನಾಡಿ—ವಿಘಳಿಗೆ [ನಾಡಿಯ ಅರುವತ್ತನೆಯ ಒಂದು ಭಾಗ. ೨½ ವಿನಾಡಿ = ೧ ನಿಮಿಷ]
ವಿನಾಶಸ್ಥಾನ—ಲಗ್ನದಿಂದ ಎಂಟನೆಯ ಸ್ಥಾನ
ವಿಪತ್ತಾರೆ—ಜನ್ಮನಕ್ಷತ್ರದಿಂದ ೩-೧೨-೨೧ ನೇ ನಕ್ಷತ್ರಗಳು
ವಿರೋಧಿಭವನ—ಲಗ್ನದಿಂದ ಆರನೆಯ ಸ್ಥಾನ
ವಿಲಗ್ನ—ಲಗ್ನ [ಇಷ್ಟಕಾಲದಲ್ಲಿ ಕ್ಷಿತಿಜದಲ್ಲುದಿಸಿರುವ ರಾಶಿ]
ವಿಲಿಪ್ತಿ—ಲಿಪ್ತಿಯ ಅರುವತ್ತನೆಯ ಒಂದು ಭಾಗ
[1] ವಿಶೇಷದೃಷ್ಟಿ—ಕುಜ ಗುರು ಶನಿಗಳಿಗಿರುವ ಅಸಾಧಾರಣ ದೃಷ್ಟಿ
ವಿಶ್ವಂಭರಾಪುತ್ರ—ಕುಜ
ವಿಷಮ ರಾಶಿ—ಮೇಷ ಮಿಥುನ ಸಿಂಹ ತುಲಾ ಧನುಸ್ಸು ಕುಂಭ ರಾಶಿಗಳು
ವಿಷಯ—ಸಂಖ್ಯೆ ಐದು
ವಿಹಗ—ಆಕೃತಿಯೋಗಗಳಲ್ಲೊಂದು [ಚತುರ್ಥ ದಶಮ ಕೇಂದ್ರಗಳಲ್ಲಿ ಎಲ್ಲ ಗ್ರಹಗಳೂ ಇರುವುದು]
ವೃಶ್ಚಿಕ—ಎಂಟನೆಯ ರಾಶಿ
ವೃಷ, ವೃಷಭ—ಎರಡನೆಯ ರಾಶಿ
ವೇಶ್ಮ—ಲಗ್ನದಿಂದ ನಾಲ್ಕನೆಯ ಸ್ಥಾನ [ಕೆಲವುಕಡೆ ಲಗ್ನಕ್ಕೂ ಪ್ರಯೋಗವಿದೆ]
ವೈನಾಶಿಕರ್ಕ್ಷ—ಜನ್ಮನಕ್ಷತ್ರದಿಂದ ಇಪ್ಪತ್ತಮೂರನೆಯ ನಕ್ಷತ್ರ
ವೈರಿ—ಲಗ್ನದಿಂದ ಆರನೆಯ ಸ್ಥಾನ
ವೈಶ್ವಾನರತ್ರ್ಯಂಶ—ಅಗ್ನಿ [ಪಾಪ]ದ್ರೇಕ್ಕಾಣ
ವೈಷ್ಣವ—ಶ್ರವಣ (೨೨ನೇ ನಕ್ಷತ್ರ)
ವ್ಯಯ—ಲಗ್ನದಿಂದ ಹನ್ನೆರಡನೆಯ ಸ್ಥಾನ
ವ್ಯಾಪಾರ, ವ್ಯೋಮಸ್ಥಾನ—ಲಗ್ನದಿಂದ ಹತ್ತನೆಯ ಸ್ಥಾನ
ವ್ಯೋಮ+ಗ, +ಚರ, +ಚಾರಿ—ಗ್ರಹ
ಶ—ಸಂಖ್ಯೆ ಐದು
ಶಕಟ—ಆಕೃತಿಯೋಗಗಳಲ್ಲೊಂದು [ಲಗ್ನ ಮತ್ತು ಸಪ್ತಮ ಕೇಂದ್ರದಲ್ಲಿ ಎಲ್ಲ ಗ್ರಹಗಳೂ ಇರುವುದು]
ಶಕಾಬ್ದ—ಶಕನೃಪನ ಕಾಲದಿಂದ ಲೆಕ್ಕಮಾಡುವ ವರ್ಷಗಣನೆ
ಶಕ್ತಿ—ಆಕೃತಿಯೋಗಗಳಲ್ಲೊಂದು [ಸಪ್ತಮ-ದಶಮ ಕೇಂದ್ರಗಳ ಮಧ್ಯೆ ಎಲ್ಲ ಗ್ರಹಗಳೂ ಇರುವುದು]

---

[1] ಕುಜನು ಚತುರ್ಥಾಷ್ಟಮಸ್ಥಾನಗಳನ್ನೂ ಗುರುವು ಪಂಚಮ ನವಮ ಸ್ಥಾನಗಳನ್ನೂ ಶನಿಯು ತೃತೀಯ ದಶಮ ಸ್ಥಾನಗಳನ್ನೂ ವಿಶೇಷ ದೃಷ್ಟಿಯಿಂದ ನೋಡುತ್ತಾನೆ.

ಶತಪತ್ರ+ಅರಿ, +ಶತ್ರು—ಚಂದ್ರ
ಶತಪತ್ರಸಖ—ಸೂರ್ಯ
ಶತಮಖಮಹತ್ತರ—ಗುರು
[1] ಶತ್ರು—ಉದಾಸೀನ ಮತ್ತು ಮಿತ್ರನಲ್ಲದ ಗ್ರಹ
ಶತ್ರುಗೃಹ—ಲಗ್ನದಿಂದ ಆರನೆಯ ಸ್ಥಾನ
ಶತ್ರುನಿವಾಸ—ಶತ್ರುಗ್ರಹದ ರಾಶಿ
ಶನೈಶ್ಚರ—ಶನಿ
ಶನ್ಯಷ್ಟಕವರ್ಗ—ಶನಿಯು ತಾನಿರುವ ರಾಶಿಯಿಂದ ಶುಭ ಫಲಗಳನ್ನು ಕೊಡುವ ರಾಶಿಯನ್ನು ತಿಳಿಸುವ ಬಿಂದುಗಳ ಸಮೂಹ
ಶಫರ—ಮೀನರಾಶಿ
ಶರ—ಸಂಖ್ಯೆ ಐದು
ಶರದೃತು—ಆರು ಋತುಗಳಲ್ಲೊಂದು [ಆಶ್ವಯುಜ ಕಾರ್ತಿಕ ಮಾಸಗಳು]
ಶರಾಸನ—ಧನೂರಾಶಿ
ಶಶ+ಅಂಕ, +ಧರ, +ಲಕ್ಷ್ಮ, +ಲಾಂಛನ } —ಚಂದ್ರ
ಶಶಿ
ಶಶಾಂಕಜ—ಬುಧ [ಚಂದ್ರನ ಮಗ]
ಶಶಿಗೇಹ—ಕರ್ಕಟಕ ರಾಶಿ
ಶಶಿಭ—ಮೃಗಶಿರೆ (೫ನೇ ನಕ್ಷತ್ರ)
ಶಾಕ್ವರ—ವೃಷಭ ರಾಶಿ
ಶಾಶಾಂಕಿ—ಬುಧ [ಚಂದ್ರನ ಮಗ]
ಶಿಖಿ—ಸಂಖ್ಯೆ ಮೂರು
ಶಿಶಿರಋತು—ಆರು ಋತುಗಳಲ್ಲೊಂದು [ಮಾಘ ಫಾಲ್ಗುಣ ಮಾಸಗಳು]
ಶಿಶಿರ+ಕರ, +ಪ್ರದ್ಯುತಿ, +ಪ್ರದ್ಯೋತ } —ಚಂದ್ರ
ಶೀತ+ಅಂಶು, +ಕಿರಣ, +ಗು, +ಮಯೂಖ, +ರೋಚಿ
ಶೀತರುಕ್+ತನೂಜಾತ, +ನಂದನ, +ಸುತ—ಬುಧ
ಶೀರ್ಷೋದಯ ರಾಶಿ—ಸಿಂಹ ಕನ್ಯಾ ತುಲಾ ವೃಶ್ಚಿಕ ಕುಂಭ ರಾಶಿಗಳು
ಶುಕ್ರಾಷ್ಟಕವರ್ಗ—ಶುಕ್ರನು ತಾನಿರುವ ರಾಶಿಯಿಂದ ಶುಭಫಲಗಳನ್ನು ಕೊಡುವ ರಾಶಿಯನ್ನು ತಿಳಿಸುವ ಬಿಂದುಗಳ ಸಮೂಹ
ಶುಕ್ಲಪಕ್ಷ—ಪ್ರಥಮಾತಿಥಿಯಿಂದ ಪೂರ್ಣಿಮಾತಿಥಿ ಪೂರ್ತಿ ಇರುವ ಹದಿನೈದು ತಿಥಿಗಳ ಕಾಲ
ಶುಕ್ಲೇತರಪಕ್ಷ—ಕೃಷ್ಣಪಕ್ಷ
ಶೂನ್ಯ—ಸೊನ್ನೆ
ಶೂರ್ಪ—ವಿಶಾಖೆ (೧೬ ನೇ ನಕ್ಷತ್ರ)
ಶೃಂಗಾಟಕ—ಆಕೃತಿಯೋಗಗಳಲ್ಲೊಂದು [ಲಗ್ನ ಪಂಚಮ ನವಮ ರಾಶಿಗಳಲ್ಲಿ ಏಳುಗ್ರಹಗಳೂಇರುವುದು]
ಶೌರ್ಯಸ್ಥಾನ—ಲಗ್ನದಿಂದ ಮೂರನೆಯ ಸ್ಥಾನ
ಶ್ರವಿಷ್ಠಾ—ಧನಿಷ್ಠೆ (೨೩ ನೇ ನಕ್ಷತ್ರ)
ಷ—ಸಂಖ್ಯೆ ಆರು

[1] ವಿವರ ೩೭೮ ನೇ ಪುಟದಲ್ಲಿದೆ.

ಷಡ್ಬಲ—ಸ್ಥಾನ ಚೇಷ್ಟಾ ನಿಸರ್ಗ ಕಾಲ ದಿಕ್ ದೃಷ್ಟಿ ಎಂಬ ಗ್ರಹಗಳ ಆರು ವಿಧವಾದ ಬಲ

ಷಡ್ವರ್ಗ—ಲಗ್ನ ಹೋರೆ ದ್ರೇಕ್ಕಾಣ ನವಾಂಶ ದ್ವಾದಶಾಂಶ ತ್ರಿಂಶಾಂಶ ಈ ಆರು ವಿಧವಾದ ವರ್ಗ

ಸ—ಸಂಖ್ಯೆ ಏಳು

ಸಂವತ್ಸರ—ಗುರುವಿನ ಮಧ್ಯಮ ರಾಶಿ ಭೋಗಕಾಲ

ಸಂಹಿತಾಸ್ಕಂಧ—ಗ್ರಹಗಳ ಸ್ಥಿತಿಯಿಂದ ಪ್ರಪಂಚಕ್ಕೆ ಆಗುವ ಫಲಗಳನ್ನು ತಿಳಿಸುವ ಜ್ಯೋತಿಶ್ಶಾಸ್ತ್ರದ ಒಂದು ಶಾಖೆ

ಸಂಕ್ರಂದನ ಗುರು—ಬೃಹಸ್ಪತಿ, ಗುರು

ಸಂಕ್ರಮಣ—ಸೂರ್ಯನು ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಚಲಿಸುವುದು

ಸಂಖ್ಯಾಯೋಗ—ನಾಭಸಯೋಗಗಳಲ್ಲಿ ಒಂದು [ಸಂಖ್ಯಾಯೋಗಗಳು ಏಳು]

ಸಂಗವಕಾಲ—ಪ್ರಾತಃಕಾಲವಾದ ಮೇಲೆ ಆರು ಘಳಿಗೆ ಕಾಲ [ಅಹಸ್ಸಿನ ಐದನೇ ಒಂದು ಅಂಶ]

ಸಂಘಾತರ್ಕ್ಷ—ಜನ್ಮ ನಕ್ಷತ್ರದಿಂದ ಹದಿನಾರನೆಯ ನಕ್ಷತ್ರ

ಸತ್ವಗ್ರಹ—ಗುರು ಚಂದ್ರ ಸೂರ್ಯರು

ಸದನ—ರಾಶಿ

ಸದನ್ಯಗ್ರಹ—ಅಶುಭಗ್ರಹ

ಸದ್ಗ್ರಹ—ಶುಭಗ್ರಹ

ಸಂದುದು—ಕಳೆದುದು

ಸಪ್ತರ್ಷಿ—ವಿವರ ೮೬ನೇ ಪುಟದಲ್ಲಿದೆ

ಸಮೀರಣ—ಸಂಖ್ಯೆ ಏಳು; ಸ್ವಾತಿ (೧೫ನೇ ನಕ್ಷತ್ರ)

ಸಮುದ್ರ—ಆಕೃತಿ ಯೋಗಗಳಲ್ಲೊಂದು [ಲಗ್ನದಿಂದ ೨-೪-೬-೮-೧೦-೧೨ ನೇ ಸ್ಥಾನಗಳಲ್ಲಿ ಏಳು ಗ್ರಹಗಳೂ ಇರುವುದು]

ಸಂಪತ್ತಾರೆ—ಜನ್ಮನಕ್ಷತ್ರದಿಂದ ೨-೧೧-೨೦ ನೇ ನಕ್ಷತ್ರಗಳು

ಸಂಪೂರ್ಣದಶೆ—ಷಡ್ಬಲಗಳಿಂದ ಕೂಡಿರುವ ಗ್ರಹದ ದಶೆ

ಸರಸಿಜ+ಬಂಧು, +ಮಿತ್ರ } —ಸೂರ್ಯ
ಸರಸೀ+ಜಾತಸಖ, +ರುಹಬಾಂಧವ }

ಸರೀಸೃಪರಾಶಿ—ವೃಶ್ಚಿಕರಾಶಿ

ಸರ್ಪದ್ರೇಕ್ಕಾಣ—ವೃಶ್ಚಿಕರಾಶಿಯ ಮೊದಲನೆಯ ಮತ್ತು ಕರ್ಕಟಕ ಮೀನ ರಾಶಿಗಳ ಕೊನೆಯ ದ್ರೇಕ್ಕಾಣಗಳು

ಸರ್ಪಯೋಗ—ದಲಯೋಗಗಳಲ್ಲೊಂದು [ಮೂರು ಕೇಂದ್ರ ಸ್ಥಾನಗಳಲ್ಲಿ ಪಾಪಗ್ರಹಗಳಿದ್ದು ಶುಭಗ್ರಹ ಕೇಂದ್ರದಲ್ಲಿಲ್ಲದಿರುವುದು]

ಸವಿತೃ—ಸೂರ್ಯ

ಸವ್ಯರಾಶಿಗಳು—ಮೇಷಾದಿ ಆರು ರಾಶಿಗಳು

ಸಹಜಸ್ಥಾನ—ಲಗ್ನದಿಂದ ಮೂರನೆಯ ಸ್ಥಾನ

ಸಹಸ್ರರಶ್ಮಿತನಯ—ಶನಿ [ಸೂರ್ಯನ ಮಗ]

ಸಹೋತ್ಥ—ಲಗ್ನದಿಂದ ಮೂರನೆಯ ರಾಶಿ

ಸಾಂವತ್ಸರಿಕ—ಜೋಯಿಸ

ಸಾಮುದಾಯ—ಜನ್ಮನಕ್ಷತ್ರದಿಂದ ಹದಿನೆಂಟನೆಯ ನಕ್ಷತ್ರ

ಸಾಯಂಕಾಲ—ಅಪರಾಹ್ಣಕಾಲದಿಂದ ಮುಂದೆ [ಸೂರ್ಯೋದಯಾದಿ ೨೪ ಘಳಿಗೆ ಮೇಲೆ] ಆರು ಘಳಿಗೆ ಕಾಲ [ಅಹಸ್ಸಿನ ಕೊನೆಯ ಐದನೇ ಒಂದು ಅಂಶ]

ಸಾವನ—ಗ್ರಹ ಮತ್ತು ನಕ್ಷತ್ರಗಳ ಉದಯಕಾಲವನ್ನನುಸರಿಸಿ ವಿಭಕ್ತವಾಗಿರುವ ಕಾಲ

ಸಿತ—ಶುಕ್ರ

ಸುಖಸ್ಥಾನ—ನಾಲ್ಕನೆಯ ಸ್ಥಾನ

ಸುದತಿ—ಕನ್ಯಾರಾಶಿ

ಸುಧಾ + ಕರ, + ಕಿರಣ, + ಜನ್ಮ, + ಮರೀಚಿ, + ರುಚಿ, + ರೋಚಿ, + ಸಂಭವ, + ಸಂಭೂತ —ಚಂದ್ರ

ಸುಧಾಜಾತಸುತ—ಬುಧ [ಚಂದ್ರನ ಮಗ]

ಸುನಫಾ—ಚಾಂದ್ರಯೋಗಗಳಲ್ಲೊಂದು [ಚಂದ್ರನಿಗೆ ಎರಡನೆಯ ಸ್ಥಾನದಲ್ಲಿ ತಾರಾಗ್ರಹವಿರುವುದು]

ಸುಂದರಿ—ಕನ್ಯಾರಾಶಿ

ಸುರ + ಇಂದ್ರಾಮಾತ್ಯ, + ನಾಥೇಜ್ಯ, + ವಂದ್ಯ, + ಸಚಿವ—ಗುರು

ಸುಸ್ಥಾನ—ಲಗ್ನದಿಂದ ಆರು ಎಂಟು ಹನ್ನೆರಡನೆಯ ಸ್ಥಾನಗಳನ್ನು ಬಿಟ್ಟು ಉಳಿದ ಸ್ಥಾನಗಳು

ಸುಹೃದ್ಗೃಹ—ಮಿತ್ರಕ್ಷೇತ್ರ

ಸುಹೃದ್ಗ್ರಹ—ಮಿತ್ರಗ್ರಹ

ಸೂರ—ಸೂರ್ಯ

ಸೂರಾಪತ್ಯ—ಶನಿ [ಸೂರ್ಯನ ಮಗ]

ಸೂರಿ—ಗುರು

ಸೂರ್ಯ + ಅಪತ್ಯ, + ಸುತ, + ಸೂನು—ಶನಿ

ಸೂರ್ಯಾಷ್ಟಕವರ್ಗ—ಸೂರ್ಯನು ತಾನಿರುವ ರಾಶಿಯಿಂದ ಶುಭಫಲಗಳನ್ನು ಕೊಡುವ ರಾಶಿಯನ್ನು ತಿಳಿಸುವ ಬಿಂದುಗಳ ಸಮೂಹ

ಸೈಂಹಿಕೇಯ—ರಾಹು

ಸೋತ ಗ್ರಹ—ಗ್ರಹಯುದ್ಧದಲ್ಲಿ ಕಾಂತಿಗುಂದಿ ದಕ್ಷಿಣದಲ್ಲಿರುವ ಗ್ರಹ

ಸೋಮ + ಜ, + ಸುತ, + ಸೂನು, ಸೌಮ್ಯ —ಬುಧ

ಸೌಮ್ಯರಾಶಿಗಳು—ಶುಭಗ್ರಹದ ರಾಶಿಗಳು

ಸೌಮ್ಯೇತರಗ್ರಹ—ಪಾಪಗ್ರಹ

ಸೌರ—ಶನಿ

ಸೌರಮಾನ—ಸೂರ್ಯನ ಗತಿಯನ್ನನುಸರಿಸಿ ವಿಭಕ್ತವಾಗಿರುವ ಕಾಲ

ಸ್ಕಂಧತ್ರಯ—ಸಂಹಿತಾ ಗಣಿತ ಹೋರಾ ಎಂಬ ಮೂರುವಿಧ ಜ್ಯೋತಿಶ್ಶಾಸ್ತ್ರದ ವಿಭಾಗಗಳು

ಸ್ತ್ರೀರಾಶಿಗಳು—ವೃಷಭ ಕರ್ಕಟಕ ಕನ್ಯಾ ವೃಶ್ಚಿಕ ಮಕರ ಮೀನರಾಶಿಗಳು

ಸ್ತ್ರೀಗ್ರಹ—ಚಂದ್ರ ಶುಕ್ರರು

ಸ್ಥಾನಬಲ—ಗ್ರಹಷಡ್ಬಲಗಳಲ್ಲಿ ಒಂದು

ಸ್ಥಿರರಾಶಿಗಳು—ವೃಷಭ ಸಿಂಹ ವೃಶ್ಚಿಕ ಕುಂಭರಾಶಿಗಳು

[1] ಸ್ಫುಟಗ್ರಹ—ಸರಾಸರಿ ಗಣಿತದಿಂದ ತಿಳಿದುಬರುವ ರಾಶ್ಯಾದಿ ಗ್ರಹದ ಇರುವಿಕೆಗೆ ಸಿದ್ಧಾಂತ ಗ್ರಂಥಗಳಲ್ಲಿ ಹೇಳಿರುವ ಕ್ರಮದಲ್ಲಿ [2] ಮಂದಫಲಾದಿಸಂಸ್ಕಾರಗಳನ್ನು ಮಾಡಿ ನಮ್ಮ ಕಣ್ಣಿಗೆ ಕಾಣುವ ಸ್ಥಳದ ಗೊತ್ತನ್ನು ತಿಳಿಸುವುದು

ಸ್ಮರಸ್ಥಾನ—ಲಗ್ನದಿಂದ ಏಳನೆಯ ಸ್ಥಾನ

ಸ್ವ—ಲಗ್ನದಿಂದ ಎರಡನೆಯ ಸ್ಥಾನ

* ಸ್ವಕ್ಷೇತ್ರ
ಸ್ವರ್ಕ್ಷ } —ಗ್ರಹಗಳು ಅಧಿಪತಿಗಳಾಗಿರುವ ರಾಶಿ
ಸ್ವಗೃಹ

ಸ್ವರ—ಸಂಖ್ಯೆ ಏಳು

ಸ್ವರ್ಭಾನು—ರಾಹು

ಸ್ವೋದಯ—ತಮ್ಮ ತಮ್ಮ ದೇಶದ ಲಗ್ನಗಳ ಪ್ರಮಾಣ

ಹ—ಸಂಖ್ಯೆ ಎಂಟು

ಹತ—ಗುಣಿತವಾದದ್ದು

ಹಯ—ಅಶ್ವಿನಿ (ಮೊದಲನೆಯ ನಕ್ಷತ್ರ)

ಹಯಾಂಗ—ಧನೂರಾಶಿ

ಹರಣ—ಆಯುರ್ದಾಯಗಣಿತದಲ್ಲಿ ನೀಚ ಅಥವಾ ಶತ್ರುಕ್ಷೇತ್ರದಲ್ಲಿರುವ ಗ್ರಹದ ಆಯುಸ್ಸಿನ ಪ್ರಮಾಣವನ್ನು ಕಡಮೆ ಮಾಡುವ ಗಣಿತಕ್ರಿಯೆ

ಹರಿ—ಸಿಂಹರಾಶಿ

---

[1] ನಭೋಮಂಡಲದ ಯಾವಭಾಗದಲ್ಲಿ ಗ್ರಹವು ನಮಗೆ ಕಾಣುತ್ತದೆ ಎಂಬುದನ್ನು ರಾಶಿ, ಅಂಶ, ಕಲೆ, ವಿಕಲೆಗಳಲ್ಲಿ ತಿಳಿಸುವುದು ರೂಢಿಯಲ್ಲಿದೆ. ಗ್ರಹದ ಸರಾಸರಿ ಗತಿಯಿಂದ ನಿರ್ದಿಷ್ಟ ದಿನದಲ್ಲಿ ಗ್ರಹಸನ್ನಿವೇಶ (ಮಧ್ಯಮ ಗ್ರಹ)ವು ತಿಳಿದುಬರುತ್ತದೆ. ಇದರಂತೆ ನಾವು ನಭೋಮಂಡಲದಲ್ಲಿ ನೋಡಿದರೆ ಆ ನಿರ್ದಿಷ್ಟ ಸ್ಥಾನದಲ್ಲಿ ಗ್ರಹವು ಕಂಡುಬರುವುದಿಲ್ಲ. ಗ್ರಹವು ನಮ್ಮ ಕಣ್ಣಿಗೆ ಕಾಣುವ ಆ ಗೊತ್ತಾದ ಸ್ಥಳವನ್ನು ತಿಳಿಯುವುದಕ್ಕಾಗಿ ಜ್ಯೋತಿಷ ಸಿದ್ಧಾಂತ ಗ್ರಂಥಗಳಲ್ಲಿ ತಿಳಿಸಿರುವಂತೆ ಗಣಿತಮಾಡಿ ಬಂದ ಫಲವನ್ನು ರಾಶ್ಯಾದಿ ಮಧ್ಯಗ್ರಹದಲ್ಲಿ ಧನರ್ಣಾನುಗುಣವಾಗಿ ಸಂಸ್ಕರಿಸಿದರೆ ರಾಶ್ಯಾದಿ ಸ್ಫುಟ (ಸ್ಪಷ್ಟ) ಗ್ರಹವಾಗುತ್ತದೆ.

[2] ಸೂರ್ಯಚಂದ್ರರನ್ನು ಮಂದೋಚ್ಚವೆಂಬ ಶಕ್ತಿಯೂ ಉಳಿದ ಐದು ತಾರಾಗ್ರಹಗಳನ್ನು ಮಂದೋಚ್ಚ ಶೀಘ್ರೋಚ್ಚಗಳೆಂಬ ಶಕ್ತಿಗಳೂ ಎಳೆಯುವ ಕಾರಣ ಸರಾಸರಿಗತಿಯಿಂದ ಗಣನೆ ಮಾಡಿ ಬಂದಿರುವ ರಾಶ್ಯಾದಿ ಗ್ರಹಸನ್ನಿವೇಶಕ್ಕೆ ಗ್ರಹವು ನಮ್ಮ ಕಣ್ಣಿಗೆ ಕಾಣುವ ಸನ್ನಿವೇಶವನ್ನು ತಿಳಿಯುವುದಕ್ಕಾಗಿ ಸಂಸ್ಕರಿಸುವ ಫಲವಿಶೇಷ. ಮಂದೋಚ್ಚಾಕರ್ಷಣೆಯಿಂದ ಬರುವುದು ಮಂದಫಲ. ಶೀಘ್ರೋಚ್ಚಾಕರ್ಷಣೆಯಿಂದ ಬರುವುದು ಶೀಘ್ರಫಲ.

* ಗ್ರಹರಾಜನಾದ ಸೂರ್ಯನು ಮೃಗಾಧಿಪತಿಯಾದ ಸಿಂಹದ ಮನೆಯ ರಾಶಿಯನ್ನು ತನ್ನ ಮನೆಯನ್ನಾಗಿ ಆರಿಸಿಕೊಂಡನು. ಅದರಂತೆ ಯಾಮಿನೀಪತಿಯಾದ ಚಂದ್ರನು ಆತನ ಮನೆಗೆ ಪಕ್ಕದಲ್ಲಿರುವ ಕರ್ಕಟಕರಾಶಿಯನ್ನು ತನ್ನ ಮನೆಯನ್ನಾಗಿ ಮಾಡಿಕೊಂಡನು. ಇವರಿಬ್ಬರಿಗೂ ಉಳಿದ ೧೦ ಮನೆಗಳಲ್ಲಿ ಐದೈದು ಮನೆಗಳು ಸೇರಿದ್ದುವು. ಉಳಿದ ಐದು ಗ್ರಹಗಳೂ ಇವರಿಬ್ಬರ ಸಮೀಪಕ್ಕೆ ಪ್ರತ್ಯೇಕ ಪ್ರತ್ಯೇಕವಾಗಿ ಬಂದು ಇಬ್ಬರಿಂದಲೂ ಒಂದೊಂದು ಮನೆಯನ್ನು ಪಡೆದರು. ಇದರಿಂದ ಕುಜ, ಬುಧ, ಗುರು, ಶುಕ್ರ, ಶನಿಗಳಿಗೆ ಎರಡೆರಡು ಮನೆಗಳ ಅಧಿಕಾರವು, ಸೂರ್ಯ ಚಂದ್ರರಿಗೆ ಒಂದೊಂದು ಮನೆಯ ಅಧಿಕಾರವು ಇದೆ —ಎಂದು ಒಂದು ಕಥೆ ಇದೆ.





ಹರಿಣ + ಅಂಕ, + ಧರ — ಚಂದ್ರ

ಹರಿಣಾಂಕಜ — ಬುಧ

ಹಲ — ಆಕೃತಿಯೋಗಗಳಲ್ಲಿ ಒಂದು [ಎಲ್ಲ ಗ್ರಹಗಳೂ ೨-೬-೧೦ ಅಥವಾ ೩-೭-೧೧ ಅಥವಾ ೪-೮-೧೨ ನೇ ಸ್ಥಾನಗಳಲ್ಲಿರುವುದು]

ಹಿಬುಕ — ಲಗ್ನದಿಂದ ನಾಲ್ಕನೆಯ ಸ್ಥಾನ

ಹಿಮ + ಅಂಶು, + ಕರ, + ಕಿರಣ, + ಗು, + ದೀಧಿತಿ, + ಧಾಮ, + ಮಯೂಖ, + ರಶ್ಮಿ, + ರುಕ್ } — ಚಂದ್ರ

ಹಿಮಕಿರಣಸುತ<br>ಹಿಮರಶ್ಮಿಜ<br>ಹಿಮರುಕ್ಪುತ್ರ<br>ಹಿಮಾಂಶುಜ } — ಬುಧ (ಚಂದ್ರನ ಮಗ)

ಹಿಮಾಂಶು + ಗೃಹ, + ಗೇಹ — ಕರ್ಕಟಕ ರಾಶಿ

ಹೇಮಂತರ್ತು — ಆರು ಋತುಗಳಲ್ಲೊಂದು [ಮಾರ್ಗಶಿರ ಪುಷ್ಯಮಾಸಗಳು]

ಹೇಲಿ — ಸೂರ್ಯ

ಹೋರಾಶಾಸ್ತ್ರ — ಪ್ರತಿದಿನ (ಅಹೋರಾತ್ರ) ದಲ್ಲೂ ನಡೆಯುವ ಫಲಗಳನ್ನು ತಿಳಿಸುವ ಶಾಸ್ತ್ರ. 'ಅಹೋರಾತ್ರ' ಶಬ್ದದಲ್ಲಿರುವ ಮೊದಲ ಮತ್ತು ಕೊನೆಯ ಅಕ್ಷರಗಳನ್ನು ತೆಗೆದುಹಾಕಿ 'ಹೋರಾ' ಎನ್ನುವ ಶಬ್ದದಿಂದ ಈ ಶಾಸ್ತ್ರವನ್ನು ಕರೆಯುತ್ತಿದ್ದಾರೆ.

ಹೋರೆ — ಲಗ್ನ, ಲಗ್ನಾರ್ಧ

———

## ಶ್ರೀಧರನು ಜಾತಕತಿಲಕದಲ್ಲಿ ಪ್ರಯೋಗಿಸಿರುವ ಕೆಲವು ಅಪೂರ್ವವಾದ ಸಂಸ್ಕೃತ ಮತ್ತು ಕನ್ನಡ ಪದಗಳ ಅರ್ಥ

---

| | ಪುಟ | ಪದ್ಯ |
|---|---|---|
| ಅಖಲ್ಯ—ಹೇಡಿ ... | ೧೯೨ | ೩ |
| ಅಗ್ಗಳ—ಬಲಶಾಲಿ .... | ೭೧ | ೩೩ |
| | ೭೨ | ೩೫ |
| ಅಣಂ—ಸ್ವಲ್ಪವಾದರೂ .... | ೩ | ೧೨ |
| ಅದಿದೆನ್ನದೆ—ವಿಚಾರಮಾಡದೆ .... | ೩೦೨ | ೪೦ |
| ಅನಲಂಗಾಹುತಿ—ಬೆಂಕಿಗೆ ತುತ್ತಾಗು .... | ೭೧ | ೩೪ |
| ಅನಿತಂ—ಅಷ್ಟನ್ನು .... | ೯೨ | ೩ |
| ಅಬಾಲ್ಯಂ—ಬಲಿಷ್ಠನಲ್ಲದ .... | ೨೮೩ | ೬ |
| ಅಮಳ್ವುಟ್ಟು—ಅವಳಿ ಮಕ್ಕಳ ಹುಟ್ಟು .... | ೨೧೭ | ೮ |
| ಅಱುದಿಂಗಳ್—ಆರು ತಿಂಗಳು .... | ೬೫ | ೧೫ |
| ಅಲಸುಂಗಾಱ—ಸೋಮಾರಿ .... | ೨೩ | ೨೫ |
| ಅಸಿಯ—ಕೃಶವಾದವ .... | ೨೩ | ೨೫ |
| ಅಳತೆಯ ಕೈ—ಅಳತೆಮಾಡುವ ಸೇರು ಮೊದಲಾದ ಮಾಪಕಗಳುಳ್ಳ ಕೈ .... | ೨೦೭ | ೧೯ |
| ಅಳನಿಷಾದ—ದುಷ್ಟ ಬೇಡ . | ೧೧೬ | ೨೮ |
| ಆಗಡೆ—ಆಗಲೆ, ಕೂಡಲೆ .... | ೬೧ | ೯ |
| ಆಗಳುಂ ಯಾವಾಗಲೂ .... | ೩೦೪ | ೪೫ |
| ಆಟಿಸು—ಅಭಿಲಾಷೆಪಡು .... | ೨೦೧ | ೨ |
| ಆದವೆ—ಹೆಚ್ಚಾಗಿ .... | ೮೮ | ೧೮ |
| (ಅಪ) ಆರ್ಪ—ಶಕ್ತನಾಗುವ .... | ೧೭೯ | ೧೩ |
| ಆವಿಲ—ಕೂಡಿದ .... | ೨೦೪ | ೧೧ |
| ಆಸ್ಪದ—ತರಗತಿ, ಸ್ಥಿತಿ .... | ೨೭೭ | ೨೬ |
| | ೮ | ೨೯ |
| ಆಳ್ಗುಂ—ಆಳುತ್ತಾನೆ, ಪಡೆಯುತ್ತಾನೆ .... | ೧೦೭ | ೯—೧೦ |
| | ೧೦೯ | ೧೨ |
| ಆಳ್ದರ್—ಅಧಿಪತಿಗಳು .... | ೨೭೬ | ೨೫ |
| ಇಮ್ಮಡಿ—ಎರಡರಷ್ಟು .... | ೫೦ | ೩೬ |
| | ೨೭೪ | ೨೩ |
| ಇಱು—ಗುಣಿಸು .... | ೨೯೬ | ೨೫ |
| ಇರ್ವಕ್ಕ—ಎರಡು ಪಾರ್ಶ್ವ .... | ೨೨೮ | ೩ |
| ಈಂಟು—ಕುಡಿ .... | ೭೫ | ೪೧ |







| | | ಪುಟ | ಪದ್ಯ |
|---|---|---|---|
| ಈರಾಱು—ಹನ್ನೆರಡು | .... | ೮೯ | ೧ |
| ಈರೆಂಟು—ಹದಿನಾರು | .... | ೯೬ | ೧೦ |
| ಉಣಿಸು—ಆಹಾರ | .... | ೨೬ | ೪ |
| ಉತ್ಕ್ರಮ—ವಿಪರೀತ ಕ್ರಮ | .... | ೨೨೬ | ೨೫ |
| ಉಳ್ಳಿನಂ—ಇರುವವರೆಗೂ | .... | ೩೦೪ | ೪೫ |
| ಊಳ್—ಕೂಗು | .... | ೨೦೪ | ೧೧ |
| | | ೨೮೫ | ೧೩ |
| ¹ಎಕ್ಕೆ—ಮಂಚದ ಚೌಕಟ್ಟು | .... | ೪೦ | ೧೬ |
| ಎಡೆಯುಡುಗದೆ—ಅವಕಾಶ ಕೊಡದೆ, ವಿಚ್ಛಿತ್ತಿಯಿಲ್ಲದೆ | ... | ೪ | ೨೦ |
| ಎತ್ತು—ಭಾಗಿಸು | .... | ೮೯ | ೧ |
| ಎಂದಂತುಟೆ—ಹೇಳಿರುವಷ್ಟೆ | .... | ೫೮ | ೧೨ |
| ಎಂಬರ್—ಹೇಳುತ್ತಾರೆ | .... | ೭೧ | ೩೨ |
| ಎರ್ದೆಗೆಡು—ಧೈರ್ಯಗುಂದು | .... | ೨೬೩ | ೫ |
| ಎಳರಂಡೆ—ಚಿಕ್ಕವಯಸ್ಸಿನ ವಿಧವೆ | .... | ೨೫೪ | ೧೩ |
| ಏಡು—ಗುರುತ್ತು ಮಚ್ಚೆ | .... | ೫೫ | ೫ |
| ಏಱಿಸು—ಹೆಚ್ಚಿಸು, ಸೇರಿಸು | ... | ೨೮೧ | ೩ |
| ಏವುದು (ಏಂಗೆಯ್ವುದು)—ಏನು ಪ್ರಯೋಜನ | .... | ೯೭ | ೧೩ |
| ಏೞು—(ಸಂಖ್ಯೆ) ಏಳು, ನಿಲ್ಲು | .... | ೮ | ೨೯ |
| | | ೨೫ | ೩ |
| ಒಡ್ಡು—ರಾಶಿ, ಸಮೂಹ | .... | ೮೧ | ೨ |
| ಒಂದು—ಕೂಡು | .... | ೨೫೭ | ೬೦ |
| ಒಸೆದು—ಪ್ರೀತಿಸಿ, ಪ್ರಸನ್ನನಾಗಿ | .... | ೩೦೪ | ೪೫ |
| ಓದುವೇೞು—ಓದುವಂತೆ ಹೇಳು | ... | ೩ | ೧೨ |
| ಕಣಿ—ಗಣಿ | .... | ೨೫೫ | ೧೫ |
| ಕಪಟೆ—ಮೋಸಗಾತಿ | .... | ೨೪೭ | ೨ |
| ಕರಿದಪ್ಪ—ಕಪ್ಪಾದ | .... | ೨೨ | ೨೪ |
| ಕರುಳ್ತೊಡಕು—ಗರ್ಭನಾಳ | .... | ೪೮ | ೩೧ |
| ಕರ್ಬೊನ್—ಕಬ್ಬಿಣ | .... | ೪೦ | ೧೫ |
| ಕವರ್ತೆವಡು—ಎಲ್ಲವನ್ನೂ ಸೂರೆಗೊಡು | .. | ೧೯೧ | ೨ |
| ಕಷ್ಟೆ—ದುಃಖಿತೆ | .... | ೨೪೭ | ೨ |
| ಕಟಿಗುಂ—ಸಾಯುತ್ತಾನೆ | .... | ೭೬ | ೪೪ |
| ಕಾಣರು—ಕಾಣುವುದಿಲ್ಲ (ಮರಣಹೊಂದುತ್ತದೆ) | .... | ೭೮ | ೪೭ |
| ಕಾಂತ—ಮನೋಹರ | .... | ೨೨ | ೨೪ |


¹ 'ಜಲವೆಲುವಿನೆಕ್ಕೆಗಳ' (ಸ್ಥಲ ೧೧ ಪದ್ಯ ೩೧) ಎಂದು ಹರಿಶ್ಚಂದ್ರ ಕಾವ್ಯದಲ್ಲೂ, ಬೋಧಿದುರ್ಲಭತತ್ತ್ವಾನುಪ್ರೇಕ್ಷೆಯೆಂಬ ೧೧ನೇ ಅಧಿಕಾರದ ೨೯ನೇ ಪದ್ಯಾನಂತರ ವಚನದಲ್ಲಿ 'ನೂರುಗದ್ಯಾಣಮಂ ಕೊಟ್ಟು ಒಂದು ಕೋಳದ ಮಂಚದೆಕ್ಕೆಯುಂ ಕೊಂಡು', ಎಂದು ಬಂಧುವರ್ಮಕವಿ ವಿರಚಿತವಾದ ಜೀವಸಂಬೋಧನವೆಂಬ ಗ್ರಂಥದಲ್ಲೂ 'ಎಕ್ಕೆ' ಎನ್ನುವ ಪದ 'ಮಂಚದ ಚೌಕಟ್ಟು' ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

| | | ಪುಟ | ಪದ್ಯ |
|---|---|---|---|
| ಕಿರ್ಚು (ಕಿಚ್ಚು)—ಬೆಂಕಿ | .... | ೨೬೧ | ೨ |
| ಕಿಱಿಯಬ್ಬೆ—ಚಿಕ್ಕಮ್ಮ | .... | ೨೭ | ೬ |
| ಕಿಱಿಯಯ್ಯ—ಚಿಕ್ಕಪ್ಪ | .... | ೨೭ | ೬ |
| ಕಿಬ್ಬೊಡೆ—ಕಿಬ್ಬೊಟ್ಟೆ (ಹೊಟ್ಟೆಯ ಕೆಳಭಾಗ) | .... | ೪ | ೨೦ |
| ಕಿಸು— ತಾಮ್ರ, ತಾಮ್ರವರ್ಣ (ಕೆಂಪು) | .... | ೪೦ | ೧೫ |
| ಕುತ್ತಮಪ್ಪುಂಕು - ವ್ಯಾಧಿಯುಂಟಾಗು | .... | ೨೬೧ | ೧ |
| ಕುರುಳ್ದಲೆ—ಗುಂಗುರು ಕೂದಲಿನಿಂದ ಕೂಡಿದ ತಲೆ | .... | ೨೨ | ೨೪ |
| ಕುಲಟೆ—ಸ್ವೈರಿಣಿ | .... | ೨೪೮ | ೬ |
| | | ೨೫೫ | ೧೫ |
| ಕುಟಿ—ಹಳ್ಳಿ | ... | ೪೫ | ೨೪ |
| | | ೨೧೩ | ೩೬ |
| ಕೂಟಕ್ರಿಯಾವೇದಿ—ವೋಸಗಾರ | .... | ೧೮೪ | ೨೨ |
| ಕೂರ್ತು—ಪ್ರೀತಿಸಿ | .... | ೧ | ೨ |
| ಕೃತವೇದಿ—ಕೃತಜ್ಞ | .... | ೧೮೩ | ೧೯ |
| ಕೆಚ್ಚು—ದಿಂಡು (ಮರಗಳ ನಡುವಣ ಸಾರವಾದ ಭಾಗ) | .... | ೫೬ | ೧೧ |
| ಕೆಟ್ಟೋಡು—ಕೆಟ್ಟು (ಸೋತು) ಓಡಿಹೋಗು, ಬಹು ಕಷ್ಟಕ್ಕೆ ಸಿಕ್ಕಿ ಬೇರೆಡೆಗೆ ಓಡಿಹೋಗು | .... | ೨೪೯ | ೭ |
| ಕೊಡುಗೂಸು—ಕನ್ಯೆ | .... | ೨೫೪ | ೧೩ |
| | | ೨೪೭ | ೩ |
| ಕೊಂಡುಕೊನೆ—ಹೊಗಳು [ಸ್ವೀಕೃತಾರ್ಥವರ್ಧನೇ(ಧಾ.ಪಾ)] | | ೩ | ೧೭ |
| | | ೩೦೨ | ೩೭ |
| ಕೊಯ್ದು ತಲೆ—ತಲೆಗೂದಲನ್ನು ಕತ್ತರಿಸಿಕೊಂಡಿರುವುದು | .... | ೨೦೨ | ೪ |
| ಕೊಳೆಗೊಂಡ—ಮಾಸಿದ, ಕೊಳೆಯಿಂದ ಕೂಡಿದ | .... | ೨೦೬ | ೧೬ |
| ಕೊಳ್ಳಿವೆಳಗು—ಉರಿಯ ಬೆಳಕು | .... | ೩೮ | ೧೧ |
| ಕೋಲಮೂಗ—ಹಂದಿಯಂತೆ ತುದಿಯಲ್ಲಿ ಬಗ್ಗಿರುವ ಮೂಗುಳ್ಳವ | .... | ೨೦೫ | ೧೪ |
| ಗಂಡಗಾಡಿ—ಪೌರುಷ ಸ್ವಭಾವದವಳು | .... | ೨೪೭ | ೨ |
| ಗಂಡುದೊಬ್ಬು—ಗಂಡಾಳು, ಸೇವಕ | .... | ೨೪೨ | ೨೧ |
| ಗಾಹುಗಾತಿ—ವೋಸಗಾತಿ | ... | ೨೪೮ | ೫ |
| ಗುರ್ದಿಂ—ಗುದ್ದಿನಿಂದ | .... | ೨೬೮ | ೧೨ |
| ¹ಚಕ್ಕಳ—ಪಾತ್ರವಿಶೇಷ (ನೋಟು) | .... | ೨೦೭ | ೧೮ |
| ಚಿಪಿಟಾಸ್ಯ—ಚಪ್ಪಟೆ ಮುಖ | .... | ೨೦೫ | ೧೨ |
| ಚೊಟ್ಟನೆ—ಗುಂಡಾದ | .... | ೨೧ | ೨೦ |
| ಜೂದಾಳಿ—ಜೂಜುಗಾರ | ... | ೧೬೪ | ೩ |
| ಜೊನ್ನ—ಜ್ಯೋತ್ಸ್ನ (ಶುಕ್ಲಪಕ್ಷ) | .... | ೧೯ | ೧೧ |

¹ ವಿವರ ೨೦೭ನೇ ಪುಟದಲ್ಲಿದೆ.






| | | ಪುಟ | ಪದ್ಯ |
|---|---|---|---|
| ಜೋಕೋರ—ಜೋಕುಮಾರ | .... | ೬೧ | ೭ |
| ಜೋಡೆ—ಹಾದರಗಿತ್ತಿ | .... | ೨೫೫ | ೧೪ |

---

[1] ಬಟ್ಟ ಮಂಡೆಯ ಪ್ರಭುದೇವನ ಅನುಭವ ಶಿಖಾಮಣಿಯ ೧೬ನೇ ಸಂಧಿಯಲ್ಲಿ ಜೋಕುಮಾರನ ಕಥೆ ಈ ರೀತಿ ಇದೆ:—

"ಸಪ್ತಋಷಿಗಳಿಗೆ ಜೋಕ ಎಂಬುವನು ಮೆಚ್ಚಿನ ಆಳು. ಒಮ್ಮೆ ಈ ಋಷಿಗಳು ಅಮೃತ ಪಾನ ಮಾಡುವ ದೇವಲೋಕವಾಸಿಗಳಿಗೆ ತಿಳಿಯದ ಪರಮಾನ್ನ, ಪಂಚಭಕ್ಷ್ಯಗಳ ಸವಿ, ಇಂದ್ರಿಯಚಾಪಲ್ಯ ಇವೇ ಮೊದಲಾದ ಭೂಲೋಕನಿವಾಸಿಗಳ ವೈಭವಗಳ ವಿಚಾರವಾಗಿ ಪರಸ್ಪರ ಮಾತಾಡುತ್ತಿದ್ದರು. ಇದನ್ನು ಕೇಳುತ್ತಿದ್ದ ಜೋಕನು ಮುಂದೆ ಬಂದು ಋಷಿಗಳಿಗೆ ನಮಸ್ಕರಿಸಿ ಮರ್ತ್ಯಲೋಕದ ವೈಭವವನ್ನು ನೋಡಿಬರಲು ತನ್ನನ್ನು ಕಳುಹಿಸಿ ಕೊಡುವಂತೆ ಪ್ರಾರ್ಥಿಸಲು ಆ ಋಷಿಗಳು ಅವನಿಗೆ ಬುದ್ಧಿವಾದವನ್ನೂ ಎಚ್ಚರವನ್ನೂ ಹೇಳಿ ಭೂಲೋಕವನ್ನು ನೋಡಿಕೊಂಡು ಬೇಗನೆ ಬರುವಂತೆ ತಿಳಿಸಿ ಆತನನ್ನು ಕಳುಹಿಸಿಕೊಟ್ಟರು. ಜೋಕನು ಭೂಮಿಗೆ ಇಳಿದು ಒಂದು ಮಾರಿಗುಡಿ ಸಮೀಪಕ್ಕೆ ಬಂದನು. ಆ ಮಾರಿಯನ್ನು ನೋಡಿ ಎಚ್ಚರ ತಪ್ಪಿ ಆಕೆಯ ರೂಪಿಗೆ ಜೋಕನು ಮನಸೋತ. ಅಂತೆಯೇ ಮಾರಿಯೂ ಜೋಕನನ್ನು ನೋಡಿ ಕಾಮಿಸಿದಳು. ಇದರ ಫಲವಾಗಿ ಮಾರಿ ಗರ್ಭವತಿಯಾದಳು. ಇದನ್ನು ತಿಳಿದ ಜೋಕನಿಗೆ ಋಷಿಗಳ ಎಚ್ಚರಿಕೆಯ ಮಾತು ನೆನಪಿಗೆ ಬಂದಿತು. ಕೂಡಲೆ ಜೋಕನು ಎಚ್ಚತ್ತು ಅಲ್ಲಿಂದ ಹೊರಟು ಋಷಿಗಳ ಸಮೀಪಕ್ಕೆ ಹೋಗಲು ಜ್ಞಾನದೃಷ್ಟಿಯಿಂದ ಭೂಲೋಕದಲ್ಲಿ ಜೋಕನ ವರ್ತನೆಯನ್ನು ತಿಳಿದ ಆ ಋಷಿಗಳು ಆತನನ್ನು ಸೇರಿಸದೆ ಅಟ್ಟಿಬಿಟ್ಟರು. ಜೋಕನು ಬಹಳವಾಗಿ ಪ್ರಾರ್ಥಿಸಲು ಸ್ವಲ್ಪಕಾಲ ಸುಮ್ಮನಿರುವಂತೆ ಋಷಿಗಳು ಆತನಿಗೆ ತಿಳಿಸಿದರು. ಇಷ್ಟರಲ್ಲಿ ಗರ್ಭವತಿಯಾಗಿದ್ದ ಮಾರಿ ಗಂಡುಮಗುವನ್ನು ಹಡೆದಳು. ಈತನೇ ಜೋಕಕುಮಾರ. ಈತನನ್ನು ಜೋಕುಮಾರನೆಂದೂ ಕರೆಯುತ್ತಾರೆ. ಹುಟ್ಟಿದಕೂಡಲೇ ಆ ಶಿಶು ತನ್ನ ತಂದೆ ಯಾರೆಂದು ಮಾರಿಯನ್ನು ಪ್ರಶ್ನಿಸಲು ಸ್ವರ್ಗದ ಪುರುಷನೊಬ್ಬನು ತನ್ನೊಡನೆ ನೆರೆದು ಅನಂತರ ಎಲ್ಲಿ ಹೋದನೋ ತಿಳಿಯದು ಎಂದು ತಿಳಿಸಿದಳು. ಕೂಡಲೆ ಆ ಜೋಕಕುಮಾರನು ತಂದೆಯನ್ನು ಹುಡುಕಿ ಕರೆ ತರುತ್ತೇನೆಂದು ಮಾರಿಗೆ ಹೇಳಿ ಆತನನ್ನು ಹುಡುಕುತ್ತ ಹೋಗುತ್ತಿರಲು ದಾರಿಯ ಒಂದೂರಿನಲ್ಲಿ ಅಲ್ಲಿಯ ಅಗಸರೆಲ್ಲ ಒಂದು ಹುಣ್ಣಿಮೆಯ ದಿನ ಗಂಗೆಯಕಲ್ಲ ಪೂಜೆಗೆ ಒಂದೆಡೆಯಲ್ಲಿ ಸೇರಿ ಪೂಜೆ ಮತ್ತು ಅಡಿಗೆಯ ಸಡಗರದಲ್ಲಿದ್ದರು. ಈ ಸಮಯದಲ್ಲಿ ಅವರ ಕತ್ತೆಗಳು ಹೊಲಕ್ಕೆ ನುಗ್ಗದಿರುವಂತೆ ನೋಡಿಕೊಳ್ಳಲು ಸುಕರ್ಣಿಕೆ ಎಂಬ ಕನ್ಯೆಯ ಕೈಲಿ ಒಂದು ಹೋಳಿಗೆಯನ್ನು ಕೊಟ್ಟು ನಿಯಮಿಸಿದ್ದರು. ಜೋಕನು ಬರುತ್ತಾ ದಾರಿಯಲ್ಲಿ ನಿಂತಿದ್ದ ಅಲಂಕೃತಳಾದ ಆ ಕನ್ಯೆಯನ್ನು ನೋಡಿ ಮೋಹಿಸಿ ಬಲಾತ್ಕಾರದಿಂದ ಆಕೆಯೊಡನೆ ನೆರೆಯಲು ಆ ಕನ್ಯೆ ಕೂಗಿಕೊಂಡಳು. ಆ ಕೂಗನ್ನು ಕೇಳಿದ ಅಗಸರು ಅಲ್ಲಿಗೆ ಓಡಿಬಂದು ಕಲ್ಲು ದೊಣ್ಣೆಗಳಿಂದ ಆ ಜೋಕಕುಮಾರನನ್ನು ಹೊಡೆದು ಸಾಯಿಸಿದರು. ಜೋಕಕುಮಾರನು ಸತ್ತ ವಿಚಾರವನ್ನು ಜ್ಞಾನದೃಷ್ಟಿಯಿಂದ ತಿಳಿದ ಸಪ್ತಋಷಿಗಳು ಜೋಕನನ್ನು ಆತನ ಮೊದಲಿನ ಕಾರ್ಯಕ್ಕೆ ನಿಯಮಿಸಿಕೊಂಡರು" ಎಂದಿದೆ. ಜೋಕನ ಮಗನಿಗೆ ಬೇರೆ ಹೆಸರಿಡದ ಕಾರಣ 'ಜೋಕಕುಮಾರ' ಎಂದು ಹೆಸರನ್ನು ಕೊಟ್ಟಿರುತ್ತಾರೆ. ಈ ಜೋಕಕುಮಾರನು ಹುಟ್ಟಿದ ಏಳನೆಯ ದಿವಸ ಸತ್ತುದರಿಂದ ಈತನು ಅಲ್ಪಾಯುಸ್ಸಿನಿಂದ ಕೂಡಿದವನೆಂದು ಅಲ್ಪಾಯುಷ್ಯ ವಿಚಾರದಲ್ಲಿ ಜೋಕಕುಮಾರನನ್ನು ಶ್ರೀಧರನು ಉದಾಹರಣೆಯನ್ನಾಗಿ ತೆಗೆದುಕೊಂಡಿರುತ್ತಾನೆ.

ಬ್ರಹ್ಮಕವಿ ವಿರಚಿತ ಸಮಯಪರೀಕ್ಷೆಯಲ್ಲಿ (ಶ್ರೀಯುತ. ಬಿ. ಎಸ್. ಕುಲಕರ್ಣಿ, ಎಂ.ಎ., ಯವರು ಸಂಪಾದಿಸಿರುವ ಈ ಗ್ರಂಥವನ್ನು ಧಾರವಾಡ ಕನ್ನಡ ಸಂಶೋಧನ ಸಂಸ್ಥೆಯವರು ಪ್ರಕಟಿಸಿರುತ್ತಾರೆ).

" ದೇವತೆ ಪೆಱರನದೆಂತುಂ
ಕಾವಳ್ ಗಡ ತನ್ನ ಪೆರ್ಮಗಂ ಜೋಕೋರಂ [ಜೋಕೊವರಂ]
ಸಾವಾಗ ಕಾಯಲಾರದ
ಕೇವಲು (?) ಪೇಳ್ವೆಱಿರ್ಗೆ ಮಾಡಲಾರ್ಪಳೆ ಸುಖಮಂ"

(ಅಧಿ ೮ ಪ ೧೧೦).

ಇರುವ ಈ ಪದ್ಯದಲ್ಲೂ ಜೋಕೋರನ ಅಲ್ಪಾಯುಷ್ಯದ ವಿಚಾರ ಸೂಚಿತವಾಗಿದೆ.

| | ಪುಟ | ಪದ್ಯ |
|---|---|---|
| ಜೋಯಿಸ ಗಬ್ಬ—ಜ್ಯೋತಿಶ್ಶಾಸ್ತ್ರ ಕಾವ್ಯ .... | ೨೫೫ | ೧೪ |
| | ೩ | ೧೩ |
| ತನು ತನುತ್ರ—ಮೈಕವಚ .... | ೨೦೮ | ೨೧ |
| ತಟಟಿ—ಬೋಳು ತಲೆ, ತಲೆಯಲ್ಲಿ ಕೂದಲು ಬೆಳೆಯದವ .... | ೨೪೧ | ೨೦ |
| ತರ್ಪೆಡೆ—ತರುವ ಸಂದರ್ಭ .... | ೨೯೫ | ೨೪ |
| ತಪ್ಪಿದುದು—ತಗ್ಗಾದುದು .... | ೩೮ | ೧೨ |
| ತಾಗೆ—ವರೆಗೆ, ಮುಟ್ಟಲು, ತನಕ, ಪರ್ಯಂತ ... | ೨೮೪ | ೮ |
| ತಾಪಿನಂ—ಮುಟ್ಟುತ್ತಿರಲು, ವರೆಗೆ .... | ೧೦೫ | ೬ |
| | ೨೮೦ | ೧ |
| ತೆತ್ತಿಗ – ಸೇವಕ .... | ೧೭೬ | ೭ |
| ತೊದಳಂ—ಅಸ್ಪಷ್ಟವಾಗಿ ಮಾತಾಡುವವ .... | ೫೧ | ೩೯ |
| ತೊಟ್ಟು—ದಾಸ, ದಾಸಿ ... | ೨೪೭ | ೩ |
| | ೨೫೦ | ೯ |
| ತೊಟ್ಟುಟ್ಟು – ತೊತ್ತಾಗಿಯೇ ಹುಟ್ಟುವವ, ಹುಟ್ಟುದಾಸ .... | ೨೪೨ | ೨೧ |
| ತ್ರಿಶಾಲ—ಮೂರು ಅಂತಸ್ತು .... | ೩೬ | ೧೪ |
| ದಸರಿಯ ಸೀರೆ—ರೇಶ್ಮೆ ಬಟ್ಟೆ ... | ೨೧೧ | ೩೧ |
| ದಾರಕ—ಮಗು .... | ೬೫ | ೧೫ |
| ದೊಡ್ಡಂಗಳು—ದೊಡ್ಡವು .... | ೧೭೮ | ೧೧ |
| ದ್ವಿಜನ—ಎರಡರಷ್ಟು ಮಂದಿ .... | ೪೨ | ೧೮ |
| ದ್ವಿಶಾಲ—ಎರಡು ಅಂತಸ್ತು .... | ೩೯ | ೧೪ |
| ಧನ್ಯ—ಧನವಂತ .... | ೧೫ | ೪ |
| | ೧೮೦ | ೧೪ |
| ನಂದಿಸು—ಕುಂದಿಸು ... | ೫೧ | ೩೮ |
| ನಸುಕೆಂಚ ತಲೆಯಂ—ಸ್ವಲ್ಪ ಕೆಂಪಾದ ಕೂದಲುಳ್ಳವ .... | ೨೨ | ೨೩ |
| ನಳಿದು—ಬಗ್ಗಿರುವುದು .... | ೪೦ | ೧೬ |
| ನಾವಿದ—ನಾಪಿತ .... | ೨೧೬ | ೫ |
| ನಾಟ್ಟಕೆ—ಘಳಿಗೆ .... | ೩೨ | ೧೯ |
| ನಾಡ್ಗೆ– ನಾಡಿಗೆ, ದೇಶಕ್ಕೆ .... | ೨ | ೪ |
| ನಾಡ್ವೋಡೆ—ವೇಶ್ಯೆ, ವ್ಯಭಿಚಾರಿಣಿ .... | ೨೪೭ | ೩ |
| | ೨೪೮ | ೬ |
| ನಿಡಿಯ—ಎತ್ತರವಾಗಿರುವವ .... | ೨೧ | ೨೦ |
| | ೧೭೮ | ೧೧ |
| ನಿಡುಗೋಣಂ—ಉದ್ದವಾದ ಕಂಠವುಳ್ಳವ .... | ೧೭೮ | ೧೧ |
| ನಿಡುವೊಗದವಳ್—ಉದ್ದವಾದ ಹಣೆಯುಳ್ಳವಳು .... | ೨೦೧ | ೨ |
| ನಿಪ್ಪೊಸತು—ತುಂಬಾ ಹೊಸದು .... | ೩೮ | ೧೨ |
| ನಿಱುಸುತ್ತು—ಪಾಗು, ಮುಂಡಾಸ, ಪೇಟ .... | ೨೦೬ | ೧೬ |
| ನಿರ್ವಹಿಸಂ—ಬದುಕುವುದಿಲ್ಲ .... | ೬೫ | ೧೬ |
| ನೆಯ್ಗೆಕಾಱ—ನೆಯ್ಗೆಯವ, ಮಗ್ಗದವ .... | ೨೦೬ | ೩ |

| | | ಪುಟ | ಪದ್ಯ |
|---|---|---|---|
| ನೆರೆ—ಕೂಡು, ಸೇರು | .... | ೨೬ | ೫ |
| | | ೨೫೨ | ೧೧ |
| ನೆಱ—ಸಾಮರ್ಥ್ಯ | .... | ೨೦೧ | ೧ |
| ನೆಲವರದೆಡೆ—ಗೊತ್ತಾದ ಭೂಮಿ, ಸಾಯುವ ನೆಲ | .... | ೨೭೩ | ೨೨ |
| ಪಟ್ಟಿರ್ದವ—ಮಲಗಿರುವವ | ... | ೨೯೨ | ೧೯ |
| ಪಡೆಪಾಳಿ—ಲಾಭ ಪಡೆಯುವವ, ಜಾರ | .... | ೧೯೫ | ೮ |
| | | ೨೨೪ | ೨೦ |
| 1 ಪದುಳಿದ—ಸುಖಿ | .... | ೧೫೪ | ೧೨ |
| ಪನ್ನಗಧ್ವಜ—ಹಾವಿನ ಬಾವುಟವುಳ್ಳವ (ಕೌರವ) | .... | ೨ | ೭ |
| ಪಂದೆ—ಹೇಡಿ, ಅಂಜುಪುರುಕ | .... | ೧೮೨ | ೧೮ |
| ಪರದುಗೆಯ್ಯಂ—ವ್ಯಾಪಾರಿ | ... | ೧೮೨ | ೧೮ |
| ಪರೆದು—ಪ್ರಸರಿಸಿ | .... | ೩೦೪ | ೪೫ |
| ಪರೇತ ವನ—ಸುಡುಗಾಡು | .... | ೪೫ | ೨೪ |
| ಪರ್ಚು—ವಿಭಾಗಿಸು, ಕತ್ತರಿಸು, ಕಿವಿಯಲ್ಲಿ ಪಿಸುಮಾತಾಡು | .... | ೬೫ | ೧೬ |
| ಪಸಿವೊಡೆಯ—ಹೊಟ್ಟೆಹಸಿವಿನಿಂದ ಪೀಡಿತನಾದವ | .... | ೨೦೨ | ೫ |
| ಪಸು—ವಿಭಾಗಿಸು | .... | ೨೯೯ | ೩೧ |
| ಪಸೆ—ಹಸೆಮಣೆ .... | .... | ೨೪೯ | ೭ |
| ಪಳಾಳ—ಜಳ್ಳು, ಉಪಯೋಗವಿಲ್ಲದ ಧಾನ್ಯ, ಉಪಯೋಗವಿಲ್ಲದವ | .... | ೩ | ೧೮ |
| ಪಾಣ್ಬ—ವಿಟ, ಹಾದರದವ | .... | ೧೧೪ | ೨೨ |
| ಪಾರದರಿಗ—ವಿಟ, ಹಾದರದವ | ... | ೨೨೪ | ೨೨ |
| ಪಿಸುಣ—ಚಾಡಿಕೋರ, ದುರ್ಜನ | .... | ೨೩ | ೨೫ |
| ಪುನರ್ಭವಂ—ಮತ್ತೆ ಹುಟ್ಟುವವನು (ಸಾಯುವವ) | .... | ೭೦ | ೨೯ |
| | | ೭೩ | ೩೭ |
| ಪೂಣ್ದು—ಪ್ರತಿಜ್ಞೆಮಾಡಿ | .... | ೨ | ೮ |
| ಪೂಣ್ಕೆ—ಪ್ರತಿಜ್ಞೆ, ಶಪಥ | .... | ೩ | ೧೨ |
| | | ೩೦೩ | ೪೧ |
| ಪೆಣ್ಣಕತ—ಹೆಣ್ಣಿನ ಕಾರಣ | .... | ೨೬೫ | ೮ |
| ಪೆತ್ತಪು—ಬಂದವು | .... | ೯೧ | ೨ |
| ಪೆಱಗಣಿಂ—ಹಿಂದಿನಿಂದ | .... | ೭೩ | ೩೭ |
| ಪೆಱತು—ಬೇರೆ | .... | ೨೫೦ | ೧೦ |
| ಪೆಱುಗುಂ—ಹೆರುತ್ತಾಳೆ, ಪ್ರಸವಿಸುತ್ತಾಳೆ | .... | ೩೮ | ೧೧ |
| | | ೪೭ | ೨೮ |
| ಪೆರ್ಗಡೆ—ಹೆಗ್ಗಡೆ, ಯಜಮಾನ, ಮುಂದಾಳು, ಮಂತ್ರಿ | .... | ೩೯ | ೧೩ |
| | | ೧೬೨ | ೧೦ |
| ಪೇೞ್ವ—ಹೇಳುವ | .... | ೫೨ | ೪೧ |

---

1 ' ಪದುಳಿಗ ' ಎಂದಿರಬಹುದು.

| | | ಪುಟ | ಪದ್ಯ |
|---|---|---|---|
| ಪೇಡಿ—ಹೇಡಿ | .... | ೧೬೩ | ೧೩ |
| | | ೨೪೮ | ೫ |
| ಪೊಂದುಗುಂ—ಸಾಯುತ್ತಾನೆ | .... | ೬೫ | ೧೬ |
| | | ೨೨೮ | ೩ |
| ಪೊಂದೆಸಗೆಯ್—ಚಿನ್ನದ ಕೆಲಸಮಾಡು | .... | ೨೧೭ | ೭ |
| ಪೊಲ್ಲದು } —ಕೆಟ್ಟದ್ದು | .... | ೫೬ | ೯ |
| ಪೊಲ್ಲಮೆ } | | ೧೦೫ | ೫ |
| ಪೊಟ್ತು—ಹೊತ್ತು | .... | ೩೨ | ೧೮ |
| ಪ್ರತಿಯಿಡು—ತಿರುಗಿ ಬರೆ | .... | ೨೯೭ | ೨೭ |
| ಬಟ್ಟಿದಂ—ವೃತ್ತಾಕಾರದ ಶರೀರವುಳ್ಳವ | .... | ೨೧ | ೨೦ |
| ಬಂಡ—ಪದಾರ್ಥ, ಪ್ರಯೋಜನ | .... | ೨೦೭ | ೧೯ |
| ಬರ್ದು—ಸಾಯು, ಮೃತಿಪಡು | ... | ೭೨ | ೩೫ |
| | | ೨೩೬ | ೧೧ |
| ಬಲವಂತ—ಬಲಿಷ್ಠ | .... | ೭೭ | ೪೬ |
| ಬಲ್ಲಿತೆ—ಬಲಿಷ್ಠವಾದುದೆ | .... | ೨೫೦ | ೧೦ |
| ಬಸೆಮೂಗಂ—ದಪ್ಪನಾದ ಮೂಗುಳ್ಳವ | .... | ೧೭೭ | ೯ |
| ಬಸೆವಾಯಂ—ಕಿಸುವಾಯ, ದಪ್ಪ ತುಟಿಯಿಂದ ಕೂಡಿದ ಬಾಯುಳ್ಳವ | .... | ೧೭೭ | ೯ |
| ಬಳ್ಳು—ನರಿ | .... | ೨೭೨ | ೨೦ |
| ಬಳಿಯ / ಬಳಿಯಿಂ } ತರುವಾಯ, ಮತ್ತೆ, ಆಮೇಲೆ | .... | ೩೦೦ | ೩೨ |
| ಬಾಲ್ಯರು—ಬಲಿಷ್ಠರು | .... | ೫೩ | ೧ |
| ಬಿಸುಡುಗಾರ್ತಿ—ಗಂಡನಿಂದ ಬಿಡಲ್ಪಟ್ಟವಳು | .... | ೨೫೪ | ೧೩ |
| ಬಿಸುಡುಗುಂ—ಬಿಡುತ್ತದೆ, ಬಿಸಾಡುತ್ತಾಳೆ | .... | ೪೯ | ೩೪ |
| | | ೪೮ | ೩೩ |
| ಬಿಳಿಯಳ್—ಶುಭ್ರ (ಬಿಳುಪು)ವರ್ಣದವಳು | .... | ೧ | ೨ |
| ಬುದ್ಧ—ಬುದ್ಧಿವಂತ, ವಿದ್ವಾಂಸ | .... | ೧೯೬ | ೧೦ |
| ಬೆಸಗೊಂಡ ಉದಯ—ಪ್ರಶ್ನ ಲಗ್ನ | .... | ೨೮೧ | ೩ |
| ಬೆಸಗೊಂಡವ—ಪ್ರಶ್ನೆಮಾಡುವವ, ಪೃಚ್ಛಕ | .... | ೨೯೦ | ೧೬ |
| ಬೆಸನಱಿ—ಕೆಲಸವನ್ನು ತಿಳಿ | .... | ೨೦೨ | ೫ |
| ಬೆಸಲೆ—ಹಡೆಯುವುದು, ಮಗುವನ್ನು ಪ್ರಸವಿಸುವುದು | .... | ೪೬ | ೨೬ |
| | | ೨೪೨ | ೨೧ |
| ಬೆಳಗೆ—ಬೆಳೆಯಲ | .... | ೩೦೪ | ೪೪ |
| ಬೇನೆ—ನೋವು | .... | ೨ | ೧೨ |
| ಬೇಟ್ಪಂ—ಬೇಡುವವ, ಇಷ್ಟವಾದವ | .... | ೧೮೭ | ೩೦ |
| ಭೂಮಿಕೆ—ಮನೆಯ ಅಂತಸ್ತು | .... | ೩೯ | ೧೪ |
| ಮಣಲ್—ಮರಳು | .... | ೪೩ | ೨೦ |
| ಮದವ—ಪತಿ, ವರ | .... | ೨೫೬ | ೧೬ |






| | | ಪುಟ | ಪದ್ಯ |
|---|---|---|---|
| ಮಂತಣ—ಮಂತ್ರಾಲೋಚನೆ | .... | ೬೫ | ೧೬ |
| ಮಡಿಗುಂ—ಸಾಯುತ್ತಾನೆ | .... | ೨೬೯ | ೧೩ |
| ಮಱುವಾೞ್ತಿತಾಯಿ—ವಿಧವೆ ಮತ್ತೆ ಮದುವೆಯಾಗಿ ಮಕ್ಕಳನ್ನು ಹಡೆದಿರುವವಳು | .... | ೧೬೪ | ೨ |
| ಮಱುವಾೞ್ತೆ—ಮದುವೆಯಾಗಿ ಮತ್ತೆ ಮದುವೆಯಾದವಳು | .... | ೨೪೮ | ೪ |
| | | ೨೫೪ | ೧೩ |
| ಮಹಾಬಿಲಪ್ರವೇಶ—ಆಕಾಶಗಮನ | .... | ೧೦೦ | ೧೬ |
| ಮಳಿಷ್ಠ—ಕೊಳೆಯಿಂದ ಕೂಡಿರುವವ | ... | ೧೮೯ | ೩೩ |
| ಮಾಟ—ರಚನೆ, ಕೆಲಸ | .... | ೩೮ | ೧೨ |
| ಮಾಸರ—ಮಹಾಶ್ರಯ | .... | ೧೧೪ | ೨೩ |
| ಮಿಗುವನ್ನರು—ಮೀರುವವರು | .... | ೨೭೩ | ೨೨ |
| ಮುಚ್ಛೆ—ಮೂರ್ಛೆ | .... | ೨೭೪ | ೨೩ |
| ಮುಂತೆ—ಮುಂದೆ | .... | ೩೨ | ೧೮ |
| ಮುಂದೆ—ಮೊದಲು | .... | ೨೯೮ | ೨೮ |
| ಮೂಗಂ—ಮಾತಾಡಲು ಶಕ್ತಿಯಿಲ್ಲದವ | .... | ೫೧ | ೩೯ |
| ಮೂವಡಿ—ಮೂರರಷ್ಟು | .... | ೯೨ | ೩ |
| | | ೨೭೪ | ೨೩ |
| ಮೆಱೆವೆಂ—ಪ್ರಕಾಶಪಡಿಸುತ್ತೇನೆ | .... | ೩ | ೧೩ |
| ಮೇಗೆ—ಮೇಲೆ | .... | ೯೨ | ೩ |
| ಮೊಕ್ಕಳ—ಗುಂಪು, ಹೆಚ್ಚು | ... | ೧೧೩ | ೧೯ |
| ಮೊದಲು—ಬೇರು, ಬುಡ | .... | ೪೪ | ೨೨ |
| ಮೊಲನಾಗರ—ಅಪಸ್ಮಾರ | .... | ೨೪೩ | ೨೩ |
| ರಂಡೆ—ವಿಧವೆ, ಗಂಡನಿಲ್ಲದವಳು | .... | ೨೫೪ | ೧೩ |
| ರಮಣಿ—ಹೆಣ್ಣುಮಗು | .... | ೨೯ | ೧೨ |
| ಲೆಕ್ಕಣಿಕೆ ಪಿಡಿದವ—ಬರಹಕಾರ, ಗುಮಾಸ್ತ | .... | ೨೦೬ | ೧೭ |
| ವಚೋಲಲನೆ—ಸರಸ್ವತಿ | .... | ೩೦೨ | ೩೮ |
| ವಧೂಟೀವರ—ಹೆಂಗಸರನ್ನು ವರಿಸುವವ | .... | ೨೫೬ | ೧೮ |
| ವಲಂ—ನಿಶ್ಚಯ | .... | ೯೯ | ೧೪ |
| ವೇಸರಗಪ್ತ—ಹೇಸರಕತ್ತೆ | .... | ೧೧೪ | ೨೩ |
| ಶೂಲದೊಳಿಕ್ಕು—ಶೂಲಕ್ಕೇರಿಸು | .... | ೨೨೪ | ೩ |
| ಸದನ್ಯಗ್ರಹ—ಪಾಪಗ್ರಹ | .... | ೨೨೮ | ೩ |
| ಸಂದೆಯ—ಸಂದೇಹ | .... | ೨೯ | ೧೩ |
| | | ೬೫ | ೧೬ |
| ಸಮರಕರ—ಯುದ್ಧಮಾಡುವವ | .... | ೨೨೪ | ೨೦ |
| ಸಲ್ವಿನೆಗಂ—ಇರುವವರೆಗೂ | .... | ೩೭೪ | ೨೩ |
| ಸಲ್ವು—ಇರುವಿಕೆ | .... | ೩೮೯ | ೧೪ |
| ಸಂವರಿಸು—ಅಣಿಮಾಡು, ಸರಿಪಡಿಸು | ... | ೩೧೦ | ೨೬ |
| ಸಾಲ—ಕೋಟೆ | .... | ೪೪ | ೨೨ |

| | | ಪುಟ | ಪದ್ಯ |
|---|---|---|---|
| ಸಾಲೆ—ಸಾಕಾಗುವಷ್ಟು | .... | ೩೦೪ | ೪೫ |
| ಸೂಚೀಕರ್ಮಾಯ್ತೆ—ಹೊಲಿಗೆ ಕೆಲಸವನ್ನು ತಿಳಿದಿರುವವಳು | .... | ೨೦೩ | ೭ |
| ಸೊಡರು—ದೀಪ | .... | ೪ | ೧೯ |
| | | ೩೭ | ೧೦ |
| ಹೊರಸು—ಹಗ್ಗದ ಮಂಚ | .... | ೪೦ | ೧೬ |
| | | ೪೧ | ೧೭ |


---

WD 2482—GBPM—2,000—25-8-59.

ನಿರೆ ತದ್ವ್ಯಯಾದಿ ಗೃಹದೊಳ್
ಪಲವುಂ ಗ್ರಹಮಶುಭಮಕ್ಕೆ ಶುಭಮಕ್ಕವಱೊಳ್
ಬಲಯುಕ್ತಗ್ರಹಮದು ಕೇ
ವಲಮಾಯುವನಾತ್ಮದಾಯದೊ[1]ಳಗಪ[1]ಹರಿಕುಂ ೭

(ಕ್ರೂರೋದಯ ಹರಣ)

ಜನನಂ ಸಂಭವಿಸಿರ್ದ ಲಗ್ನಗೃಹದೊಳ್ ಪಾಪಗ್ರಹಂ ನಿಂದೊಡ
ರ್ದನವಾಂಶಂಗಳಿನಾಯುವನ್ನಱಿದು ಭಾಗಂಗೊಂಡು ನೂಱೆಂಟಱಿಂ
ದೆ ನರಾಯುಷ್ಯದೊಳತ್ತ ಕುಂದಿಪುದು ಪೆತ್ತಾ ಲಬ್ಧಮಂ ನೋಡೆ ಸೌ
ಮ್ಯನದಂ ಕುಂದಿಪುದಾಯುವಬ್ದದೊಳಗಂತಾ ಲಬ್ಧದೊಂದರ್ಧಮಂ ೮

ಆರನೆಯ ಒಂದುಭಾಗವನ್ನೂ ನವಮಭಾವ ಮಧ್ಯದಲ್ಲಿದ್ದರೆ ಎಂಟನೇ ಒಂದುಭಾಗವನ್ನೂ ಅಷ್ಟಮಭಾವ ಮಧ್ಯದಲ್ಲಿದ್ದರೆ ಹತ್ತನೇ ಒಂದುಭಾಗೆ ವನ್ನೂ ಸಪ್ತಮಭಾವ ಮಧ್ಯದಲ್ಲಿದ್ದರೆ ಹನ್ನೆರಡನೇ ಒಂದುಭಾಗವನ್ನೂ ತಾವು ಕೊಡುವ ಆಯುಸ್ಸಿನಲ್ಲಿ ಕಡಿಮೆಮಾಡುತ್ತಾರೆ. ಭಾವದ ಇತರಭಾಗಗಳಲ್ಲಿ ರುವಾಗ ಅನುಪಾತಮಾಡಿ ಆಯುರ್ಹರಣವನ್ನು ತಿಳಿದುಕೊಳ್ಳಬೇಕು.

೭. ವ್ಯಯಾದಿ ಭಾವಗಳಲ್ಲಿ ಹಲವು ಶುಭಗ್ರಹಗಳಾಗಲೀ ಅಶುಭ ಗ್ರಹಗಳಾಗಲೀ ಇದ್ದರೆ ಅವರಲ್ಲಿ ಬಲಿಷ್ಠವಾದ ಗ್ರಹಮಾತ್ರ ತಾನು ಕೊಡುವ ಆಯುರ್ದಾಯದಲ್ಲಿ ಆಯಾ ಭಾವಕ್ಕೆ ಹೇಳಿರುವಷ್ಟನ್ನು ಕಡಿಮೆಮಾಡುತ್ತದೆ.

ವಿ—ಒಂದೇ ಭಾವದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚು ಗ್ರಹಗಳು ಇದ್ದರೆ ಶುಭಗ್ರಹವಾಗಲೀ ಅಶುಭಗ್ರಹವಾಗಲೀ ಯಾವ ಗ್ರಹವು ಬಲಿಷ್ಠವೋ ಅದು ತನ್ನ ಭಾಗದಷ್ಟನ್ನು ಮಾತ್ರ ಕಡಿಮೆಮಾಡುತ್ತದೆ. ಆ ಭಾವದಲ್ಲಿರುವ ಉಳಿದ ಗ್ರಹಗಳಿಂದ ಬರುವ ಆಯುರ್ದಾಯಕ್ಕೆ ಚಕ್ರಪಾತ ಹರಣವಿಲ್ಲ.

೮. ಜನ್ಮಲಗ್ನದಲ್ಲಿ ಪಾಪಗ್ರಹವಿದ್ದರೆ ಅರ್ಧೋದಿತ ನವಾಂಶಸಹಿತವಾದ ಗತನವಾಂಶ ಸಂಖ್ಯೆಯಿಂದ ಗುಣಿಸಿ ಬಂದ ಆಯುಸ್ಸನ್ನು ತಿಳಿದು ನೂರೆಂಟ ರಿಂದ ಭಾಗಿಸಿ ಬಂದ ಲಬ್ಧಿಯನ್ನು ಆಯುರ್ದಾಯದಲ್ಲಿ ಕಳೆಯುವುದು. ಶುಭ ಗ್ರಹವು ನೋಡಿದರೆ ಬಂದ ಲಬ್ಧಿಯ ಅರ್ಧಭಾಗವನ್ನು ಮಾತ್ರ ಆಯುರ್ದಾಯ ದಲ್ಲಿ ಕಡಿಮೆಮಾಡುವುದು.

ವಿ—ಸೂರ್ಯ ಕುಜ ಶನಿಗಳಲ್ಲೊಬ್ಬರು ಲಗ್ನದಲ್ಲಿದ್ದರೆ ಆ ಲಗ್ನದಲ್ಲಿ ಉದಿತ ವಾಗಿರುವ ನವಾಂಶಸಂಖ್ಯೆಯಿಂದ ಒಟ್ಟು ಆಯುರ್ದಾಯವನ್ನು ಗುಣಿಸಿ ನೂರೆಂಟರಿಂದ ಭಾಗಿಸಿ ಬಂದ ಲಬ್ಧಿ ವರ್ಷಾದಿ ಫಲವನ್ನು ಒಟ್ಟು ಆಯುರ್ದಾಯ ದಲ್ಲಿ ಕಳೆಯಬೇಕು. ಶುಭಗ್ರಹವು ಲಗ್ನವನ್ನು ನೋಡಿದರೆ ನೂರೆಂಟರಿಂದ ಭಾಗಿಸಿ ಬಂದ ಲಬ್ಧಿಯ ಅರ್ಧದಷ್ಟನ್ನು ಮಾತ್ರ ಕಳೆಯಬೇಕು. ಇದೇ ಕ್ರೂರೋದಯಹರಣವು. ಕೆಲವರು ಮೇಷದಿಂದ ಇಷ್ಟಲಗ್ನದವರೆಗೆ ಆಗುವ

1 ಳ್ಪರಿ (ಕ) ಳಪ (ಗ).

(ಗ್ರಹವು ಪರಮಾಯುರ್ದಾಯವನ್ನು ಕೊಡುವ ಕಾಲ)

* ಗ್ರಹಮೇೞುಂ ಜನನೋದಯ
ಗೃಹಮುಂ ಬಲಯುಕ್ತಮೆನೆ ಪರಸ್ಪರ ಪೀಡಾ
ರಹಿತಂ ಸ್ವಗೃಹಸ್ಥಂ ತ
ದ್ಗ್ರಹಮೆನೆ ಪರಮಾಯುವಂ ಯಥೋಕ್ತಂ ಕುಡುಗುಂ ೯

---

ನವಾಂಶಸಂಖ್ಯೆಯನ್ನು ತೆಗೆದುಕೊಳ್ಳಬೇಕೆಂದು ಅಭಿಪ್ರಾಯಪಡುತ್ತಾರೆ. ಈ ಕ್ರಮದಂತೆ ಮೀನಲಗ್ನದ ಅಂತ್ಯನವಾಂಶದಲ್ಲಿ ಹುಟ್ಟಿದವನಿಗೆ ಕ್ರೂರೋದಯಹರಣವನ್ನು ಮಾಡುವ ಸಂದರ್ಭದಲ್ಲಿ ಗುಣಕ ಭಾಜಕಗಳೆರಡೂ ನೂರೆಂಟೇ ಆಗುವುದರಿಂದ ಒಟ್ಟು ಆಯುಸ್ಸನ್ನೇ ಹರಣಮಾಡಬೇಕಾಗುತ್ತದೆ. ಅಂದರೆ ಮೀನಲಗ್ನ ಮೀನನವಾಂಶದಲ್ಲಿ ಹುಟ್ಟಿದವನಿಗೆ ಗಣಿತದಿಂದ ಆಯುರ್ದಾಯವು ಶೂನ್ಯ ಬರುತ್ತದೆ. ಆದರೆ ಮೀನಲಗ್ನ ಮೀನನವಾಂಶದಲ್ಲಿ ಹುಟ್ಟಿರುವ ಅನೇಕರು ಬದುಕಿರುವುದರಿಂದ ಮೇಷಾದಿ ಇಷ್ಟಲಗ್ನದವರೆಗಿನ ನವಾಂಶಸಂಖ್ಯೆಯನ್ನು ತೆಗೆದುಕೊಳ್ಳದೆ ಇಷ್ಟಲಗ್ನದ ನವಾಂಶವನ್ನು ಮಾತ್ರ ತೆಗೆದುಕೊಳ್ಳುವುದು ನ್ಯಾಯವಾಗಿದೆ.

ಈ ಕ್ರೂರೋದಯಹರಣವನ್ನು ಅಂಶಾಯುರ್ದಾಯ ಗಣಿತದಲ್ಲಿ ಮಾಡಬೇಕಾಗಿಲ್ಲ ಎಂದು ಪೂರ್ವ ಜ್ಯೌತಿಷಾಚಾರ್ಯರ ಅಭಿಪ್ರಾಯ. ಆದರೂ ಶ್ರೀಧರನು ಅಂಶಾಯುರ್ದಾಯ ಪ್ರಕರಣದಲ್ಲೇ ಹೇಳಿರುವುದರಿಂದ ಈ ಆಯುರ್ದಾಯದಲ್ಲೂ ಕ್ರೂರೋದಯಹರಣವನ್ನು ಮಾಡಬೇಕೆಂದು ಶ್ರೀಧರನಿಗೆ ಅಭಿಪ್ರಾಯವಿರುವಂತೆ ಕಂಡುಬರುತ್ತದೆ.

೯. ಸೂರ್ಯಾದಿ ಏಳುಗ್ರಹಗಳೂ ಜನನಲಗ್ನವೂ ಬಲಿಷ್ಠವಾಗಿದ್ದು ಪೀಡೆಯಿಲ್ಲದಿದ್ದರೆ ಸ್ವಕ್ಷೇತ್ರದಲ್ಲಿ ಗ್ರಹವಿದ್ದರೆ ತನಗೆ ಹೇಳಿರುವಷ್ಟು ಪರಮಾಯುರ್ದಾಯವನ್ನು ಆ ಗ್ರಹವು ಕೊಡುತ್ತದೆ.

ವಿ–ಜನನಕಾಲದಲ್ಲಿ ಸೂರ್ಯಚಂದ್ರರು ಗ್ರಹಣಪೀಡಿತರಾಗದೆ ಬಲಿಷ್ಠರಾಗಿ ಸ್ವಕ್ಷೇತ್ರ ಅಥವಾ ಉಚ್ಚಕ್ಷೇತ್ರದಲ್ಲಿದ್ದರೆ ಅವರು ತಮಗೆ ಹೇಳಿರುವಷ್ಟು ಪರಮಾಯುಸ್ಸನ್ನು ಕೊಡುತ್ತಾರೆ. ಲಗ್ನರಾಶಿಯೂ ಗ್ರಹಣಪೀಡಿತವಾಗದೆ ಪಾಪಗ್ರಹಗಳೂ ಲಗ್ನದಲ್ಲಿಲ್ಲದೆ ಬಲಿಷ್ಠವಾಗಿರುವಾಗ ಲಗ್ನಕ್ಕೆ ಉಕ್ತವಾಗಿರುವ ಪರಮಾಯುಸ್ಸು ಬರುತ್ತದೆ. ಕುಜಾದಿ ಐದು ಗ್ರಹಗಳೂ ಅಸ್ತರಾಗದೆ ಯುದ್ಧದಲ್ಲಿ ಪರಾಜಿತರಾಗದೆ ಸ್ವಕ್ಷೇತ್ರ ಅಥವಾ ಉಚ್ಚಕ್ಷೇತ್ರದಲ್ಲಿದ್ದು ಬಲಿಷ್ಠರಾಗಿದ್ದರೆ ತಮಗೆ ಉಕ್ತವಾಗಿರುವಷ್ಟು ಪರಮಾಯುಸ್ಸನ್ನು ಕೊಡುತ್ತವೆ.

---

* (ಗ) ಪ್ರತಿಯಲ್ಲಿ ೯–೧೦–೧೧–೧೨ನೇ ಪದ್ಯಗಳಿಲ್ಲ.

(ಮಾನವ ಮೃಗ ಮತ್ತು ಪಕ್ಷಿವರ್ಗದ ಪರಮಾಯುರ್ದಾಯಪ್ರಮಾಣ)

ಪರಮಾಯುಷ್ಯಮುಮ[1]ಯ್ದಿರು[1]ಳ್ವೆರಸು ನೂಱುಪ್ಪತ್ತು ವರ್ಷಂ ನರ
ದ್ವಿರದೌಘಕ್ಕೆ ಹಯಕ್ಕೆ ಮೂವತೆರಡಿಪ್ಪತ್ತಯ್ದು ಬೆಳ್ಗತ್ತೆಗಂ
ಕರಭಕ್ಕಂ ಮಹಿ[2]ಷೋಕ್ಷ[2]ಜಾತಿಗದೆ ತಾನೇ[ಕೋ]ನಿತಂ ನಾಯ್ಗೆ ಪ
ನ್ನೆರಡೀರೆಂಟಜಮಾದಿಯಾಗೆ ಮೃಗಸಂದೋಹಕ್ಕೆ ಶಾಸ್ತ್ರೋಕ್ತಿಯಿಂ ೧೦

(ಪೈಂಡಾಯುರ್ದಾಯ)

ಧರಣೀಜಂ ಪದಿನ್ಯೆದು ಘರ್ಮರುಚಿ ಪತ್ತೊಂಬತ್ತು ಶಾಶಾಂಕಿ ಪ
ನ್ನೆರಡಿಪ್ಪತ್ತು ದಿನಾಧಿನಾಥಸುತನಿಪ್ಪತ್ತೈದು ಚಂದ್ರಂ ಪುರಂ
ದರವಂದ್ಯಂ ಪದಿನ್ಯೆದು ದೈತ್ಯಗುರುವಿಪ್ಪತ್ತೊಂದು ಸಂವತ್ಸರಂ
ಪರಮೋಚ್ಚಾಂಶದೊಳೊಂದಿ ನಿಂದೊಡದು ಪಿಂಡಾಯುಷ್ಯಮಕ್ಕುಂ ಧ್ರುವಂ ೧೧

(ನೀಚಾರ್ಧಹರಣ)

ಇರೆ ನೀಚದೊಳರ್ಧಮನಪ
ಹರಿಸುಗುಮಾ ನೀಚರಾಶಿಯಿಂದಂ ಪೂರ್ವಾ
ಪರದೊಳನುಪಾತದಿಂ ಪರಿ
ಹರಿಸುಗುಮಖಿಳಗ್ರಹಾ[ಯು] ಪಿಂಡಾಯುವಿನೊಳ್ ೧೨

---

೧೦. ಮನುಷ್ಯವರ್ಗ ಮತ್ತು ಆನೆಗಳಿಗೆ ನೂರಿಪ್ಪತ್ತು ವರ್ಷ ಐದು ದಿನಗಳು, ಕುದುರೆಗೆ ಮೂವತ್ತೆರಡು, ಕತ್ತೆಗೂ ಒಂಟೆಗೂ ಇಪ್ಪತ್ತೈದು, ಎಮ್ಮೆ ಎತ್ತು ಈ ಜಾತಿಗೆ ಸೇರಿದ ಪ್ರಾಣಿಗಳಿಗೆ ಒಂದು ಕಡಿಮೆ [ಇಪ್ಪತ್ತ ನಾಲ್ಕು], ನಾಯಿಗೆ ಹನ್ನೆರಡು, ಆಡು ಮೊದಲಾದ ಪ್ರಾಣಿವರ್ಗಕ್ಕೆ ಹದಿನಾರು ವರ್ಷಗಳು ಪರಮಾಯುರ್ದಾಯ ಪ್ರಮಾಣವು.

೧೧. ಕುಜ ಹದಿನೈದು, ಸೂರ್ಯ ಹತ್ತೊಂಬತ್ತು, ಬುಧ ಹನ್ನೆರಡು, ಶನಿ ಇಪ್ಪತ್ತು, ಚಂದ್ರ ಇಪ್ಪತ್ತೈದು, ಗುರು ಹದಿನೈದು, ಶುಕ್ರ ಇಪ್ಪತ್ತೊಂದು. ಇದೇ ಗ್ರಹವು ಪರಮೋಚ್ಚಭಾಗದಲ್ಲಿದ್ದಾಗ ಕೊಡುವ ಪೈಂಡಾಯುರ್ದಾಯ ವರ್ಷ ಪ್ರಮಾಣವು.

ವಿ—ಈ ಪೈಂಡಾಯುರ್ದಾಯವನ್ನು ಮಯ ಯವನ ಮಣಿತ್ಥ ಪರಾಶರಾದಿ ಜ್ಯೋತಿಷಾಚಾರ್ಯರು ಹೇಳಿರುತ್ತಾರೆ. ಅದನ್ನೇ ವರಾಹಮಿಹಿರಾ ಚಾರ್ಯರು ತಮ್ಮ ಗ್ರಂಥದಲ್ಲಿಯೂ ಹೇಳಿರುತ್ತಾರೆ.

೧೨. ಪೈಂಡಾಯುರ್ದಾಯದಲ್ಲಿ ಗ್ರಹವು ನೀಚಕ್ಷೇತ್ರದಲ್ಲಿದ್ದರೆ ತಾನು ಕೊಡುವ ಆಯುಸ್ಸಿನ ಅರ್ಧಭಾಗವನ್ನು ಅಪಹರಿಸುತ್ತದೆ. ಪೂರ್ವಾಪರ ಗಳಲ್ಲಿ ಅನುಪಾತದಿಂದ ಬರುವಷ್ಟು ಭಾಗವನ್ನು ಕಡಿಮೆಮಾಡುತ್ತದೆ.

---

[1] ಯ್ದಿ ರ (ಕ) [2] ಪಾಕ್ಷ (ಕ).

(ಪೈಂಡಾಯುರ್ದಾಯ ದೂಷಣೆ)

ಇರೆ ಸರ್ವಗ್ರಹಮುಚ್ಚದೊಳ್ ಜನಿಯಿಸಿ[1]ರ್ದಂ[1] ವಿಶ್ವವಿಶ್ವಂಭರೇ
ಶ್ವರನಕ್ಕುಂ ಪರಮಾಯುವಂ ಪಡೆಗು[2]ಮೆಂ[2]ದಂದಾ ವಿಲಗ್ನೋದ್ಭವಂ
ಪರಮಾಯುಷ್ಯಮನೆಯ್ದಿ [3][ಪೋರ್ದಿಯಧನಂ] ತಾನ[3]ಪ್ಪುದಂ ಕಂಡು ಕಂ
[4]ಡಿರೆ[4] ಪಿಂಡಾಯುವದೇವುದೆಂಬರರೆಬರ್ ಕೈಕೊಳ್ವರಂಶಾಯುಮಂ ೧೩

---

ವಿ—ಗ್ರಹವು ಪರಮನೀಚದಲ್ಲಿದ್ದರೆ ತಾನು ಕೊಡುವ ಆಯುರ್ದಾಯದಲ್ಲಿ ಅರ್ಧಭಾಗವನ್ನು ಕಡಿಮೆಮಾಡುತ್ತದೆ. ಪರಮೋಚ್ಚಭಾಗದಲ್ಲಿದ್ದಾಗ ಈ ಆಯುರ್ಹರಣವಿಲ್ಲ. ಪರಮೋಚ್ಚ ಪರಮನೀಚಗಳ ಮಧ್ಯದಲ್ಲಿ ಅನುಪಾತದಿಂದ ಹರಣಭಾಗವನ್ನು ತಿಳಿಯಬೇಕು. ಉಚ್ಚನೀಚಗಳ ಮಧ್ಯೆ ಆರು ರಾಶಿಗಳ ಅಂತರವಿರುತ್ತದೆ.

**ಆನಯನಕ್ರಮ**—ಗ್ರಹಸ್ಫುಟದಿಂದ ಉಚ್ಚಧ್ರುವಕವನ್ನು ಕಳೆದು ಶೇಷವನ್ನು ಬರೆದುಕೊಳ್ಳಬೇಕು. ಧ್ರುವಕದಿಂದ ಗ್ರಹಸ್ಫುಟವನ್ನು ಕಳೆಯಲು ಆಗದಿದ್ದರೆ ಧ್ರುವಕಕ್ಕೆ ೧೨ ರಾಶಿಗಳನ್ನು ಕೂಡಿ ಗ್ರಹಸ್ಫುಟವನ್ನು ಕಳೆಯಬೇಕು. ಶೇಷವು ಆರು ರಾಶಿಗಳಿಗಿಂತ ಕಡಿಮೆಯಾಗಿದ್ದರೆ ಅದನ್ನು ೧೨ ರಾಶಿಗಳಲ್ಲಿ ಕಳೆದು ಶೇಷವನ್ನು ಗ್ರಹಿಸಬೇಕು. ಆರು ರಾಶಿಗಳಿಗಿಂತ ಹೆಚ್ಚಾಗಿದ್ದರೆ ಆ ಶೇಷವನ್ನೇ ತೆಗೆದುಕೊಳ್ಳಬೇಕು. ಹೀಗೆ ಬಂದಿರುವ ರಾಶ್ಯಾದಿ ಶೇಷಪ್ರಮಾಣವನ್ನು ಲಿಪ್ತಿಗಳನ್ನಾಗಿ ಮಾಡಿ ಆಯಾಗ್ರಹದ ಪೈಂಡಾಯುರ್ವರ್ಷಗಳಿಂದ ಗುಣಿಸಿ ೧೦೮೦೦ ರಿಂದ ಭಾಗಿಸಿದರೆ ಬರುವ ಲಬ್ಧವೇ (ವರ್ಷಾದಿ) ಆಯಾ ಗ್ರಹವು ಕೊಡುವ ಆಯುರ್ದಾಯಪ್ರಮಾಣವಾಗುತ್ತದೆ.

೧೩. ಎಲ್ಲ ಗ್ರಹಗಳೂ ಉಚ್ಚಕ್ಷೇತ್ರದಲ್ಲಿದ್ದಾಗ ಹುಟ್ಟಿದವನು ಚಕ್ರವರ್ತಿಯಾಗುತ್ತಾನೆ; ಪರಮಾಯುರ್ದಾಯವನ್ನೂ ಪಡೆಯುತ್ತಾನೆ ಎಂದು ಹೇಳಿದ್ದರೂ, ಆ ಲಗ್ನದಲ್ಲೇ ಹುಟ್ಟಿ ಪರಮಾಯುರ್ದಾಯವಿದ್ದು ನಿರ್ಧನರಾಗಿರುವುದನ್ನು ನೋಡಿ ನೋಡಿ ಪೈಂಡಾಯುವನ್ನು ಹೇಗೆ ತಾನೆ ತೆಗೆದುಕೊಳ್ಳುವುದು ಎಂದು ಶಂಕಿಸಿ ಕೆಲವರು ಅಂಶಾಯುರ್ದಾಯವನ್ನೇ ಗಣನೆಗೆ ತೆಗೆದುಕೊಂಡಿರುತ್ತಾರೆ.

ವಿ—ಎಲ್ಲ ಗ್ರಹಗಳೂ ಏಕಕಾಲದಲ್ಲಿ ಉಚ್ಚಕ್ಷೇತ್ರದಲ್ಲಿರಲು ಸಾಧ್ಯವಿಲ್ಲ. ಆರು ಗ್ರಹಗಳು ಮಾತ್ರ ಉಚ್ಚಕ್ಷೇತ್ರದಲ್ಲಿರಬಹುದು. ಆರು ಗ್ರಹಗಳು ಉಚ್ಚಕ್ಷೇತ್ರದಲ್ಲಿದ್ದಾಗ ಹುಟ್ಟಿದವನು ಚಕ್ರವರ್ತಿಯಾಗುತ್ತಾನೆಂದು ಬಾದರಾಯಣ ಯವನೇಶ್ವರಾದಿಗಳು ಹೇಳಿರುತ್ತಾರೆ. ಪೈಂಡಾಯುರ್ದಾಯದ ಗಣನೆಯಂತೆ ಪರಮಾಯುರ್ದಾಯ ಬರಬೇಕಾದರೆ ಆರು ಗ್ರಹಗಳೂ ಉಚ್ಚಕ್ಷೇತ್ರದಲ್ಲಿದ್ದಾಗ ಮಾತ್ರ ಸಂಭವಿಸುತ್ತದೆ. ಪ್ರಕೃತ ಇದರಂತೆ ಪರಮಾಯುಸ್ಸುಳ್ಳವರೆಲ್ಲರಿಗೂ

---

[1] ದರ್ಗ (ತ) [2] ಪೆಂ (ಕ) [3] ಬರ್ದವನತ್ತು ತಾನು (ಕ ಗ) [4] ಡು (ಕ)

ಚಕ್ರವರ್ತಿಯೋಗ ಸಂಭವವಿರುತ್ತದೆ. ಆದರೆ ಇದು ಪ್ರತ್ಯಕ್ಷ ವಿರೋಧ. ದೀರ್ಘಾಯುಗಳಾಗಿ ಬದುಕಿರುವ ಅನೇಕರು ನಿರ್ಧನರಾಗಿರುವುದನ್ನು ನಾವು ಈಗಲೂ ಕಾಣುತ್ತಿದ್ದೇವೆ. ಆದುದರಿಂದ ಈ ಪೈಂಡಾಯುದಾರ್ಯದಂತೆ ಆಯುಸ್ಸನ್ನು ಗಣಿತಮಾಡುವುದು ಸರಿಯಲ್ಲ. ಅಂಶಾಯುರ್ದಾಯವನ್ನೇ ಗಣನೆಮಾಡಬೇಕೆಂದು ಸತ್ಯಾಚಾರ್ಯರ ಮತವನ್ನೇ ವರಾಹಮಿಹಿರಾಚಾರ್ಯರು ಆಶ್ರಯಿಸಿರುತ್ತಾರೆ. ಇವರು ಹೇಳಿರುವ ಈ ದೂಷಣೆಯನ್ನೇ ಶ್ರೀಧರನೂ ತನ್ನ ಈ ಗ್ರಂಥದಲ್ಲಿ ಹೇಳಿರುತ್ತಾನೆ. ಆದರೆ ಬೃಹಜ್ಜಾತಕಕ್ಕೆ ವ್ಯಾಖ್ಯಾನ ಬರೆದಿರುವ ಭಟ್ಟೋತ್ಪಲರು ಇದನ್ನು ಒಪ್ಪುವುದಿಲ್ಲ.

(ದಾರಿದ್ರ್ಯಸಹಿತ ದೀರ್ಘಾಯುರ್ಜಾತಕ)

| | | ಸ್ಫುಟ | | | | ಆಯುರ್ದಾಯ | | |
|---|---|---|---|---|---|---|---|---|
| | | ರಾ | ಭಾ | ಕ | ವಿಕ | ವರ್ಷ | ತಿಂ | ದಿ |
| ೧. | ಸೂರ್ಯ | ೧ | ೧೦ | ೦ | ೦ | ೧೭ | ೫ | ೦ |
| ೨. | ಚಂದ್ರ | ೨ | ೩ | ೦ | ೦ | ೧೯ | ೧ | ೫ |
| ೩. | ಕುಜ | ೧೦ | ೨೮ | ೦ | ೦ | ೧೩ | ೯ | ೦ |
| ೪. | ಬುಧ | ೦ | ೧೫ | ೦ | ೦ | ೭ | ೦ | ೦ |
| ೫. | ಗುರು | ೪ | ೫ | ೦ | ೦ | ೧೨ | ೦ | ೧೨ |
| ೬. | ಶುಕ್ರ | ೦ | ೨೭ | ೨೦ | ೦ | ೧೯ | ೨ | ೨೬ |
| ೭. | ಶನಿ | ೧೦ | ೨೦ | ೦ | ೦ | ೧೩ | ೪ | ೦ |
| ೮. | ಲಗ್ನ | ೮ | ೨೯ | ೫೯ | ೦ | ೯ | ೦ | ೦ |
| | | | | | | ೧೧೦ | ೧೦ | ೧೩ |

ಚಕ್ರವರ್ತಿತ್ವಯೋಗವಿಲ್ಲದಿದ್ದರೂ ಈ ಗ್ರಹಸ್ಥಿತಿಯಿರುವಾಗ ಹುಟ್ಟಿದವನಿಗೆ ಪೂರ್ಣಾಯುರ್ಯೋಗವಿರುತ್ತದೆ. ಆದುದರಿಂದ ಪೂರ್ಣಾಯುರ್ಯೋಗ ಇರುವವರೆಲ್ಲರೂ ಧನಿಕರಾಗುತ್ತಾರೆ, ಸುಖಿಗಳಾಗುತ್ತಾರೆ ಎಂದು ಹೇಳುವುದು ನ್ಯಾಯವಲ್ಲ. ಆದುದರಿಂದಲೇ ಪೈಂಡಾಯುರ್ದಾಯವನ್ನು ಒಪ್ಪುವುದು ಸರಿಯಲ್ಲ ವೆಂದು ಕೆಲವರ ಅಭಿಪ್ರಾಯ. ಇದರಂತೆಯೇ ಇನ್ನೊಂದು ದೋಷವನ್ನು ವರಾಹ ಮಿಹಿರಾಚಾರ್ಯರು ಹೇಳಿರುತ್ತಾರೆ. ಆದರೆ ಅದನ್ನು ಶ್ರೀಧರನು ತನ್ನ ಗ್ರಂಥದಲ್ಲಿ ತಿಳಿಸಿಲ್ಲ.

(ಎರಡನೆಯ ದೋಷ)

ಪೈಂಡಾಯುರ್ದಾಯ ಗಣನೆಯಂತೆ ಇಪ್ಪತ್ತು ವರ್ಷಗಳಿಗಿಂತ ಕಡಿಮೆ ಆಯುಸ್ಸು ಬರುವುದಿಲ್ಲ. ಜಾತಕನಿಗೆ ಎಂಟು ವರ್ಷಗಳು ಬಾಲಾರಿಷ್ಟವಿರುವುದ ರಿಂದ ಈ ಆಯುರ್ದಾಯಗಣನೆಯಂತೆ ಎಂಟುವರ್ಷಗಳ ಮೇಲೆ ಇಪ್ಪತ್ತು ವರ್ಷಗಳೊಳಗೆ ಸಾವೇ ಬರುವುದಿಲ್ಲ. ಆದರೆ ಈ ಅಂತರದಲ್ಲಿ ಅನೇಕರು

(ಪೈಂಡಾಯುರ್ದಾಯದಂತೆ ಪರಮಾಯುರ್ಯೋಗ)

ನವಮ ನವಾಂಶಕಂ ಝಷವಿಲಗ್ನದೊಳಾಗಿರೆ ಶೀತರುಕ್ತನೂ
ಭವನಿರೆ ಪಂಚವಿಂಶತಿ ಕಳಾಂತರದೊಳ್ ವೃಷರಾಶಿಯಲ್ಲಿ ಮಿ
ಕ್ಕವರಿರೆ ತಮ್ಮ ತಮ್ಮ ಪರಮೋಚ್ಚ ವಿಭಾಗದೊಳಾ ನರಂಗೆ ಸಂ
ಭವಿಸುಗುಮಾ ಯಥೋಕ್ತ ಪರಮಾಯು ವಲಂ ಕವಿರಾಜಬಾಂಧವಾ ೧೪

---

ಸಾಯುವುದನ್ನು ನಾವು ಪ್ರತ್ಯಕ್ಷವಾಗಿ ನೋಡುತ್ತಿರುವ ಕಾರಣ ಪ್ರತ್ಯಕ್ಷವಿರುದ್ಧ ವಾಗುತ್ತದೆ. ಆದುದರಿಂದ ಪೈಂಡಾಯುರ್ದಾಯವನ್ನು ಗಣನೆಗೆ ತೆಗೆದು ಕೊಳ್ಳುವುದು ಸರಿಯಲ್ಲ ಎಂದು ವರಾಹಮಿಹಿರಾಚಾರ್ಯರು ಹೇಳಿರುತ್ತಾರೆ.

(ಪರಿಹಾರ)

ಜಾತಕಪಾರಿಜಾತ ಗ್ರಂಥದಲ್ಲಿ "ರಾಜಯೋಗೇಷು ಸರ್ವೇಷು ಪೈಂಡ್ಯ ಮಾಹ ಪರಾಶರಃ" ಎಂದೂ, ಸರ್ವಾರ್ಥಚಿಂತಾಮಣಿಯಲ್ಲಿ "ಭಾಗ್ಯ ಯೋಗೇಷು ದೀರ್ಘಾಯುರ್ವದಂತಿ ಯವನಾದಯಃ" ಎಂದೂ ಹೇಳಿರುವಂತೆ ರಾಜಯೋಗಾದಿ ಭಾಗ್ಯಯೋಗಗಳಲ್ಲಿ ಹುಟ್ಟಿದವರಿಗೆ ಮಾತ್ರ ಪೈಂಡಾಯು ರ್ದಾಯವನ್ನು ಗಣನೆಮಾಡುವುದರಿಂದ ಯಾವ ದೋಷಕ್ಕೂ ಅವಕಾಶವಿರು ವುದಿಲ್ಲ.

೧೪. ಜನನವು ಮೀನಲಗ್ನದಲ್ಲಿ ಒಂಬತ್ತನೆಯ ನವಾಂಶ [ಮೀನಲಗ್ನ ಮೀನನವಾಂಶ] ದಲ್ಲಿ ಆಗಿ ಬುಧನು ವೃಷಭರಾಶಿಯಲ್ಲಿ ೨೫ನೆಯ ಕಲೆಯಲ್ಲೂ ಉಳಿದಗ್ರಹಗಳು ತಮ್ಮ ತಮ್ಮ ಪರಮೋಚ್ಚಭಾಗಗಳಲ್ಲೂ ಇದ್ದಾಗ ಹುಟ್ಟಿದವ ನಿಗೆ ಪರಮಾಯುರ್ದಾಯವು ಸಂಭವಿಸುತ್ತದೆ.

ಪಿ–

| | ರಾ | ಭಾ | ಕ | |
|---|---|---|---|---|
| ರವಿ ಸ್ಫುಟ | ೦ | ೯ | ೦ | ಈ ವಿಧವಾದ ಗ್ರಹ ಸನ್ನಿವೇಶವಿರುವಾಗ ಮೀನಲಗ್ನ ಮೀನನವಾಂಶದಲ್ಲಿ ಜನನವಾದರೆ ಪೈಂಡಾಯುರ್ದಾಯದಂತೆ ಪೂರ್ಣಾಯುರ್ಯೋಗವಿರುತ್ತದೆ. |
| ಚಂದ್ರ ಸ್ಫುಟ | ೧ | ೨ | ೦ | |
| ಕುಜ ಸ್ಫುಟ | ೯ | ೨೭ | ೦ | |
| ಬುಧ ಸ್ಫುಟ | ೧ | ೦ | ೨೫ | |
| ಗುರು ಸ್ಫುಟ | ೩ | ೪ | ೦ | |
| ಶುಕ್ರ ಸ್ಫುಟ | ೧೧ | ೨೭ | ೦ | |
| ಶನಿ ಸ್ಫುಟ | ೭ | ೧೯ | ೦ | |

ಇದೇ ಗ್ರಹಸನ್ನಿವೇಶವಿರುವಾಗ ಧನುರ್ಲಗ್ನದಲ್ಲಿ ಜನನವಾದರೂ ಪೂರ್ಣಾಯು ರ್ಯೋಗವಿರುತ್ತದೆ.

(ಅಮಿತಾಯುರ್ಯೋಗ)

ತ್ರಿದಶಾಧೀಶ್ವರಮಂತ್ರಿ ಶೀತಕರರೆಂಬೀಯಿರ್ವರುಂ ಕರ್ಕಿಗೇ
ಹದೊಳಿರ್ದಂದು ಶಶಾಂಕಸೂನು ಸಿತರೆಂಬೀಯಿರ್ವರುಂ ಕೇಂದ್ರಗೇ
ಹದೊಳಿರ್ದಂದು ರಿಪುತ್ರಿಲಾಭಗೃಹದೊಳ್ ಮಿಕ್ಕನ್ಯರಿರ್ದಂದು ಪು
ಟ್ಟಿದ ಮರ್ತ್ಯಂಗೆ ಚಿರಾಯು ಸಂಭವಿಸುಗುಂ ಸಮ್ಯಕ್ಸ್ವರತ್ನಾಕರಾ ೧೫

(ಅಮಿತಾಯುರ್ಯೋಗ ಫಲ)

ಅಮಿತಾಯುಷ್ಯಂ ದೊರೆಕೊಂ
ಡ ಮನುಷ್ಯಂಗಖಿಳಮಂತ್ರ ದಿವ್ಯೌಷಧಿ ಸಿ
ದ್ಧಿ ಮಹಾಬಿಲಪ್ರವೇಶಂ
ಸುಮನೋವರ್ಗ ಪ್ರಸಾದಮುಂ ದೊರೆಕೊಳ್ಗುಂ ೧೬

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನಂ ಸರಸಪ್ರಸನ್ನ ವಚೋಲಕ್ಷ್ಮೀಧರಂ ಗದ್ಯಪದ್ಯವಿದ್ಯಾಧರಂ ಶ್ರೀಧರಾಚಾರ್ಯ ಪ್ರಣೀತಮಪ್ಪ ಜಾತಕತಿಲಕದೊಳ್ ಆಯುರ್ದಾಯ ಪ್ರಕರಣ ವರ್ಣನಂ ಅಷ್ಟಮಾಧಿಕಾರಂ.

---

೧೫. ಗುರು ಚಂದ್ರರಿಬ್ಬರೂ ಕರ್ಕಾಟಕರಾಶಿಯಲ್ಲಿ ಲಗ್ನದಲ್ಲಿರುವಾಗ ಬುಧ ಶುಕ್ರರಿಬ್ಬರೂ ಕೇಂದ್ರಗೃಹದಲ್ಲೂ, ಆರು ಮೂರು ಹನ್ನೊಂದನೇ ಸ್ಥಾನಗಳಲ್ಲಿ ಉಳಿದವರೂ ಇರುವಾಗ ಹುಟ್ಟಿದವನಿಗೆ ದೀರ್ಘಾಯುಸ್ಸು ಸಂಭವಿಸುತ್ತದೆ.

ವಿ–ಕರ್ಕಾಟಕ ಲಗ್ನದಲ್ಲಿ ಗುರುಚಂದ್ರರು ಧನುಸ್ಸಿನಲ್ಲಿ ಸೂರ್ಯ ಮಕರದಲ್ಲಿ ಬುಧ ತುಲಾದಲ್ಲಿ ಶುಕ್ರ ವೃಷಭದಲ್ಲಿ ಶನಿ ಕನ್ಯೆಯಲ್ಲಿ ಕುಜನಿರುವಾಗ ಅಥವಾ ಕರ್ಕಾಟಕ ಲಗ್ನದಲ್ಲಿ ಗುರುಚಂದ್ರರು ಕನ್ಯೆಯಲ್ಲಿ ಶನಿ ವೃಷಭದಲ್ಲಿ ಕುಜ ಧನುಸ್ಸಿನಲ್ಲಿ ಸೂರ್ಯ ತುಲಾದಲ್ಲಿ ಬುಧ ಮಕರದಲ್ಲಿ ಶುಕ್ರನಿರುವಾಗ ಅಥವಾ ಕರ್ಕಾಟಕ ಲಗ್ನದಲ್ಲಿ ಗುರು ಚಂದ್ರರು ಕನ್ಯೆಯಲ್ಲಿ ಸೂರ್ಯ ತುಲಾದಲ್ಲಿ ಬುಧ ಶುಕ್ರರು ಧನುಸ್ಸಿನಲ್ಲಿ ಶನಿ ವೃಷಭದಲ್ಲಿ ಕುಜನಿರುವಾಗ ಅಥವಾ ಕರ್ಕಾಟಕ ಲಗ್ನದಲ್ಲಿ ಗುರುಚಂದ್ರರು ಕನ್ಯೆಯಲ್ಲಿ ಶನಿ ವೃಷಭದಲ್ಲಿ ರವಿ ಮೇಷದಲ್ಲಿ ಬುಧ ಶುಕ್ರರು ಧನುಸ್ಸಿನಲ್ಲಿ ಕುಜನಿರುವಾಗ ಹುಟ್ಟಿದವನು ಚಿರಾಯುವಾಗುತ್ತಾನೆ. ಈ ಯೋಗಗಳಲ್ಲಿ ಹುಟ್ಟಿದವನಿಗೆ ಆಯುರ್ದಾಯಗಣನೆ ಮಾಡಬೇಕಾಗಿಲ್ಲ.

೧೬. ಅಮಿತಾಯುರ್ದಾಯಯೋಗದಲ್ಲಿ ಹುಟ್ಟಿದವನಿಗೆ ಎಲ್ಲ ಮಂತ್ರ ಮತ್ತು ಔಷಧಿಗಳ ಸಿದ್ಧಿಯೂ ಮಹಾಬಿಲಪ್ರವೇಶವೂ ದೇವತೆಗಳ ಪ್ರಸಾದವೂ ಉಂಟಾಗುತ್ತದೆ. [ಅಮಿತಾಯುರ್ಯೋಗದಲ್ಲಿ ಹುಟ್ಟಿದವನು ಸಿದ್ಧಪುರುಷನಾಗುತ್ತಾನೆ].

## ಆಯುರ್ದಾಯ ವಿಶೇಷ ವಿಚಾರ

ಆಯುರ್ದಾಯವು ಗ್ರಹಯೋಗಜ ಗಣಿತಾಗತವೆಂದು ಎರಡುವಿಧ; ಗ್ರಹಯೋಗಜವು ನಿಯತಾಯುರ್ದಾಯ ಪರಮಾಯುರ್ದಾಯ ಅಮಿತಾಯುರ್ದಾಯವೆಂದು ಮೂರುವಿಧ.

ಗಣಿತಾಗತವು ಅಂಶಾಯುರ್ದಾಯವೆಂದೂ ಪೈಂಡಾಯುರ್ದಾಯವೆಂದೂ ನೈಸರ್ಗಿಕಾಯುರ್ದಾಯವೆಂದೂ ಜೀವಶರ್ಮೋಕ್ತಾಯುರ್ದಾಯವೆಂದೂ ನಾಲ್ಕುವಿಧ; ಈ ನಾಲ್ಕುವಿಧ ಆಯುರ್ದಾಯಗಳಲ್ಲಿ ಶ್ರೀಧರನು ಸತ್ಯಾಚಾರ್ಯ ಬಾದರಾಯಣ ಭಾರ್ಗವ ಗಾರ್ಗ್ಯಾದಿ ಜ್ಯೌತಿಷಾಚಾರ್ಯರು ಹೇಳಿರುವ ಅಂಶಾಯುರ್ದಾಯವನ್ನೂ ಮತ್ತು ಮಯ ಮಣಿ ಯವನ ಪರಾಶರ ವಿಷ್ಣುಗುಪ್ತ (ಚಾಣಿಕ್ಯ) ದೇವಸ್ವಾಮಿ ಸಿದ್ಧಸೇನ ಹರದತ್ತ ಪಿಂಗಳ ಸಮಂತಭದ್ರ ಈ ಹತ್ತು ಮಂದಿ ಜ್ಯೌತಿಷಾಚಾರ್ಯರು ಹೇಳಿರುವ ಪೈಂಡಾಯುರ್ದಾಯವನ್ನೂ ಈ ಆಯುರ್ದಾಯ ಪ್ರಕರಣದಲ್ಲಿ ಹೇಳಿರುತ್ತಾನೆ. ನಿಸರ್ಗಾಯುರ್ದಾಯವನ್ನು ದಶಾಂತರ್ದಶಾ ಪ್ರಕರಣದಲ್ಲಿ ಹೇಳಿರುವನು.

ಜೀವಶರ್ಮಾಯುರ್ದಾಯ—ಪರಮಾಯುರ್ದಾಯ [೧೨೦ ವರ್ಷ ೫ ದಿನ]ವನ್ನು ಗ್ರಹಸಂಖ್ಯೆಯಿಂದ [೭ರಿಂದ] ಭಾಗಿಸಿದರೆ ಪ್ರತಿಗ್ರಹದ ಆಯುರ್ದಾಯ [೧೭ ವರ್ಷ ೧ ತಿಂ. ೨೨ ದಿ. ೮ ಘಂ. ೨೪ ನಿ.] ಪ್ರಮಾಣವು ಬರುತ್ತದೆ. ಈ ಕ್ರಮದಲ್ಲಿ ಎಲ್ಲ ಗ್ರಹಗಳ ಆಯುಸ್ಸೂ ಒಂದೇ ಸಮನಾಗಿರುತ್ತದೆ. ಈ ಆಯುರ್ದಾಯಗಣನೆಯಲ್ಲಿ ಪೈಂಡಾಯುರ್ದಾಯದಂತೆ ಹರಣ ಮತ್ತು ಲಗ್ನಾಯುಸ್ಸನ್ನು ಮಾಡಬೇಕು. ಈ ಆಯುರ್ದಾಯವು ವರಾಹಮಿಹಿರಾಚಾರ್ಯರಿಗೆ ಸಮ್ಮತವಲ್ಲ.

ನೈಸರ್ಗಿಕಾಯುರ್ದಾಯ—ಪರಮೋಚ್ಚದಲ್ಲಿರುವಾಗ ಚಂದ್ರ ೧ ವರ್ಷ, ಕುಜ ೨ ವರ್ಷ, ಬುಧ ೯ ವರ್ಷ, ಶುಕ್ರ ೨೦ ವರ್ಷ, ಗುರು ೧೮ ವರ್ಷ, ಸೂರ್ಯ ೨೦ ವರ್ಷ, ಶನಿ ೫೦ ವರ್ಷ ಈ ಕ್ರಮದಲ್ಲಿ ಗ್ರಹಗಳು ಆಯುರ್ದಾಯವನ್ನು ಕೊಡುತ್ತಾರೆ. ೧೨೦ ವರ್ಷಗಳಾದಮೇಲೆ ಎಷ್ಟು ವರ್ಷಗಳ ಕಾಲ ಜಾತಕನು ಜೀವಿಸುತ್ತಾನೋ ಆ ಪ್ರಮಾಣವೇ ಲಗ್ನಾಯುರ್ದಾಯವು.

ಈ ನಾಲ್ಕುವಿಧ ಆಯುರ್ದಾಯಗಳಲ್ಲಿ ಜನನಕಾಲದಲ್ಲಿ ಸೂರ್ಯನು ಬಲಿಷ್ಠನಾಗಿದ್ದರೆ ಪೈಂಡಾಯುರ್ದಾಯವನ್ನೂ ಚಂದ್ರನು ಬಲಿಷ್ಠನಾಗಿದ್ದರೆ ನೈಸರ್ಗಿಕಾಯುರ್ದಾಯವನ್ನೂ ಲಗ್ನವು ಬಲಿಷ್ಠವಾಗಿದ್ದರೆ ಅಂಶಾಯುರ್ದಾಯವನ್ನೂ ಲಗ್ನ ಸೂರ್ಯ ಚಂದ್ರರು ದುರ್ಬಲರಾಗಿದ್ದರೆ ಜೀವಶರ್ಮಾಯುರ್ದಾಯವನ್ನೂ ಗ್ರಹಿಸಬೇಕೆಂದು ಕೆಲವರ ಮತ.

ಈ ಮೂರಕ್ಕೂ ಬಲಗಳು ಸಮನಾಗಿದ್ದರೆ ಲಗ್ನಬಲದಿಂದ ಅಂಶಾಯು ರ್ದಾಯವನ್ನೂ ಸೂರ್ಯಬಲದಿಂದ ಪೈಂಡಾಯುರ್ದಾಯವನ್ನೂ ಚಂದ್ರ ಬಲದಿಂದ ನೈಸರ್ಗಿಕಾಯುರ್ದಾಯವನ್ನೂ ಗುಣಿಸಿ ಅವುಗಳ ಮೊತ್ತವನ್ನು ಲಗ್ನ ಸೂರ್ಯ ಚಂದ್ರರ ಬಲದ ಮೊತ್ತದಿಂದ ಭಾಗಿಸಿ ಬಂದ ಲಬ್ಧವೇ ವರ್ಷಾದಿ ಸ್ಫುಟಾಯುರ್ದಾಯವಾಗುತ್ತದೆ.

ಲಗ್ನವು ಬಲಹೀನವಾಗಿ ಸೂರ್ಯಚಂದ್ರರು ಸಮಬಲಿಷ್ಠರಾಗಿದ್ದಾಗ ಪೈಂಡಾಯುರ್ದಾಯವನ್ನೂ ನೈಸರ್ಗಿಕಾಯುರ್ದಾಯವನ್ನೂ ಕೂಡಿಸಿ ಬಂದ ಮೊತ್ತದ ಅರ್ಧಭಾಗವೇ ಸ್ಫುಟಾಯುರ್ದಾಯವಾಗುತ್ತದೆ. ಹೀಗೆಯೇ ಚಂದ್ರನು ನ್ಯೂನಬಲನಾಗಿ ಲಗ್ನಸೂರ್ಯರು ಸಮಬಲದಿಂದ ಕೂಡಿದ್ದರೆ ಅಂಶಾ ಯುರ್ದಾಯ ಪೈಂಡಾಯುರ್ದಾಯಗಳ ಯೋಗಾರ್ಧ, ಸೂರ್ಯನು ನ್ಯೂನ ಬಲನಾಗಿ ಲಗ್ನಚಂದ್ರರು ಸಮಬಲದಿಂದ ಕೂಡಿದ್ದರೆ ಅಂಶಾಯುರ್ದಾಯ ನೈಸರ್ಗಿಕಾಯುರ್ದಾಯಗಳ ಯೋಗಾರ್ಧ ಸ್ಫುಟಾಯುರ್ದಾಯವಾಗುತ್ತದೆ.

ಎಲ್ಲ ಆಯುರ್ದಾಯ ಗಣನೆಯಲ್ಲೂ ನೀಚಾರ್ಧಹರಣ ಶತ್ರುಕ್ಷೇತ್ರಹರಣ ಮೂಢ (ಅಸ್ತಂಗತ)ಹರಣ ಚಕ್ರಪಾತಹರಣ ಈ ನಾಲ್ಕುವಿಧ ಹರಣಗಳನ್ನು ಮಾಡಬೇಕು. ಕ್ರೂರೋದಯಹರಣವನ್ನು ಮಾತ್ರ ಅಂಶಾಯುರ್ದಾಯವನ್ನು ಬಿಟ್ಟು ಉಳಿದ ಆಯುರ್ದಾಯಗಳಲ್ಲಿ ಮಾಡಬೇಕು.

ಶ್ರೀಧರನು ಮಾತ್ರ ತನ್ನ ಈ ಗ್ರಂಥದಲ್ಲಿ ಅಂಶಾಯುರ್ದಾಯಕ್ಕೂ ಕ್ರೂರೋದಯಹರಣವನ್ನು ಹೇಳಿರುತ್ತಾನೆ.

ಯಾರು ಪುಣ್ಯಕಾರ್ಯಗಳನ್ನು ಮಾಡುತ್ತಾ ಜಿತೇಂದ್ರಿಯರೂ ಆಹಾರ ನಿಯಮವುಳ್ಳವರೂ ದೈವಾರಾಧಕರೂ ಆಗಿರುವರೋ ಅವರಿಗೆ ಈ ಆಯು ರ್ಯೋಗವು ಸಂಭವಿಸುತ್ತದೆ. ಗಣಿತಾಗತ ಆಯುರ್ದಾಯದಷ್ಟು ಕಾಲ ಮಾನವನು ಬದುಕುತ್ತಾನೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಆತನು ಮಾಡುವ ಹೀನಕಾರ್ಯಗಳಿಂದ ಆಯುರ್ಹಾನಿಯೂ ಸತ್ಕಾರ್ಯಗಳಿಂದ ಆಯುರ್ವೃದ್ಧಿಯೂ ಆಗುತ್ತದೆ.

---

# ನವಮಾಧಿಕಾರಂ

## ದಶಾಂತರ್ದಶಾ ಪ್ರಕರಣಂ

(ದಶಾಕಾಲ ಪ್ರಮಾಣ)

ದೊರೆಕೊಂಡಾಯುವಿನೊಳಗಂ
ತರಿಸಿಯುಮೊಡಗೂಡಿಯುಂ ವಿಶುದ್ಧಂ ತಾನಾ
ಗಿರೆ ತದ್ಗ್ರಹದಾಯುಷ್ಯದ
ಪರಿಮಾಣಮೆ ತದ್ದಶಾ ಪ್ರಮಾಣಮೆನಿಕ್ಕುಂ ೧

(ದಶಾಕ್ರಮ)

ಉದಯಾದಿತ್ಯೇಂದುವೆಂದಿಂತಿವಱೊಳತಿಬಲಾಢ್ಯಂ ವಿಲಗ್ನೋದ್ಭವಂಗಾ
ದಿದಶಾನಾಥಗ್ರಹಂ ಮತ್ತೆರಡನೆಯದಱಾ ನಾಯಕಂ ಕೇಂದ್ರದೊಳ್ ನಿಂ
ದುದು ಕೇಂದ್ರಸ್ಥಾನದೊಳ್ ನಿಲ್ಲದೊಡೆ ಫಣಪರಸ್ಥಾನದೊಳ್ ನಿಂದುದಂತ
ಲ್ಲದೊಡಾಪೋಕ್ಲೀಮದೊಳ್ ನಿಂದುದು ತರತರದಿಂದಕ್ಕುಮಾಮಾದ್ಯಯಿಂದಂ ೨

---

೧. ಆಯುರ್ದಾಯ ಪ್ರಕರಣದಲ್ಲಿ ಹೇಳಿರುವ ಕ್ರಮದಂತೆ ಪ್ರಾಪ್ತವಾದ ಆಯುರ್ದಾಯದಲ್ಲಿ [ಚಕ್ರಪಾತಾದಿ]ಹರಣಗಳನ್ನೂ, [ವಕ್ರೋಚ್ಚ ಸ್ವಕ್ಷೇತ್ರಸ್ಥಿತಿ ನಿಮಿತ್ತವಾದ [ದ್ವಿ ತ್ರಿಗುಣಾದಿ]ಭರಣಗಳನ್ನೂ ಮಾಡಿದ ಮೇಲೆ ಆಯಾಗ್ರಹಕ್ಕೆ ಬಂದಿರುವ ಸ್ಫುಟ ಆಯುರ್ವರ್ಷಗಳೇ ಆಯಾಗ್ರಹದ ದಶಾಪ್ರಮಾಣವಾಗುತ್ತವೆ.

೨. ಲಗ್ನ ಸೂರ್ಯ ಚಂದ್ರರಲ್ಲಿ ಬಲಾಧಿಕನಾದವನ ದಶೆಯು ಮೊದಲನೆಯದು. ಮತ್ತೆ ಎರಡನೆಯದು ಮೊದಲ ದಶಾನಾಥನಿಗೆ ಕೇಂದ್ರಸ್ಥಾನದಲ್ಲಿರುವ ಗ್ರಹದ ದಶೆ. ಕೇಂದ್ರಸ್ಥಾನದಲ್ಲಿ ಗ್ರಹವಿಲ್ಲದಿದ್ದರೆ ಫಣಪರ ಸ್ಥಾನದಲ್ಲಿರುವ ಗ್ರಹದ ದಶೆ. ಅಲ್ಲೂ ಗ್ರಹವಿಲ್ಲದಿದ್ದರೆ ಆಪೋಕ್ಲೀಮ ಸ್ಥಾನದಲ್ಲಿರುವ ಗ್ರಹಗಳ ದಶೆಗಳು ಕ್ರಮವಾಗಿ ನಡೆಯುತ್ತವೆ.

ವಿ–ಲಗ್ನ ಸೂರ್ಯ ಚಂದ್ರರಲ್ಲಿ ಯಾವುದಕ್ಕೆ ಬಲವು ಹೆಚ್ಚಾಗಿ ಬಂದಿರುತ್ತದೆಯೋ ಅದರ ದಶೆಯೇ ಜಾತಕನಿಗೆ ಮೊದಲನೆಯ ದಶೆ. ಬಳಿಕ ಆ ಮೊದಲನೆಯ ದಶಾಧಿಪತಿಗೆ ಕೇಂದ್ರ [೧–೪–೭–೧೦] ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು ನಡೆಯುತ್ತವೆ. ಆಮೇಲೆ ಮೊದಲನೆಯ ದಶಾಧಿಪತಿಗೆ ಫಣಪರ [೨–೫–೮–೧೧]ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು ನಡೆಯುವುವು. ಅನಂತರ ಮೊದಲನೆಯ ದಶಾಧಿಪತಿಗೆ ಆಪೋಕ್ಲೀಮ [೩–೬–೯–೧೨] ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳು ನಡೆಯುವುವು. ಮೊದಲನೆಯ ದಶಾಧಿಪತಿಗೆ ಕೇಂದ್ರಸ್ಥಾನಗಳಲ್ಲಿ ಗ್ರಹವಿಲ್ಲದಿದ್ದರೆ ಮೊದಲನೆಯ ದಶೆಯಾದ ಮೇಲೆ ಆ ದಶಾಧಿಪತಿಗೆ ಫಣಪರ ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳೂ ಅನಂತರ ಆಪೋಕ್ಲೀಮ ಸ್ಥಾನಗಳಲ್ಲಿರುವ ಗ್ರಹಗಳ ದಶೆಗಳೂ ನಡೆಯುತ್ತವೆ. ಮೊದಲನೆಯ ದಶಾಧಿಪತಿಗೆ ಕೇಂದ್ರ ಮತ್ತು ಫಣಪರಗಳಲ್ಲಿ ಗ್ರಹಗಳಿಲ್ಲದಿದ್ದರೆ

(ದಶೆಗಳ ಪೌರ್ವಾಪರ್ಯ)

ಪಲವುಂ ಕೇಂದ್ರದೊಳಿರ್ದೊಡಲ್ಲಿ ಬಲಸಂಯುಕ್ತಗ್ರಹಂ ಮುಖ್ಯಮಾ
ಪಲವುಂ ಬಲ್ಲಿದರಾದೊಡಲ್ಲಿ ವಿಪುಳಾಯುರ್ದಾಯಕಂ ಮುಖ್ಯಮಾ
ಪಲವೊಂದಂದದಿನಾಯುವಂ ಕುಡುವರಿಂತಾದಲ್ಲಿ ಪೂರ್ವೋದಿತಂ
ಬಲಯುಕ್ತಗ್ರಹಮಧ್ಯದೊಳ್ ದೆಸೆಗೆ ಮುಖ್ಯಂ ಪದ್ಮವಿದ್ಯಾಧರಾ ೩

(ಶುಭಾಶುಭ ದಶೆಗಳು)

ದಿನಪಾದಿ ಗ್ರಹವಾತ್ಮೋ
ಚ್ಚ ನಿಳಯದಿಂ ದ್ವಾದಶಾಲಯಂಗ[1]ಳ[1] ನವಸಂ
ಖ್ಯೆ ನವಾಂಶಕದೊಳು ತಾಂ ನೆಲ
ಸಿ ನಿಂದುದುಚ್ಚಾಭಿಲಾಷಿ ತದ್ದೆಸೆ ಶುಭದಂ ೪

ಆಪೋಕ್ಲೀಮಗಳಲ್ಲಿರುವ ಗ್ರಹಗಳ ದಶೆಗಳೇ ಮೊದಲನೆಯು ದಶೆಯಾದಮೇಲೆ ಕ್ರಮವಾಗಿ ನಡೆಯುತ್ತವೆ.

ಲಗ್ನ ಸೂರ್ಯ ಚಂದ್ರ ಈ ಮೂರರ ಬಲವೂ ಸಮನಾಗಿದ್ದರೆ ಹೆಚ್ಚು ವರ್ಷ ಆಯುಸ್ಸನ್ನು ಕೊಡುವುದರ ದಶೆ ಮೊದಲನೆಯದು. ಸಮಬಲವೂ ಆಯುರ್ವರ್ಷಸಾಮ್ಯವೂ ಆದರೆ ಲಗ್ನದಶೆಯೇ ಮೊದಲನೆಯದು.

೩. ಹೆಚ್ಚುಗ್ರಹಗಳು ಕೇಂದ್ರಸ್ಥಾನದಲ್ಲಿದ್ದರೆ ಬಲಯುತಗ್ರಹದ ದಶೆ ಮೊದಲೂ ಬಳಿಕ ನ್ಯೂನಬಲಕ್ರಮದಲ್ಲಿ ಉಳಿದ ಗ್ರಹಗಳ ದಶೆಗಳೂ ಕ್ರಮವಾಗಿ ನಡೆಯುತ್ತವೆ; ಕೇಂದ್ರಸ್ಥಾನದಲ್ಲಿರುವ ಎಲ್ಲ ಗ್ರಹಗಳೂ ಸಮಾನಬಲರಾದರೆ ಹೆಚ್ಚು ವರ್ಷಗಳ ಆಯುರ್ದಾಯವನ್ನು ಕೊಡುವ ದಶೆ ಮೊದಲೂ ಅನಂತರ ಕಡಿಮೆ ಆಯುರ್ದಾಯವನ್ನು ಕೊಡುವ ದಶೆಗಳು ಕ್ರಮವಾಗಿಯೂ ನಡೆಯುತ್ತವೆ; ಕೇಂದ್ರಸ್ಥಾನದಲ್ಲಿರುವ ಎಲ್ಲ ಗ್ರಹಗಳೂ ಸಮಾನಬಲರೂ, ಸಮಾನವಾದ ಆಯುರ್ದಾಯವನ್ನು ಕೊಡುವವರೂ ಆದರೆ ಅವರಲ್ಲಿ ಮೊದಲು ಉದಿತನಾಗಿರುವ ಗ್ರಹದ ದಶೆಯೂ ಅನಂತರ ಉಳಿದವರಲ್ಲಿ ಪೂರ್ವೋದಿತ ಗ್ರಹಕ್ರಮದಲ್ಲಿ ದಶೆಗಳೂ ನಡೆಯುತ್ತವೆ.

ವಿ–(೧) ಕೇಂದ್ರದಲ್ಲಿರುವ ಗ್ರಹಗಳ ದಶೆಗಳಾದಮೇಲೆ ಅದರಂತೆಯೇ ಫಣಪರ ಮತ್ತು ಆಪೋಕ್ಲೀಮಗಳಲ್ಲಿರುವ ಗ್ರಹಗಳ ದಶೆಗಳು ನಡೆಯುತ್ತವೆ.

(೨) ಸೂರ್ಯನಿಗೆ ದೂರದಲ್ಲಿರುವ ಗ್ರಹವೇ ಪೂರ್ವೋದಿತಗ್ರಹವು. ಉದಯವು ಎರಡು ವಿಧ. ೧. ದೈನಂದಿನ ೨. ಸೂರ್ಯನೊಡನೆ ಅಸ್ತನಾಗಿದ್ದು ಅನಂತರ ಉದಿಸುವುದು. ಈ ಎರಡುವಿಧದಲ್ಲೂ ಸೂರ್ಯನಿಗೆ ದೂರದಲ್ಲಿದ್ದಾಗ ಗ್ರಹವು ಪೂರ್ವೋದಿತಗ್ರಹವಾಗುತ್ತದೆ.

೪. ಸೂರ್ಯಾದಿ ಗ್ರಹಗಳು ತಮ್ಮ ಉಚ್ಚಸ್ಥಾನದಿಂದ ಹನ್ನೆರಡನೆಯ ರಾಶಿಯಲ್ಲಿ ಒಂಬತ್ತನೆಯ ನವಾಂಶದಲ್ಲಿ ಇರುವಾಗ ಉಚ್ಚಾಭಿಲಾಷಿ ಎಂದು ಕರೆಯಲ್ಪಡುತ್ತವೆ. ಉಚ್ಚಾಭಿಲಾಷಿ ಗ್ರಹದ ದಶೆ ಶುಭಫಲಪ್ರದವು.

[1] ಳೊ (ಕ ಗ).

ಸ್ವಗೃಹಾತ್ಮನವಾಂಶಕ ಮಿ
ತ್ರಗೃಹ ನಿಜೋಚ್ಚಂಗಳೊಳ್ ದಶಾಪತಿ ನಿರೆ ಮಾ
ಡುಗೆವೊಳ್ಪಂ ತದ್ವಿಪರೀ
ತಗನುಂ ನೀಚಾಭಿಲಾಷಿಯುಂ ಪೊಲ್ಲಮೆಯುಂ ೫

(ಅವರೋಹಿ ಆರೋಹಿ ಸಂಜ್ಞೆ)

ದಿನನಾಥಾದಿಗಳುಚ್ಚದಿಂದಿಳಿಯೆ ನೀಚಾಂತಾಪಿನಂ ಕಷ್ಟ[1]ಮು
ಕ್ಕ[1]ನಿತುಂ ತಾನವರೋಹಿ ತದ್ದಶೆ ತದಾವಾಸಂಗಳೊಳ್ ತುಂಗಮಿ
ತ್ರನಿ[2]ಜಾಂಶ[2]ಸ್ಥಿತರಾಗೆ ಮಧ್ಯಫಲದಂ ತನ್ನೀಚದಿಂದುಚ್ಚಮು
ಪ್ಪಿನಮಾರೋಹಿ ವಿಶಿಷ್ಟಮಲ್ಲಿ ರಿಪು ನೀಚಾಂಶಸ್ಥಿತಂ ನಿಂದಿತಂ ೬

---

೫. ಜನ್ಮಕಾಲದಲ್ಲಿ ಸ್ವಕ್ಷೇತ್ರ ಸ್ವನವಾಂಶ ಮಿತ್ರಕ್ಷೇತ್ರ ಉಚ್ಚಕ್ಷೇತ್ರಗಳಲ್ಲಿ ದಶಾಧಿಪತಿ ಇದ್ದರೆ ಶುಭಫಲಗಳನ್ನು ಕೊಡುತ್ತಾನೆ. ಇದಕ್ಕೆ ವಿಪರೀತನಾಗಿದ್ದರೆ ಅಂದರೆ ಶತ್ರುಕ್ಷೇತ್ರ ಶತ್ರುನವಾಂಶ ನೀಚಕ್ಷೇತ್ರದಲ್ಲಿದ್ದರೆ ಅಥವಾ ನೀಚಾಭಿಲಾಷಿಯಾಗಿದ್ದರೆ ಕೆಟ್ಟ ಫಲಗಳನ್ನು ಕೊಡುತ್ತಾನೆ.

ವಿ–ಗ್ರಹವು ತನ್ನ ನೀಚಕ್ಷೇತ್ರದಿಂದ ಹನ್ನೆರಡನೆಯ ರಾಶಿಯ ಕೊನೆಯ [ಒಂಬತ್ತನೆಯ]ನವಾಂಶದಲ್ಲಿದ್ದರೆ ನೀಚಾಭಿಲಾಷಿಯಾಗುತ್ತದೆ.

೬. ಜನನಕಾಲದಲ್ಲಿ ಸೂರ್ಯಾದಿಗ್ರಹಗಳು ತಮ್ಮ ತಮ್ಮ ಉಚ್ಚಕ್ಷೇತ್ರದಿಂದ ನೀಚಸ್ಥಾನಕ್ಕೆ ಇಳಿಯುತ್ತಿದ್ದರೆ ದಶಾಕಾಲದಲ್ಲಿ ಅವು ಕಷ್ಟವನ್ನು ಕೊಡುತ್ತವೆ. ಅದಕ್ಕೆ ಅವರೋಹಿದಶೆ ಎಂದು ಹೆಸರು. ಅವರೋಹ ರಾಶಿಗಳಲ್ಲಿ ಉಚ್ಚಮಿತ್ರಸ್ವನವಾಂಶಗಳಲ್ಲಿರುವ ಗ್ರಹಗಳು ಮಧ್ಯಮಫಲಗಳನ್ನು ಕೊಡುತ್ತವೆ. ನೀಚಕ್ಷೇತ್ರದಿಂದ ಉಚ್ಚಕ್ಷೇತ್ರೋನ್ಮುಖವಾದ ಗ್ರಹಕ್ಕೆ ಆರೋಹಿ ಎಂದು ಹೆಸರು. ಈ ದಶೆಯಲ್ಲಿ ಶುಭಫಲಗಳಾಗುತ್ತವೆ. ಆರೋಹಿಗ್ರಹವು ಶತ್ರು ಅಥವಾ ನೀಚಾಂಶದಲ್ಲಿದ್ದರೆ ಅಶುಭಫಲಗಳನ್ನು ಕೊಡುತ್ತದೆ.

ವಿ– (ಅವರೋಹಸ್ಫುಟ)

| | ರಾ | ಅಂ | | ರಾ | ಅಂ | | |
|---|---|---|---|---|---|---|---|
| ಸೂರ್ಯ | ೦ | ೧೦ | ರಿಂದ | ೬ | ೧೦ | ರೊಳಗೆ | ಇವರ ಸೂರ್ಯಾದಿಗಳಾದ ಗ್ರಹಗಳು ಅವರೋಹಿಗಳಾಗುತ್ತಾರೆ. |
| ಚಂದ್ರ | ೧ | ೩ | ,, | ೭ | ೩ | ,, | |
| ಕುಜ | ೯ | ೨೮ | ,, | ೩ | ೨೮ | ,, | |
| ಬುಧ | ೫ | ೧೫ | ,, | ೧೧ | ೧೫ | ,, | |
| ಗುರು | ೩ | ೫ | ,, | ೯ | ೫ | ,, | |
| ಶುಕ್ರ | ೧೧ | ೨೭ | ,, | ೫ | ೨೭ | ,, | |
| ಶನಿ | ೬ | ೨೦ | ,, | ೦ | ೨೦ | ,, | |

ಉಳಿದ ರಾಶಿಗಳಲ್ಲಿದ್ದರೆ ಆರೋಹಿಗಳಾಗುತ್ತಾರೆ. ಅವರೋಹಿದಶೆಯು ಅಶುಭಫಲಪ್ರದವಾದರೂ ಗ್ರಹಗಳು ಉಚ್ಚ ಮಿತ್ರ ಸ್ವನವಾಂಶಗಳಲ್ಲಿದ್ದರೆ ಮಧ್ಯ ಫಲಪ್ರದರಾಗುತ್ತಾರೆ. ಆರೋಹಿದಶೆಯಲ್ಲಿ ಶುಭಫಲಪ್ರದವಾದರೂ ಶತ್ರು ಅಥವಾ ನೀಚಾಂಶದಲ್ಲಿದ್ದರೆ ಅಶುಭಫಲಗಳನ್ನು ಕೊಡುತ್ತಾರೆ.

---

[1] ಮಂತ (ಕ ಗ) [2] ಜೋಚ್ಚ (ಕ ಗ).

ಅರಿಗೃಹ ನವಾಂಶ[1]ದೊಳ್[1] ಕೂ
ಡಿರೆಯುಂ ಮೇಣ್ ನೀಚಗೃಹನವಾಂಶಕದೊಳ್ ಕೂ
ಡಿರೆಯುಂ ಲಗ್ನದಶಾಧೀ
ಶ್ವರನಾದಂಗಕ್ಕುಮಲ್ಲಿ ಸಾಮಾನ್ಯಫಲಂ ೭

(ಲಗ್ನದಶಾ ಫಲ)

ಕ್ರಮದಿಂ ಲಗ್ನದಶಾಧಿಪಂ ನಿಲೆ ಚರದ್ರೇಕ್ಕಾಣದೊಳ್ ಜೀವಿಗು
ತ್ತಮ ಸಾಮಾನ್ಯ ಜಘನ್ಯಮಪ್ಪ ಫಲಮಂ ತಾಂ ಮೂಱುಮೊಳ್ ನಿಶ್ಚಭೋ
ತ್ತಮ ಸಾಮಾನ್ಯ ಫಲಂ ಸ್ಥಿರೋದಯಗೃಹ ದ್ರೇಕ್ಕಾಣದೊಳ್ ಕಷ್ಟ ಮ
ಧ್ಯಮ ಸಂಪುಷ್ಟಫಲಂ ದ್ವಿದೇಹದುದಯದ್ರೇಕ್ಕಾಣದೊಳ್ ಕೂಡುಗುಂ ೮

---

೭. ಸ್ವೋಚ್ಚಾದಿ ಪ್ರಶಸ್ತಸ್ಥಾನಗಳಲ್ಲಿರುವ ಗ್ರಹವು ಶತ್ರುನವಾಂಶದಲ್ಲಿದ್ದರೆ ಅಥವಾ ನೀಚನವಾಂಶದಲ್ಲಿದ್ದರೆ ಲಗ್ನದಶೆ ಮತ್ತು ಆ ಗ್ರಹದ ದಶೆಯಲ್ಲಿ ಸಾಮಾನ್ಯ ಫಲವಾಗುತ್ತದೆ.

೮. ಜನನಕಾಲದಲ್ಲಿ ಲಗ್ನದಶಾಧಿಪತಿ ಚರರಾಶಿಯ ದ್ರೇಕ್ಕಾಣಗಳಲ್ಲಿದ್ದರೆ ಕ್ರಮವಾಗಿ ಉತ್ತಮ ಸಾಮಾನ್ಯ ಅಶುಭಫಲಗಳೂ ಸ್ಥಿರರಾಶಿಯ ದ್ರೇಕ್ಕಾಣಗಳಲ್ಲಿದ್ದರೆ ಅಶುಭ ಉತ್ತಮ ಮಧ್ಯಮ ಫಲಗಳೂ ದ್ವಿಸ್ವಭಾವ ರಾಶಿಯ ದ್ರೇಕ್ಕಾಣಗಳಲ್ಲಿದ್ದರೆ ಕಷ್ಟ ಮಿಶ್ರ ಶುಭಫಲಗಳೂ ಆಗುತ್ತವೆ.

ವಿ—ಮೇಷ ಕರ್ಕಟಕ ತುಲಾ ಮಕರ ಲಗ್ನಗಳ ಮೊದಲನೆಯ ದ್ರೇಕ್ಕಾಣದಲ್ಲಾಗಲೀ ವೃಷಭ ಸಿಂಹ ವೃಶ್ಚಿಕ ಕುಂಭಲಗ್ನಗಳ ಎರಡನೆಯ ದ್ರೇಕ್ಕಾಣದಲ್ಲಾಗಲೀ ಮಿಥುನ ಕನ್ಯಾ ಧನಸ್ಸು ಮೀನಲಗ್ನಗಳ ಮೂರನೆಯ ದ್ರೇಕ್ಕಾಣದಲ್ಲಾಗಲೀ ಜನನವಾಗಿದ್ದರೆ ಲಗ್ನದಶೆಯಲ್ಲಿ ಶುಭಫಲಗಳಾಗುತ್ತವೆ.

ಮೇಷ ಮಿಥುನ ಕರ್ಕಟಕ ಕನ್ಯಾ ತುಲಾ ಧನುಸ್ಸು ಮಕರ ಮೀನ ಲಗ್ನಗಳ ಎರಡನೆಯ ದ್ರೇಕ್ಕಾಣದಲ್ಲಾಗಲೀ ವೃಷಭ ಸಿಂಹ ವೃಶ್ಚಿಕ ಕುಂಭ ಲಗ್ನಗಳ ಮೂರನೆಯ ದ್ರೇಕ್ಕಾಣದಲ್ಲಾಗಲೀ ಜನನವಾಗಿದ್ದರೆ ಲಗ್ನದಶೆಯಲ್ಲಿ ಮಿಶ್ರಫಲಗಳಾಗುತ್ತವೆ. ಮೇಷ ಕರ್ಕಟಕ ತುಲಾ ಮಕರ ಲಗ್ನಗಳ ಮೂರನೆಯ ದ್ರೇಕ್ಕಾಣದಲ್ಲಾಗಲೀ ವೃಷಭ ಮಿಥುನ ಸಿಂಹ ಕನ್ಯಾ ವೃಶ್ಚಿಕ ಧನುಸ್ಸು ಕುಂಭ ಮೀನಲಗ್ನಗಳ ಮೊದಲನೆಯ ದ್ರೇಕ್ಕಾಣದಲ್ಲಾಗಲೀ ಜನನವಾಗಿದ್ದರೆ ಲಗ್ನದಶೆಯಲ್ಲಿ ಅಶುಭಫಲಗಳಾಗುತ್ತವೆ.

ಶ್ರೀಧರನು "ಲಗ್ನದಶಾಧಿಪಂ ನಿಲೆ ಚರದ್ರೇಕ್ಕಾಣದೊಳ್" ಎಂದು ಈ ಗ್ರಂಥದಲ್ಲಿ ಹೇಳಿರುತ್ತಾನೆ. ಇದರಂತೆ ಲಗ್ನಾಧಿಪತಿ ಇರುವ ದ್ರೇಕ್ಕಾಣದಿಂದ ಲಗ್ನಾಯುರ್ದಾಯಫಲವನ್ನು ತಿಳಿಯಬೇಕು. ಆದರೆ ಸಂಸ್ಕೃತ ಜ್ಯೋತಿಷಗ್ರಂಥಗಳಲ್ಲಿ ಲಗ್ನದ್ರೇಕ್ಕಾಣದಿಂದಲೇ ಅದರ ಫಲವನ್ನು ತಿಳಿಸಿರುವುದರಿಂದ ಈ ಗ್ರಂಥದಲ್ಲೂ ಅದರಂತೆಯೇ ಅರ್ಥಮಾಡುವುದು ಸರಿಯೆಂದು ಕಂಡುಬರುತ್ತದೆ.

---

[1] ಕ ನಿಜಾಂಶಷೊಳ್ (ಕ) ಕಾಂಶದೊಳ್ (ಗ).

(ಅಂತರ್ದಶಾವಿಭಾಗ)

ಗ್ರಹಯುಗ್ಮಂ ನೆಲಸಿರ್ದೊಡೊಂದೆ ಗೃಹದೊಳ್ ದಾಯಾರ್ಧಮಮಂ ಮೇಣ್ ಗ್ರಹಂ
ಗ್ರಹದಿಂದಂ ನವ ಪಂಚಮಂಗಳೊಳಿರಲ್ ತ್ರ್ಯಂಶಾಂಶಮಮಂ ದ್ಯೂನದೊಳ್
ಗ್ರಹದಿಂದಂ ನಿಲೆ ಸಪ್ತಮಾಂಶಜನಿತಂ ತುರ್ಯಾಷ್ಟಮಸ್ಥಾನದೊಳ್
ಗ್ರಹದಿಂ ಕೂಡೆ ಪರಸ್ಪರಂ ಸ್ವಗುಣದಿಂದಾಳ್ಗುಂ ಚತುರ್ಥಾಂಶಮಮಂ ೯

(ಒಂದೇ ರಾಶಿಯಲ್ಲಿರುವ ಗ್ರಹಗಳ ಅಂತರ್ದಶಾ ಕ್ರಮ)

ಪಲವೊಂದುರಾಶಿಯೊಳ್ ನಿಲೆ
ಬಲಾಢ್ಯನಂತರ್ದಶಾಧಿನಾಯಕನಕ್ಕುಂ
ನಿಲೆ ಲಗ್ನಕ್ಕಂ ಗ್ರಹಸಂ
ಕುಲಯುಕ್ತಕ್ರಮದಿನವು ಪರಸ್ಪರಮಾಳ್ಗುಂ ೧೦

---

೯. ಎರಡು ಗ್ರಹಗಳು ಒಂದೇ ರಾಶಿಯಲ್ಲಿದ್ದರೆ ತಮಗೆ ಬಂದಿರುವ ದಶಾಭಾಗದಲ್ಲಿ ಅರ್ಧಭಾಗವನ್ನೂ ಮತ್ತು ಗ್ರಹವು ಮತ್ತೊಂದು ಗ್ರಹದಿಂದ ಒಂಬತ್ತು ಐದನೇ ಸ್ಥಾನಗಳಲ್ಲಿದ್ದರೆ ಮೂರನೇ ಒಂದುಭಾಗವನ್ನೂ ಏಳನೇಸ್ಥಾನದಲ್ಲಿದ್ದರೆ ಏಳನೇ ಒಂದುಭಾಗವನ್ನೂ ನಾಲ್ಕು ಎಂಟನೇ ಸ್ಥಾನಗಳಲ್ಲಿದ್ದರೆ ನಾಲ್ಕನೇ ಒಂದುಭಾಗವನ್ನೂ ತಮ್ಮ ಅಧಿಕಾರಕ್ಕೆ ಪಡೆದು ಫಲಗಳನ್ನು ಕೊಡುತ್ತವೆ.

ವಿ–ಪ್ರತಿಗ್ರಹದ ದಶೆಯಲ್ಲೂ ಎಲ್ಲ ಗ್ರಹಗಳ ಅಂತರ್ದಶೆಗಳಿಲ್ಲ. ದಶಾಧಿಪತಿಯೊಡನೆ ಅಥವಾ ಆತನಿಗೆ ನಾಲ್ಕು ಐದು ಏಳು ಎಂಟು ಒಂಬತ್ತು ಈ ಸ್ಥಾನಗಳಲ್ಲಿರುವ ಗ್ರಹಗಳ ಅಂತರ್ದಶೆಗಳು ಮಾತ್ರ ಇರುತ್ತವೆ. ಉಳಿದ ಸ್ಥಾನಗಳಲ್ಲಿರುವ ಗ್ರಹಗಳ ಅಂತರ್ದಶೆಗಳು ಇಲ್ಲ. ಒಂದೇಸ್ಥಾನದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚುಗ್ರಹಗಳಿದ್ದರೆ ಅವುಗಳಲ್ಲಿ ಅತಿಬಲಿಷ್ಠವಾದ ಗ್ರಹದ ಅಂತರ್ದಶೆ ಮಾತ್ರ ಇರುತ್ತದೆ. ಯಾವ ಗ್ರಹದ ದಶೆಯಲ್ಲಾಗಲೀ ಆ ಗ್ರಹದ ಅಂತರ್ದಶೆ ೧ ಆದರೆ ತನ್ನೊಡನೆ ಇರುವ ಗ್ರಹದ ಅಂತರ್ದಶೆ ೧/೨, ಐದು ಒಂಬತ್ತನೇ ಸ್ಥಾನಗಳಲ್ಲಿರುವ ಗ್ರಹದ ಅಂತರ್ದಶೆ ೧/೩, ಏಳನೇ ಸ್ಥಾನದಲ್ಲಿರುವ ಗ್ರಹದ ಅಂತರ್ದಶೆ ೧/೭, ನಾಲ್ಕು ಎಂಟನೇ ಸ್ಥಾನಗಳಲ್ಲಿರುವ ಗ್ರಹದ ಅಂತರ್ದಶೆ ೧/೪, ಹೀಗೆ ಅಂತರ್ದಶೆಗಳು ಬರುತ್ತವೆ.

೧೦. ಹಲವುಗ್ರಹಗಳು ಒಂದುರಾಶಿಯಲ್ಲಿದ್ದರೆ ಅದರಲ್ಲಿ ಬಲಿಷ್ಠನಾದವನು ಮಾತ್ರ ಅಂತರ್ದಶಾಧಿಪತಿಯಾಗುತ್ತಾನೆ. ಲಗ್ನಕ್ಕೂ ಗ್ರಹಗಳಿಗೆ [illegible]ರುವ ಕ್ರಮದಂತೆಯೇ ಅಂತರ್ದಶಾವಿಭಾಗವನ್ನು ತಿಳಿಯಬೇಕು.

(ಅಂತರ್ದಶಾವಿಭಾಗ ಗಣಿತಕ್ರಮ)

ಕ್ರಮದಿಂ ಪೇಳ್ದ ತದಂಶಮಂ ನೆಱೆ ಸಮಾನಚ್ಛೇದಮಂ ಮಾಡಿ ಛೇ
ದಮನಲ್ಲಿಂ ಕಳೆದಂಶಮಂ ನಿಱಿಸಿ ನಿಂದಂಶಂಗಳಂ ಕೂಡೆ ಛೇ
ದಮದಕ್ಕುಂ ಗುಣಕಾರ ರಾಶಿಯೆನಿಕುಂ ಪ್ರತ್ಯಂಶಮಾಯುಃ ಪ್ರಮಾ
ಣಮನೊತ್ತಂಶದಿನೆತ್ತು ಛೇದಫಳಮಂ ಪ್ರವ್ಯಕ್ತಮಾರ್ಗಾದೊಡಂ ೧೧

---

೧೧. ಕ್ರಮವಾಗಿ ಹೇಳಿದ ಆ ಅಂಶಗಳನ್ನು ಸಮಚ್ಛೇದಮಾಡಿ ಛೇದವನ್ನು ಬಿಟ್ಟು ಅಂಶಗಳನ್ನೆಲ್ಲಾ ಕೂಡಿದರೆ ಅದೇ ಛೇದವಾಗುತ್ತದೆ. ಆಯಾಗ್ರಹದ ಅಂಶವೇ ಗುಣಕಾರ ರಾಶಿಯೆನಿಸುತ್ತದೆ. ಪ್ರತಿಗ್ರಹದ ಆಯುರ್ದಾಯ ವರ್ಷಗಳನ್ನು ಗುಣಕಾರದಿಂದ ಗುಣಿಸಿ ಛೇದದಿಂದ ಭಾಗಿಸಿ ಬಂದ ಲಬ್ಧಿಯೇ ಆಯಾಗ್ರಹದ ಅಂತರ್ದಶಾ ಕಾಲವಾಗುತ್ತದೆ.

ವಿ—ದಶಾನಾಥನೊಡನಾಗಲೀ ದಶಾನಾಥನಿಂದ ೪,೫,೭,೮,೯ನೇ ಸ್ಥಾನಗಳಲ್ಲಾಗಲೀ ಗ್ರಹವಿಲ್ಲದಿದ್ದರೆ ಆಗ ಆ ದಶೆಯಲ್ಲಿ ಅಂತರ್ದಶಾವಿಭಾಗವೇ ಇರುವುದಿಲ್ಲ. ದಶಾನಾಥನೊಡನೆ ಮತ್ತು ದಶಾನಾಥನಿಂದ ೪,೫,೭,೮,೯ ನೇ ಸ್ಥಾನಗಳಲ್ಲಿ ಗ್ರಹವಿದ್ದರೆ ಆಗ ಆ ದಶೆಯಲ್ಲಿ ಏಳು ಅಂತರ್ದಶೆಗಳಿರುತ್ತವೆ. ಒಂದುಗ್ರಹದ ದಶೆಯಲ್ಲಿ ಏಳಕ್ಕಿಂತ ಅಧಿಕ ಅಂತರ್ದಶೆಗಳಿರುವುದಿಲ್ಲ.

ಉದಾ—ಗುರುದಶಾ ೧೩ ವರ್ಷಗಳು. ಗುರುವಿಗೆ ಚತುರ್ಥದಲ್ಲಿ ಶುಕ್ರನೂ ಸಪ್ತಮದಲ್ಲಿ ಚಂದ್ರನೂ ಇರುವರು. ಈ ಗುರುದಶೆಯಲ್ಲಿ ಮೂರು ಅಂತರ್ದಶೆಗಳು ಮಾತ್ರ ಇರುತ್ತವೆ. ೧. ಗುರ್ವಂತರ್ದಶೆ ೨. ಚಂದ್ರಾಂತರ್ದಶೆ ೩. ಶುಕ್ರಾಂತರ್ದಶೆ.

(ಅಂತರ್ದಶಾನಯನ)

ನ್ಯಾಸ— $\frac{\text{೧}}{\text{೧}}, \frac{\text{೧}}{\text{೭}}, \frac{\text{೧}}{\text{೪}}$

ಸಮಚ್ಛೇದ ಮಾಡಿದರೆ $= \frac{\text{೨೮}}{\text{೨೮}}, \frac{\text{೪}}{\text{೨೮}}, \frac{\text{೭}}{\text{೨೮}}$.

ಅಂಶಯೋಗ $=$ ೨೮ $+$ ೪ $+$ ೭ $=$ ೩೯ ಇದು ಛೇದ.

ಅಂಶ $=$ ಗುಣಕಾರ. ಗುರುದಶಾ ವರ್ಷಗಳು ೧೩.

$$\text{ಗ್ರಹಾಂತರ್ದಶಾ} = \frac{\text{ಗ್ರಹಾಂಶ} \times \text{ದಶಾವರ್ಷ}}{\text{ಛೇದ}}.$$

$$\text{ಗುರ್ವಂತರ್ದಶಾ} = \frac{\text{೨೮} \times \text{೧೩}}{\text{೩೯}} = \frac{\text{೨೮}}{\text{೩}} = \text{೯ ವರ್ಷ ೪ ತಿಂಗಳು.}$$

$$\text{ಚಂದ್ರಾಂತರ್ದಶಾ} = \frac{\text{೪} \times \text{೧೩}}{\text{೩೯}} = \frac{\text{೪}}{\text{೩}} = \text{೧ ವರ್ಷ ೪ ತಿಂಗಳು.}$$

$$\text{ಶುಕ್ರಾಂತರ್ದಶಾ} = \frac{\text{೭} \times \text{೧೩}}{\text{೩೯}} = \frac{\text{೭}}{\text{೩}} = \text{೨ ವರ್ಷ ೪ ತಿಂಗಳು.}$$

ಒಟ್ಟು .... ೧೩ ವರ್ಷಗಳು.

(ಅಂತರ್ದಶಾ ಕ್ರಮ)

ಅಂತರ್ದಶಾಧಿಪಂ ಬಲ
ವಂತಂ ತಾನಾದೊಡಂ ದಶಾನಾಥಂ ಮು
ನ್ನಂ ತನ್ನಂಶಮನಾಳ್ಗುಮ
ನಂತರಮಂತರ್ದಶಾಧಿನಾಯಕನಾಳ್ಗುಂ ೧೨

(ಅಂತರ್ದಶಾ ಫಲ)

ಎಂತುಟು ದಶಾಧಿಪತಿ ಫಲ
[1]ಮಂ[1]ತರ್ದಶೆಗಧಿಪನೀವ ಫಲಮಂ ನೋಳ್ಪಂ
ದಂತುಟೆ ಜನ್ಮವಿಲಗ್ನ ಫ
ಲಂ ತಲ್ಲಗ್ನೇಶಫಲ ಸಮಾನಮೆನಿಕ್ಕುಂ ೧೩

---

೧೨. ಅಂತರ್ದಶಾಧಿಪತಿಯು ತಾನು ಬಲಿಷ್ಠನಾಗಿದ್ದರೂ ದಶಾಧಿಪತಿಯ ಅಂತರ್ದಶೆಯೇ ಮೊದಲು ಬರುತ್ತದೆ. ಅನಂತರ ಉಳಿದವರ ಅಂತರ್ದಶೆಗಳು ಕ್ರಮವಾಗಿ ಬರುತ್ತವೆ.

ವಿ—ಅಂತರ್ದಶಾ ಪೌರ್ವಾಪರ್ಯವು ಎರಡುವಿಧ:

(೧) ದಶಾಧಿಪತಿಯ ಅಂತರ್ದಶೆ ಮೊದಲು. ಅನಂತರ ದಶಾನಾಥನೊಡನೆ ಇರುವ ಗ್ರಹದ ಅಂತರ್ದಶೆ. ಬಳಿಕ ದಶಾನಾಥನಿಗೆ ಚತುರಸ್ರ (೪, ೮)ದಲ್ಲಿ ಮತ್ತು ಸಪ್ತಮದಲ್ಲಿರುವ ಗ್ರಹಗಳ ಅಂತರ್ದಶೆಗಳು ಕ್ರಮವಾಗಿ ನಡೆಯುತ್ತವೆ. ಈ ಕ್ರಮದಂತೆ ಕೆಲವರು ಮಾತ್ರ ಅಂತರ್ದಶೆಯನ್ನು ಗಣನೆ ಮಾಡುತ್ತಾರೆ.

(೨) ಮೊದಲು ದಶಾಧಿಪತಿಯ ಅಂತರ್ದಶೆ. ಅನಂತರ ದಶಾಕ್ರಮಾನುಸಾರವಾಗಿ ಅಂತರ್ದಶೆಗಳು ನಡೆಯುತ್ತವೆ. ಈ ಕ್ರಮವೇ ಬಹುಸಮ್ಮತವು.

೧೩. ಗ್ರಹವು ದಶಾಧಿಪತಿಯಾಗಿದ್ದಾಗ ಯಾವ ವಿಧವಾದ ಫಲವನ್ನು ಕೊಡುತ್ತದೆಯೋ ಅಂತರ್ದಶಾಧಿಪತಿಯಾದಾಗಲೂ ಅದೇ ರೀತಿಯ ಫಲವನ್ನು ಕೊಡುತ್ತದೆ. ಜನನಲಗ್ನಫಲ ಅಂದರೆ ಲಗ್ನದಶಾಫಲವು ಆ ಲಗ್ನಾಧಿಪತಿಯು ಕೊಡುವ ಫಲಕ್ಕೆ ಸಮನಾಗಿರುತ್ತದೆ.

---

[1] ಮ (ಕ).

(ನಿಸರ್ಗದಶಾಕ್ರಮು)

ಧ್ರುವಮಬ್ಜಾಹಿತ[1]ನೊಂದು[1] ಭೌಮನೆರಡಿಂ[2]ದೂತ್ಪನ್ನನೊಂಬತ್ತು[2] ಭಾ
ರ್ಗವನಿಪ್ಪತ್ತು ಸುರೇಂದ್ರಮಂತ್ರಿ ಪದಿನೆಂಟಾದಿತ್ಯನಿಪ್ಪತ್ತು ಭಾ
ನವಿಯಯ್ವತ್ತು ನಿಸರ್ಗಭಾವದ ದಶಾಸಂವತ್ಸರಕ್ಕೀಶರ
[3]ಪ್ಪವರಾ ತಮ್ಮ[3] ಗುಣಾನುರೂಪವಶದಿಂದಾಳ್ವರ್ ದಶಾಕಾಲಮಂ ೧೪

೧೪. ಚಂದ್ರ ೧ ವರ್ಷ, ಅಂಗಾರಕ ೨ ವರ್ಷ, ಬುಧ ೯ ವರ್ಷ, ಶುಕ್ರ ೨೦ ವರ್ಷ, ಗುರು ೧೮ ವರ್ಷ, ಸೂರ್ಯ ೨೦ ವರ್ಷ, ಶನಿ ೫೦ ವರ್ಷ ಈ ಕ್ರಮದಲ್ಲಿ ಗ್ರಹಗಳು ನಿಸರ್ಗದಶಾಧಿಪತಿಗಳು ಅವರು ತಮ್ಮ ದಶಾಕಾಲಗಳಲ್ಲಿ ತಮ್ಮ ಗುಣಾನುರೂಪವಾದ ಫಲಗಳನ್ನು ಕೊಡುತ್ತಾರೆ.

| ವಿ– | ದಶೆ | ಕಾಲ | ಜನ್ಮಾದಿ ವಯಸ್ಸು |
|---|---|---|---|
| ೧ | ಚಂದ್ರ | [ಸ್ತನ್ಯಪಾನಕಾಲ] (ಶೈಶವ) | ಹುಟ್ಟಿದ ದಿವಸದಿಂದ ೧ನೇ ವರ್ಷಪೂರ್ತಿ |
| ೨ | ಅಂಗಾರಕ | [ಹಲ್ಲುಮೊಳೆಯುವ ಕಾಲ (ಬಾಲ್ಯ)] | ೨ನೇ ವರ್ಷದಿಂದ ೩ನೇ ವರ್ಷಪೂರ್ತಿ |
| ೩ | ಬುಧ | [ವಿದ್ಯಾಭ್ಯಾಸಕಾಲ] (ಕೌಮಾರ) | ೪ನೇ ವರ್ಷದಿಂದ ೧೨ನೇ ವರ್ಷಪೂರ್ತಿ |
| ೪ | ಶುಕ್ರ | [ಪ್ರಾಯಕಾಲ] (ಯೌವನ) | ೧೩ನೇ ವರ್ಷದಿಂದ ೩೨ನೇ ವರ್ಷಪೂರ್ತಿ |
| ೫ | ಗುರು | [ಧರ್ಮಾಚರಣ ಯೋಗ್ಯಕಾಲ] (ಮಧ್ಯವಯಸ್ಸು) | ೩೩ನೇ ವರ್ಷದಿಂದ ೫೦ನೇ ವರ್ಷಪೂರ್ತಿ |
| ೬ | ಸೂರ್ಯ | [ಉಷ್ಣಪಿತ್ತಾಧಿಕ್ಯ ಕಾಲ] (ವಾರ್ಧಕ್ಯ) | ೫೧ನೇ ವರ್ಷದಿಂದ ೭೦ನೇ ವರ್ಷಪೂರ್ತಿ |
| ೭ | ಶನಿ | [ವಾತಪ್ರಧಾನಕಾಲ] (ಅತಿವಾರ್ಧಕ್ಯ) | ೭೧ನೇ ವರ್ಷದಿಂದ ೧೨೦ನೇ ವರ್ಷಪೂರ್ತಿ |
| ೮ | ಲಗ್ನ | .... | ೧೨೧ನೇ ವರ್ಷದಿಂದ ಬದುಕಿರುವವರೆಗೆ |

ಇದು ನಿಸರ್ಗದಶಾಕ್ರಮ. ಈ ದಶಾಕ್ರಮವು ವಯಸ್ಸಿಗೆ ಅನುಗುಣವಾಗಿರುವುದರಿಂದ ಇದಕ್ಕೆ ನಿಸರ್ಗದಶೆ ಎಂದು ಹೆಸರು. ಯವನಮತದಂತೆ ಅಂತ್ಯದಲ್ಲಿ (೧೨೦ ವರ್ಷಗಳಾದ) ಮೇಲೆ ಲಗ್ನದಶೆಯೂ ಬರುತ್ತದೆ. ಇದು ಸರ್ವಸಮ್ಮತವಲ್ಲ. ಆದುದರಿಂದ ಶ್ರೀಧರನೂ ಈ ನಿಸರ್ಗದಶೆಯಲ್ಲಿ ಲಗ್ನದಶೆಯನ್ನು ಹೇಳದೆ ಬಿಟ್ಟಿರುತ್ತಾನೆ.

ಆಯುರ್ದಾಯ ಗಣನೆಯಿಂದ ಬಂದಿರುವ ದಶೆ ಮತ್ತು ನೈಸರ್ಗಿಕ ದಶೆ ಎರಡೂ ಒಂದೇ ಆದರೆ ಆ ಕಾಲದಲ್ಲಿ ಪೂರ್ಣವಾದ ಶುಭಫಲವಾಗುತ್ತದೆ.

---

1 ನೆಂಟು (ಕ ಗ) 2 ದು ಪ್ರೋದ್ಧಚಂ ಹತ್ತು (ಕ ಗ) 3 ಪ್ಪರವರ್ತಮ್ಮ (ಕ) ಪ್ಪರವತ್ತಂದು (ಗ).

(ದಶಾಂತರ್ದಶಾ ಶುಭಾಶುಭಜ್ಞಾನ)

ತ್ರಿ ದಶ ಷಡಾ[1]ಯ[1]ರಾಶಿಗಳೊಳಕ್ಕೆ ವಿಲಗ್ನದೊಳಕ್ಕೆ ಮೇಣ್ ಸುಹೃತ್
ಸದನದೊಳಕ್ಕೆ ಸದ್ಗ್ರಹದ ವರ್ಗದೊಳಕ್ಕಿರೆ [2]ಪಾಕ[2]ನಾಥನ
ಲ್ಲದೊಡೆ ದಶಾಧಿನಾಥನ ಸುಹೃದ್ಭವನೋಪಚಯ ತ್ರಿಕೋಣಗೇ
ಹದೊಳಿರೆ ಚಂದ್ರ[3]ನಿರ್ದೋಡ[3] ಶುಭಂ ನಿಲೆ ಬೇಱೆಡೆಯೊಳ್ ಶುಭೇತರಂ ೧೪

(ಅಂತರ್ದಶಾಪ್ರಾರಂಭಕಾಲದಲ್ಲಿ ಚಂದ್ರನಿರುವ ರಾಶಿಯಿಂದ ಫಲ)

ಇರೆ ಚಂದ್ರಂ ಕರ್ಕಿಗೇಹಾಂತರದೊಳುಪಚಯಂ ತತ್ಸಮಂ ಜೀವಗೇಹಾಂ
ತರದೊಳ್ ದುಗ್ರಾರ್ಥ್ವ [4]ಕಕ್ಷಾಲಯ[4]ಕೃಷಿ ಭೃಗುಜಕ್ಷೇತ್ರದೊಳ್ ತತ್ಸಮಂ ಕೇ
ಸರಿಯೊಳ್ ಕುಸ್ತ್ರೀ ಯಮಕ್ಷೇತ್ರದೊಳವನಿಸುತಕ್ಷೇತ್ರದೊಳ್ ಸ್ತ್ರೀ ವಿಶುದ್ಧಾ
ಚರಣಂ ವಿದ್ಯಾರ್ಥ[5]ಮಿ[5]ತ್ರಪ್ರತತಿ ಶಶಿಸುತಕ್ಷೇತ್ರದೊಳ್ ಕೂಡಿ ಬರ್ಕುಂ ೧೫

---

೧೪. ಮೂರು ಹತ್ತು ಆರು ಹನ್ನೊಂದನೆಯ (ಉಪಚಯ) ರಾಶಿಗಳಲ್ಲಾಗಲೀ ಲಗ್ನದಲ್ಲಾಗಲೀ ಅಥವಾ ಮಿತ್ರಕ್ಷೇತ್ರದಲ್ಲಾಗಲೀ ಶುಭ ಗ್ರಹದ ಷಡ್ವರ್ಗದಲ್ಲಾಗಲೀ ದಶಾಧಿಪತಿ ಇದ್ದರೆ ಅಥವಾ ದಶಾನಾಥನ ಮಿತ್ರಕ್ಷೇತ್ರದಲ್ಲಾಗಲೀ ಆತನಿಗೆ ಉಪಚಯ ಅಥವಾ ತ್ರಿಕೋಣದಲ್ಲಾಗಲೀ ಚಂದ್ರನಿದ್ದು ಇತರಸ್ಥಾನಗಳಲ್ಲಿ ಅಶುಭಗ್ರಹಗಳಿದ್ದರೆ ಆ ದಶೆಯಲ್ಲಿ ಶುಭಫಲ ವಾಗುತ್ತದೆ.

ವಿ–(೧) ದಶಾಪ್ರಾರಂಭಕಾಲದ ಲಗ್ನಕ್ಕೆ ಉಪಚಯದಲ್ಲಾಗಲೀ ಲಗ್ನ ದಲ್ಲಾಗಲೀ ದಶಾಧಿಪತಿಯ ಮಿತ್ರಕ್ಷೇತ್ರದಲ್ಲಾಗಲೀ ಶುಭಷಡ್ವರ್ಗದಲ್ಲಾಗಲೀ ದಶಾಧಿಪತಿ ಇದ್ದರೆ ಆ ಗ್ರಹದ ದಶೆಯಲ್ಲಿ ಶುಭಫಲಗಳಾಗುತ್ತವೆ.

(೨) ಚಂದ್ರನು ದಶಾಧಿಪತಿಯ ಮಿತ್ರಕ್ಷೇತ್ರದಲ್ಲಾಗಲೀ ದಶಾನಾಥನಿಗೆ ಉಪಚಯ ಅಥವಾ ತ್ರಿಕೋಣದಲ್ಲಿದ್ದು ಅಶುಭಗ್ರಹಗಳು ಶತ್ರುಕ್ಷೇತ್ರ ಅಥವಾ ದಶಾನಾಥನಿಗೆ ೨, ೪, ೬, ೭, ೮, ೧೨ನೇ ಕ್ಷೇತ್ರದಲ್ಲಾಗಲೀ ಇದ್ದರೆ ಆ ಗ್ರಹದ ದಶೆಯಲ್ಲಿ ಶುಭಫಲಗಳಾಗುತ್ತವೆ.

(೩) ಅಂತರ್ದಶಾಫಲಗಳನ್ನು ದಶಾಫಲದಂತೆಯೇ ತಿಳಿಯಬೇಕು.

(೪) ಸಾವನಮಾನದಿಂದಲೇ ದಶಾವರ್ಷಗಳನ್ನು ಲೆಕ್ಕಮಾಡಬೇಕು. ೩೬೦ ದಿವಸಗಳಿಗೆ ಒಂದು ಸಾವನವರ್ಷ.

೧೫. ಅಂತರ್ದಶಾ ಪ್ರಾರಂಭಕಾಲದಲ್ಲಿ ಚಂದ್ರನು ಕರ್ಕಾಟಕರಾಶಿ ಯಲ್ಲಿದ್ದರೆ ವೃದ್ಧಿಯನ್ನೂ (ಶುಭಫಲಾಧಿಕ್ಯವನ್ನೂ) ಗುರುವಿನ ಕ್ಷೇತ್ರ (ಧನುಸ್ಸು ಮೀನ)ಗಳಲ್ಲಿದ್ದರೆ ಅದಕ್ಕೆ ಸಮನಾದ ಫಲವನ್ನೂ (ಶುಭಫಲಾಧಿಕ್ಯವನ್ನೂ)

---

[1] ಋ (ಕ ಗ) [2] ಚಾಪ (ಕ ಗ) [3] ನಾಡೆಂತೆ (ಕ) [4] ಕಕ್ಷ್ಯಾಲಯ (ಕ ಗ) [5] ಪ್ರ (ಕ ಗ)

(ಸೂರ್ಯದಶಾಫಲ)

ಕನಕ ತ್ವಕ್ ನಖ ದಂತದಿ
ನನುವರದಿಂ ನೃಪರಿನಧ್ವಗಮನದಿನಕ್ಕುಂ
ಧನಮುದ್ಯಮಿಕ್ಕ ವಿಖ್ಯಾ
ತನಚಲಿತಂ ಶಿಕ್ಷನೆನಿಕುಮರ್ಕನ ದೆಸೆಯೊಳ್ ೧೭

ಅರಿ ಪುತ್ರ ಕಳತ್ರ ಧನಾ
ಗ್ನಿರಾಜಬಾಧೋಪಹತನುದಾರಗುಣಂ ಪಾ
ಪರತಂ ಸ್ವಭೃತ್ಯಕಲಹಂ
ಸರುಜಂ ಹೃದ್ರೋಗಿ ದಿನಪನವರೋಹಿಣಿಯೊಳ್ ೧೮

---

ಕೊಡುತ್ತಾನೆ. ಶುಕ್ರನ ಕ್ಷೇತ್ರ (ವೃಷಭ ತುಲಾ)ಗಳಲ್ಲಿದ್ದರೆ ದುರ್ಗ ಮಾರ್ಗ ಅರಣ್ಯ ಆಲಯಗಳಲ್ಲಿ ಕೃಷಿಯನ್ನು ಮಾಡಿಸುತ್ತಾನೆ. ಇದೇ ಫಲವನ್ನು ಸಿಂಹ ರಾಶಿಯಲ್ಲಿದ್ದಾಗಲೂ ಕೊಡುತ್ತಾನೆ. ಶನಿಯ ಕ್ಷೇತ್ರ (ಮಕರ ಕುಂಭ)ಗಳಲ್ಲಿದ್ದರೆ ನಿಂದ್ಯಸ್ತ್ರೀ ಸಹವಾಸವನ್ನುಂಟುಮಾಡುತ್ತಾನೆ. ಕುಜನ ಕ್ಷೇತ್ರ (ಮೇಷ ವೃಶ್ಚಿಕ)ಗಳಲ್ಲಿದ್ದರೆ ಸ್ತ್ರೀ (ಹೆಂಡತಿ) ಯನ್ನು ವಿಗತಶುದ್ಧಾಚರಣೆಯುಳ್ಳವಳನ್ನಾಗಿ (ದೋಷಯುಕ್ತಳನ್ನಾಗಿ) ಮಾಡುತ್ತಾನೆ. ಬುಧನ ಕ್ಷೇತ್ರ (ಮಿಥುನ ಕನ್ಯಾ) ಗಳಲ್ಲಿದ್ದರೆ ವಿದ್ಯಾ ಮಿತ್ರ ಧನಗಳನ್ನು ಕೊಡುತ್ತಾನೆ.

ವಿ–ಬೃಹಜ್ಜಾತಕದಲ್ಲಿ ಚಂದ್ರನು ಸೂರ್ಯಕ್ಷೇತ್ರದಲ್ಲಿದ್ದಾಗ ಹೇಳಿರುವ ಫಲವೇ ಶುಕ್ರನ ಕ್ಷೇತ್ರದಲ್ಲಿದ್ದಾಗಲೂ ಹೇಳಿರುತ್ತದೆ. ಆದರೆ ಇದು ಸರಿಯಲ್ಲ. ಸೂರ್ಯ ಮತ್ತು ಶುಕ್ರ ಇವರ ಕ್ಷೇತ್ರದಲ್ಲಿ ಚಂದ್ರನಿದ್ದಾಗ ಒಂದೇ ವಿಧವಾದ ಫಲವನ್ನು ಇತರ ಜ್ಯೌತಿಷಾಚಾರ್ಯರೂ ಹೇಳಿರುವಂತೆ ತಿಳಿದುಬರುವುದಿಲ್ಲ.

೧೭. ಸೂರ್ಯನ ದಶೆಯಲ್ಲಿ ಚಿನ್ನ ಚರ್ಮ ಉಗುರು ದಂತ ರಾಜರು ದಾರಿನಡೆಯುವಿಕೆ ಇವುಗಳಿಂದ ಧನಪ್ರಾಪ್ತಿಯಾಗುತ್ತದೆ. ಜಾತಕನು ಉದ್ಯಮಿಯೂ ಪ್ರಖ್ಯಾತನೂ ಅಚಲಿತಶಿಕ್ಷನೂ ಆಗುತ್ತಾನೆ.

ವಿ–ಈ ಪದ್ಯದಲ್ಲಿ ಸೂರ್ಯನು ಉಚ್ಚಾರೋಹಿಯಾಗಿದ್ದಾಗ ಆತನ ದಶೆಯಲ್ಲಿ ಆಗುವ ಫಲವನ್ನು ವಿವರಿಸಿದೆ. ಉಚ್ಚಾರೋಹಿ ಸೂರ್ಯನೆಂದು ಈ ಪದ್ಯದಲ್ಲಿಲ್ಲದಿದ್ದರೂ ಮುಂದಿನ ಪದ್ಯದಲ್ಲಿ ಸೂರ್ಯನು ಅವರೋಹಿಯಾಗಿರುವಾಗ ಆಗುವ ಫಲವನ್ನು ಹೇಳಿರುವುದರಿಂದ ಈ ಪದ್ಯದಲ್ಲಿ ವಿವರಿಸಿರುವುದು ಉಚ್ಚಾರೋಹಿ ಸೂರ್ಯನು ಕೊಡುವ ಫಲವೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ.

೧೮. ಜನನಕಾಲದಲ್ಲಿ ಸೂರ್ಯನು ಉಚ್ಚವನ್ನು ಬಿಟ್ಟು ನೀಚಾಭಿಮುಖನಾಗಿದ್ದರೆ ಆತನ ದಶೆಯಲ್ಲಿ ಶತ್ರು ಮಗ ಹೆಂಡತಿ ಧನ ಬೆಂಕಿ ದೊರೆ ಇವರಿಂದ ತೊಂದರೆಯಾಗುತ್ತದೆ. ಉದಾರಗುಣವಿರುತ್ತದೆ. ಪಾಪಕಾರ್ಯಗಳಲ್ಲಿ ಆಸಕ್ತಿಯೂ ತನ್ನ ಸೇವಕರೊಡನೆ ಜಗಳವೂ ಉದರವ್ಯಾಧಿಯೂ ಹೃದ್ರೋಗವೂ ಉಂಟಾಗುತ್ತದೆ.

(ಚಂದ್ರದಶಾ ಫಲ)

ತಿಳದಿಂ [1]ವ[1]ಸ್ತ್ರದಿನರ್ಥದಿಂ ಕುಸುಮದಿಂ ದಿವ್ಯಾನ್ನದಿಂ ವಿಪ್ರಸಂ
ಕುಳದಿಂದಿಕ್ಷುಪಯೋವಿಕಾರದಿನಿಳಾಧ್ಯನ್ಮಂತ್ರದಿಂ ಕ್ರೀಡೆಯಿಂ
ಫಳಮಕ್ಕುಂ ಮೃದು ವಿಪ್ರ ದೇವರತಿಮೇಧಾವಿತ್ವವಿತ್ತಾರ್ಥಾಪ್ತಿ ಮೊ
ಕ್ಕಳಮಕ್ಕುಂ ಮನುಜಂಗೆ ಚಂದ್ರದಶೆಯಪ್ಪಾರೋಹಿಗೇಹಂಗಳೊಳ್ ೧೯

ಸುತೆಯರ್ ಪುಟ್ಟುವರಂತಾ
ಶ್ರಿತರೊಳ್ ಬಲ್ಲಿದರೊಳೊಂದುಗುಂ ವೈರಂ ನಿ
[2]ಸ್ವತೆ[2] ಕೀರ್ತಿಹಾನಿ ಬಹುನಿ
ದ್ರತೆ ದೊರೆಕೊಳ್ಗುಂ ನಿಶೇಶನವರೋಹಿಣಿಯೊಳ್ ೨೦

(ಕುಜದಶಾ ಫಲ)

ಜನಪತಿ ಸೇವೆಯಿನರಿಮ
ರ್ದನದಿಂದಜಮೇಷ[3]ಸಮಿತಿಯಿಂ[3] ನಿಜ ಸಹಜಾ
ತನಿನುರ್ವರೆಯಿ[4]ನದ[4]ಕ್ಕುಂ
ಕನಕಂ ಕನಕಾಭಿಧಾನನಾರೋಹಿಣಿಯೊಳ್ ೨೧

---

೧೯. ಚಂದ್ರನು ಉಚ್ಚಾರೋಹಿಯಾಗಿರುವಾಗ ಆತನ ದಶೆಯಲ್ಲಿ ಎಳ್ಳು ವಸ್ತ್ರ ಧನ ಹೂವು ದಿವ್ಯಾನ್ನ ಬ್ರಾಹ್ಮಣರ ಗುಂಪು ಕಬ್ಬಿನ ವಿಕಾರ (ಬೆಲ್ಲ ಮೊದಲಾದವು) ಹಾಲಿನ ವಿಕಾರ (ಮೊಸರು ಮೊದಲಾದವು) ಮಂತ್ರ ಆಟ ಇವುಗಳಿಂದ ಶುಭಫಲವುಂಟಾಗುತ್ತದೆ. ದೇವ ಬ್ರಾಹ್ಮಣರಲ್ಲಿ ಆಸಕ್ತಿ ಬುದ್ಧಿಶಕ್ತಿ ಧನಲಾಭ ಇವು ಹೆಚ್ಚುತ್ತವೆ.

ವಿ–ಬೃಹಜ್ಜಾತಕದಲ್ಲಿ 'ದೇವಬ್ರಾಹ್ಮಣರಲ್ಲಿ ಆಸಕ್ತಿ ಬುದ್ಧಿಶಕ್ತಿ' ಈ ಫಲಗಳು ಅಶುಭಚಂದ್ರನಿಗೆ ಉಕ್ತವಾಗಿವೆ.

೨೦. ನೀಚಾವರೋಹಿ ಚಂದ್ರನ ದಶೆಯಲ್ಲಿ ಹೆಣ್ಣುಮಕ್ಕಳು ಹುಟ್ಟುತ್ತಾರೆ. ಆಶ್ರಿತರು ಮತ್ತು ಬಲಿಷ್ಠರೊಡನೆ ವೈರ ದಾರಿದ್ರ್ಯ ಕೀರ್ತಿಹಾನಿ ಮತ್ತು ಅತಿನಿದ್ರೆ ಉಂಟಾಗುತ್ತದೆ.

೨೧. ಕುಜನ ಆರೋಹಿಣೀ ದಶೆಯಲ್ಲಿ ರಾಜನ ಸೇವೆಯಿಂದ ಶತ್ರುಮರ್ದನದಿಂದ ಆಡು ಮತ್ತು ಕುರಿಗಳಿಂದ ತನ್ನ ಒಡಹುಟ್ಟಿದವನಿಂದ ಮತ್ತು ಭೂಮಿಯಿಂದ ಧನವು ಲಭಿಸುತ್ತದೆ.

---

1 ಶಾ (ಗ) 2 ಸ್ವತ (ಕ). ತ (ಗ) 3 ಸಮಿತಿಯಿಂ (ಕ). [illegible] (ಗ 4 ದಾ (ಕ ಗ)

*ಗುರು ವಿಪ್ರಪ್ರಕರಕ್ಕೆ ತಾನೆ ಮುನಿಗುಂ ಮಿತ್ರ ಸ್ವಕಾಂತಾ ಸಹೋ
ದರ ಪುತ್ರೋತ್ಕರಮಾ ನರಂಗೆ ಮುನಿಗುಂ ಪಿತ್ತೋತ್ಕಟಂ ಕ್ಷುತ್ತೃಷಾ
ಜ್ವರ ಭಂಗಂಗಳಿನಾಮಯಂ ಸಮನಿಕುಂ ಪಾಣ್ಬಂ ಖಳಪ್ರೀತಿ ಪಾ
ಪರತಂ ತಾನವರೋಹಿಯಪ್ಪ ದಶೆಯೊಳ್ ವಿಶ್ವಂಭರಾಪುತ್ರನಾ ೨೨

(ಬುಧದಶಾ ಫಲ)

ಕನಕಂ ಪೇಸರಗಟ್ಟ ಭೂಮಿ ಸುಭಗತ್ವಂ ಯುಕ್ತಿ ಮಂತ್ರಜ್ಞಮೆಂ
ಬಿನಿತಕ್ಕುಂ ದ್ವಿಜ ಮಿತ್ರ ದೂತ ಗುರು ಸಂದೋಹಂಗಳಿಂದಕ್ಕುಮ
ರ್ಥನಿಕಾಯಯುಂ ನೃಪಸೇವನಾ ಪ್ರಹಸನ ಪ್ರಾವೀಣ್ಯಮುಂ ಬುದ್ಧಿವ
ರ್ಧನಮುಂ ಮಾಸರಮಕ್ಕುವೆಯ್ದೆಂದವ ದಶೋಕ್ತಾರೋಹಗೇಹಂಗಳೊಳ್ ೨೩

ಶ್ರಮ ಬಂಧನ ವಾಕ್ಪಾರು
ಷ್ಯ ಮನೋದುಃಖಂ ತ್ರಿದೋಷ ಸಮುದಿತ ರೋಗಂ
ಸಮನಿಸುಗುಂ ಮನುಜಂಗಪ್ಪು
ತಮಯೂಖಾಪತ್ಯ ದಶೆಯೊಳವರೋಹಿಣಿಯೊಳ್ ೨೪

---

೨೨. ಕುಜನ ಅವರೋಹಿಣೀ ದಶೆಯಲ್ಲಿ ಗುರು ಮತ್ತು ಬ್ರಾಹ್ಮಣರ ಸಮುದಾಯದೊಡನೆ ತಾನು ಕೋಪಿಸಿಕೊಳ್ಳುತ್ತಾನೆ. ಸ್ನೇಹಿತರು ಹೆಂಡತಿ ಸಹೋದರ ಮತ್ತು ಮಕ್ಕಳು ಅವನೊಡನೆ ಕೋಪಿಸಿಕೊಳ್ಳುತ್ತಾರೆ. ಪಿತ್ತೋಲ್ಬಣ ಹಸಿವು ಬಾಯಾರಿಕೆ ಜ್ವರ ಮತ್ತು ಅವಯುವ ಭಂಗಗಳಿಂದ ಆತನಿಗೆ ರೋಗವುಂಟಾಗುತ್ತದೆ. ಆತನು ಜಾರನೂ ದುಷ್ಟರನ್ನು ಪ್ರೀತಿಸುವವನೂ ಪಾಪಕಾರ್ಯಾಸಕ್ತನೂ ಆಗುತ್ತಾನೆ.

೨೩. ಬುಧನ ಆರೋಹಿಣೀ ದಶೆಯಲ್ಲಿ ಚಿನ್ನ ಹೇಸರಕತ್ತೆ ಭೂಮಿ ಸರ್ವಜನಪ್ರಿಯತ್ವ ಹಿತ್ತಾಳೆ ಕಂಚು ಮೊದಲಾದ ಲೋಹ ಮಂತ್ರಾಲೋಚನೆ ಇವು ಲಭಿಸುತ್ತವೆ. ದ್ವಿಜರು ಸ್ನೇಹಿತರು ಸೇವಕರು ಮತ್ತು ಗುರುಗಳಿಂದ ಧನಲಾಭವಾಗುತ್ತದೆ. ರಾಜಸೇವೆ ಮತ್ತು ಪರಿಹಾಸದಲ್ಲಿ ಪ್ರಾವೀಣ್ಯವೂ ಬುದ್ಧಿ ವೃದ್ಧಿಯೂ ಮಹಾಶ್ರಯವೂ ಉಂಟಾಗುತ್ತದೆ.

೨೪. ಬುಧನ ಅವರೋಹಿಣೀ ದಶೆಯಲ್ಲಿ ಶ್ರಮ(ಖೇದ ಅಥವಾ ಆಯಾಸ) ಬಂಧನ (ಪಾರತಂತ್ರ್ಯ) ಮಾತಿನಲ್ಲಿ ಕಾಠಿನ್ಯ ಮಾನಸಿಕದುಃಖ ವಾತ ಪಿತ್ತ ಕಫ ರೂಪ ತ್ರಿದೋಷದಿಂದ ರೋಗ ಈ ಫಲಗಳು ಉಂಟಾಗುತ್ತವೆ.

---

*(ಗ) ಪ್ರತಿಯಲ್ಲಿ ೨೨, ೨೩, ೨೪ನೇ ಪದ್ಯಗಳಿಲ್ಲ.

(ಗುರುದಶಾ ಫಲ)

[1]ಸುತಹೇಮಾಂ[1]ಬರ ಕುಂಜರಾಶ್ವಚಯಮುಂ ತತ್ಕಾಂತಿಯುಂ ವಿಕ್ರಮೋ
ನ್ನತಿಯುಂ ಮಂತ್ರಮಹೀಧ್ರುಜೋದ್ಯಮ ನಯ ಸ್ವಾಧ್ಯಾಯ ಮಾಹಾತ್ಮ್ಯ ಸಂ
ಹತಿಯಿಂದಂ ಧನಮುಂ ಗುಣೋದಯಮುಮುರ್ವೀಶೋತ್ತಮ ಪ್ರೀತಿಯುಂ
[2]ಮ[2]ತಿಯುಂ ಪೆರ್ಚುಗುಮಿಂದ್ರಮಂತ್ರಿ ದಶೆಯುಪ್ಪಾರೋಹಿ ಸಂಸ್ಥಾನದೊಳ್ ೨೫

ಶ್ರವಣಾಮಯಮುಂ ನಿಜಭೃ
ತ್ಯವೈರಮುಂ ಪಾಪಕರ್ಮ ವಿರಸತೆಯುಂ ಲಾ
ಘವಮುಂ ಕಷ್ಟಪ್ರಾಪ್ತಿಯು
ಮಿವು ಸಮನಿಸುಗುಂ ಸುರೇಜ್ಯನವರೋಹಿಣಿಯೊಳ್ ೨೬

(ಶುಕ್ರದಶಾ ಫಲ) .

ಯುವತೀ ಕಾಂಚನ ಮನ್ಮಥೋಪಕರಣ ಜ್ಞಾನಾನ್ನಪಾನೇಷ್ಟ ಬಾಂ
ಧವ [3]ರತ್ನ[3]ದ್ಯುತಿ ಗೀತಿ ವಸ್ತ್ರ ಸುರಭಿದ್ರವ್ಯ ಪ್ರ[4]ಮೋದ[4]ಂಗಳೆಂ
ಬಿವು ಸಾರ್ಗುಂ ಕ್ರಯ ವಿಕ್ರಯ ಪ್ರವಿಣನಾರಂಭೋದ್ಯತಂ ತಾನೆನಿ
ಕ್ಕುವವಂ ದಾನವಮಂತ್ರಿಯೊಳ್ಪದೆಸೆಯುಪ್ಪಾರೋಹಿಯೊಳ್ ನಿಶ್ಚಯಂ ೨೭

---

೨೫. ಗುರುವಿನ ಆರೋಹಿಣೀ ದಶೆಯಲ್ಲಿ ಪುತ್ರ ಚಿನ್ನ ಬಟ್ಟೆ ಆನೆ ಕುದುರೆ ಇವುಗಳ ವೃದ್ಧಿಯೂ ಮನೋಹರತ್ವವೂ ಶೌರ್ಯೋನ್ನತಿಯೂ ಮಂತ್ರ ದೊರೆ ಉದ್ದಿಮೆ ನೀತಿ ವೇದಾಭ್ಯಾಸ ಪರೋಪಕಾರಾದಿ ಮಾಹಾತ್ಮ್ಯ ಇವುಗಳಿಂದ ಧನಪ್ರಾಪ್ತಿಯೂ ಸದ್ಗುಣೋದಯವೂ ಉತ್ತಮರಾಜರ ಸ್ನೇಹವೂ ಬುದ್ಧಿವೃದ್ಧಿಯೂ ಉಂಟಾಗುತ್ತದೆ.

೨೬. ಗುರುವಿನ ಅವರೋಹಿಣೀ ದಶೆಯಲ್ಲಿ ಕರ್ಣರೋಗವೂ ತನ್ನ ಸೇವಕರೊಡನೆ ವೈರವೂ ಪಾಪಕಾರ್ಯವಿರಸತೆಯೂ (ಧರ್ಮಬಾಹ್ಯರೊಡನೆ ವಿರೋಧವೂ) ಲಾಘವವೂ ಕಷ್ಟಪ್ರಾಪ್ತಿಯೂ ಉಂಟಾಗುತ್ತದೆ.

೨೭. ಶುಕ್ರನ ಶುಭಫಲಪ್ರದವಾದ ಆರೋಹಿಣೀ ದಶೆಯಲ್ಲಿ ಸ್ತ್ರೀ ಚಿನ್ನ ಮನ್ಮಥೋಪಕರಣ ವಿಜ್ಞಾನ ಭೋಜನ ಪಾನೀಯ ಇಷ್ಟರು ಬಂಧುಗಳು ರತ್ನ ಕಾಂತಿ ಗೀತಾಸಕ್ತಿ ವಸ್ತ್ರ ಸುಗಂಧದ್ರವ್ಯ ಸಂತೋಷ ಇವು ಲಭಿಸುತ್ತವೆ. ಜಾತಕನು ವ್ಯಾಪಾರದಲ್ಲಿ ಕುಶಲನೂ ಆರಂಭೋದ್ಯಮಿಯೂ (ಕೃಷಿಯಲ್ಲಿ ಹೆಚ್ಚು ಶ್ರಮಿಸುವವನೂ) ಆಗುತ್ತಾನೆ.

---

[1] ಸುತ ಮೇದಾಂ (ಕ) ನುತ ವೇದಾಂ (ಗ) [2]. (ಕ) ರ (ಗ) [3] ರಾತ್ನ (ಕಗ) [4] ಜೋಗ (ಕಗ).

ಬಹುಜನದೊಳ್ ಧರ್ಮ ದಯಾ
ರಹಿತ[1]ರೊಳವನಿಪರೊಳಳಿನಿಷಾದ[1]ರೊಳಕ್ಕುಂ
ಬಹುವಿಧವೈರಂ ಶೋಕಂ
ಸುಹೃದಯ[2]ರಿಂದ[2]ಕ್ಕುಮುಶನನವರೋಹಿಣಿಯೊಳ್ ೨೮

(ಶನಿದಶಾ ಫಲ)

*[ಕರಭಂ ಮ]ಹಿಷಿ ವಿಹಂಗ[3]ಮ
ಖರ ವೃದ್ಧವ[4]ಧೂ ಕುಧಾನ್ಯಚಯಮುಂ [ಲಭಿಕುಂ
ಪುರ]ಜನಪದಾಧಿಕಾರಂ
ದೊರೆಕೊಳ್ಗುಂ ಧನಮುಮಕ್ಕು [4]ಶ[4]ನಿ [ರೋಹಿಣಿಯೊ]ಳ್ ೨೯

ಅನಿಲಂ ಶ್ಲೇಷ್ಮರುಜಾ ಪ್ರಕೋಪಮಸಹಿಷ್ಣುತ್ವಂ ಮಹಾಧ್ವಶ್ರ[5]ಮಂ[5]
ಮುನಿಸಾಪತ್ತು ನಿಜಾಂಗಹೀನತೆ ರುಜಾಲಸ್ಯಂ ಮಹಾಮೋಹಮುಂ
ಬಿನಿತುಂ ಪುತ್ರ ಕಲತ್ರ ಮಿತ್ರ ಜನದುದ್ವೇಗತ್ವಮುಂ ಕೂಡುಗುಂ
ಮನುಜಾತಂಗವರೋಹಿಯಪ್ಪ ದಶೆಯೊಳ್ ಪದ್ಮಪ್ರಿಯಾಪುತ್ರನಾ ೩೦

ಇದು ಭಗವದರ್ಹತ್ಪರಮೇಶ್ವರ ಚರಣಸರಸಿರುಹ ಷಟ್ಪದಾಯಮಾನ ಸರಸಪ್ರಸನ್ನ ವಚೋಲಕ್ಷ್ಮೀಧರ ಗದ್ಯಪದ್ಯವಿದ್ಯಾಧರ ಶ್ರೀಧರಾಚಾರ್ಯಪ್ರಣೀತಮಪ್ಪ ಜಾತಕತಿಲಕದೊಳ್ ದಶಾಂತರ್ದಶಾ ಪ್ರಕರಣವರ್ಣನಂ ನವಮಾಧಿಕಾರಂ

---

೨೮. ಶುಕ್ರನ ಅವರೋಹಿಣೀ ದಶೆಯಲ್ಲಿ ಅನೇಕಜನರೊಡನೆ ಧರ್ಮ ಮತ್ತು ದಯೆಯಿಲ್ಲದವರೊಡನೆ ರಾಜರೊಡನೆ ದುಷ್ಟಬೇಡರೊಡನೆ ವಿರೋಧವೂ ಸ್ನೇಹಿತರಿಂದ ಶೋಕವೂ ಉಂಟಾಗುತ್ತದೆ.

೨೯. ಶನಿಯ ಆರೋಹಿಣೀ ದಶೆಯಲ್ಲಿ ಒಂಟೆ ಎಮ್ಮೆ ಪಕ್ಷಿ ಕತ್ತೆ ಮುದಿಹೆಂಗಸು ನವಣೆ ಹಾರಕ ಮೊದಲಾದ ಚಿಲ್ಲರೆ ಧಾನ್ಯಗಳು ಇವು ಲಭಿಸುತ್ತವೆ; ಪಟ್ಟಣ ಅಥವಾ ರಾಜ್ಯದ ಅಧಿಕಾರವು ದೊರೆಯುತ್ತದೆ. ಧನಲಾಭವೂ ಆಗುತ್ತದೆ.

೩೦. ಶನಿಯ ಅವರೋಹಿಣೀ ದಶೆಯಲ್ಲಿ ವಾಯು ಮತ್ತು ಕಫ ವ್ಯಾಧಿಗಳ ಪ್ರಕೋಪ ಮಾತ್ಸರ್ಯ ಮಾರ್ಗಾಯಾಸ ಕೋಪ ಕಷ್ಟ ಅಂಗವೈಕಲ್ಯ ರೋಗ ಆಲಸ್ಯ ಮಹಾಮೋಹ ಮಗ ಹೆಂಡತಿ ಸ್ನೇಹಿತರ ಉದ್ವೇಗ ಇವು ಉಂಟಾಗುತ್ತವೆ.

---

[1] ದೊಳವನಿಪಿನಿತಪರೊಳಳಿ ನಿಶಾಟ (ಕ ಗ) [2] ರಿಂಗಿ (ಕ) ನ (ಗ) [3] ವ ಕರವೃದ್ಧವು (ಗ) [4] ಮ (ಗ) [5] ಮುಂ (ಗ). * ಈ ಗುರುತಿನ ಪದ್ಯ (ಕ) ಪ್ರತಿಯಲ್ಲಿಲ್ಲ.




# ದಶಮಾಧಿಕಾರಂ

---

## ಅಷ್ಟಕವರ್ಗ ಪ್ರಕರಣಂ

ದಿವಸಕರಾದಿಗಳೊಳಭೀ
ಷ್ಟವೆನಿಪ್ಪ ಗ್ರಹವಃದೊಂದು ಶೇಷಗ್ರಹ[1]ಮಾ[1]
ಱು ವಿಲಗ್ನಭವನ[2]ಮೊಂ[2]ದಿಂ
ತಿವಱ ಶುಭಾಶುಭಮನಱುವುದಷ್ಟಕವರ್ಗಂ ೧

(ಅಷ್ಟಕವರ್ಗವಿನ್ಯಾಸ ಕ್ರಮ)

ಬರೆದು ಕುಂಡಲಿಚಕ್ರಮಂ ಜನ್ಮಕಾಲದೊಳಿರ್ದ ಗ್ರಹಮುಮಂ [3]ಲಗ್ನ[3]ಮುಮಂ
ತರದಿ[4]ರಿ[4]ಸಿ ನಿಜೇಷ್ಟಗ್ರಹದೆಡೆಗೆ ಪೇಳ್ದಡೆಗಳಂ ಬಿಂ[5]ದಿ[5]ಸಿ ಪೇಱದೆಡೆ
[6]ತರದಿ ರೇ[6]ಖೆಯುನಂ[7]ತವು[7] ಸರಿಯಾಗಿ ಸರಿಗಳೆವುದು ಬಿಂದುವಧಿಕಮಾ[8]ಗಿ[8]
ಬರೆ ಶುಭಂ ರೇಖೆ [9]ಪೆರ್ಚಲ[9]ಶುಭ[10]ವಿಾ[10]ಯೆರಡುಮಿಲ್ಲ[11]ದಿರ್ದೊ[11]ಡೆ ಮಧ್ಯಫಳಂ ೨

---

೧. ಸೂರ್ಯಾದಿ ಏಳುಗ್ರಹಗಳಲ್ಲಿ ಇಷ್ಟಗ್ರಹ ಒಂದು ಉಳಿದ ಗ್ರಹಗಳು ಆರು ಲಗ್ನರಾಶಿ ಒಂದು; ಈ ಎಂಟರ ಶುಭಾಶುಭಗಳನ್ನು ತಿಳಿಯುವುದೇ ಅಷ್ಟಕ ವರ್ಗ.

ವಿ—ಜನನಕಾಲದಲ್ಲಿ ಸೂರ್ಯನೇ ಮೊದಲಾದ ಏಳುಗ್ರಹಗಳು ಮತ್ತು ಲಗ್ನ ಈ ಎಂಟೂ ಯಾವ ಯಾವ ರಾಶಿಯಲ್ಲಿರುವುವೋ ಆ ರಾಶಿಯಿಂದ ತಾವು ಶುಭಾಶುಭ ಫಲಪ್ರದ ಸ್ಥಾನಗಳನ್ನು ತಿಳಿಸುವುದೇ ಅಷ್ಟಕವರ್ಗವು. ಗ್ರಹಗಳ ಗೋಚಾರಫಲವನ್ನು ಅಷ್ಟಕವರ್ಗದಿಂದಲೇ ನಿಶ್ಚಯಿಸಬೇಕು.

೨. ಕುಂಡಲಿಚಕ್ರವನ್ನು ಬರೆದು ಅದರಲ್ಲಿ ಜನನಕಾಲದ ಗ್ರಹಗಳನ್ನೂ ಲಗ್ನವನ್ನೂ ಬರೆದು ಅಭೀಷ್ಟಗ್ರಹದ ಅಷ್ಟಕವರ್ಗದಲ್ಲಿ ಹೇಳಿರುವ ಕಡೆ ಬಿಂದುಗಳನ್ನೂ ಹೇಳದೆ ಬಿಟ್ಟಿರುವ ಉಳಿದ ಕಡೆಗಳಲ್ಲಿ ರೇಖೆಗಳನ್ನೂ ಗುರುತಿಸಬೇಕು. ಅಭೀಷ್ಟಗ್ರಹವು ಬಿಂದು ಹೆಚ್ಚಾಗಿ ಬಂದಿರುವ ರಾಶಿಗಳಲ್ಲಿ ಶುಭಫಲವನ್ನೂ ರೇಖೆ ಹೆಚ್ಚಾಗಿ ಬಂದಿರುವ ರಾಶಿಗಳಲ್ಲಿ ಅಶುಭಫಲವನ್ನೂ ಈ ಎರಡೂ ಅಧಿಕವಾಗಿರದ (ಸಮನಾಗಿರುವ) ರಾಶಿಯಲ್ಲಿ ಮಧ್ಯಮಫಲವನ್ನೂ ಕೊಡುತ್ತದೆ.

---

[1] ಮೂ (ಕ) [2] ಮೆಂ (ಕ ಗ) [3] ಲಗ್ನಸಮೂಹ (ಕ ಗ) [4] ಯಿ (ಕ) ಸಿಲ (ಗ) [5] ಬ (ಕ ಗ) [6] ನೆ ತೆಗೆದ ರೇ (ಕ)...ರೇ (ಗ) [7] ತೂ (ಕ) [8] ಗೆ (ಕ ಗ) [9] ಪೆಚ್ಚಿದೊಡವು (ಕ) ಪೇರ್ಚೆ ಪೇರ್ಚಿದೊಡ (ಗ) [10] ಮಾ (ಕ ಗ). [11] ದೊ (ಕ ಗ).

(ಸೂರ್ಯಾಷ್ಟಕ ವರ್ಗ)

ದಿವಸೇಂದ್ರಂ ಕೇಂದ್ರ ಲಾಭಾಷ್ಟಮ ನವಮ ಧನಸ್ಥಾನದೊಳ್ ಭೌಮನಿಂ ಭಾ
[1]ನ[1]ವನಿಂ ತತ್ಕ್ಷೇತ್ರದೊಳ್ ಸೌಮ್ಯನಿನುಪಚಯ ಧರ್ಮ ವ್ಯಯಾಪತ್ಯದೊಳ್ ಭಾ
ರ್ಗವನಿಂದಂತ್ಯಾರಿ ಜಾಮಿತ್ರದೊಳುಪಚಯದೊಳ್ ಚಂದ್ರನಿಂ ಲಾಭ [2]ಧೀ[2] ಷ
ಣ್ಣವದೊಳ್ ಶಕ್ರೇಜ್ಯನಿಂ ಲಗ್ನದಿನುಪಚಯ ತೂರ್ಯಾಂತ್ಯದೊಳ್ ಮಾಳ್ಕುವೊಳ್ಪಂ ೩

(ಚಂದ್ರಾಷ್ಟಕ ವರ್ಗ)

ಉಮಧಾಮಂ ದ್ಯೂ[3]ನ[3] ಗೇಹೋಪಚಯದೊಳಸುರಾಮಾತ್ಯನಿಂದಂ ಚತುಸ್ಸ
ಪ್ತಮ ಕರ್ಮಾಯ ತ್ರಿ ಧರ್ಮಾತ್ಮ ಜನೊಳನಿಮಿಷಾಮಾತ್ಯ[4]ನಿಂ ದ್ವ್ಯಾಯ ಕೇಂದ್ರಾ[4]
ಷ್ಟಮದೊಳ್ ಧಾತ್ರೀಜನಿಂ ಷಟ್ ತ್ರಿ ದಶ ನವ ಸುತಾರ್ಥಾಯದೊಳ್ ಸೌಮ್ಯನಿಂ ಪಂ
ಚಮ ಕೇಂದ್ರಾಯ ತ್ರಿ ರಂಧ್ರಂಗಳೊಳತಿಶುಭದಂ ಶೇಷದೊಳ್ ಪೊಲ್ಲನಕ್ಕುಂ ೪

ಶನಿಯಿಂ ತ್ರಿ ಷಡೇಕಾದಶ
ತನೂಜ[5]ದಿಂ[5] ಲಗ್ನದಿಂದಮುಪಚಯದೊಳ್ ಸೂ
ರ್ಯನಿನುಪಚಯ [6]ಸಪ್ತಮ[6] ನಿಧ
ನನಿವಾಸದೊಳಮೃತಕಿರಣನೊಳ್ಪಂ ಮಾಳ್ಕುಂ ೫

---

೩. ಸೂರ್ಯನು ತಾನಿರುವ ರಾಶಿಯಿಂದ ಕೇಂದ್ರ (೧–೪–೭–೧೦) ಲಾಭ(೧೧) ಅಷ್ಟಮ(೮) ನವಮ(೯) ಧನ(೨) ಈ ಎಂಟುಸ್ಥಾನಗಳಲ್ಲೂ, ಅಂಗಾರಕನಿಂದ ಮತ್ತು ಶನಿಯಿಂದ ಅದೇ (೧–೨–೪–೭–೮–೯–೧೦–೧೧) ಸ್ಥಾನಗಳಲ್ಲೂ, ಬುಧನಿಂದ ಉಪಚಯ(೩–೬–೧೦–೧೧) ಧರ್ಮ(೯) ವ್ಯಯ (೧೨) ಅಪತ್ಯ(೫) ಈ ಏಳುಸ್ಥಾನಗಳಲ್ಲೂ, ಶುಕ್ರನಿಂದ ಅಂತ್ಯ(೧೨) ಅರಿ(೬) ಜಾಮಿತ್ರ(೭) ಈ ಮೂರುಸ್ಥಾನಗಳಲ್ಲೂ, ಚಂದ್ರನಿಂದ ಉಪಚಯ(೩–೬–೧೦–೧೧) ಸ್ಥಾನಗಳಲ್ಲೂ, ಗುರುವಿಂದ ಲಾಭ(೧೧) ಧೀ(೫) ಷಟ್(೬) ನವ(೯) ಈ ನಾಲ್ಕುಸ್ಥಾನಗಳಲ್ಲೂ, ಲಗ್ನದಿಂದ ಉಪಚಯ (೩–೬–೧೦–೧೧) ತೂರ್ಯ (೪) ಅಂತ್ಯ(೧೨) ಈ ಸ್ಥಾನಗಳಲ್ಲೂ ಶುಭಫಲವನ್ನು ಕೊಡುತ್ತಾನೆ.

೪–೫. ಚಂದ್ರನು ತಾನಿರುವ ರಾಶಿಯಿಂದ ದ್ಯೂನ(೭) ಗೇಹ(೧) ಉಪಚಯ(೩–೬–೧೦–೧೧) ಈ ಆರುಸ್ಥಾನಗಳಲ್ಲೂ, ಶುಕ್ರನಿಂದ ಚತುಃ(೪) ಸಪ್ತಮ(೭) ಕರ್ಮ(೧೦) ಆಯ(೧೧) ತ್ರಿ(೩) ಧರ್ಮ(೯) ಆತ್ಮಜ(೫) ಈ ಏಳು ಸ್ಥಾನಗಳಲ್ಲೂ, ಗುರುವಿಂದ *ದ್ವಿ(೨) ಆಯ(೧೧) ಕೇಂದ್ರ(೧–೪–೭–೧೦) ಅಷ್ಟಮ(೮) ಈ ಏಳುಸ್ಥಾನಗಳಲ್ಲೂ, ಕುಜನಿಂದ ಷಟ್(೬) ತ್ರಿ(೩) ದಶ(೧೦)

---

[1] ನು (ಕ ಗ) [2] ಪಟ್ (ಕ ಗ) [3] ತ (ಗ) [4] ಏಣಂ ವಿತ್ತಲಾಭಾಷ್ಟಾ (ಕ) ನಿಂ ವಿತ್ತ ಲಾಭಾ (ಗ) [5] ರಿಂ (ಕ ಗ) [6] ಸ್ತಮಾ೪ (ಕ ಗ). * ಬೃಹಜ್ಜಾತಕದಲ್ಲಿ ೨ಕ್ಕೆ ಪ್ರತಿಯಾಗಿ ೧೨ ಎಂದಿದೆ.

(ಕುಜಾಷ್ಟಕ ವರ್ಗ)

ಕನಕಂ ಕೇಂದ್ರ ದ್ವಿ ಲಾಭಾಷ್ಟಮದೊಳಸಿತನಿಂ ಕೇಂದ್ರ ಧರ್ಮಾಯದೊಳ್ ಶು
ಕ್ರನಿನಂತ್ಯಾಯಾಷ್ಟ[1]ಮಾರಾತಿ[1]ಯೊಳುಡುಪತಿಯಿಂ [2]ದ್ವಿಟ್[2] ತ್ರಿ ಲಾಭಂಗಳೊಳ್ ಪ
ತ್ತನೆಯೊಳ್ ಮಧ್ಯಸ್ಥನಕ್ಕುಂ ರವಿ[ಯಿ]ನುಪಚಯಾಪತ್ಯದೊಳ್ ಶೀತರುಙ್ನಂ
ದನನಿಂ ಲಾಭ ತ್ರಿ ಷಟ್ ಪಂಚಮದೊಳಧಿಕಸೌಮ್ಯಪ್ರದಂ ತಾನೆನಿಕ್ಕುಂ ೬

ತ್ರಿದಶೇಂದ್ರಮಂತ್ರಿಯಿಂ ಷ
ಷ್ಠ ದಶಾಯ ವ್ಯಯದೊಳುದಯದಿಂದುಪಚಯ ಗೇ
ಹದೊಳವನಿಸೂನುವಿಂದ
ಭ್ಯುದಯಕರಂ ಪೆಱವುರಾಶಿಯೊಳ್ ದೋಷಕರಂ ೭

---

ನವ(೯) ಸುತ(೫) ಅರ್ಥ(೨) ಆಯ(೧೧) ಈ ಏಳುಸ್ಥಾನಗಳಲ್ಲೂ, ಬುಧನಿಂದ ಪಂಚಮ(೫) ಕೇಂದ್ರ(೧–೪–೭–೧೦) ಆಯ(೧೧) ತ್ರಿ(೩) ರಂಧ್ರ(೮) ಈ ಎಂಟುಸ್ಥಾನಗಳಲ್ಲೂ, ಶನಿಯಿಂದ ತ್ರಿ(೩) ಷಟ್(೬) ಏಕಾದಶ(೧೧) ತನೂಜ(೫) ಈ ನಾಲ್ಕುಸ್ಥಾನಗಳಲ್ಲೂ, ಲಗ್ನದಿಂದ ಉಪಚಯ(೩–೬–೧೦–೧೧)ನೆಯ ಸ್ಥಾನಗಳಲ್ಲೂ, ಸೂರ್ಯನಿಂದ ಉಪಚಯ(೩–೬–೧೦–೧೧) ಸಪ್ತಮ(೭) ನಿಧನ(೮) ಈ ಆರುಸ್ಥಾನಗಳಲ್ಲೂ ಶುಭಫಲವನ್ನು ಕೊಡುತ್ತಾನೆ. ಉಳಿದ ಸ್ಥಾನಗಳಲ್ಲಿ ಕೆಟ್ಟಫಲವನ್ನು ಕೊಡುತ್ತಾನೆ.

೬–೭. ಮಂಗಳನು ತಾನಿರುವ ರಾಶಿಯಿಂದ ಕೇಂದ್ರ(೧–೪–೭–೧೦) ದ್ವಿ(೨) ಲಾಭ(೧೧) ಅಷ್ಟಮ(೮) ಈ ಏಳುಸ್ಥಾನಗಳಲ್ಲೂ, ಶನಿಯಿಂದ ಕೇಂದ್ರ(೧–೪–೭–೧೦) ಧರ್ಮ(೯) ಆಯ(೧೧) ಈ ಆರುಸ್ಥಾನಗಳಲ್ಲೂ, ಶುಕ್ರನಿಂದ ಅಂತ್ಯ(೧೨) ಆಯ(೧೧) ಅಷ್ಟಮ(೮) ಅರಾತಿ(೬) ಈ ನಾಲ್ಕು ಸ್ಥಾನಗಳಲ್ಲೂ, ಚಂದ್ರನಿಂದ ದ್ವಿಟ್(೬) ತ್ರಿ(೩) ಲಾಭ(೧೧) ಈ ಮೂರು ಸ್ಥಾನಗಳಲ್ಲೂ, ಸೂರ್ಯನಿಂದ ಉಪಚಯ(೩–೬–೧೦–೧೧) ಅಪತ್ಯ(೫) ಈ ಐದುಸ್ಥಾನಗಳಲ್ಲೂ, ಬುಧನಿಂದ ಲಾಭ(೧೧) ತ್ರಿ(೩) ಷಟ್(೬) ಪಂಚಮ(೫) ಈ ನಾಲ್ಕುಸ್ಥಾನಗಳಲ್ಲೂ, ಗುರುವಿಂದ ಷಷ್ಠ(೬) ದಶ(೧೦) ಆಯ(೧೧) ವ್ಯಯ(೧೨) ಈ ನಾಲ್ಕುಸ್ಥಾನಗಳಲ್ಲೂ, ಲಗ್ನದಿಂದ ಉಪಚಯ(೩–೬–೧೦–೧೧) ಗೇಹ(೧) ಈ ಐದುಸ್ಥಾನಗಳಲ್ಲೂ ಶುಭಫಲವನ್ನು ಕೊಡುತ್ತಾನೆ. ಚಂದ್ರನಿಂದ ೧೦ನೆಯ ಸ್ಥಾನದಲ್ಲಿ ಮಧ್ಯಸ್ಥನೂ ಉಳಿದ ಸ್ಥಾನಗಳಲ್ಲಿ ದೋಷಕರನೂ ಆಗುತ್ತಾನೆ.

ವಿ–ಮಂಗಳನು ಶನಿಯಿಂದ ೮ನೆಯ ಸ್ಥಾನದಲ್ಲೂ ಶುಭಪ್ರದನೆಂದು ಸಂಸ್ಕೃತ ಜ್ಯೌತಿಷ ಗ್ರಂಥಗಳಲ್ಲಿದೆ.

---

[1] ಮಾರಾತಿ (ಕ ಗ) [2] ದ್ವಿಷಂ (ಕ) ದ್ವಿಃ (ಗ)